


॥ ಹರಿಃ ಓಮ್ ॥

ಶ್ರೀ ಜಗನ್ನಾಥದಾಸಾರ್ಯ ವಿರಚಿತ

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ

ಪ್ರಕಟನೆ : ೬೯ (ಭಾಗ ೩) ಸಂಧಿ : ೯-೧೩





...ತಾರ ಶಕೆ ೧೬೪೯ ಕೀಲಕ ಸಂ॥ ಶ್ರಾವಣ ಶು॥ ೨

ವೈ. ಯಾತ್ರೆ. ಶಕೆ ೧೬೩೧ ಶುಕ್ಲ ಸಂ॥ ಭಾದ್ರಪದ ಶು॥ ೯

ಹರಿಃ ಓಂ

ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ

ಲಿಂಗಸೂಗೂರು. ಪ್ರಕಟನೆ (೬೮)

— ಶ್ರೀ ಅಪರೋಕ್ಷಜ್ಞಾನಿಗಳಾದ —

ಶ್ರೀಮಜ್ಜಗನ್ನಾಥ ದಾಸಾರ್ಯ ವಿರಚಿತ

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ ಭಾಗ—೩.

ಸಂಧಿ ೯ ರಿಂದ — ಸಂಧಿ ೧೩ ಪೂರ್ತಿ

೧. ಸಂಧಿಯುಸಾರ ಪದ್ಯಾರ್ಥ
೨. ಗುರು ಶ್ರೀಶ ವಿ॥ ಟೀಕಾ. ಸಂಧಿ ೫ — ಪದ್ಯ ೧೪
೩. ದ್ರೌಪದೀಶಪತಿ ವಿಠಲರ ಟೀಕಾ
೪. ಶ್ರೀ ಜಂಬುಖಂಡಿ ಆಚಾರ್ಯರ ಭಾವಸೂಚನ
೫. ,, ,, ವ್ಯಾಸದಾಸ ಸಿದ್ಧಾಂತ ಕೌಮುದಿ ಸಂಸ್ಕೃತ ಟೀಕಾಮಾತ್ರಕ್ಕೆ




ಕನ್ನಡ ಅನುವಾದಕರು :

ಶ್ರೀ ಪಂಡಿತವರ್ಯ ಶ್ರೀ ಕೇಶವಾಚಾರ್ಯರು ಜಾಲಿಹಾಳ

ಶಕೆ ೧೮೮೨ ಕಾರ್ತೀಕ ಶು॥ ೧೦

(ಇದರ ಎಲ್ಲ ಬಾಧ್ಯತೆ ಮಂಡಲದ್ದು)

ಮೊದಲನೇ ಆವೃತ್ತಿ ೧೦೦೦ ಪ್ರತಿ

ಪುಟಗಳು ೫೪೦. ಬೆಲೆ ೬ ರೂ.

ಮುಂಗಡ ಚಂದಾದಾರರಿಗೆ ಮಾತ್ರ ೫ ಭಾಗ ಚಂದಾ ೨೫ ರೂ.

ಅಂಚೆ ವೆಚ್ಚ ಸಹ

ಸಂಪಾದಕ, ಪ್ರಕಾಶಕ:
**ಹನುಮಂತರಾವ ಕುಲಕರ್ಣಿ**
**ಗೊರಬಾಳ.**
ವಕೀಲ, ಲಿಂಗಸೂಗೂರ.
ಸಂಚಾಲಕ ಮಂಡಲ.



## ಅರ್ಪಣೆ

ಶ್ರೀಮಜ್ಜಗನ್ನಾಥದಾಸವರ್ಯರ ವಿದ್ಯಾಗುರುಗಳು
ಶ್ರೀ ವರದೇಂದ್ರತೀರ್ಥ ಶ್ರೀಪಾದಂಗಳವರ ಹೃತ್ಕಮಲ
ಮಧ್ಯನಿವಾಸಿ
ಶ್ರೀಮದ್ರಾಘವೇಂದ್ರ ಗುರುರ್ವಂತಸ್ಥ ಶ್ರೀಮಧ್ವೇಶ
ಮೂಲ ರಾಮಚಂದ್ರನ ಅಡಿದಾವರೆಗಳಲ್ಲಿ.



ಮುದ್ರಕರು:
ಸುಬೋಧ ಮುದ್ರಣಾಲಯ,
ಚಾಮರಾಜಪೇಟೆ,
ಬೆಂಗಳೂರು ೧೮.

ಶ್ರೀ ಉಪೇಂದ್ರ ತೀರ್ಥರಿಂದ ಅನುಗೃಹೀತ ಶ್ರೀ ಜಗನ್ನಾಥದಾಸರ ಉಪಾಸ್ಯ

**ಗರುಡವಾಹನ ಶ್ರೀ ಲಕ್ಷ್ಮೀನೃಸಿಂಹದೇವರು**



ನರಸಿಂಹಾ ಪಾಹೀ ಲಕ್ಷ್ಮೀನರಸಿಂಹ
ಗರುಡವಾಹನ ಲಕ್ಷ್ಮೀನರಸಿಂಹ

(ಜ. ವಿ.)

# ವಿಷಯಾನುಕ್ರಮಣಿಕೆ



## ಒ ಪ್ಪೋ ಲೆ



## ಚಿ ತ್ರ ಗ ಳು

# ಮಂಗಳ ಪದಗಳು

## ಶ್ರೀ ಜಗನ್ನಾಥವಿಠಲರು

---

### ನರಸಿಂಹದೇವರ ಸ್ತೋತ್ರ

ಪದ ರಾಗ ತೋಡಿ—ತ್ರಿವಿಡಿತಾಳ

ರುದ್ರಾಂತರ್ಗತ ನಾರಸಿಂಹಾ । ಪಾಹೀ ।
ಭದ್ರಾಮೂರುತಿ ನಿರ್ಗಾತಾಂ ಹ್ವಾ ॥
ಹೃದ್ರೋಗ ಕಳೆದು ಜ್ಞಾ । ನಾದ್ರ್ಯಸ್ವಾಂತನ ಮಾಡೂ ।
ಪದ್ರಾ ಸಾಮುಗಾಥಾ ಸ । ಮುದ್ರ ದಾಟಿಸೋ ವೇಗ ॥ ಪಲ್ಲ ॥
ಏಸೇಸು ಕಲ್ಪಗಳಲ್ಲೀ । ನಿನ್ನಾ ।
ದಾಸಾನೆಂದು ಎನ್ನ ಬಲ್ಲೀ । ಈಶಾ ನೀನೆಂಬುದು ।
ಲೇಶವರಿಯೇ ದೋಷಾ । ನಾಶನಪ್ರಭುವೆ ವಾ । ರಾಸೀಜಾವಲ್ಲಭಾ ॥
ವಾಸವಾನುಜ ವನಧಿಶಯನ ಮ ।
ಹೇಶವಂದಿತ ವರದ ಹೇ ಕರು ।
ಣಾಸಮುದ್ರ ಕರಾಳವದನನೆ । ನೀ ಸಲಹದಿರೆ ಕಾಣೆ ಕಾಯ್ವರ ॥ ೧ ॥
ಹೇಮಕಶ್ಯಪು ತನ್ನ ಸುತನಾ । ವಧಿಸೇ ।
ಶ್ರೀಮನೋಹರನೇ ಆತನಾ (ಆನತನಾ) ।
ವ್ಯೋಮ ಪರ್ವತಾಂಬುಧಿ । ಧಾಮದೊಳುಳುಹಿದ ।
ಭೂಮ ಸನ್ಮುನಿಗಣ ಸ್ತೋಮವಂದಿತ ಪಾದ ॥
ಸಾಮಜೇಂದ್ರನ ಸರಸಿಯೊಳು ಸು ।
ತ್ರಾಮನಂದನನಾರಣದಿ ಕುರು । ಭೂಮಿಪತಿ ಸಭೆಯೊಳಗೆ ದ್ರೌಪದಿ ।
ಯಾ ಮಹಾತ್ಮರ ಕಾಯ್ದ ಕರುಣೀ ॥ ೨ ॥
ವೇದಾಗಮ್ಯನೆ ವೇದವ್ಯಾಸ । ಕಲ್ಕೀ ।
ಯಾದವೇಶ ಮಹಿದಾಸ । ಶ್ರೀದ ಶ್ರೀಶ ಅನ್ನ ।
ನ್ನಾದಾಕಲ್ಕಿ ಧನ್ವಂತ್ರಿ । ಮೇಧಾವಿಹರಿ ಏವ । ಮಾದಿರೂಪಕ ವಿಷ್ಣು ॥
ಕಾದುಕೋ ನಿನ್ನವರ ಮನದ ವಿ ।
ಷಾದ ರೋಗಂಗಳನಳಿದು ಮಹಾ ।
ದಾದಿದೇವ ಜಗನ್ನಾಥವಿಠ್ಠಲ । ಆದರದಿ ಪ್ರಲ್ಹಾದವರದಾ ॥ ೩ ॥

## ಶ್ರೀ ಜಗನ್ನಾಥವಿಠಲರು

---

### ಶ್ರೀ ವೆಂಕಟೇಶದೇವರ ಸ್ತೋತ್ರ

ಪದ ರಾಗ — ಪಂತುರಾವಳಿ — ಅಟ್ಟತಾಳ

ವೆಂಕಟೇಶ ಕಾಯೊ ಕಿಂಕರವನೆಂದು | ಪಂಕಜಾಸನ ಶಂ
ಕರಾರ್ಚಿತ | ಶಂಖಚಕ್ರಗದಾಂಕಿತಾ || ಪಲ್ಲ ||
ಸ್ವಾಮಿತೀರ್ಥನಿವಾಸ | ಸ್ವರಮಣ ಭಕತರ | ಕಾಮಿ
ತಪ್ರದ ಕೈರವದಳಃ | ಶ್ಯಾಮಸುಂದರನೆ ||
ಹೇಮಶೃಂಗಿವರ | ಧಾಮ ದೀನಬಂಧು | ಸಾಮಸನ್ನುತ |
ಸೋಮಧರ ಸು | ತ್ರಾಮ ಮುಖಸುರ | ಸ್ತೋಮಗಾ || ೧ ||
ವಾಸುದೇವ ನೀನೆ | ಶ್ರೀ ಸರಸಿಜಭವ ವೀಶಫಣಿಪಮು |
ಹೇಶ ವಾಸವರಾಶೆ ಪೂರೈಸೀ ||
ಪೋಷಿಸುವ ಜಗದೀಶ ಜೀವನದ ವಾ | ರಾಶಿಜಾಧಿಪ |
ಭೇಶರವಿ ಸಂಕಾಶ ಕರಿವರ ಕ್ಲೇಶಹಾ || ೨ ||
ತ್ರಿಗುಣಾತೀತ ನರ | ಮೃಗರೂಪ ನಾ ನಿನ್ನ | ಪೊಗಳ
ಬಲ್ಲೆನೆ | ನಿಗಮವೇದ್ಯನೆ | ಜಗನ್ನಾಥವಿಠಲಾ ||
ಸ್ವಗತ ಭೇದಶೂನ್ಯ | ಮುಗಿವೆ ಕರಗಳ ಪ | ನ್ನಗನಗಾ
ಧಿಪ | ಪೊಗರೊಗುವ ನಗೆ | ಮೊಗದ ಸೊಬಗಿನ | ಸುಗುಣನೆ || ೩ ||

---

## ಶ್ರೀ ಜಗನ್ನಾಥವಿಠಲರು

ಪದ ರಾಗ ಪಾಡಿ—ಏಕತಾಳ

ದಾಸೋಹಂ ತವ ದಾಸೋಹಂ |
ವಾಸುದೇವ ವಿಗತಾಘ ಸಂಘ ತವದಾಸೋಹಂ ತವದಾಸೋಹಂ || ಪ ||
ಜೀವಾಂತರ್ಗತ | ಜೀವನಿಯಾಮಕ | ಜೀವವಿಲಕ್ಷಣ
ಜೀವನ ದಾ || ಜೀವಾಧಾರಕ | ಜೀವರೂಪ | ರಾಜೀವಭವ
ಜನಕ | ಜೀವೇಶ್ವರ ತವ | ದಾಸೋಹಂ || ೧ ||
ಕಾಲಾಹ್ವಯ ಮಹ ಕಾಲಣುಕಾಲಗ | ಕಾಲಾತೀತ ತ್ರಿ
ಕಾಲಜ್ಞ || ಕಾಲಪ್ರವರ್ತಕ | ಕಾಲನಿವರ್ತಕ | ಕಾಲೋತ್ಪಾದಕ |
ಕಾಲಮೂರ್ತೇ: ತವ | ದಾಸೋಹಂ || ೨ ||

ಧರ್ಮಯೂಪ ಮಹ। ಧರ್ಮ ವಿವರ್ಧನ। ಧರ್ಮವಿದೋತ್ತುಮ।
ಧರ್ಮನಿಧೇ। ಧರ್ಮ ಸೂಕ್ಷ್ಮ ವರ। ಧರ್ಮ ರಕ್ಷಕ ಸು। ಧರ್ಮ
ಸಾಕ್ಷಿ ಯಮಧರ್ಮ ಮಿತ್ರ ತವ ॥ ೩ ॥
ಕರ್ಮ ಕರ್ಮಕೃತ। ಕರ್ಮ ಕೃತಾಗಮ। ಕರ್ಮ ಫಲಪ್ರದ
ಕರ್ಮಜಿತಾ॥ ಕರ್ಮಬಂಧ ಮಹಕರ್ಮ ವಿಮೋಚಕ।
ಕರ್ಮನಿಗ್ರಹ ವಿಕರ್ಮನಾಶ ತವ ॥ ೪ ॥
ಮಂತ್ರ ಯಂತ್ರಮಯ। ಮಂತ್ರಬೀಜ ಮಹ। ಮಂತ್ರ
ರಾಜ ಗುರು। ಮಂತ್ರಜಿತಾ॥ ಮಂತ್ರಗಮ್ಯ ಫಲ ಮಂತ್ರ
ಮೇಯ ವರ। ಮಂತ್ರ ದೇವ ಜಗನ್ನಾಥವಿಠಲ, ತವ। ದಾಸೋಹಂ ॥ ೫ ॥

---

# ಶ್ರೀ ಹರಿಕಥಾಮೃತಸಾರ ಮಾಹಾತ್ಮೆ

## ಕಮಲಾಪತಿ ವಿಠಲಕೃತ

(ಹೊಸದಾಗಿ ದೊರೆತಿದೆ)

---

### ಭಾಮಿನಿಷಟ್ಪದಿ

ಶ್ರೀಮದಶ್ವಗ್ರೀವ ನೊಲುಮೆಗೆ।
ಧಾಮರೆನಿಪ ಶ್ರೀ ವಾದಿರಾಜರು।
ಸ್ವಾಮಿ ಶ್ರೀ ವ್ಯಾಸಾರ್ಯ ವಿಠಲೋಪಾಸ್ಯ ಸ್ವಪ್ನದಲಿ॥
ಶ್ರೀ ಮನೋರಮ ನೆನಿಪ ತತ್ವ ಸು।
ಸೌಮನದ ಮಾಲಿಕೆಯ ನಿತ್ತು।
ದ್ದಾಮ ಗ್ರಂಥವ ರಚಿಸಿರೆನುತಲಿ ನುಡಿದ ಕಾರಣದಿ ॥ ೧ ॥
ಭಾರತ ಸುಭಾಗವತ ವಾಮನ।
ಗಾರುಡ ಭವಿಷ್ಯೋತ್ತರ ಪದವು।
ಚಾರು ವಿಷ್ಣುರಹಸ್ಯ ವಾಯೂ ಪಂಚರಾತ್ರಗಮಾ॥
ಸಾರ ಗುರುವೃತ್ತ ಪ್ರವೃತ್ತವು।
ಈರಸಂಹಿತಾದಿತ್ಯ ವಾಗ್ನೆಯ।
ಪಾರ ರಸಗಳ ತೋರ್ಪ ಶ್ರೀಗುರು ಮಧ್ವಶಾಸ್ತ್ರವನು ॥ ೨ ॥

ಸಾರ ಕ್ರೋಡೀಕರಿಸಲನುದಿನ ।
ಸಾರೆ ವರ್ಣಾಭಿಮಾನಿ ದೀನೋ ।
ದ್ಧಾರಗೋಸುಗ ಹರಿಕಥಾಮೃತಸಾರವನು ರಚಿಸಿ ॥
ಸ್ಥೈರ್ಯ ಮಾನಸದಿಂದ ಭಾವೀ ।
ಭಾರತೀ ಪತಿ ವಾದಿರಾಜರ ।
ಭೂರಿ ಕೋಶಕೆ ವೊಪ್ಪಿಸುತಲಾಪಾರ ಮುದಪಡೆದ ॥ ೩ ॥

ಸಾಸಿರಾರ್ಥದೊಳೊಂದು ಪದಕವ ।
ಕಾಶವಿರುವೋ ಶ್ರೀದ ಬೃಹತೀ ।
ಸಾಸಿರದ ನಾಮವನು ಯೋಚಿಸಿ ಇವರು ಗ್ರಂಥದಲಿ ॥
ಈಸು ರಹಸ್ಯವನರಿತು ಪಠಿಪಗೆ ।
ಯೇಸು ದೂರವೊ ಮುಕ್ತಿ ಬರಿದಾ ।
ಯಾಸ ಬಟ್ಟದರಿಂದ ಫಲವೇನಿಲ್ಲ ವೀಜಗದಿ ॥ ೪ ॥

*ಹಯೆನಲು ಹರಿಯೊಲಿಯುವನು ತಾ ।
ರಿ ಯೆನಲು ರಿಕ್ತತ್ವ ಹರಿಸುವ ।
ಕ ಯೆನಲು ಕತ್ತಲೆಯ ಅಜ್ಞಾನವನು ಪರಿಹರಿಪಾ ॥
ಥಾ ಯೆನಲು ಸ್ಥಾಪಿಸುವ ಜ್ಞಾನವ ।
ಮೃ ಯೆನಲು ಮೃತಿ ಜನಿಯ ಬಿಡಿಸುವ ।
ತ ಯೆನಲು ಹರಿ ತನ್ನ ಮೂರ್ತಿಯ ತೋರುವನು ನಿತ್ಯ ॥ ೫ ॥

ಸಾ ಯೆನಲು ಸಾಧಿಸುವ ಮುಕ್ತೀ ।
ರ-(ರಾ) ಯೆನಲು ರತಿ ಇತ್ತು ರಮಿಪನು ।
ಕಾಯ ವಾಙ್ಮನದೆಂಟು ಅಕ್ಕರ ನುಡಿದರದರೊಳಗೆ ॥

---

* ಈ ಐದನೇ ಪದ್ಯದಲ್ಲಿ ೧-೧ ಮಾತ್ರಾ ಕಡಿಮೆ ಇವೆ. ಪಾದಗಳ ಮೊದಲನೇ ಅಕ್ಷರ ಹಾ, ರೀ, ಕಾ, ಮೃ, ತಾ, ಹ್ರಸ್ವಕ್ಕೆ ದೀರ್ಘ ಓದಿದರೆ ಮಾತ್ರಾಲಯ ತಾಳ ಓಟ ಸರಿಯಾಗಿ ಆಗುತ್ತದೆ. ಅಕಾರಕ್ಕೆ ಆಕಾರ, ಆಕಾರಕ್ಕೆ ಅಕರ ಛಂದಸ್ಸಿನಲ್ಲಿ ಪ್ರಯೋಗ ದೋಷವಿಲ್ಲ.

ಶ್ರೀಯರಸ ವಿಶ್ವಾದಿ ಅಷ್ಟೈ ।
ಶ್ವರ್ಯ ರೂಪದಿ ನಿಂತು ತಾ ಪರ ।
ಕೀಯ ನೆನಿಸದೆ ಇವನ ಮನದೊಳು ರಾಜಿಪನು ಬಿಡದೆ ॥ ೬ ॥

ಹರಿಯೆನಿಸಗನಿ (ವಿ)ರುದ್ಧ ಧರ್ಮವು ।
ದೊರಕಿಸುವನು ಪರಮ ಹರುಷದಿ ।
ತ್ವರಕಥಾಯೆನೆ ಕೃತಿರಮಣನರ್ಥಿಗಳ ಹನಿಗರೆವ ॥
ವರ ಅಮೃತಯೆನಲಾಗ ಶ್ರೀ ಸಂ ।
ಕರುಷಣನೆ ಕಾಮುವನು ಯೋಜಿಪ ।
ಸರಸ ಸಾರೆನೆ ವಾಸುದೇವನು ಮೋಕ್ಷ ಕೊಡುತಿಪ್ಪ ॥ ೭ ॥

ಈ ರಹಸ್ಯವನರಿತು ಪ್ರತಿದಿನ ।
ಸಾರಸಾಕ್ಷನ ಪಾದಕಮಲಕೆ ।
ಆರು ಪದನಂತಿರುವ ಸುಜನಕೆ ಮೇಲೆ ನುಡಿದ ಫಲ ॥
ಸಾರಿಸಾರಿಗೆ ಒದಗಿ ಬರುತಲೆ ।
ಸೇರಿಸುವರೈ ವಿಷ್ಣುಮಂದಿರ ।
ತೋರುವನು ನಿಂದಕರ ನಿಕರಕೆ ನಿರಯುವನು ನಿತ್ಯ ॥ ೮ ॥

ಚಾರುತರಿದೀ **ಹರಿಕಥಾಮೃತ** ।
ಸಾರಕೃತ ಋಷಿ ಭಾರದ್ವಾಜರ ।
ಸಾರ ಹೃದಯದಿ ನಿಂತ ಸಕಲ ಸುಶಾಸ್ತ್ರದಾಲೋಕಾ ॥
ಸಾರಿಸಾರಿಗೆ ಮಾಡಿಮಾಡಿಸಿ ।
ಸೂರೆಗೊಟ್ಟಾನಂದ ಚಿನ್ಮಯ ।
ಪಾರ ವಾರಾಶಯನ ಶ್ರೀ ಕಮಲಾಪತಿ ವಿಠಲಾ ॥ ೯ ॥

॥ ಶ್ರೀ ಗುರುಮಧ್ವೇಶಾರ್ಪಣಮಸ್ತು ॥

---

# ಅರಿಕೆ

ಹಿಂದಿನ ೨ನೇ ಭಾಗದಲ್ಲಿ ಪ್ರಕಟಿಸಿದಂತೆ ಶ್ರಾವಣಮಾಸಕ್ಕೆ ಈ ೩ನೇ ಭಾಗವು ಹೊರಡಲಿಲ್ಲ. "ಶ್ರೇಯಾಂಸಿ ಬಹುವಿಘ್ನಾನಿ" ಎಂಬುವಂತೆ ಈ ಮಹತ್ಕಾರ್ಯಕ್ಕೆ ವಿಘ್ನವೇ ವಿಪುಲ. ಶ್ರೀದಾಸರಾಯರ ಗುರುಗಳು ವಿಘ್ನೇಶನ ಅವತಾರಿಗಳಾದ ಶ್ರೀ ಗೋಪಾಲದಾಸರ ಅಂತರ್ಗತ ಗೋಪಾಲಾಖ್ಯ ಶ್ರೀಕೃಷ್ಣನ ಅನುಗ್ರಹದಿಂದ, ಪ್ರೆಸ್ಸಿನ ಅನೇಕ ತೊಂದರೆ, ಇತರ ಬಹು ವಿಘ್ನಗಳು ಬಂದರೂ ೩ನೇ ಭಾಗ ವಾಚಕರ ಮುಂದಿರಿಸಿದೆ. ಕಾಲನಾಮಕ ಭಗವಂತನ ಇಚ್ಛೆಯಂತೆ ಸಕಲವೂ ಆಗುತ್ತದೆ. ಮೂರು ತಿಂಗಳು ತಡವಾದುದಕ್ಕೆ ಎಲ್ಲ ಸದ್ಭಕ್ತರಲ್ಲಿಯೂ **ಕ್ಷಮಾಪಣೆ ಬೇಡುತ್ತೇವೆ. ಕ್ಷಮಿಸಿರಿ ಕ್ಷಮಿಸಿರಿ.** ಮಹತ್ಕಾರ್ಯದಲ್ಲಿ ಮನ ಮುಂಜರಗಲಿ.

"ಸಾರವೆಂದರೆ ಹರಿಕಥಾಮೃತ । ಸಾರವೆಂಬುವದೆಮ್ಮ ಗುರುವರ । ಸಾರಿದಲ್ಲದೆ ತಿಳಿಯದೆನುತ ಮಹೇಂದ್ರನಂದನನ ॥ ಸಾರಥಿಯ ಬಲಗೊಂಡು ಸಾರಾ । ಸಾರವನು ನಿರ್ಣೈಸಿ ಪೇಳ್ದನು । ಸಾರನಡೆವ ಮಹಾತ್ಮರಿಗೆ ಸಂಸಾರವೆಲ್ಲಿಹದೋ ॥ ೩ ॥ (ಶ್ರೀದವಿಠಲರು)

ಸಂಸಾರ ಶರಧಿ ದಾಟಿಸಲು ನೌಕಾರೂಪ ಹರಿಕಥಾಮೃತಸಾರ. ಇದು ಕೇವಲ ಬಿಂಬೋಪಾಸನೆಯ ರಹಸ್ಯ - ಮುಕ್ತಿಗೆ ಕಾರಣವೆಂದು ಎಲ್ಲ ಜ್ಞಾನಿಗಳು, ಅದರಲ್ಲಿ ಶ್ರೀತಾಮ್ರಪರ್ಣೀ ಆಚಾರ್ಯರು ಮೊದಲನೇ ಸಂಧಿ ಮೊದಲನೇ ಪದ್ಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಪರಮರಹಸ್ಯವಾದ ಗ್ರಂಥರಾಜವಿದು. ಸಕಲ ವೇದ ಉಪನಿಷತ್ತುಸಾರ. ಶ್ರೀ ಸರ್ವಜ್ಞರ ಉಕ್ತಿಗಳ ಗಂಭೀರ ಮನೋಹರ. ಶ್ರೀಸುಧಾ ಪರಿಮಳಾಚಾರ್ಯರ ಸೌಗಂಧ್ಯ ಪರಿಮಳವನ್ನು ಪಸರಿಸಿ ಬೀರುವ ಮಂದಊರ. ಶ್ರೀಪುರಂದರ ವಿಜಯಗೋಪಾಲರೇ ಪ್ರಮುಖ ಅಪರೋಕ್ಷಿಜ್ಞಾನಿಗಳ ಮಾಧುರ್ಯವಚನಗಳೇ ಕೀಲಿಸಿ ಶ್ರೀಹರಿಯನ್ನು ಕುಣಿಸಿದ ಧೀರ. "ಪರಮತತ್ವದ ಸಾರ, ಯೋಗೀ । ಶ್ವರರ ಮನಕೆ ವಿಹಾರ ಸಜ್ಜನ । ನೆರವಿಗಳ ಪ್ರೀಗೊಪ್ಪುತಿಹ ಶೃಂಗಾರಲಂಕಾರ ॥ ಶರಣಜನ ಮಂದಾರನೆನಿಸುವ । ಹರಿಕಥಾಮೃತಸಾರ ಕೇಳ್ದರೆ । ದುರಿತ ಪಾರಾವಾರವನು ದಿಟ ಪಾರಕಾಂಬುವನು ॥ ೬ ॥ (ಶ್ರೀಮನೋಹರವಿಠಲರು)

ಇಂತು ಹರಿಕಥಾಮೃತಸಾರದ ಮಹಾ ಮಹಿಮೆ, ಮಧ್ವಮತದ ತತ್ವ ಸಿದ್ಧಾಂತವನ್ನು ಮುದ್ದೆಮಾಡಿ, ಶ್ರೀವ್ಯಾಸತೀರ್ಥರೊಲುಮೆಯಿಂದ ಸಮಸ್ತ ವರ್ಣಾಭಿಮಾನಿ ದೇವತೆಗಳ ನಲುಮೆಯಿಂದ ರಚನೆಯಾದ ಗ್ರಂಥವಿದು. ಕಾರಣ "ಸುಧಾ ಓದಿ ಪದಾ ನೋಡು" ಎಂಬುವ ಆರ್ಯರ ವಚನದಂತೆ ಸುಧಾ ಪರಿಮಳ ಸಾರವನ್ನು ಸವಿದ ಜ್ಞಾನಿಗಳಿಗೆ ಇದರ ನಿಜ ಅರ್ಥವಾಗುತ್ತದೆ. ಇತರ ಸಾಧಕರಿಗೆ ಕಲಿಯುಗದಲ್ಲಿ ಪಾರಾಯಣ ಪುಣ್ಯವೇ ಫಲ.

"ಹರಿಕಥಾಮೃತಸಾರ ಶ್ರೀಮ । ದ್ಗುರುವರ ಜಗನ್ನಾಥದಾಸರ ।
ಕರತಳಾಮಲಕವೆನೆ ಪೇಳಿದ ಸಕಲ ಸಂಧಿಗಳ ॥
ಪರಮಪಂಡಿತ ಮಾನಿಗಳು ಮ । ತ್ಸರಿಸಲೆದೆಗಿಚ್ಚಾಗಿ ತೋರುವ ।
ದರಸಿಕರಿಗಿದು ತೋರಿ ಪೇಳುವದಲ್ಲ ಧರೆಯೊಳಗೆ ॥ ೧ ॥ (ಶ್ರೀದವಿ.)

ಪರಮ ಪಂಡಿತ ಮಾನಿಗಳು ಇದೇನು ಕನ್ನಡ ಗ್ರಂಥ ಇದರಲ್ಲಿ ಏನಿದೆಯೆಂದು ಮತ್ಸರಿಸುವವರಿಗೆ ಎದೆಗಿಚ್ಚಾಗೇ ತೋರುವದು. ಕಾರಣ ಇಂಥ ಅರಸಿಕರಿಗೆ ಈ ಗ್ರಂಥದ ಮರ್ಮ ತೋರಿ ಹೇಳಬಾರದೆಂದು ಕರ್ಜಗಿ ದಾಸಪ್ಪದಾಸರು ಕಂಠರ ವೀಣವಾಗಿ ಹೇಳಿದ್ದಾರೆ. ಮತ್ತು

"ಪ್ರಾಕೃತೋಕ್ತಿಗಳೆಂದು ಬರಿದೆ ಮ । ಹಾಕೃತಘ್ನರು ಜರಿವರಲ್ಲದೆ ।
ಸ್ವೀಕೃತವಮಾಡದಲೆ ಬಿಡುವರೆ ಸುಜನರಾದವರು ॥
ಶ್ರೀಕೃತೀಪತಿ ಅಮಲಗುಣಗಳು । ಈ ಕೃತಿಯೊಳುಂಟಾದ ಬಳಿಕ ।
ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಗುಣರಿಗೆ ॥ ೫ ॥ ಶ್ರೀದವಿ. ॥

ಇಂತು ಶ್ರುತಿಗೆ ಸಮಾನವಾದ ಗ್ರಂಥ ಪ್ರಾಕೃತವಾದರೂ, ಅಪರೋಕ್ಷಜ್ಞಾನಿಗಳಾದ ಶ್ರೀತಾಮ್ರಪರಣೀ ಆಚಾರ್ಯರು, ಇದಕ್ಕೆ ಪದಾರ್ಥ ಚಂದ್ರಿಕಾಯೆಂತ ಸಂಸ್ಕೃತದಲ್ಲಿ ಅಮೋಘ ವ್ಯಾಖ್ಯಾನ ರಚಿಸಿದರು. ಶ್ರೀ ಪರಮಹಂಸ ಶ್ರೀಕೃಷ್ಣಾಪುರ ಶ್ರೀಗಳವರು, ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರು ಉಡುಪಿ ಒಳ್ಳೇ ಚತುಃಶಾಸ್ತ್ರ ಪಂಡಿತರು ಸಾವಿರಾರು ಜನ ಶಿಷ್ಯರು ಈಗ ಸುಮಾರು ಒಂದು ಶತಮಾನ ವರ್ಷ ಪೂರ್ವದಲ್ಲಿ (ಬೆಂಗಳೂರು ಚಿಕ್ಕಪೇಟೆ ಗುಂಡೋಪಂತರ ಛತ್ರದಲ್ಲಿ ವೃಂದಾವನಸ್ಥರ ವೃಂದಾವನದ ನಿತ್ಯ ಮಹಾ ಪೂಜಾದಿಗಳು ಜರುಗುತ್ತವೆ) ಇಂಥಹ ಜ್ಞಾನಿಗಳ ಸತ್‌ಶಿಷ್ಯರಾದ, ಶ್ರೀ ಅವಧೂತ ಶಿರೋಮಣಿ ಜಂಬುಖಂಡಿ ವಾದಿರಾಜಾಚಾರ್ಯರು ತ್ರಿಕಾಲಜ್ಞಾನಿಗಳು

ಪೂರ್ವದಲ್ಲೇ ತಾವು **ಭಾವಸೂಚನೆ,** ಟೀಕಾ ರಚಿಸಿದ್ದರೂ ತಮ್ಮ ವಿದ್ಯಾ ಗುರುಗಳು ಶ್ರೀ ವಿದ್ಯಾಧೀಶರ ಮೆಚ್ಚಿಗೆಗೆ ಸಂಸ್ಕೃತದಲ್ಲಿ ಶ್ರುತ್ಯರ್ಥಬೋಧಕ ಅಮೋಘ ವ್ಯಾಖ್ಯಾನ ರಚಿಸಿ ಗುರುಗಳಿಗೆ ಸಮರ್ಪಿಸಿದ್ದಾರೆ. ಈಗ ಸುಮಾರು ೧೨೦ ವರ್ಷ ಆಯಿತು.

ದ್ರೌಪದೀಶಪತಿ ವಿಠಲರು ಮಹಾ ಪುರಾತನ ಜ್ಞಾನಿಗಳು ಚಿಕ್ಕ ಪದಗಳಿಂದಲೇ ಈ ಮಹಾಗ್ರಂಥದ ವಿವರಣೆ ತೋರಿ ಮಾರ್ಗ ಪ್ರದರ್ಶಗಳಾಗಿದ್ದಾರೆ. ಅಪರೋಕ್ಷ ಜ್ಞಾನಿಗಳಾದ ಗುರು ಶ್ರೀಶವಿಠಲರ ಶಿಷ್ಯರು ಅಲ್ಲಲ್ಲೆ ವ್ಯಾಖ್ಯಾನ ಬಹುಪ್ರಮೇಯರಸಭರಿತವಾಗಿ ಬರೆದಿರುವರು. ಶ್ರೀ ಮೊದಲಕಲ್ ಶೇಷದಾಸರು ಇವರು ಈ ನೂರು ವರ್ಷದಲ್ಲಿಯ ಕೊನೆಯ ಅಪರೋಕ್ಷ ಜ್ಞಾನಿಗಳು. ಎರಡೇ ಪದ್ಯಕ್ಕೆ ಒಳ್ಳೇ ಶಾಸ್ತ್ರಪೂರಿತವಾದ ವಿಮರ್ಶೆಮಾಡಿದ್ದಾರೆ.

ಶ್ರೀಗುರುರಾಜರ ಪರಮಭಕ್ತರು, ಅಪರೋಕ್ಷಜ್ಞಾನಿಗಳು ಶ್ರೀಗುರು ಜಗನ್ನಾಥ ವಿಠಲರು ಸಂಸ್ಕೃತ ಸ್ರಗ್ಧರಾ, ಅನುಷ್ಟುಪದಲ್ಲೆ ಕೆಲವು ಸಂಧಿಗಳಿಗೆ ಸಂಸ್ಕೃತದಲ್ಲೇ ಕಾವ್ಯರೂಪವಾಗಿ ಬರೆದಿದ್ದಾರೆ. ಕೆಲವು ಸಂಧಿಗಳಿಗೆ ಸಂಸ್ಕೃತ ದಲ್ಲಿಯೇ ಅನೇಕ ಪ್ರಮಾಣಗಳನ್ನು ಸಂಗ್ರಹಿಸಿ ವ್ಯಾಖ್ಯಾನ ರಚಿಸಿದ್ದಾರೆ.

ಇಂತಹ ಅಪರೋಕ್ಷಿಗಳಿಂದ ಮಾನ್ಯವಾದ ಗ್ರಂಥ "ಪಂಚರತ್ನ ಪ್ರಕಾಶಿಕಾ" ರೂಪದಿಂದ, ವ್ಯಾಸದಾಸ ಸಿದ್ಧಾಂತ ಕೌಮುದೀ ಚಂದ್ರಕಿರಣ ಅಮೃತ ಹೊರಸೂಸುವಾಗ್ಗೆ, ಈ ಅಮೃತಪಾನಮಾಡದೇ ಧಿಕ್ಕರಿಸುವ ಮಂದ ಮತಿಗಳಿಗೇನೆಂಬೆ? ಸಕಲ ಸಜ್ಜನರೂ ಓಡಿ ಓಡಿ ಬನ್ನಿ ಬನ್ನಿ, ಅಮೃತಪಾನ ಮಾಡಲು ಬಂಗಾರದ ಕಲಶ ತನ್ನಿ ತನ್ನಿ, ಅಮೃತ ತುಂಬಿ ಕುಡಿ, ಕುಡಿಯಿರಿ. ಆನಂದದಾಯಕ ಮಧ್ವಶಾಸ್ತ್ರಾಮೃತ ಉಂಡು ಉಂಡು, ತೇಗಿ ತೇಗಿ ಮುಕ್ತ ರಾಗಿರೆಂದು ಮತ್ತೊಮ್ಮೊ ಕೂಗಿ ಸಜ್ಜನರನ್ನು ಕರೆ ಕರೆದು ಬಿನ್ನವಿಸುತ್ತೇನೆ.

ಮೇಲ್ಕಾಣಿಸಿದ ವ್ಯಾಖ್ಯಾನಗಳಲ್ಲಿ ಭಾವಸೂಚನ, ಶ್ರೀವ್ಯಾಸದಾಸ ಸಿದ್ಧಾಂತ ಕೌಮುದಿ ಎರಡೇ ಟೀಕಾಗಳೇ ಪೂರ್ತಿ ದೊರೆತವೆ. ವ್ಯಾಸದಾಸ ಸಿದ್ಧಾಂತ ಕೌಮುದಿ ಟೀಕಾ ಸಂಸ್ಕೃತ ಬಹು ಜಟಿಲಭಾಷಾ ಅಲ್ಲದೇ ಬೃಹತೀ ಸಹಸ್ರ ಛಂದಸ್ಸಿನ ಋಗಾರ್ಥವೇ ಇದೆ. ಋಕ್ಕುಗಳ ಅರ್ಥವನ್ನೇ ಟೀಕಾ ರೂಪವಾಗಿ ಸಂಸ್ಕೃತದಲ್ಲಿ ರಚಿಸಿರುವರು. ಈ ಮರ್ಮವನ್ನರಿಯದೇ ಸಂಸ್ಕೃತ ಪಂಡಿತರು ದೂಷಿಸಬೇಡಿರಿ. ಇತ್ತ ಸ್ವಲ್ಪ ವಿಚಾರಿಸಿ ಇಂತಹ ಕಠಿಣತಮವಾದ

ಶ್ರುತಿಗಳ ವಿಚಾರವನ್ನು ಸಂಗ್ರಹಿಸಿ ಬರೆದರೆ ಮಂಡಲವು ಪಂಡಿತರುಗಳಿಗೆ ಋಣಿಯಾಗಿದೆ. ಇದು ಕೇವಲ ಸಂಸ್ಕೃತವನ್ನರಿಯದವರಿಗೆ. ಸ್ತ್ರೀಯರಿಗೆ ರಚಿಸಿದ ಗ್ರಂಥವಲ್ಲ. ಕಲಿಯುಗದಿ, ಪಂಡಿತರುಗಳೆಲ್ಲ ಪಿಂಡಾಂಡದೊಳಗಿನ ಗಂಡನ ಕಳಕೊಂಡು ಮುಂಡೆಯರಾದರು. ಇಂಥವರಿಗೋಸುಗವೇ ಗ್ರಂಥ ರಚನೆ ಆಗಿದೆ. ಅಲ್ಲದೆ, **ದೇವತೆಗಳು ಅವತರಿಸಿ ಸಾಧನಮಾಡುವರಿಗೆ ಆದರ್ಶವಾಗಿದೆ.**

ಈ ಕಷ್ಟತರವಾದ, ವ್ಯಾಸದಾಸ ಸಿದ್ಧಾಂತ ಕೌಮುದಿ ಸಂಸ್ಕೃತ ಟೀಕಾ ೩ ಪ್ರತಿಗಳು ದೊರೆತರೂ, ಪೂರ್ವ ಲೇಖಕರ ಹಸ್ತದೋಷದಿಂದ ಬಹು ಅಶುದ್ಧ ವಾಗಿವೆ. ಇಂತಹ ಸಮಯದಲ್ಲಿ ದಾಸರ ಪ್ರೇರಣೆಯಿಂದ, ಶ್ರೀಮ. ಶಾ. ಸಂಪನ್ನ ಪಂಡಿತರತ್ನ ಜಾಲಿಹಾಳ ವೇ. **ಕೇಶವಾಚಾರ್ಯರು** ಮೂಲ ಪ್ರತಿಯನ್ನು ಸರಿಯಾಗಿ ಶುದ್ಧಪಡಿಸಿ ಬೃಹತೀ ಸಹಸ್ರ ಋಕ್‌ಗಳ ಸರಿಯಾದ ಅರ್ಥವನ್ನು ತಿಳಿಗನ್ನಡದಲ್ಲಿ ಸಜ್ಜನರಿಗೆ ಬೋಧವಾಗುವಂತೆ ಬರೆಯುತ್ತ ಮಂಡಲಕ್ಕೆ ಮಹಾ ಶೋಭೆಯನ್ನಿತ್ತಿರುವರು. ೧ ಸಂಧಿ ೧೭ ಪದ್ಯದವರಿಗೆ ಶ್ರೀ ತಾಮ್ರಪರಣೀ ಆಚಾರ್ಯರ ಸಂಸ್ಕೃತ ಟೀಕೆಗೂ ಸುಗಮವಾದ ಕನ್ನಡ ಅನುವಾದ ಬರೆದು ಕೊಟ್ಟಿರುವರು. ಮಹಾ ಪಂಡಿತರೂ ಜ್ಞಾನ ವಿಮರ್ಶಿಗಳಾದ ಶ್ರೀಗುರು ರಾಜರ ಭಕ್ತರಿಂದಲೇ ಈ ಮಹತ್ಕಾರ್ಯ ಜರಗಿದುದಲ್ಲದೇ ಇತರ ಪಂಡಿತರಿಂದ ಸಾಧ್ಯವೇ ಇಲ್ಲ. ಮಂಡಲವು **ಶ್ರೀ ಕೇಶವಾಚಾರ್ಯರಿಗೆ ಚಿರಋಣಿ ಯಾಗಿ ಪುನಃ ದಂಡ ಪ್ರಣಾಮಗಳನ್ನು ಅರ್ಪಿಸುತ್ತದೆ.**

ಶ್ರೀ ತಾಮ್ರಪರಣೀ ಆಚಾರ್ಯರ ಟೀಕಾ ಪದಾರ್ಥ ಚಂದ್ರಿಕಾ ೧೨ನೇ ಸಂಧಿ ೧೭ನೇ ಪದ್ಯದವರೆಗೆ ದೊರಕಿದ ಕಾರಣ ದಾಸರ ಪ್ರೇರಣೆಯಂತೆ ದಾಸರ ಭಕ್ತರು (ಸಂಚಾಲಕಮಂಡಲ) ಅನೇಕ ಶ್ರುತಿಗಳ ವಿಷ್ಣು ಸಾಸಿರ ನಾಮಾರ್ಥ ಶ್ರೀ ವಿದ್ಯಾಧಿರಾಜೀಯ, ವಿಗ್ರಹಕೋಶ ಇತರ ನಿಘಂಟುಗಳ ಸಹಾಯ, ಉಪನಿಷತ್ ಖಂಡಾರ್ಥಗಳ ಆಧಾರ, ಶ್ರೀ ವಿಜಯದಾಸರ ಅನೇಕ ಸುಳಾದಿಗಳ ರಹಸ್ಯಾರ್ಥಗಳ ಸೋನೆಯಿಂದ ವರ್ಷಿಸಿ ಬಹು ವಿಸ್ತಾರವಾಗಿ **ಪದ್ಯಾರ್ಥ** ಅಲ್ಲಲ್ಲೇ ವಿಶೇಷಸೂಚನೆ ವಿವರಿಸಿ ಬರೆದಿರುವರಲ್ಲದೇ, ಪ್ರತಿ ಯೊಂದು **ಸಂಧಿಗಳ ಸಂಬಂಧ** ಶ್ರೀಗುರು ಶ್ರೀನಿವಾಸ ವಿ||ರ ನಿರ್ಗುಣಸಾರ ಸಂಧಿ, ಅನೇಕ ಸುಳಾದಿಗಳ ವಿಚಾರ ಪೂರ್ವಕ ಸರಿಯಾಗಿ ಸಂಧಿಗಳ ಸಂಬಂಧ

ಜೋಡಿಸಿರುವರು. ಅಲ್ಲದೇ ಪ್ರತಿಯೊಂದು ಪದ್ಯದ ಶಿರೋಲೇಖದಲ್ಲಿ **ಅವತರಣಿಕಾ** ಸರಿಯಾಗಿ ಕೊಟ್ಟು ಪೂರ್ವಾಪರ ಪದ್ಯಗಳಿಂದ ಸಂಬಂಧ ತೋರಿಸಿ ಮಹದುಪಕಾರಮಾಡಿರುತ್ತಾರೆ. **ಪ್ರತಿಯೊಂದು ಸಂಧಿಯ ಸಾರವನ್ನೂ** ಅನೇಕ ಪ್ರಮಾಣ ಪ್ರಮೇಯ ಆಧಾರದೊಂದಿಗೆ ದಾಸರು ಪ್ರೇರಿಸಿ ಬರೆಸುವ ಕಾಲದಲ್ಲಿ, ಭಕ್ತಿ ಭರದಿಂದ ಪುಳಕಾಂಕಿತರಾಗಿ ದಾಸರ ಪಾದ ಪ್ರಕ್ಷಾಲನೆಗೈದಿದ್ದಾರೆ. ಗ್ರಂಥ ಪೂರ್ಣಆದರದಿಂದ ನೋಡಿ ಆನಂದ ಪಡೆಯಿರಿ. ದಾಸರು ಇವರಿಂದ ಶಾಸ್ತ್ರವಿಧಾನೋಕ್ತ ರಥಮಾಡಿಸಿಕೊಂಡರು. ದಾಸಸಾಹಿತ್ಯ ಪ್ರಚಾರಮಾಡಿಸಲು ತಾವೆಲ್ಲರೂ ಸೊಂಟಕಟ್ಟಿ ನಿಂತು ಮಾಡಿಸುತ್ತಿದ್ದಾರೆ.

ಶ್ರೀ ಹರಿಕಥಾಮೃತಸಾರ ಸಂಗ್ರಹ ಪ್ರಕಟಗೈಸಿದರು. ಮೂಲ ಶುದ್ಧ ಪ್ರತಿ ಹರಿಕಥಾಮೃತಸಾರ ಚರಿತ್ರದೊಡನೆ ಪ್ರಚುರವಾಯಿತು. ಇಷ್ಟಾದರೂ ದಾಸರಿಗೆ ತೃಪ್ತಿ ಇಲ್ಲ.

ಶ್ರೀ ವೇದವ್ಯಾಸದೇವರು ಹುಳುವಿನಿಂದ ರಾಜ್ಯವಾಳಿಸಿದಂತೆ ಸಂಚಾಲಕರಿಂದ ಈ ಮಹತ್ಕಾರ್ಯ ಸೇವೆ ಕೈಕೊಳ್ಳಹತ್ತಿದ ದಾಸರು ಇವರನ್ನು ಅನೇಕ ರೋಗಗಳಿಂದ ಪೀಡಿಸಹತ್ತಿ ಪರೀಕ್ಷಿಸಹತ್ತಿದ್ದಾರೆ. ದಾಸರೆ ನಿಮ್ಮ ಸೇವೆ ರತನಾದವನಿಗೆ ಎಲ್ಲ ಆಪತ್ತುಗಳು ದೂರಗೈಸಿ ಈ ಸೇವೆ ಪೂರ್ತಿಗೊಳಿಸಿರೆಂದು ಮತ್ತೊಮ್ಮೆ ದಾಸರನ್ನು ಪ್ರಾರ್ಥಿಸುವೆ. ಭಕ್ತರನ್ನು ನಾನಾ ಕಷ್ಟಕ್ಕೆ ಗುರಿಮಾಡಿ ಧೈರ್ಯ ಪರೀಕ್ಷಿಸುವಿರ್ಯಾ! ಆಗಲಿ ಪ್ರಭೋಚಿತ್ತ.

ಈ ಗ್ರಂಥರತ್ನವು ಸಾಮಾನ್ಯವಲ್ಲ. ಅನೇಕ ಶ್ರುತಿಗಳ ಪ್ರತೀಕ, ಉಪನಿಷತ್ ಸಾರ, ಉಪನಿಷತ್ ಪ್ರತಿಪಾದ್ಯ ಭಗವಂತನ ರೂಪ, ನಾಮಗುಣ ಕ್ರಿಯಾ ಉತ್ಕರ್ಷ, ಭಾರತ ಭಾಗವತ, ಪುರಾಣ ಉಪಪುರಾಣ, ಪ್ರಕಾಶ ಸಂಹಿತಾದಿ ಪಂಚರಾತ್ರಾಗಮ ವಿಷ್ಣುರಹಸ್ಯ ಶಾಂಡಿಲ್ಯ ತತ್ವರಹಸ್ಯಗಳಿಂದ ತುಂಬಿತುಳುಕುತ್ತಿದೆ. ಇದು ಕನ್ನಡವೆ? ಇದನ್ನರಿಯದ ಕೆಲ ದಾಸರು ಕನ್ನಡ ಗ್ರಂಥಕ್ಕೆ ಸಂಸ್ಕೃತ ಟೀಕಾಗಳ್ಯಾತಕ್ಕೆ ಪುನಃ ಅದಕ್ಕೆ ಕನ್ನಡ ಅನುವಾದವೇಕೆ? ಎಂದು ಉದ್ಗಾರ ಹೊರಡಿಸಿದ್ದಾರೆ. ಅಹಂಮತಿಯುಳ್ಳವರ ಅಜ್ಞಾನವೇ ಹೊರತು ಬೇರೆ ಹೇಳಬೇಕಾಗಿಲ್ಲ.

ಪ್ರಸ್ತುತ ಈ ೩ ನೇ ಭಾಗದಲ್ಲಿ ೯. ವರ್ಣಪ್ರಕ್ರಿಯಾ ಸಂಧಿ, ೧೦. ಸರ್ವ

ಪ್ರತೀಕ ಸಂಧಿ (ಇಲ್ಲಿಗೆ ಹರಿಲೀಲೆ ಎನ್ನುವ ಹರಿಕಥಾಮೃತಸಾರ ಮುಗಿದುದು) ಮುಂದೆ ೧೧ ನೇ ಸಂಧಿಯಿಂದ ೧೩ ನೇ ಸಂಧಿಯವರೆಗೆ ನಿತ್ಯವಾದ ವಸ್ತುಗಳ ವಿವೇಚನ, ತತ್ಸಂಬಂಧ ಯೋಜನ ಭಗವದುಪಾಸನ ಹೇಳಿದ್ದಾರೆ. ೧೧. ಧ್ಯಾನ ಪ್ರಕ್ರಿಯಾ ಸಂಧಿ, ೧೨. ನಾಡೀಪ್ರಕರಣ ಸಂಧಿ, ೧೩. ನಾಮಸ್ಮರಣ ಸಂಧಿ ಹೀಗೆ **೫ ಸಂಧಿಗಳನ್ನು ಕೊಡಲಾಗಿದೆ.** ೯ ನೇ ಸಂಧಿಯಲ್ಲಿ ಜೀವಾಂತ ರ್ಯಾಮಿ ವಾಯುದೇವರು ಇರುವರು. ಇವರಿಗೆ ಸ್ವರೂಪದೇಹದಿ ಪ್ರವೇಶ ಉಂಟೆಂಬುದಕ್ಕೆ ಅನೇಕ ಪ್ರಮಾಣಗಳನ್ನು ಕೊಟ್ಟು, ವಾಯುವಂತರ್ಯಾಮಿ ಭಗವಂತನ ಉಪಾಸನೆಯೇ ಮುಖ್ಯವೆಂದು ಬಣ್ಣಿಸಿದ್ದಾರೆ. ಸರ್ವ ಜೀವರುಗಳ ಸರ್ವ ದೇಹದಲ್ಲಿರತಕ್ಕ ಭಗವಂತನ ಉಪಾಸನೆ, ಸರ್ವ ಕ್ರಿಯಾಸಮರ್ಪಣೆ ಸಂಧಿಯ ಸಾರಗಳಲ್ಲಿ ಬಹು ಮನೋಹರವಾಗಿ ತೋರಿಸಿದ್ದಾರೆ.

೧೧–೧೨ನೇ ಸಂಧಿ ಅಷ್ಟಪ್ರಕೃತಿಗಳ ವಿವೇಚನವಂತು ಶ್ರೀ ಮಂತ್ರಾಲಯ ಗುರುರಾಜರ ಗೀತಾವಿವೃತಿ ಉಪನಿಷತ್ ಖಂಡಾರ್ಥ ಪಂಚಭೂತಗಳ ಗುಣ ವ್ಯಾಪ್ತಿ, ತದುಪಾಸನಕ್ರಮ ವಿವರ, ನಾಡೀಪ್ರಕ್ರಿಯಾ ಸಂಧಿಯಲ್ಲಿ ಶ್ರೀ ವಿಜಯ ದಾಸರ ಸುಳಾದಿಗನುಸರಿಸಿ ಸವಿಸ್ತರ ನಾಡೀವಿಭಾಗ, ನಾಡೀಕಲ್ಪಲತಾ ಆಧ್ಯಾತ್ಮಮಾಲಾ ಪ್ರಮಾಣಗಳನ್ನು ಜೋಡಿಸಿ ವಿವರಿಸಿದ್ದಾರೆ.

೧೩ ನೇ ನಾಮಸ್ಮರಣ ಸಂಧಿಯಲ್ಲಂತೂ ಓಂಕಾರ ವಿಚಾರ, ಓಂಕಾರ ದಿಂದ ೫೧ ವರ್ಣಗಳ ಅಭಿವ್ಯಕ್ತಿ, ಅಜಾದಿ ಪಂಚಾಶದ್ವರ್ಣಗಳೇ ನಾಮ, ಒಂದೊಂದು ವರ್ಣದಲ್ಲಿ ೬೪ ಭಗವದ್ರೂಪ ವೇದಗತನಾಮ ವಿಚಾರ, ನಾಮೋ ಚ್ಚಾರಣ ಮಾಡಲು ಅಧಿಕಾರಿ, ನಾಮೋಚ್ಚಾರಣ ಕಾಲ, ನಾಮಮಾಹಾತ್ಮ್ಯೆ ತಿಳಿದು ಉಚ್ಚಾರಮಾಡುವ ವಿಧಾನ, ಶ್ರೀಹರಿಯ ನಾಮ ಯಾವ ಯಾವ ಕಾಲದಲ್ಲಿ ಯಾವ ಭಗವನ್ನಾಮ ಉಚ್ಚಾರಮಾಡುವ ವಿವರ, ಸಕಲ ವೇದ, ಉಪನಿಷತ್ ಪುರಾಣ ಭಾರತಾದಿಗಳಿಗೆ ನಿಯಾಮಕ ನಾಮಗಳಾವವು, ಶ್ರೀ ಹರಿಯ ಕ್ರಿಯೋತ್ಕರ್ಷಣ, ಗುಣೋತ್ಕರ್ಷಣ ನಾಮರೂಪಗಳಾವವು ಮಾಹಾತ್ಮ್ಯೆ ತಿಳಿದು ನಾಮೋಚ್ಚಾರಣೆ ಬಗೆ, ಸಂಧಿಯ ಸಾರದಲ್ಲಿ ಸರಸವಾಗಿ ವಿವರಿಸಿ, ಸಂಧಿಗಳ ನಿಜವಾದ ರಹಸ್ಯ ದಾಸರು ಪ್ರೇರಿಸಿ ಬರೆಸಿದ್ದೇ ನಿಜನಿಜ.

## ಪಂಚರತ್ನ ಪ್ರಕಾಶಿಕಾ

ಇಂತಹ ಅಪೌರ್ವ್ಯ ಟೀಕೆಯು ಬಹು ವಿವರದಿಂದ ಹೊರಬಿದ್ದಿರುವದು.

ಇದೇ ಮೊದಲು. ಇದರ ರಸಾಸ್ವಾದನ ಮಾಡಿರಿ. ಅಪರೋಕ್ಷ ಜ್ಞಾನಿಗಳ ವಚನಪ್ರಮಾಣದಲ್ಲಿ ಸಂದೇಹವಿಲ್ಲದೆ ಶಾಸ್ತ್ರಮರ್ಯಾದೆ ತುಲನಾತ್ಮಕ ದೃಷ್ಟಿಯಿಂದ ಗೈಯ್ಯಿರಿ. ನಂಬಿಕೆ ಇಡಿರಿ; ದಾಸರ ಪಾದವನ್ನೇ ನಂಬಿರಿ. ವೇದ ಸಾರಾರ್ಥವಾದ ಗ್ರಂಥ ಸಂಗ್ರಹಿಸಿ ಮನೆಯಲ್ಲಿಟ್ಟು ಪೂಜಿಸಿರಿ. ಪಠಿಸಿ ಪಾರಾಯಣ ಮಾಡಿರಿ. ದಾಸರು ತಿಳಿಸಿದಷ್ಟು ಸದ್ಗುರುಗಳಿಂದ ತಿಳಿಯಿರಿ. ನರಜನ್ಮ ಬರುವದೇ ಕಷ್ಟ. ಅದರಲ್ಲಿ ಹಿರಿದಾಗಿ ವೈಷ್ಣವ ಜನ್ಮ ದುರ್ಲಭ "ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ" ಎಂಬ ಶ್ರೀ ಕೃಷ್ಣಭಗವಾನನ ವಚನ ನಂಬಿರಿ. ಸಾಧನಮಾಡಿರೆಂದು ಸಜ್ಜನರ ಪದಕೆರಗಿ ಬೇಡುವೆ.

ಕೊನೆಗೆ ನನ್ನ ಬಾಲಮಿತ್ರನಾದ ಸಂಚಾಲಕನಿಗೆ ಆಯುರಾರೋಗ್ಯ ಕೊಟ್ಟು ಮತ್ತೂ ಹೆಚ್ಚಿನ ಸೇವೆಗೊಳ್ಳಲು ದಾಸರಂತರ್ಗತ ಮಧ್ವೇಶನಾದ ಶ್ರೀ ಲಕ್ಷ್ಮೀನರಸಿಂಹನನ್ನು ಪ್ರಾರ್ಥಿಸುತ್ತೇನೆ.

ಲಿಂಗಸೂಗೂರಿಂದ ಮಂತ್ರಾಲಯ, ಶ್ರೀ ಮಂತ್ರಾಲಯ ಗುರುರಾಜರ ಆರಾಧನ ಮಹೋತ್ಸವ,
೧೮೮೨ ಶ್ರಾವಣವದಿ ೩.

ದಾಸರ ದಾಸರ ದಾಸ,
**ಹನುಮಂತಾಚಾರ್ಯ,**
**ನರಸಿಂಹಾಚಾರ್ಯ ಜೋಶಿ,**
ಹುನಗುಂದ, ಜಿ. ವಿಜಾಪುರ,
ಮಂಡಲದ ಸದಸ್ಯ, ಹಿಂದಿನ ಕಾರ್ಯದರ್ಶಿ

॥ ಶ್ರೀ ರಾಘವೇಂದ್ರಗುರು - ಶ್ರೀ ವರದೇಂದ್ರ ಗುರು ॥

# ೯ನೇ ವರ್ಣಪ್ರಕ್ರಿಯಾ ಸಂಧಿ

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವದು ॥ ಪಲ್ಲವಿ ॥

ಮೂಲ :

**ಹರಿಯೆ ಪಂಚಾಶದ್ವರ್ಣ ಸು ।**
**ಸ್ವರವುದಾತ್ತನುದಾತ್ತ ಪ್ರಚಯ ।**
**ಸ್ವರಿತ ಸಂಧಿ ವಿಸರ್ಗಬಿಂದುಗಳೊಳಗೆ ತದ್ವಾಚ್ಯ ॥**
**ಇರುವ ತತ್ತನ್ನಾಮ ರೂಪಗ ।**
**ಳರಿತುಪಾಸನೆಗೈವರಿಳೆಯೊಳು ।**
**ಸುರರೆ ಸರಿ ನರರಲ್ಲ ಅವರಾಡುವುದೆ ವೇದಾರ್ಥ ॥ ೧ ॥**

**ಅವತರಣಿಕಾ :** ಹಿಂದಿನ ಸಂಧಿಯಲ್ಲಿ ಅಜಾದಿ ೫೧ ವರ್ಣಮಾತೃಕಾ ಮಂತ್ರ ತದುಪಾಸನಾಕ್ರಮ ಹೇಳಿ, ಈ ಮಾತೃಕಾವರ್ಣಗಳು ಸಕಲ ವೇದಸಮೂಹಗಳಲ್ಲಿ ನಿತ್ಯವಾಗಿ ಒಂದೇ ಪ್ರಕಾರ ಇರುವವು. ಈ ವೇದಗಳೆಲ್ಲವು "ಸರ್ವೇವೇದಾಃ ಯತ್ಪದಮಾಮನಂತಿ" ಎಂದು ಸಕಲ ವೇದ ವೇದಗತ ಸ್ವರವರ್ಣ ಉದಾತ್ತಾನುದಾತ್ತ ಸ್ವರವಾಚ್ಯನಾದವನು ಮುಖ್ಯ ಹರಿಯು. ಈ ವಿವರಣ ತಿಳಿಸಲು, **ವರ್ಣಪ್ರಕ್ರಿಯೆ ಸಂಧಿ**ಯೆಂದು ಶ್ರೀ ದಾಸಾರ್ಯರು ಈ ಸಂಧಿಗೆ ನಾಮಕರಣ ಮಾಡಿದ್ದು ಬಹು ಸಮಂಜಸವೆಂದು ಜ್ಞಾನಿಗಳಿಂದ ಹೇಳಲ್ಪಟ್ಟದೆ. "ಓಮ್ ಶೀಕ್ಷಾಂ ವ್ಯಾಖ್ಯಾಸ್ಯಾಮಃ ವರ್ಣಸ್ವರಃ ಮಾತ್ರಾಬಲಂ ಸಾಮಸಂತಾನಃ"। ಹೀಗೆ ತೈತ್ತಿರೀಯ ಉಪನಿಷತ್ತಿನ ಪ್ರಮೇಯವನ್ನೇ ದಾಸರು ವಿವರಿಸುತ್ತಾರೆ.

**ಪದ್ಯಾರ್ಥ :** ಹರಿಯೆ ಪಂಚಾಶದ್ವರ್ಣ=ಹರಿಯೆ ಬಿಂಬರೂಪನಾದ ಹರಿಯೆ, ಅಜಾದಿ ೫೧ ವರ್ಣಗಳಿಂದಲೂ ವೇದಗಳಿಂದಲೂ ಮುಖ್ಯ ಪ್ರತಿಪಾದ್ಯನಲ್ಲದೇ, ವೇದವರ್ಣಾದಿಗತ **೧ ವರಣ**=ಅಕಾರಾದಿ ವರ್ಣೋಚ್ಚಾರಣ ಸ್ಥಾನಾನಿ, ಕಂಠತಾಲ್ವಾದೀನಿ = ಅಂದರೆ ಅಕಾರಾದಿ ವರ್ಣ ಉಚ್ಚಾರಣೆ ಹೊರಡತಕ್ಕ ಕಂಠ ತಾಲು ಮುಂತಾದ ಸ್ಥಾನಗಳು ಎಂದು ಇಷ್ಟೇ ಅಲ್ಲ. "ವರ್ಣೀಯತ್ವಹೇತುನಾವರ್ಣನಾಮಕಂ ವರ್ಣಸ್ಥಂ ವರ್ಣವಾಚ್ಯಂ ಪುರುಷೇ ವರ್ಣೋಚ್ಚಾರಣಕ್ರಿಯಾಪದಂ ವಿಷ್ಣೋರೂಪಂ ವರ್ಣಯತಿ **ವರ್ಣ** ಇತಿ

ಜ್ಞೇಯಂ=ಅಂದರೆ ಶ್ರೀಹರಿಯ ರೂಪನಾಮ ಗುಣಗಳನ್ನು ವರ್ಣನಮಾಡಲು ಕಾರಣವಾದ, ವರ್ಣನಾಮಕನಾಗಿಯೂ, ವರ್ಣದಲ್ಲಿರುವನಾಗಿಯೂ, ವರ್ಣ ವಾಚ್ಯನಾಗಿಯೂ, ವರ್ಣಉಚ್ಚಾರಣ ಮಾಡತಕ್ಕ ಪುರುಷನ ವರ್ಣಉಚ್ಚಾರ ಕ್ರಿಯೆರೂಪನಾಗಿಯೂ, ವರ್ಣವು ವಿಷ್ಣುವಿನ ರೂಪವಾಗಿಯೂ, ಹೀಗೆ ವರ್ಣಶಬ್ದವಾಚ್ಯ ಮುಖ್ಯವಿಷ್ಣುವೆ ಎಂದು ಶ್ರೀ ಮಂತ್ರಾಲಯ ಗುರುಸಾರ್ವ ಭೌಮರ ಖಂಡಾರ್ಥ. ಸಕಲ ವರ್ಣಾದಿ ಶಬ್ದಗಳು ಭಗವದ್ವಾಚಕವೆಂದು ತಿಳಿಯುವದು.

**ಸುಸ್ವರ** = ಸ್ವರತೇ ಸ್ತುಸ್ವರಃ ॥ ಭಾಷ್ಯ ॥

ಸ್ವಸ್ಮಿನ್‌ಮತ ಇತಿಯ್ಯುತ್ಪತ್ತ್ಯೋದಾದಿನಾಮಕಂ ಸ್ವರವಾಚ್ಯಂ ಸ್ವರ ಗತಂ ಪುರುಷೇ ಸ್ವರೋಚ್ಚಾರಣಕ್ರಿಯಾಪ್ರದಂ ರೂಪಂ ಸ್ವರಇತ್ಯನೇನ ಜ್ಞೇಯಂ (ಎಂದು ಖಂಡಾರ್ಥ). ಸ್ವರಮಣನೂ, ಸ್ವರದಲ್ಲಿ ಸ್ಥಿತನೂ, ಸ್ವರೋಚ್ಚಾರಣ ಕ್ರಿಯಾಪುರುಷರಲ್ಲಿ ಸ್ವರ ಉಚ್ಚಾರ ಮಾಡತಕ್ಕವನಾದುದ ರಿಂದ ಭಗವಂತನು **ಸ್ವ**ರವಾಚ್ಯನೆಂದು ಕರೆಸಿಕೊಳ್ಳುತ್ತಾನೆಂಬುದು. ಇದರಂತೆ ಎಲ್ಲ ಸ್ವರಾದಿಗಳಲ್ಲಿ ಸಮನ್ವಯ. ಈ ಸ್ವರಗಳಲ್ಲಿ (೮) ಭೇದ ಉಂಟು.

**ಇವೆಲ್ಲವು ಭಗವದ್ವಾಚಕವೇ.**

(೧) ಸ್ವರ, (೨) ಉದಾತ್ತ, (೩) ಅನುದಾತ್ತ, (೪) ಪ್ರಚಯ, (೫) ಸ್ವರಿತ, (೬) ಸಂಧಿ, (೭) ವಿಸರ್ಗ, (೮) ಬಿಂದು, ಇಂತು ೮ ವಿಧ. ಇವೆಲ್ಲ ಸ್ವರಗಳಿಗೆ ಪ್ರೇರಕ ವ್ಯಂಜಕ ಮುಖ್ಯವಾಗಿ ಈ ಎಲ್ಲ ಶಬ್ದಗಳಿಂದ ಶ್ರೀಹರಿಯೆ ವಾಚಕನೆಂದು ತಿಳಿಯಬೇಕು. (ಇವೆಲ್ಲ ಸ್ವರಗಳ ವಿಸ್ತಾರ ಜ್ಞಾನಿಗಳಾದ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ತೈತ್ತಿರೀಯ ಋಗ್ಭಾಷ್ಯ ಇನ್ನು ಪ್ರಮಾಣ ಗ್ರಂಥಗಳ ಆಧಾರದ ಮೇಲಿಂದ ಈ ವಿಚಾರ ಸವಿಸ್ತರ ಬರೆದಿದ್ದಾರೆ.) ಪ್ರತ್ಯೇಕ ಬರೆಯುವುದು ಗ್ರಂಥ ವಿಸ್ತಾರ ಭಯ. ಈ ಎಲ್ಲ ಸ್ವರಾದಿ ಭೇದದಿಂದ ವಾಚ್ಯನಾಗಿ ತತ್ತನ್ನಾಮ, ರೂಪಗಳು ತಿಳಿದು ಸಕಲ ಶಬ್ದ-ಸ್ವರ ವರ್ಣವಾಚ್ಯನು ಹರಿಯೇ ಎಂದು ಚೆನ್ನಾಗಿ ಮನವರಿತು, ಉಪಾಸನೆ ಮಾಡುವರು ದೇವತೆಗಳೇ ಸರಿ! ಅಂದರೆ ಸಕಲ ಶಬ್ದಗಳಿಂದ ನಾಮರೂಪ ಸ್ವರಾದಿಗಳಿಂದ ಪ್ರತಿಪಾದನಮಾಡುವ ಶಕ್ತಿ ದೇವತೆಗಳಲ್ಲಿದೆ. ಇಂತಹ ಶಕ್ತಿ ದೇವತೆಗಳದು ಎಂದು ಅರಿತರೆ, ನರರಲ್ಲ=ಮಾನವರಲ್ಲ=

ಇದು ಮಾನವರ ತಿಳುವಳಿಕೆಯಲ್ಲೆಂಬುದನ್ನು ಅರಿತರೆ, ಇವರೇ ವಿಶೇಷ ಜ್ಞಾನಿಗಳು. ಅವರಾಡುವದೆಲ್ಲ ಸಕಲ ವೇದಾರ್ಥವು.

**ದ್ರೌಪದೀಶಪತಿ ವಿಠಲರು:** ಹರಿಯೆ ಪಂಚಾಶದ್ವರ್ಣ – ವರ್ಣ ಎಂಥದು ಎಂದರೆ, ೧. ಸ್ವರ, ೨. ಉದಾತ್ತ, ೩. ಅನುದಾತ್ತ, ೪. ಪ್ರಚಯ, ೫. ಸ್ವರಿತ, ೬. ಸಂಧಿ, ೭. ವಿಸರ್ಗ, ೮. ಬಿಂದು. ಹೀಗೆ ಎಂಟು ಅವಯವ ಉಳ್ಳಂಥಾದ್ದು. ತಚ್ಛಶಬ್ದವಾಚ್ಯ ತನ್ನಿಯಾಮಕ ॥ ೧ ॥

**ಭಾವಸೂಚನ:** "ಯದಾಸ್ವರೂಪಂ ಜಾನಾತಿ ಕಾಲಪ್ರಕೃತಿ ವರ್ಜಿತಂ ॥ ವಾಸುದೇವ ಪ್ರಸಾದೇನ ತದಾ ಮುಕ್ತೌಭವತ್ಯಸಾವಿತಿ ವಚನಾದ್ಧರಿಜ್ಜೀವಾ ಉಭಾವಪಿ ಜ್ಞೇಯಾವತೋ ಜೀವವಿಚಾರೋತ್ರೀವ ದುಜ್ಞಾನೋತ್ರಃ ಸರ್ವಾನ್ ಬೋಧಯತಿ ॥

ಹರೀತಿ ॥ ತದುಕ್ತಂ ಮಂಜೂಷಾಯಾಂ ॥ (ಭಾಮಿನಿ)

ಮೂಲ:

**ಜೀವತತಿ ಪರಮಾಣುವನು ಮೇಣ್ ।**
**ಜೀವಪದ ವೈಲಕ್ಷಣಂಗಳ ।**
**ಜೀವ ಜೀವದಲಿಪ್ಪ ಭಗವದ್ರೂಪುಪಾಸನೆಯು ॥**
**ಈ ವಸುಂಧರೆಯೊಳಗೆ ಸಕಲರು ।**
**ಆವ ಅಧಿಕಾರಲ್ಲ ವಿದರಿಂ ।**
**ದಾವ ನರರಿಗೆ ಸುಲಭೊಪಾಯುದಿ ತೋರ್ದ ಸುಗಮದಲಿ ॥ ೯ ॥**

"ಸರ್ವೇವೇದಾಃ ಸ ಘೊ ಷಾ ಶ್ಚ ಸರ್ವೇವರ್ಣಾಃ ಸ್ವರಾ ಅಪಿ ॥ ಸಮಾತ್ರಾ ಸ ವಿಸರ್ಗಾಶ್ಚ ಸಾನುಸ್ವಾರೂಪದಾ ಸ್ತಥಾ ॥ ಗುಣಸಾಂದ್ರೇ ತಥಾ ವಿಷ್ಣೋ ಮಹಾತಾತ್ಪರ್ಯ ಗೋಚರಾ ಇತಿ ॥ ಶಾಂಡಿಲ್ಯಪ್ರೋಕ್ತೇ ॥ ಪ್ರಾಣ ವರ್ಣಿತಾಃ ಸುಸ್ವರಾದಾವೆಂದರೆ – ಉದಾತ್ತಾದಿಗಳು ॥ ತಾಲ್ವಾದಿಸ್ಥಾನದಲ್ಲೆ ಊರ್ಧ್ವಭಾಗ ನಿಷ್ಪನ್ನಾಜ್ವರ್ಣವೇ **ಉದಾತ್ತಾ** ಆಯೇ ತನ್ವಂತೀತಿ ಶ್ರುತಾಂ ವಕಾರಃ ॥ ಅಧೋನಿಷ್ಪನ್ನಾ**ಜನುದಾತ್ತಃ ॥** ಅರ್ವಾಂಜ । **ಪ್ರಚಯೇ,** ಸ್ವರವಿಶೇಷ ಸಮಾಚ್ ಸ್ವರಿತಃ ॥ ಉಚ್ಚೈರುದ್ಗಾತಃ । ನೀಚೈರನುದಾತ್ತಃ ॥ ಸಮಾಹಾರ ಸ್ವರಿತ ಇತಿ ಪಾಣಿನೀ ಸ್ಮರಣಾತ್ ॥ **ವರ್ಣಃ** ತದಂತರ್ಗತ

ತ್ವಾತ್ ದ್ವರಣೀಯತ್ವಾತ್ತದ್ವಾಚ್ಯಃ ವರ್ಣಃ, ಸ್ವರ, ಇತಿ ತೈತ್ತಿರೀಯೇ - ತದ್ಭಾಷ್ಯೇಚ ॥ ವರಣೀಯೋ ವರ್ಣಃ ಸ್ವರತೇತು ಸ್ವರ ಇತಿ ॥ ಪ್ರಕ್ಲಪ್ತೇಚ ॥ ವರ್ಣಾದಿವಾಚಕಂ ರೂಪಂ ಜ್ಞೇಯಂ ವರ್ಣಾದಿವಾಚಕಮಿತಿ ॥ ವರ್ಣಾದಿ ರ್ವಿಷ್ಣೋರ್ಯಸ್ಯ ರೂಪಸ್ಯವಾಚಕಂ ಪ್ರತಿಪಾದಕಂ ತದ್ವರ್ಣಾದಿಕಂ ರೂಪಂ ವರ್ಣಾದಿನಾಮಕ ಮಿತಿ ವ್ಯಾಸತೀರ್ಥೀಯೇಚ ॥ ವಿಸರ್ಗ ಅಃ ಎಂಬೋದು ಅಂ ಬಿಂದು ॥೧॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಾನರ್ಥಕಃ ಸ್ವರೋ ವಾಪಿ" ಇತ್ಯುಕ್ತೇಃ ಸ್ವರಾದಿಕಂ ಅವಗತಂ ಚೇತ್ ಅರ್ಥತಃ ಕೃತಾರ್ಥಃ ಸ್ಯಾತ್ ಇತಿ ಆಲೋಚಯನ್ "ಸರ್ವೇ ವೇದಾಃ ಸರ್ವೇ ಘೋಷಾಃ" ಇತ್ಯುಕ್ತಂ ಅರ್ಥತಃ ವಕ್ತುಂ ವರ್ಣಪ್ರಕ್ರಿಯಾಂ ವರ್ಣ ಯಂತಿ - "ಹರಿಯೆ" ಇತಿ ॥ ಹರೀತಿ ಹರಿಯೆ - ವರ್ಣಗತತ್ವಾತ್ ತದುಚ್ಚಾರಣಶಕ್ತಿ ದಾತೃತ್ವಾತ್‌ವಾ ವರ್ಣಃ ॥ ವರ್ಣಾದಿವಾಚಕಂ ರೂಪಂ ಜ್ಞೇಯಂ "ವರ್ಣಾದಿ ನಾಮಕಮ್ ॥ ವಿಷ್ಣೋಃ ವರ್ಣಾದಿ ಸಂಸ್ಥಂ ಚ ಪುಂಸ್ತ್ವ ತತ್ತತ್ಕ್ರಿಯಾಪ್ರದಮ್" ॥ ಇತಿ **ತೈತ್ತಿರೀಯ್ಯೆ ॥** ಸುಸ್ವರಾಃ ಉದಾತ್ತಾ ದಯಃ ॥ ಓಂ ॥ ಸ್ವರತೇಃ ತು ಸ್ವರಃ ॥ **ಋಗ್ಭಾಷ್ಯೇ** ಚ ॥ ದಾರ್ಢ್ಯಮೇವಾನು ದಾತಾರ್ಥಃ ಉದಾತ್ತಸ್ಯೋಚ್ಚತಾರ್ಥತಾ ॥ ನೀಚತಾ ಸ್ವರಿತಸ್ಯಾರ್ಥಃ ಪ್ರಚ ಯಸ್ಯ ಯಥಾ ಸ್ಥಿತಿಃ ॥ ಸಮಾಹಾರೇ ಅಖಿಲಾರ್ಥಾಃ ಸ್ಯುಃ ಸ್ವರಾರ್ಥಾನಾಂ ಇಯಂ ಸ್ಥಿತಿಃ ॥ ಸಾಧಾರಣೋ ವಿಧಿಸ್ತ್ವೇಷಃ" ಇತಿ॥ ವಿಶೇಷಸ್ತು ಐತರೇಯೇ- "ತಥಾ ಭೇರೀಧ್ವನಿಃ ಪ್ರಭೋಃ ॥ ಅನುದಾತ್ತ ಸ್ವರೂಪತ್ವಾತ್ ಔದಾರ್ಯಂ ವದತೀಶತುಃ ॥ ತದಪೇಕ್ಷಯಾನ್ಯ ನೀಚತ್ವಂ ಘಟಾದ್ಯಾಃ ಸ್ವರಿತಾತ್ಮಕಾಃ ॥ ಉಚ್ಚಸ್ಥಿತಿ ಮುದಾತ್ತಸ್ತು ಸ್ವವರ್ಣಂ ಚಂಚ್ವಾದಯಃ ಸ್ವರಾಃ ವಿಷ್ಣೋಃ ವಕ್ತಿ ತಥಾಶ್ವಾಸಾದಿಃ ಪ್ರಚಯಾತ್ಮಕಃ ॥ ಏಕಪ್ರಕಾರತಾಂ ಸದಾಚಾಲ್ಯಂ ವದತ್ಯಪಿ" ಇತಿ ॥ ಗರ್ಗರ ಗೋಧಾ ಪಿಂಗಾದೀನಾಂ ಘೋಷಾಃ ಅಪಿ ನಾದಮಾತ್ರ ವ್ಯಂಜಕತ್ವೇನ ಭಗವದ್ವಾಚಕಾಃ ಏವ ಇತ್ಯಾಹ- "ಅವಸ್ವರಾತಿ" ಇತ್ಯಾದಿನಾ॥ ಗರ್ಗರ ಇತಿ ಪಾದಭೂಷಣ ಮಹಾಮತ್ರಕದಧಿ ಪಾತ್ರ ಹಸ್ತಿ ಹಸ್ತಾನಾಂ ನಾಮ । ಪಿಂಗಾ ಚಕೋರೀ ॥ ಓಂ - ದಧ್ನಃ ಮಥನಶಬ್ದಶ್ಚಾಪ್ಯಂತರ್ನಾದ ಸ್ವರೂಪತಃ ॥ ಭೀಷಕತ್ವಂ ಹರೇಃ ಭೂಯಾತ್ ಅಂತರ್ನಾದೋ ಹಿ ಭೀಷಣೇ॥

ಗಜ ಬೃಂಹಿತಮಸ್ಯೈವಂ ಧಿಕ್ಕಾರ ಸಹಿತಂ ವದೇತ್ ॥ ಸ್ವರಿತೇನ ಸಮಾ ಯೋಗಾತ್ ಧಿಕ್ಕೃತೌ ಸ್ವರಿತಃ ಯತಃ ॥ ಮಹಾ ಮತ್ರುಜಲಾದ್ಯೈಶ್ಚ ಯುಕ್ತ ಮೇತಾದೃಶಂ ವದೇತ್ ॥ ಪಾದಭೂರ್ನ್ಯಾದಿತಿ ಧಿಕ್ಕಾರ ತತ್ಕೃತಂ ಸ್ವರಿತಃ ವದೇತ್ ॥ ಅದ್ಭುತತ್ವಂ ಹರೇಃ ವಕ್ತಿ ಪಿಂಗಾ ಕಂಠಗಶಬ್ದವತ್ ॥ ತಾಮೇವಾ ದ್ಭುತತಾಂ ವಕ್ತಿ ಗೃಹಗೋಧಾಪರಾಪಿ ಚ" ಇತಿ ಶಬ್ದತತ್ವೇ ॥ ಓಂ "ಯಚ್ಚೈ ನ್ಯಾನದ್ಯ ಆಪತಂತಿ (ಆಂತಿ) ತದ್ವ್ಯೋಷಶ್ಚೇಂದ್ರ ವಾಚಕಃ ॥ ನದೀ ಸಮುದ್ರ ಘೋಷಾದ್ಯಾಃ ನಾದತ್ವಾತ್ ಶ್ರೈಷ್ಠ್ಯವಾಚಕಾಃ ॥ ನಾದೋ ಹಿ ಶ್ರೈಷ್ಠ್ಯ ವಾಚೀ ಸ್ಯಾತ್ ಏವಂ ಘೋಷಾಃ ಪರೇಪಿಚ" ॥ ಇತಿ ಕರ್ಮನಿರ್ಣಯೇ ॥ "ಇತ್ಯಾದಯಃ ಸರ್ವೇ ಘೋಷಾ- ವಿಷ್ಣೋರೇವ ಗುಣೋನ್ನತಿಮ್ ॥ ವದಂತಿ ಕಿಮು ವೇದಾದ್ಯಾಃ ಮಾರ್ಜಾರಾಸ್ಯಭಿಧಾಃ ತಥಾ" ॥ ಇತಿ ಐತರೇಯೇ ॥ ವಾಸುದೇವಾದಿಕಾನ್ಯೇವ ತಾನಿ ಪೂರ್ವೋತ್ತರಾರ್ಣಯೋಃ ॥ ಸಂಹಿತಾಯಾಃ ತಥಾ ಸಂಧೌ ॥ ವಿಸರ್ಗಕೃದ್ವಿಸರ್ಗಾಖ್ಯಃ ಬಿಂದುರ್ವತ್ತ್ರ್ಯಧಿಕತ್ವಂ ಚ ॥ ಇತಿ ॥ ೧ ॥

## ಕನ್ನಡಾರ್ಥ

"ವೇದ ಮಂತ್ರಗಳಲ್ಲಿರುವ ಸ್ವರವೂ ಸಹ ವ್ಯರ್ಥವಲ್ಲ" ಎಂದು ಪ್ರಮಾಣವಿರುವದರಿಂದ ಸ್ವರ ಮುಂತಾದವುಗಳನ್ನು ಅರ್ಥಪುರಃಸರವಾಗಿ ಅರಿಯುವದರಿಂದ ಕೃತಾರ್ಥರಾಗುತ್ತಾರೆ ಎಂದು ವಿಚಾರಿಸಿ "ಸರ್ವೇ ವೇದಾಃ" = ಸಕಲ ವೇದಗಳೂ ಧ್ವನಿವರ್ಣಗಳೂ ಪರಮಾತ್ಮನನ್ನೇ ಹೇಳುತ್ತವೆ" ಎಂದು ಹೇಳಿದುದನ್ನೇ ವಿವರಿಸುವದಕ್ಕಾಗಿ ವರ್ಣಪ್ರಕ್ರಿಯೆಯನ್ನು ವಿಶದ ಪಡಿಸುತ್ತಾರೆ – "ಹರಿಯೆ" ಎಂಬ ಪದ್ಯದಿಂದ. ವರ್ಣಗಳಲ್ಲಿಯೂ ಇದ್ದು ವರ್ಣೋಚ್ಚಾರಣ ಸಾಮರ್ಥ್ಯವನ್ನು ಕೊಡುವದರಿಂದ "ವರ್ಣ" ಎಂದು ಶ್ರೀಹರಿಯು ಹೇಳಿಸಿಕೊಳ್ಳುತ್ತಾನೆ. ವರ್ಣ ಮುಂತಾದವುಗಳಿಂದ ಹೇಳಿಸಿ ಕೊಳ್ಳುವ ಶ್ರೀಹರಿಯ ರೂಪಕ್ಕೆ ವರ್ಣವೆಂದು ಹೆಸರು. ವರ್ಣಗಳಲ್ಲಿದ್ದು ಅದರ ಉಚ್ಚಾರಣ ಕ್ರಿಯಾಕಾರಕನಾದ ವಿಷ್ಣುವಿನ ರೂಪವು "ವರ್ಣ" ವೆನಿಸಿ ಕೊಳ್ಳುತ್ತದೆ.

ಉದಾತ್ತ ಮುಂತಾದವುಗಳು ಸುಸ್ವರಗಳು. ಋಗ್ಭಾಷ್ಯದಲ್ಲಿ "ಅನು ದಾತ್ತಸ್ವರಕ್ಕೆ "ವೃಷ – ದಾರ್ಢ್ಯ" ಎಂದು ಅರ್ಥ. ಉದಾತ್ತಸ್ವರಕ್ಕೆ "ಉಚ್ಚ –

ಉನ್ನತ ಸರ್ವೋತ್ತಮ" ಎಂದು ಅರ್ಥ. ಸ್ವರಿತ ಸ್ವರಕ್ಕೆ "ನೀಚ-ಕೆಳಗಿನ" ಎಂದು ಅರ್ಥ. ಪ್ರಚಯಕ್ಕೆ "ಯಥಾಸ್ಥಿತವಾದುದು" ಎಂದು ಅರ್ಥ. ಎಲ್ಲ ವಿಷಯಗಳ ಸಮಾಹಾರ ಸಂಗ್ರಹಮಾಡುವ ಅರ್ಥದಲ್ಲಿ – "ಸಮಾಹಾರ ಸ್ವರಿತ"ವು ಉಪಯುಕ್ತವಾಗುತ್ತದೆ. ಹೀಗೆ ಸ್ವರಗಳ ಅರ್ಥವಿರುತ್ತದೆ. ಇದು ಸಾಮಾನ್ಯವಾದ ವಿಧಿ. ವಿಶೇಷ ವಿಧಿಯು ಐತರೇಯದಲ್ಲಿ ವಿಶದವಾಗಿರುತ್ತದೆ. "ಭೇರೀ ಧ್ವನಿಯು ಅನುದಾತ್ತ ಸ್ವರವಾದುದರಿಂದ ಶ್ರೀಹರಿಯ ಔದಾರ್ಯವನ್ನು ಹೇಳುತ್ತದೆ. ಅದಕ್ಕೂ ಕಡಿಮೆ ಗುಣವನ್ನು – ಘಟ ಮುಂತಾದವುಗಳ ಸ್ವರಿತ ಧ್ವನಿಯು ಹೇಳುತ್ತದೆ. ಚಂಚು ಮುಂತಾದವುಗಳ ಉದಾತ್ತಸ್ವರವೆನಿಸಿರುವ ಧ್ವನಿಯು ಉಚ್ಚಸ್ಥಿತಿಯನ್ನು ಹೇಳುತ್ತದೆ. ಮಂದ್ರವಾಗಿರುವ ಶ್ವಾಸ ಮುಂತಾದವುಗಳ ಧ್ವನಿಯು ಪ್ರಚಯ ರೂಪವಾದುದರಿಂದ ಪರಮಾತ್ಮನಿಗೆ ಯಾವಾಗಲೂ ಒಂದೇ ತರಹವಾದ ಇರುವಿಕೆ – "ಕಶ್ವದೇಕ ಪ್ರಕಾರತೆ" ಯನ್ನು ತಿಳಿಸುತ್ತದೆ. ಗರ್ಗರ ಗೋಧಾ ಪಿಂಗ ಮುಂತಾದವುಗಳ ಧ್ವನಿಗಳು ನಾದಗಳನ್ನು ಅಭಿವ್ಯಂಜಿಸುವದರಿಂದ ಭಗವಂತನನ್ನು ತಿಳಿಸತಕ್ಕವುಗಳೇ ಆಗಿರುತ್ತವೆ.

ಗರ್ಗರವೆಂಬುದು ಪಾದಾಭರಣ, ದಧಿಪಾತ್ರ, ಮೊಸರು ಕಡೆಯುವ ಪಾತ್ರ – ಆನೆಯ ಶುಂಡಗಳಿಗೆ ಹೆಸರು. ಪಿಂಗಾ ಎಂಬುದು ಹೆಣ್ಣು ಚಕೋರ ಪಕ್ಷಿಯ ಹೆಸರು.

ಮೊಸರು ಕಡೆಯುವಾಗ ಆಗುವ ಶಬ್ದವು ಅಂತರ್ನಾದ ರೂಪವಾದುದರಿಂದ (ಒಳಗೇ ನಾದವನ್ನು ಹೊರಡಿಸುವದರಿಂದ) ಭಗವಂತನಲ್ಲಿರುವ (ದುಷ್ಟರನ್ನು) ಭಯಗೊಳಿಸುವ ಗುಣವನ್ನು ಹೇಳುತ್ತದೆ. ಯಾಕೆಂದರೆ ಅಂತರ್ನಾದವು "ಭೀಷಣ" ಗೊಳಿಸುವದನ್ನು ಹೇಳುತ್ತದೆ. ಗಜಗರ್ಜನವೂ ಸಹ ಹೀಗೆಯೇ ಧಿಕ್ಕಾರ ಸಹಿತವಾದ ಭಯವನ್ನು ತಿಳಿಸುತ್ತದೆ. ಸ್ವರಿತಸ್ವರವು ಧಿಕ್ಕಾರವನ್ನು ಹೇಳುತ್ತದೆ. ಗಜಗರ್ಜನೆಯಲ್ಲಿ ಸ್ವರಿತಸ್ವರವು ಸೇರಿರುವದರಿಂದ ಇದರಲ್ಲಿ ಧಿಕ್ಕಾರವು ವ್ಯಕ್ತವಾಗುತ್ತದೆ. ಜಲಾದಿಗಳನ್ನು ತುಂಬುವಾಗ ಆಗುವ ಶಬ್ದವು ಇಂಥ ಅರ್ಥವನ್ನೇ ಹೇಳುತ್ತದೆ. ಹೆಣ್ಣು ಚಕೋರೀ ಧ್ವನಿಯು ಆ ಹರಿಯ ಅದ್ಭುತತ್ವ ಗುಣವನ್ನು ಹೇಳುತ್ತದೆ. ಹಲ್ಲಿಯೂ (ಗೃಹಗೋಧಾ) ಸಹ ಇದೇ ಅರ್ಥವನ್ನೇ – ಅದ್ಭುತತ್ವವನ್ನೇ ತನ್ನ ಧ್ವನಿ

ಯಿಂದ ಹೇಳುತ್ತವೆ. ಬೇರೆ ಬೇರೆ ನದಿಗಳು ಸಂಗಮಿಸುವಾಗ ಉಂಟಾಗುವ ನಾದವೂ ಸಹ - ಇಂದ್ರನಾಮಕ ಪರಮಾತ್ಮನನ್ನೇ ಹೇಳುತ್ತದೆ. ನದೀ ಸಮುದ್ರಗಳ ಧ್ವನಿಗಳು ನಾದರೂಪವಾದುದರಿಂದ ಶ್ರೇಷ್ಠತೆಯನ್ನು ತಿಳಿಸುತ್ತವೆ. ನಾದವು ಶ್ರೇಷ್ಠತೆಯನ್ನು ಹೇಳುತ್ತದೆ. ಹೀಗೆ ಎಲ್ಲ ಧ್ವನಿಗಳೂ ಶ್ರೀಹರಿಯಲ್ಲಿಯೇ ಹೇಳುತ್ತಿರುತ್ತವೆ" ಎಂದು ಕರ್ಮನಿರ್ಣಯದಲ್ಲಿ ಹೇಳಲಾಗಿರುತ್ತದೆ.

ಮತ್ತು ಯಾವತ್ತೂ ಧ್ವನಿಗಳು ಶ್ರೀ ವಿಷ್ಣುವಿನ ಗುಣಪೂರ್ಣತೆಯನ್ನು ಹೇಳುತ್ತವೆ. ಅಂದಮೇಲೆ ವೇದ ಮುಂತಾದವುಗಳು ನಾರಾಯಣನಿಗೇ ಗುಣಪೂರ್ಣತೆಯನ್ನು ಹೇಳುವವೆಂಬುದು ಕೈಮುತ್ಯ ನ್ಯಾಯಸಿದ್ಧವಾದ ಸಂಗತಿಯಾಗಿರುತ್ತದೆ" ಎಂದು ಐತರೇಯದಲ್ಲಿ ಹೇಳಲಾಗಿರುತ್ತದೆ. ವಾಸುದೇವ ಮುಂತಾದ ರೂಪಗಳನ್ನೇ ಸಂಹಿತೆಯಲ್ಲಿ ಹಿಂದು-ಮುಂದಿನ ವರ್ಣ ಸಂಧಿ - ಸಂಧಾನ ಮುಂತಾದವುಗಳು ಹೇಳುತ್ತವೆ. ವಿಸರ್ಗವನ್ನುಂಟು ಮಾಡುವದರಿಂದ ಪ್ರಲಯ, ಮೋಕ್ಷ ವಿಸರ್ಗವೆಂದೂ ಬಿಂದುವು ಆಧಿಕ್ಯವನ್ನು ಹೇಳುವದೆಂದೂ ಹೇಳಲಾಗಿರುತ್ತದೆ. ॥ ೧ ॥

**ಅವತರಣಿಕಾ :** ಇಂತು ಸಮಸ್ತ ವೇದಗಳಲ್ಲಿಪ್ಪ ವರ್ಣಗಳು ಸ್ವರಾದಿ ಭೇದಗಳಿಂದ ತದರ್ಥಾನುಸಂಧಾನ ಭೇದದಿಂದ ಸಕಲ ವರ್ಣಸ್ವರವಾಚ್ಯನು ಹರಿಯೇ ಎಂದು ತಿಳಿದವ ವಿಜ್ಞಾನಿ = ವಿಶೇಷ ಜ್ಞಾನಿ. ಇಂತಹ ವಿಜ್ಞಾನಿ ಯಾರು ಅಂಥವರ ಅಭಿಲಾಷೆ ಪೂರೈಸಿದರೆ ಹರಿಯ ಪೂಜೆ. ಆ ವಿಜ್ಞಾನಿಯ ಲಕ್ಷಣ ಹೇಳುತ್ತಾರೆ.

ಮೂಲ :

**ಈಶನಲಿ ವಿಜ್ಞಾನ ಭಗವ ।**
**ದ್ದಾಸರಲಿ ಸದ್ಭಕ್ತಿ ವಿಷಯ ನಿ ।**
**ರಾಶೆ ಮಿಥ್ಯಾವಾದಿಯಲಿ ಪ್ರದ್ವೇಷ ನಿತ್ಯದಲಿ ॥**
**ಈ ಸಮಸ್ತ ಪ್ರಾಣಿಗಳಲಿ ರ ।**
**ಮೇಶನಿಹನೆಂದರಿದವರ (ನೆಂದರಿದು ಅವರ) ಅಭಿ ।**
**ಲಾಷೆಗಳ ಪೂರೈಸುವದು ಮಹಯಜ್ಞ ಹರಿಪೂಜೆ ॥ ೨ ॥**

**ಪದ್ಯಾರ್ಥ :** ಈಶನಲಿ ವಿಜ್ಞಾನ = ಸಮಸ್ತ ಚರಾಚರ ಜಗತ್ತಿಗೆ ಒಡೆಯನಾದವನು ಈಶ = ಹರಿ ಸರ್ವೋತ್ತಮ, ವಾಯುರ್ಜೀವೋತ್ತಮ,

ತರತಮ ಪಂಚಭೇದ ಸತ್ಯಜಗತ್ತು ಜೀವರೆಲ್ಲರೂ ಈಶನ ದಾಸರೆಂಬುದು ನಿಶ್ಚಯಜ್ಞಾನವುಳ್ಳ ವಿಜ್ಞಾನ. ಇದನ್ನರಿತವನೇ ವಿಜ್ಞಾನಿ. ಈ ವಿಜ್ಞಾನಿಯು ಸದಾ ಭಗವದ್ದಾಸರಲಿ ಸದ್ಭಕ್ತಿ = ಭಗವಂತನ ದಾಸರಾದ ಬ್ರಹ್ಮಾದಿ ದೇವತೆಗಳಲ್ಲಿ ತಾರತಮ್ಯದಿಂದ, ಸದ್ಭಕ್ತಿ = ಸಮೀಚೀನವಾದ ಒಳ್ಳೇ ಭಕ್ತಿ ಈ ವಿಜ್ಞಾನಿಯಲ್ಲಿರುವದು. ಮತ್ತು ಈ ವಿಜ್ಞಾನಿಗೆ, ವಿಷಯನಿರಾಶೆ = ದಾರಾಪುತ್ರ ಮುಂತಾದ ಅನೇಕ ಸಂಸಾರ ವಿಷಯಗಳಲ್ಲಿ, ನಿರಾಶೆ = ಆಶಾ ಇರಬಾರದು. ಇಷ್ಟೆಲ್ಲ ಇದ್ದರೂ, ಮಿಥ್ಯಾವಾದಿಯಲಿ ಪ್ರದ್ವೇಷ = ಬ್ರಹ್ಮ ಸತ್ಯ ಜಗನ್ಮಿಥ್ಯಾವೆಂಬ ಮಾಯಾವಾದಿಗಳಲ್ಲಿ ವಿಶೇಷವಾಗಿ ದ್ವೇಷಬುದ್ಧಿ ಇರಬೇಕು. ಅಲ್ಲದೆ ಭಗವದ್ಭಕ್ತರಲ್ಲಿಯೂ, ಮಿಥ್ಯಾವಾದಿಗಳಲ್ಲಿಯೂ ಸಮನಾದ ಹರಿಯು ಇದ್ದು, ಅವರ ಸ್ವಭಾವಗುಣಾನುಸಾರ ಹರಿಯೇ ಇದ್ದು ಪ್ರವರ್ತಿಸುವ ಮತ್ತು ವಿಷಯಾದಿಗಳಲ್ಲಿ ಹರಿಯು ಇದ್ದು ಬಂಧಿಸುವ; ಇಂಥ ವಿಷಯಗಳಿಂದ ಮೋಚಕನೂ ಹರಿಯು. ಈ ಎಲ್ಲರಲ್ಲಿ ಎಲ್ಲ ಪ್ರಾಣಿಗಳಲ್ಲಿ – ರಮೇಶನು = ಲಕ್ಷ್ಮೀಶನು, ಇಹನೆಂದರಿದವರ = ಇರುವನೆಂದು ಯಾರು ಚೆನ್ನಾಗಿ ಅರಿತಿರುವರೋ, ಆ ವಿಜ್ಞಾನಿ ಭಕ್ತರ ಅಭಿಲಾಷೆ = ಬಯಕೆ ಇಚ್ಛಾ ಪೂರೈಸುವದು, ಮಹಾಯಜ್ಞ, ಹರಿಪೂಜೆ ಇವೆ ಎಂದು ದಾಸರ ಭಾವ. ಅನೇಕ ಪ್ರಮಾಣಗಳಿಂದ ಸಿದ್ಧ. ಈ ಎಲ್ಲ ಗುಣಗಳು ಒಬ್ಬನಲ್ಲಿದ್ದರೆ ಆತನೇ ವಿಜ್ಞಾನಿ ಎಂಬುದನ್ನರಿಯದೇ "ಎಂದರಿದವರ ರವ ಮನೋಭಿಷೆ" ಎಂದು ಮೂಲ ಪದ್ಯ ತಿದ್ದಿ ಮನಬಂದಂತೆ ಹಿಂದಿನ ವ್ಯಾಖ್ಯಾನದಲ್ಲಿ ಬರೆದಿರುವರು. ಇದು ಸಂಪ್ರದಾಯವಲ್ಲ, ಶಾಸ್ತ್ರವಿರುದ್ಧವೂ ಆಗುತ್ತದೆ.

**ದ್ರೌಪದೀಶಪತಿ ವಿಠಲರು :** "ಈಶನಲಿ ವಿಜ್ಞಾನ" —

**ಭಾವಸೂಚನ :** ಈಶೇತಿ ॥ ಅಭಿಲಾಷೇತಿ—"ಜ್ಞಾತಯಃ ಸುಹೃದಃ ಪುತ್ರಾಃ ಭ್ರಾತಾರಃ ಸುಹೃದೋ ಪರೇಯದ್ವದಂತಿ ಯದಿಚ್ಛಂತಿ ಚಾನುಮೋದತಿ ನಿರ್ಮಮ:" ಇತಿ ಭಾಗವತೇ ॥ ೨ ॥

**ಶ್ರೀ ವ್ಯಾಸದ್ಯಾಸ ಸಿದ್ಧಾಂತ ಕೌಮುದೀ**

"ಈಶನಲಿ" ಇತಿ ॥ ಸಂಸದಿ ಮಾಯಿನಃ ತನ್ಮತ ದೃಢೀಕರಣೇ ಹರಿಃ ಪ್ರೀಣಾತಿ ॥ ೩ ॥

## ಕನ್ನಡಾರ್ಥ

ಭಗವಂತನಲ್ಲಿ ವಿಜ್ಞಾನ, ಭಗವದ್ಭಕ್ತರಲ್ಲಿ ಭಕ್ತಿ, ವಿಷಯ ವೈರಾಗ್ಯ, ಮಿಥ್ಯಾಜ್ಞಾನಿಗಳಲ್ಲಿ ದ್ವೇಷ, ನಿಂದಾ ಮುಂತಾದವುಗಳನ್ನು ತೋರಿಸುತ್ತ, ಮಿಥ್ಯಾಜ್ಞಾನಿಗಳನ್ನು ಸೋಲಿಸಿ ಸಜ್ಜನರಿಗೆ ಸಂಶಯ ವಿಪರ್ಯಯಗಳನ್ನು ಕಳೆದು ಅಸಜ್ಜನರಿಗೆ ಅವರ ಸ್ವಭಾವೋಚಿತವಾದ ಜ್ಞಾನವನ್ನುಂಟುಮಾಡುವುದರಿಂದ ಶ್ರೀಹರಿಯು ಪ್ರಸನ್ನನಾಗುತ್ತಾನೆ. ॥ ೨ ॥ (ಇದು ಒಂದು ಸ್ವಾರಸ್ಯ ಪ್ರಮೇಯ ಶಾಸ್ತ್ರಕ್ಕೆ ವಿರೋಧವಾಗದ ಅರ್ಥ.)

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ವಿವರಿಸಿದಂತೆ ವಿಜ್ಞಾನಿಭಕ್ತರ ಮನೋರಥ ಪೂರೈಸುವದೇ ಮಹಯಜ್ಞ ಹರಿಪೂಜೆ ಎಂಬುದು ಭಗವಂತನು ಹೇಗೆ ಸ್ವೀಕರಿಸುವನೆಂಬುದನ್ನು ಈ ಪದ್ಯದಿಂದ ವಿವರಿಸುತ್ತಾರೆ.

ಮೂಲ :

**ತ್ರಿದಶ ಏಕಾತ್ಮಕನೆನಿಸಿ ಭೂ ।**
**ಉದಕ ಶಿಖಿಯೊಳು ಹತ್ತು ಕರುಣದಿ ।**
**ಅಧಿಪರೆನಿಸುವ ಪ್ರಾಣ ಮುಖ್ಯಾದಿತ್ಯರೊಳು ನೆಲಸಿ ॥**
**ವಿದಿತನಾಗಿದ್ದನವರತ ನಿರ ।**
**ವಧಿಕ ಮಹಿಮನು ಸಕಲ ವಿಷಯವ ।**
**ನಿಧನನಾಮಕ ಸಂಕರುಷಣಾಹ್ವಯನು ಸ್ವೀಕರಿಪ ॥ ೩ ॥**

**ಪದ್ಯಾರ್ಥ :** ತ್ರಿ + ದಶ = ೧೦ + ೩ = ೧೩ ಈ ಹದಿಮೂರು, ರೂಪಾತ್ಮಕನು ಅಥವಾ ತ್ರಿದಶನಾಮ ="ತ್ರಿಸೃಣಾಂ ದಶಾನಾಂ ಅವಸ್ಥಾನಾಂ ಸ್ವಾಮಿ, ಸೃಷ್ಟ್ಯಾದಿ ಜಾಗೃತೀನಾಂ ಸ್ವಾಮಿ (ತ್ರಿದಶಾಧ್ಯಕ್ಷ)" ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ, ಅಥವಾ ಜಾಗ್ರತ್ ಸ್ವಪ್ನ ಸುಷುಪ್ತಿಗಳಿಗೆ ನಿಯಂತನಾದುದರಿಂದ ತ್ರಿದಶ (ವಿದ್ಯಾಧಿರಾಜೀಯ) ಏಕಾತ್ಮಕನೆನಿಸಿ = "ಏಕಾತ್ಮಾ ಹರಿರುದ್ದಿಷ್ಟಃ ಪ್ರಧಾನತ್ವಾತ್ಸಮಸ್ತಶಃ॥" ಇತಿ ವಚನಾದೇಕಾತ್ಮ॥ ಏಕಾತ್ಮನೆಂದು ಬಿಂಬರೂಪೀ ಹರಿಯ ನಾಮ, ಎಲ್ಲರಿಗೂ ಶ್ರೇಷ್ಠನಾದುದರಿಂದ ಏಕಾತ್ಮ ಒಬ್ಬನೇ ಬಿಂಬನು. ಭೂ = ಭೂಮಿ, ಪೃಥ್ವಿ; ಉದಕ = ಅಪ್ಪು, ಶಿಖಿ = ಅಗ್ನಿಯಲ್ಲಿ = ಹೀಗೆ ಮೂರು ರೂಪದಿಂದ, ಹತ್ತು ಕರಣ = ದಶೇಂದ್ರಿಯ,

ಪಂಚಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯ = ಹತ್ತು ಇಂದ್ರಿಯಗಳಿಗೆ ಅಧಿಪರೆನಿಸುವ, ಅಧಿಪತಿಗಳಾದ ಪ್ರಾಣದೇವರೇ ಮೊದಲಾದ ಆದಿತ್ಯರೊಳು = ಅದಿತಿ ಪುತ್ರರಾದ ದೇವತೆಗಳಲ್ಲಿ, ನೆಲೆಸಿ = ಏಕಾತ್ಮನು ೧೩ ರೂಪದಿಂದ ವಿದಿತನಾಗಿದ್ದು, ಮುಖ್ಯನಾಗಿದ್ದು, ಆಜ್ಞಾಪಿಸುವನಾಗಿ, ಅನವರತ = ನಿತ್ಯ ದಲ್ಲಿಯೂ, ನಿರವಧಿಕ ಮಹಿಮನು = ಮೇರೆ ಇಲ್ಲದ ಮಹಿಮೆಯುಳ್ಳವನು, ಸಕಲ ವಿಷಯವ = ಜಾಗ್ರತ್, ಸ್ವಪ್ನ, ಸುಷುಪ್ತಿಗಳಲ್ಲಿ ಆಗತಕ್ಕ ಎಲ್ಲ ವಿಷಯ ಗಳನ್ನೂ ನಿಧನನಾಮಕನಾದ ಸಂಕರ್ಷಣನೇ ಪ್ರಾಜ್ಞನಾಮಕ ಬಿಂಬರೂಪಿ ಹರಿಯು ಸ್ವೀಕರಿಸುವನು.

**ಇಲ್ಲಿ ವಿಚಾರಾಂಶ :** ಈ ಪದ್ಯದಲ್ಲಿ ದಾಸಾರ್ಯರು ಬಹು ಪ್ರಮೇಯ ವಿಚಾರವನ್ನು ತುಂಬಿದ್ದಾರೆ. ಈ ಸಂದರ್ಭದಲ್ಲಿ ಈ ಪದ್ಯದ ಸಂಬಂಧವೇ ಹತ್ತುವುದಿಲ್ಲವೆಂದು ಮೇಲೆ ಕಾಣಿಸಿದರೂ ಶ್ರೀ ವಿಜಯದಾಸರ ಉಪಾಸನಾ ಸುಳಾದಿಗಳು, ಶ್ರೀ ಗೋಪಾಲರಾಯರ ಮಾನಸೀಕ ಧ್ಯಾನಪ್ರಕರಣ ಪದ ದಲ್ಲಿಯೂ ಮತ್ತು ಮಾನಸಸ್ಮೃತಿಯಲ್ಲಿಯೂ ಹೇಳಿದಂತೆ, ಜ್ಞಾನವಿಜ್ಞಾನಿ ಗಳು ಪ್ರಾಣಾಗ್ನಿಹೋತ್ರದ್ವಾರಾ ಸ್ವೀಕರಿಸಿದ ಅನ್ನವನ್ನು ಯಜ್ಞತ್ವೇನ ಶ್ರೀಹರಿ ಸ್ವೀಕರಿಸುತ್ತಾನೆ. "ಓದನೋದಕವೆರಡು ಲಯತೇಜದೊಳಗಡಗುವವು. ತದಭಿಮಾನಿಗಳಾದ ದಿವಿಜರು ಶಿವಪವನಾನನ್ನೈದುವರು, ಶಿವಪವನರು ರಮಾ ಧೀನತ್ವವನ್ನು ಐದಿ, ರಮೆಯು ಶ್ರೀ-ಪ್ರಾಜ್ಞನ ಸಾಮೀಪ್ಯವೈದುವರೆಂದು" ಇಲ್ಲಿ ಉಪಾಸನೆ ಭಾಗ ಮಾನಸ ಸ್ಮೃತಿಯಲ್ಲಿ ಪ್ರಾಣಾಗ್ನಿಹೋತ್ರ, ಲಯ ಪ್ರಕರಣ ಹೇಳಿದಂತೆ ಇಲ್ಲಿ ಈ ವಿಷಯ ಹೇಳಿದ್ದಾರೆ. ಬೇರೆ ಮತ್ತೊಂದಲ್ಲ. ಸಂಪ್ರದಾಯಜ್ಞರಿಂದ ಮಾನಸಸ್ಮೃತಿ ವಿಚಾರಗೈಯ್ಯುವದು.

**ದ್ರೌಪದೀಶಪತಿ ವಿಠಲರು :** ತ್ರಿದಶ ಏಕಾತ್ಮನೆ, ೧೩ ವಿವರ = ೧ ಭೂ, ೨ ಉದಕ, ೩ ಶಿಖಿ, ಇಂದ್ರಿಯ ೧೦, ಸಂಕರ್ಷಣ ಸ್ವೀಕರಿಪ ॥ ೩ ॥

**ಭಾವಸೂಚನ :** ತ್ರಿದಶೇತಿ ॥ ೩ ॥

## ಶ್ರೀ ವ್ಯಾಸವ್ಯಾಸ ಸಿದ್ಧಾಂತ ಕೌಮುದೀ

" ತ್ರಿದಶ " ಇತಿ ॥ ತ್ರಯೋದಶ ॥ "ಏಕಾತ್ಮ " ಇತಿ ॥ ಉಕ್ತಾರ್ಥಃ ॥ ನಿಧನ ಸಾಮೇಢ್ಯತ್ವಾತ್ ತನ್ನಾಮಾ ॥ ೩ ॥

## ಕನ್ನಡಾರ್ಥ

"ಕ್ರಿಪಶ" ಎಂಬ ಪದ್ಯದಿಂದ ೧೦ ಕರಣ ಹಾಗೂ - ಭೂ - ಉದಕ - ಶಿಖಿ (ಅಗ್ನಿ) ಹೀಗೆ ೩, ಒಟ್ಟಿಗೆ ೧೩ ರಲ್ಲಿರುವ ನಿಯಾಮಕ ರೂಪಗಳು ಹೇಳಲ್ಪಡುತ್ತವೆ. ಮನಸ್ಸಿನಲ್ಲಿ "ಏಕಾತ್ಮ"ನೆಂಬ ರೂಪದಿಂದ ನಿಯಮಿಸುತ್ತಿರುತ್ತಾನೆ. "ಏಕಾತ್ಮಾ" ಎಂಬ ನಾಮಾರ್ಥವನ್ನು ೬ನೆಯ ಸಂಧಿ ೯ನೆಯ ಪದ್ಯವಲ್ಲಿ "ತತ್ವನಿಜೇಕಾತ್ಮ" ಎಂಬುದಾಗಿ ಪ್ರತೀಕವನ್ನಿಟ್ಟು ಬರೆದು ವಿವರಿಸಲಾಗಿರುತ್ತದೆ. "ನಿಧನ" ವೆಂಬ ಸಾಮುದಿಂದ ಹೇಳಿಸಿಕೊಳ್ಳುವುದರಿಂದ "ನಿಧನ"ವೆಂದು ಹೆಸರು ಬಂದಿರುತ್ತದೆ. ೩.

**ಅವತರಣಿಕಾ :** ಜೀವನು ವಿಜ್ಞಾನಿಯಾದರೂ, "ಸ್ಮೃತಿಶ್ರುತೀಃ ಹರೇರಾಜ್ಞಾ" ಎಂದು ಕರ್ಮಗಳನ್ನು ಮಾಡಿ ಹರಿಗರ್ಪಿಸಬೇಕು. ಕರ್ಮಗಳು ಯಾವವು, ಯಾವ ಯಾವ ಕರ್ಮಗಳನ್ನು ಹೇಗೆ ಅರ್ಪಿಸಿದರೆ, ಹರಿ ಪ್ರೀತನಾಗುತ್ತಾನೆ ; ಜೀವನು ಕರ್ಮದಿಂದ ಲಿಪ್ತನಾಗುವದಿಲ್ಲ. ಜ್ಞಾನಿ ಭಗವದುಪಾಸನೆ ಮಾಡಲು, ಕರ್ಮವನ್ನು ಆಚರಿಸಿ ಅರ್ಪಿಸುವ ಬಗೆ ಹೇಗೆ ಎಂದು ಉಪದೇಶಿಸುತ್ತಾರೆ.

**ಮೂಲ :**

**ದಹಿಕ ದೈಶಿಕ ಕಾಲಿಕತ್ರಯು ।**
**ಗಹನ ಕರ್ಮಗಳುಂಟು ಇದರೊಳು ।**
**ವಿಹಿತ ಕರ್ಮಗಳರಿತು ನಿಷ್ಕಾಮುಕನು ನೀನಾಗಿ ॥**
**ಬೃಹತಿ ನಾಮುಕ ಭಾರತೀಶನ ।**
**ಮಹಿತರೂಪವ ನೆನೆದು ಮನದಲಿ ।**
**ಅಹರಹಾ ಭಗವಂತಗರ್ಪಿಸು ಪರಮ ಭಕುತಿಯಲಿ ॥ ೪ ॥**

**ಪದ್ಯಾರ್ಥ :** **ದೈಹಿಕ**=ದೇಹದಿಂದಾಗುವ ಕರ್ಮಗಳು, ಜನ್ಮಾರಭ್ಯ ಜಾತಕರ್ಮಾದಿ ಉಪನಯನಾದಿ ಸಂಸ್ಕಾರಗಳು, ಅಲ್ಲದೆ ಭಗವತ್ ಸೇವೆಗೋಸುಗ - ಕರದಿಂದ ಮಾಡುವ ಪೂಜಾದಿಗಳು, ಪ್ರದಕ್ಷಿಣೆ ನಮನಾದಿಗಳು, ಹರಿಯ ಮೂರ್ತಿ ನೋಡುವದು, ಸುಷ್ಟುಕರ್ಮ, ಇದರಲ್ಲಿ ದುಷ್ಟಕರ್ಮವು ಉಂಟು. ಪಂಚಕರ್ಮೇಂದ್ರಿಗಳಿಂದಾಗುವ ಚಲೋ ಮತ್ತು ಕೆಟ್ಟ ಕರ್ಮಗಳೂ, **ದೈಶಿಕ** = ದೇಶ ಸಂಬಂಧಿಯಾದ ಕರ್ಮಗಳು, ಪುಣ್ಯತರವಾದ ತೀರ್ಥಕ್ಷೇತ್ರಾದಿಗಳಲ್ಲಿ, ಕಾಶಿ-ಗಯಾ-ಪ್ರಯಾಗ-ಬದರಿ ಮುಂತಾದ ಕ್ಷೇತ್ರಗಳಲ್ಲಿ,

ಅವಶ್ಯವಾಗಿ ಆಚರಿಸುವ ಕರ್ಮ, ಪಿತೃಶ್ರಾದ್ಧ, ದೇವದರ್ಶನಾದಿ, **ಕಾಲಿಕ** = ಕಾಲ ಸಂಬಂಧಿಸಿದ ಕರ್ಮಗಳು, ನಿತ್ಯಸ್ನಾನ ಸಂಧ್ಯಾವಂದನ ದೇವಪೂಜಾದಿಗಳು ಕಾಲಕ್ಕೆ ಮಾಡುವವು. ಸಂಕ್ರಮಣ, ಅಮಾವಾಸ್ಯ, ಸೂರ್ಯಚಂದ್ರೋಪರಾಗಾದಿ, ಗ್ರಹಣಕಾಲದಲ್ಲಿ ಮಾಡುವ ಕರ್ಮಗಳು, ಕಾಲಕಾಲದಲ್ಲಿ ತಿಥಿ, ಮಿತಿ=ಮಾಸಗಳಲ್ಲಿ ಆಚರಿಸತಕ್ಕ ಅನಂತ, ಹನುಮದ್ವ್ರತಾದಿ ಧರ್ಮಕರ್ಮಗಳೆನ್ನುವರು. ಚೈತ್ರಾದಿ ಮಾಸಧರ್ಮಗಳು ಇವು ಕಾಲಿಕ ಕರ್ಮಗಳೆನ್ನುವರು. ಹೀಗೆ ದೈಹಿಕ ದೇಹದಿಂದಾಗುವ ಎಲ್ಲ ಕರ್ಮ, ದೈಶಿಕ=ದೇಶಗೋಸ್ಕರವಾಗಿ ತೀರ್ಥಾದಿಗಳಲ್ಲಿ ಮಾಡುವ ಕರ್ಮ-ಕಾಲಿಕ= ಕಾಲನಿಮಿತ್ತ ಮಾಡುವ ಧರ್ಮಗಳು. ಈ ಪ್ರಕಾರ ಮೂರು ವಿಧ ಕರ್ಮಗಳು ಇವೆ ಎಂದು ಶಾಸ್ತ್ರತ್ರಯ=ಮೂರು ವಿಧವಾದರೂ, ಗಹನಕರ್ಮಗಳುಂಟು, = ಅಗಾಧವಾದ, ಆಳವಾದ, ತಿಳಿಯಲಿಕ್ಕೆ ಅಸಾಧ್ಯವಾದ ಅನೇಕ ಕರ್ಮಗಳಿರುವವು; ವಿಷ್ಣುರಹಸ್ಯಾದಿ ಗ್ರಂಥಗಳಲ್ಲಿ ವಿಶೇಷ ವಿಸ್ತಾರವಿದ್ದಂತೆ. ದೇವಾಂಶರೂ ಕರುಣಾಳುಗಳೂ ಆದ ಶ್ರೀ ವಿಜಯದಾಸಾರ್ಯರು—"ಅನಾದಿಯಿಂದ ಬಂದ ಕರ್ಮಪ್ರಕೃತಿರೂಪ ನಾನಾ ಪ್ರಕಾರ ಉಂಟು ದ್ವಿವಿಧವಾಗಿ" (ಪುಣ್ಯಕರ್ಮ, ಪಾಪಕರ್ಮ) ಈ ಸುಳಾದಿಯಲಿ ಬಹು ವಿಸ್ತರಿಸಿದ್ದಾರೆ. ಸುಳಾದಿ ೨೭, ಪ್ರಮೇಯ ಭಾಗ ಪುಟ ೭೭ ಆರಂಭಿಸಿ – ೮೭ ಹೀಗೆ ೧೦ ಪುಟಗಳಲ್ಲಿ ವಿವರಿಸಿದ್ದಾರೆ. ನೋಡುವದು. ಇದೇ ವಿಷಯವನ್ನೇ ಅಧ್ಯಾತ್ಮಮಾಲಾಕಾರರೂ ವಿಶದಪಡಿಸಿದ್ದಾರೆ. ಈ ಪುಣ್ಯ-ಪಾಪಕರ್ಮಗಳು ತ್ರಿವಿಧ ಜೀವರ ಅನಾದಿಯೋಗ್ಯತೆಯಂತೆ ಶ್ರೀಹರಿಯು ಮಾಡಿಸುವನು. ಇದರಲ್ಲಿ ಪ್ರಭೇಧಗಳನ್ನು ಮಾತ್ರ ಇಲ್ಲಿ ಹೇಳುತ್ತದೆ. ೧ ನಿತ್ಯಕರ್ಮ, ೨ ನೈಮಿತ್ಯಕ ಕರ್ಮ, ೩ ಕಾಮ್ಯಕರ್ಮ, ೪ ಸಬೀಜಕರ್ಮ, ೫ ನಿರ್ಬೀಜಕರ್ಮ, ೬ ಪುಣ್ಯಬೀಜ ಪಾಪಕರ್ಮ, ೭ ಪಾಪಬೀಜ ಪುಣ್ಯಕರ್ಮ, ೮ ಜ್ಞಾತ ನಿರ್ಬೀಜ ಪುಣ್ಯಕರ್ಮ, ೯ ಅಜ್ಞಾತ ನಿರ್ಬೀಜ ಪುಣ್ಯಕರ್ಮ, ೧೦ ಅಜ್ಞಾತ ನಿರ್ಬೀಜ ಪಾಪಕರ್ಮ, ೧೧ ಅಜ್ಞಾತ ನಿರ್ಬೀಜ ಪುಣ್ಯಕರ್ಮ. ಇದರೊಳಗೂ ತ್ರಿವಿಧ ಜೀವರ ಕರ್ಮಗಳೂ ಬೇರೆ ಬೇರೆ ಉಂಟು. ೧೨ ಸಂಚಿತ, ೧೩ ಆಗಾಮಿ, ೧೪ ಪ್ರಾರಬ್ಧ ಕರ್ಮ, ೧೫ ದೈಶಿಕ, ೧೬ ದೈಹಿಕ, ೧೭ ಕಾಲಿಕ, ೧೮ ಸ್ವಾಭಾವಿಕ ಕರ್ಮ ಇತ್ಯಾದಿಗಳು. ಅನಂತ

ಜೀವರ ಯೋಗ್ಯತೆ ಪ್ರಕಾರ ಅನಂತ ಕರ್ಮಗಳು ಇರುವವು. ಇನ್ನು ಕರ್ಮ ಮಾಡಲು ಯೋಗ್ಯರು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಜಾತಿ. ಪೂರ್ವಿಕ ನಾಲ್ಕು ಜಾತಿಯವರಿಗೆ ೪ ವಿಧವಾದ ಕರ್ಮಗಳನ್ನು ಆದಿಸೃಷ್ಟಿಯಲ್ಲೇ ನಿಯ ಮಿಸಿದ್ದಾನೆ. ಇವರಿಂದ ಉತ್ಪನ್ನರಾದ ಅನುಲೋಮ ಪ್ರತಿಲೋಮ ಕುಂಡ ಗೋಳಕಾದಿ ೧೮ ಜಾತಿ ವಿವರ ಚೆನ್ನಾಗಿ ಸುಳಾದಿ ಅಧ್ಯಾತ್ಮಮಾಲಾ ನೋಡಿ ದರೆ ತಿಳಿಯುವದು. ಬ್ರಾಹ್ಮಣಾದಿ ೪ - ಅನುಲೋಮರು (೬) ಪ್ರತಿ ಲೋಮರು ೬ - ಕುಂಡಗೋಳಕರು (೨) ಹೀಗೆ ಒಟ್ಟಗೆ ೧೮ ಜಾತಿ. ಇದರೊಳಗೆ ಸ್ತ್ರೀಪುರುಷ ಪ್ರಬೇಧವಲ್ಲದೆ (೬೪) ಜಾತಿಗಳುಂಟು. ಇವರಿಗೆ ಕೆಲಜಾತಿ ಜನರಿಗೆ ಕರ್ಮಮಾಡುವ ಅಧಿಕಾರ ಉಂಟು. ಹೀಗೆ ಅನಂತ ಜೀವ ಸ್ವಭಾವ ಕರ್ಮಭೇದಗಳು. ಇನ್ನು **ಮುಕ್ತಿಯಲ್ಲಿಯೂ ಸಹ** ಜಡವಾದ ಕರ್ಮಗಳನ್ನು ಬಿಟ್ಟು ಸ್ವರೂಪ ಜ್ಞಾನದಿಂದಲೇ ಉಪಾಸನಾದಿ ಕರ್ಮ ಭಗವಂತನ ಪ್ರೀತಿಕರವಾದುದು. ಹೀಗೆ ಗಹನವಾದ ಕರ್ಮಗಳು ಇದರೊಳಗೆ ವಿಹಿತ ಕರ್ಮಗಳರಿತು, = ವಿಹಿತ-ಶಾಸ್ತ್ರಸಮ್ಮತವಾದ ಪುಣ್ಯ ಕರ್ಮಗಳನ್ನು ಅದರ ವಿವರ ಗುರುಗಳಿಂದ ತಿಳಿದು, ನಿಷ್ಕಾಮುಕನು ನೀನಾಗಿ = ಯಾವ ಫಲಕಾಮನಾ-ಫಲಅಪೇಕ್ಷಾರಹಿತನಾಗಿ, ಕೇವಲ ಭಗತ್ಪ್ರೀತಿಗೋಸುಗ ಆಶ್ರಮೋಚಿತಧರ್ಮ ಮಾಡುವ ನಿಯಮದಂತೆ ಫಲರಹಿತನಾಗಿ ಮಾಡು. ಈ ಎಲ್ಲ ನಿವೃತ್ತಿ ಕರ್ಮಮಾಡುವುದಾದರೂ, ನಾನು ಕರ್ಮಮಾಡಲಿಕ್ಕೆ ಶಕ್ತ ನಲ್ಲ. ಜಡಪ್ರಾಯನು, ಸರ್ವಕರ್ತಾಕಾರಯಿತನಾದ, ಬೃಹತಿನಾಮಕ = ನಿರತಿಶಯ ಮಹತ್ವಾ ಬೃಹತ್ = ಅನಂತ ಮಹಿಮೆಯುಳ್ಳವನಾದುದರಿಂದ ಬೃಹತ್ ಎಂತಲೂ, ಅಥವಾ ಬೃಹತೀಋಕ್, ೩೬ ಅಕ್ಷರ ಉಳ್ಳದ್ದು, ವೇದಗಳ ಎಲ್ಲ ಋಕ್ಕಿನಲ್ಲಿ ಬೃಹತ್ ದೊಡ್ಡದಾದ ಕಾರಣ ಇಂತಹ ಬೃಹತಿ ಸಹಸ್ರ ಋಕ್ಕು ಗಳಿಂದ ಪ್ರತಿಪಾದ್ಯನಾದ ಭಗವಂತನು. ಭಾರತೀಶನ = ಮುಖ್ಯ ಪ್ರಾಣಾಂತ ರ್ಯಾಮಿಯಾಗಿ ಎಲ್ಲ ಕರ್ಮವು ಮಾಡಿಸುವನೆಂದು ನೆನೆದು, ಶ್ರೀ ಬೃಹತೀ ರೂಪ ಹರಿಯೇ ಸರ್ವಕರ್ತಾಕಾರಯತಾ ಎಂದು, ಮನದಲಿ ನೆನೆದು = ಒಳ್ಳೇ ಭಕ್ತಿ ವಿಶ್ವಾಸದಿಂದ ನೆನೆದು, ಅಂದರೆ ನಾನು ಎಳ್ಳಷ್ಟಾದರೂ ಕರ್ತೃ ವಲ್ಲ ಎಂಬುದು ದೃಢ ತಿಳಿದು, ಅಹರಹಾ ಭಗವಂತನಿಗರ್ಪಿಸು = ಪ್ರತಿ ಕ್ಷಣ ಕ್ಷಣಕ್ಕೆ ಹರಿಕರ್ತೃತ್ವಾನುಸಂಧಾನದಿಂದ ಮಾಡಿ ಕರ್ಮಗಳನ್ನೆಲ್ಲ - ಸಕಲ

ಐಶ್ವರ್ಯಾದಿ ಸಂಪೂರ್ಣನಾದ ಬಿಂಬರೂಪಿ ಹರಿಗೆ, ಪರಮ ಭಕುತಿಯ = ಆತ್ಯಂತಿಕವಾದ ಸುದೃಢ ಸ್ನೇಹದಿಂದ, ಹೇ ಹರೆ ಬಿಂಬರೂಪಿಯೇ ನೀನಿಂತು ಮಾಡಿ ಮಾಡಿಸಿದ ಕರ್ಮವೆಲ್ಲ ನಿನಗೆ ಅರ್ಪಿತವಾಗಲಿ. ಸಂಪ್ರೀತನಾಗಿ ಗಹನ ಕರ್ಮದಿಂದ ಕಡೆಮಾಡೆಂದು ಪ್ರಾರ್ಥಿಸುವುದು.

**ದ್ರೌಪದೀಶಪತಿ ವಿಠಲರು :** ದೈಹಿಕ ದೈಶಿಕ.

**ಭಾವಸೂಚನ :** ದೈಹಿಕೇತಿ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೈಹಿಕ" ಇತಿ ॥ ವಿಷ್ಣುರಹಸ್ಯೇ – "ಸೋಽಧಿಕಾರೋಽಪಿ ದೈಹಿಕಃ" ॥ ಯಜ್ಞದಾನಾದಿಕಂ ತತ್ತತ್ಕಾಲ ವಿಶೇಷೇಷು ಯಜ್ಞದಾನಜಪಾದಿಕಂ । ವಿಧೀಯತೇ 'ಸ ತು ಪ್ರೋಕ್ತೋ್ಽಧಿಕಾರಃ ಕಾಲಿಕಃ ಬುಧೈಃ ॥ ತೀರ್ಥಕ್ಷೇತ್ರ ವಿಶೇಷೇಷು ಕರ್ತವ್ಯಮಭಿಧೀಯತೇ ॥ ತತೋಽಧಿಕಾರಃ ವಿಜ್ಞೇಯಃ ದೈಶಿಕಃ ಮುನಿಭಿಃ ಮುನೇ ॥ ಅತಏವಹಿ ತೀರ್ಥಾದೌ ಮುಂಡನಂ ಚೋಪವಾಸನಮ್" ॥ ಇತಿ ॥

## ಕನ್ನಡಾರ್ಥ

ಈ ಪದ್ಯದಲ್ಲಿ ಹೇಳಲ್ಪಟ್ಟ ದೈಶಿಕ ದೈಹಿಕ ಕಾಲಿಕ ಕರ್ಮಗಳ ಬಗ್ಗೆ ಶ್ರೀ ವಿಷ್ಣುರಹಸ್ಯದಲ್ಲಿ ನಿರೂಪಣೆಯಿರುತ್ತದೆ. "ಕರ್ಮಮಾಡುವುದೂ ಮೂರು ತರಹದ್ದು. ಅಂದರೆ ಕರ್ಮಾಧಿಕಾರ ಯಃ ಮೂರು ತರಹವುಳ್ಳದ್ದು. ದೇಹ ಸಂಬಂಧವಾಗಿ ಆಗುವ ವಿಧಾನಗಳು ದೈಹಿಕವೆನಿಸುವವು. ದೇಶ ಸಂಬಂಧವನ್ನು ನಿಮಿತ್ತಮಾಡಿ ಆಗುವ ಕರ್ಮಗಳು ದೈಶಿಕಗಳೆನಿಸುವವು. ಕಾಲನಿಮಿತ್ತವಾಗಿ ಆಗುವ ಕರ್ಮಗಳು ಕಾಲಿಕಗಳೆನಿಸುತ್ತವೆ. ಉಪನಯನ ಮುಂತಾದವುಗಳು ದೈಹಿಕಗಳೆಂಬುದು ಸ್ಪಷ್ಟವೇ ಇರುತ್ತದೆ. ಆಯಾ ಕಾಲ ವಿಶೇಷಗಳಲ್ಲಿ ವಿಧಿಸಲ್ಪಡುವ ಯಜ್ಞ ದಾನ ಜಪ ಮುಂತಾದ ಕರ್ಮಗಳು ಕಾಲಿಕವೆನಿಸುತ್ತವೆ. ತೀರ್ಥಕ್ಷೇತ್ರ ಮುಂತಾದ ದೇಶವಿಶೇಷವನ್ನು ನಿಮಿತ್ತಮಾಡಿ ಹೊರಟಿರುವ ವಿಧಾನಗಳು - ಕರ್ಮಗಳು ದೈಶಿಕವೆನಿಸುತ್ತವೆ. ಹೇ ಮುನಿಯೇ ! ತೀರ್ಥಕ್ಷೇತ್ರಗಳಲ್ಲಿರುವ ದೈಶಿಕ ವಿಧಾನಕ್ಕೆ ಅನುಗುಣವಾಗಿಯೇ ತೀರ್ಥಕ್ಷೇತ್ರಗಳಲ್ಲಿ ಉಪವಾಸ – ಮುಂಡನ ಮುಂತಾದವುಗಳು ವಿಧಿಸಲ್ಪಟ್ಟಿರುತ್ತವೆ" ಎಂದು ವಿಷ್ಣುರಹಸ್ಯದಲ್ಲಿ ನಿರೂಪಿಸಲಾಗಿರುತ್ತದೆ. ॥ ೪ ॥

**ಅವತರಣಿಕಾ :** ಹಿಂದೆ ಹೇಳಿದ ಅಗಾಧವಾದ ಕರ್ಮಗಳು ಜೀವರಿಂದಾಗುವದಿಲ್ಲ. ಶ್ರೀಹರಿಯೆ ಕೃಷ್ಣ, ಭಾರ್ಗವ, ಹಯವದನ ಮೂರು ರೂಪಗಳಿಂದ - ದೇವತೆಗಳು, ಮಾನವರು, ಮತ್ತು ದಾನವರಲ್ಲಿ ನಿಂತು ಕರ್ಮಮಾಡಿ ಮಾಡಿಸುವನೆಂದು ಈ ಪದ್ಯದಿಂದ ಉಪದೇಶಿಸುವರು.

ಮೂಲ :

**ಮೂರು ವಿಧ ಕರ್ಮಗಳೊಳಗೆ ಕಂ ।**
**ಸಾರಿ ಭಾರ್ಗವ ಹಯವದನ ಸಂ ।**
**ಪ್ರೇರಕನು ತಾನಾಗಿ ನವರೂಪಂಗಳನು ಧರಿಸಿ ॥**
**ಸೂರಿ ಮಾನವ ದಾನವರೊಳು ವಿ ।**
**ಕಾರ ಶೂನ್ಯನು ಮಾಡಿ ಮಾಡಿಸಿ ।**
**ಸಾರಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ ॥ ೫ ॥**

**ಪದ್ಯಾರ್ಥ :** ಮೂರು ವಿಧ ಕರ್ಮಗಳೊಳಗೆ, ದೈಹಿಕ ಕರ್ಮದಲ್ಲಿ ಕಂಸಾರಿ=ಕೃಷ್ಣ - ದೈಶಿಕ ಕರ್ಮಗಳಲ್ಲಿ, ಭಾರ್ಗವ=ಪರಶುರಾಮ, ಕಾಲಿಕ ಕರ್ಮಗಳಲ್ಲಿ ಹಯವದನರೂಪಿ ಹರಿಯು, ಸಂಪ್ರೇರಕನು. ತಾನಾಗಿ ಕರ್ಮಗಳು ಜಡವಾದುದರಿಂದ ಕರ್ಮಗಳಲ್ಲಿ ನಿಂತು, "ಕರ್ಮಕರ್ಮಕೃತ ಕರ್ಮಕೃತಾಗಮ, ಕರ್ಮರೂಪ, ಕರ್ಮಪ್ರೇರಕನಾಗಿ ನಿಂತು, ಈ ಮೂರು ವಿಧ ಕರ್ಮಗಳನ್ನೂ ನವರೂಪಂಗಳನೆ ಧರಿಸಿ = ನೂತನವಾಗಿ ಒಂಭತ್ತು ರೂಪಗಳನ್ನು ಧಾರಣಮಾಡಿ. (೧) ಸೂರಿಗಳು = ದೇವತೆಗಳ ದೈಹಿಕ-ದೈಶಿಕ, ಕಾಲಿಕ ಕರ್ಮ ಮೂರು ವಿಧ ಕರ್ಮಸಾತ್ವಿಕ, ಮೂರು ರೂಪದಿಂದ ಸತ್ವರಿಗೆ ಪ್ರೇರಕ. (೨) ಮಾನವರು = ನಿತ್ಯಸಂಸಾರಿಕರಾದ ರಜೋಜೀವರ ಮೂರು ವಿಧ ಕರ್ಮಗಳಲ್ಲಿ ಇದೇ ಕೃಷ್ಣ - ಭಾರ್ಗವ - ಹಯವದನ ರಜೋಮಿಶ್ರ ಕರ್ಮಪ್ರೇರಕನಾಗಿಯೂ, (೩) ದಾನವ = ದೈತ್ಯಾದಿ ತಮೋಜೀವರಲ್ಲಿ ತಮೋಗುಣ ಪ್ರವರ್ತಕ ಈ ಮೂರು ರೂಪಗಳಿಂದ. ಹೀಗೆ ೩×೩ = ಒಂಭತ್ತು ರೂಪಗಳಿಂದ ತ್ರಿವಿಧರಿಗೆ ಪ್ರೇರಿಸಿ, ಮಾಡಿ ಮಾಡಿಸಿದರೂ, ತಾನು ವಿಕಾರಶೂನ್ಯನು = ಕರ್ಮದಿಂದ ಬಾಧೆ ಕರ್ಮಲೇಪ ಕಿಂಚಿತ್ತಾದರೂ ಇಲ್ಲ. ಚಿನ್ಮಯನಾದ ಹರಿಗೆ ಯಾವ ವಿಕಾರವೂ ಇಲ್ಲ. ಸಾರಭೋಕ್ತನು = ಶುಭಸಾರಭುಕ್, ತನ್ನ ಸ್ವರೂಪ ಭೂತಜ್ಞಾನ ಆನಂದಾದಿ

ಗುಣಸಾರವನ್ನು ತಾನು ಸ್ವೀಕರಿಸಿ, ಕೊಡುತಿಪ್ಪ ಜೀವರಿಗೆ = ತ್ರಿವಿಧರಾದ ಜೀವರಿಗೆ ಅವರ ಸ್ವಭಾವ ಕರ್ಮಾನುಸಾರ ಫಲವನ್ನು ಕೊಡುವ, ವಿಜ್ಞಾನಿಗೂ ಸಹ ಪ್ರಾರಬ್ಧ ಕರ್ಮ ಅನುಭೋಕ್ತೃತ್ವವು ಬಿಡದು.

**ದ್ರೌಪದೀಶಪತಿ ವಿಠಲರು :** ಮೂರು ವಿಧ ಕರ್ಮ.

| | | |
|---|---|---|
| ನಿತ್ಯ | ನೈಮಿತ್ತಿಕ | ಕಾಮ್ಯ |
| ಹಯವದನ | ಭಾರ್ಗವ | ಕೃಷ್ಣ |
| ದೇವತೆಗಳು | ಮನುಷ್ಯರು | ದೈತ್ಯರು |

ಮೂವರಲ್ಲಿ ನವರೂಪಂಗಳ ಧರಿಸಿ.

**ಭಾವಸೂಚನ :** ಮೂರು ವಿಧೇತಿ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮೂರು ವಿಧ" ಇತಿ || "ಕೃಷ್ಣಭಾರ್ಗವ ದಿವ್ಯಾಶ್ವಕಂಠಾಸ್ತ್ರಿವಿಧ ಕರ್ಮಗಾಃ" || ೫ ||

**ಕನ್ನಡಾರ್ಥ**

ಕೃಷ್ಣ, ಪರಶುರಾಮ (ಭಾರ್ಗವ) ಹಯಗ್ರೀವ ಈ ಮೂರು ರೂಪಗಳು ದೈಹಿಕ ದೈಶಿಕ ಕಾಲಿಕಗಳೆಂಬ ಮೂರು ವಿಧ ಕರ್ಮಗಳಲ್ಲಿ ನಿಯಾಮಕ ವಾಗಿರುತ್ತವೆ. || ೫ ||

**ಅವತರಣಿಕಾ :** ಸಕಲ ಕರ್ಮಗಳನ್ನೂ ಶ್ರೀ ಬಿಂಬರೂಪನಾದ ಹರಿಗೆ ಸಮರ್ಪಿಸುವ ರೀತಿ - ಬಗೆಯುನ್ನು ದೃಷ್ಟಾಂತಪೂರ್ವಕವಾಗಿ ವರ್ಣಿಸುತ್ತಾರೆ.

ಮೂಲ :

**ಅನಳ ಪಕ್ವವಗೈಸಿದನ್ನವ |**
**ಅನಳನೊಳು ಹೋಮಿಸುವ ತೆರದಂ |**
**ತನಿಮಿಷೇಶನು ಮಾಡಿ ಮಾಡಿಸಿದಖಿಳ ಕರ್ಮಗಳ ||**
**ಮನವಚನ ಕಾಯದಲಿ ತಿಳಿದನು |**
**ದಿನದಿ ಕೊಡು ಶಂಕಿಸದೆ ವೃಜಿನಾ |**
**ರ್ದನ ಸದಾಕೈಕೊಂಡು ಸಂತೈಸುವನು ತನ್ನವರ || ೬ ||**

**ಪದ್ಯಾರ್ಥ :** ಅನಳ ಪಕ್ವವಗೈಸಿದನ್ನವ = ಅಗ್ನಿಯಿಂದ ಪಕ್ವಮಾಡಿ ಬೇಯಿಸಿದ ಅನ್ನವನ್ನು, ನೈವೇದ್ಯನಂತರ ವೈಶ್ವದೇವ ನಿಮಿತ್ಯವಾಗಿ, ಪುನಃ

ಅಗ್ನಿಯಲ್ಲೇ ಆಹುತಿ ಕೊಟ್ಟು, ಅನಲನೊಳು ಹೋಮಿಸುವ ತೆರ=ಅಗ್ನಿಯಲ್ಲಿ ಅವದಾನ ಕೊಟ್ಟು ಹೋಮಮಾಡುವಂತೆ, ಅನಿಮಿಷೇಶ = ನಿಮಿಷ ರೆಪ್ಪೆ ಹಾಕದಿದ್ದ-ಅನಿದ್ರರಾದ ದೇವತೆಗಳ ಒಡೆಯ ಈಶನು, ಸಕಲ ಕರ್ಮಗಳನ್ನೂ, ತಾನೆ ನಿಂತು, - ಮಾಡಿಸುತ್ತಾನೆ, ತತ್ವಾಭಿಮಾನಿಗಳ ದ್ವಾರಾ ಜೀವನಿಂದ ಮಾಡಿಸಿದರೆ ಜೀವನಿಗೆ ಮಾಡುವ ಶಕ್ತಿಯುಂಟೆಂದು ಹರಿ ಮಾಡಿ ಮಾಡಿಸಿದ ಎಲ್ಲ ಕರ್ಮಗಳನ್ನು (ಬಿಂಬ ಚಲಿಸಿದರೆ ಪ್ರತಿಬಿಂಬ ಚಲಿಸುವನೆಂಬ ದಾಸರ ವಚನ) ಮನವಚನ ಕಾಯ = ಕಾಯದೇಹದಿಂದ ಆಗುವ ಕರ್ಮ, ವಚನ = ಮಾತಾಡುವದು ವೇದಮಂತ್ರಗಳನ್ನು, ಉಚ್ಚಾರಮಾಡುವದು, ಇತ್ಯಾದಿ ವಾಚನಿಕ ಕರ್ಮ, ಮನಸ್ಸಿನಿಂದ ಆಗುವ ಎಲ್ಲ ವಿಚಾರಸರಣಿಯನ್ನೂ ಭಗವದತ್ತ ಕರ್ಮಗಳನ್ನು ಕಾಯಾ ವಾಚಾ ಮನದಿಂದ ಎಂದರೆ ದೃಢಭಕ್ತಿಯಿಂದ, ಶಂಕಿಸದೆ=ಸಂಶಯಪಡದೆ ನಾನು ಕಟ್ಟಿಗೆಗೊಂಬೆಯಂತೆ ಪರಾಧೀನ ಕರ್ತೃವೆಂದು ತಿಳಿದು ಲೇಶವಾದರೂ ಸಂಶಯ ಮನಸ್ಸಿಗೆ ತಾರದೆ, ಅನುದಿನದಿ ಕೊಡು = ನಿರಂತರದಲ್ಲಿ ಭಗವಂತನಿಗೆ ನೀನಿತ್ತ ನಿನ್ನ ವಸ್ತು, ಕ್ರಿಯಾ - ಜ್ಞಾನ - ಧನಸಂಪತ್ತು ನಿನಗೆ ಅರ್ಪಿತವಾಗಲೆಂದು ಭಗವಂತನ ಅಧೀನನಾಗಿ ಅರ್ಪಿಸು. ವೃಜಿನಾರ್ದನವರ=ಸಮಸ್ತ ಪಾಪಗಳನ್ನು ಅರೆದು ಭಸ್ಮಮಾಡುವಲ್ಲಿ ಶ್ರೇಷ್ಠನಾದ ಹರಿಯು ಸದಾ, ನಿರಂತರ ಕೈಕೊಂಡು, ಸ್ವೀಕರಿಸಿ ಪ್ರೀತನಾಗಿ, ಸಂತೈಸುವನು. ಕಾಪಾಡುವನು, ರಕ್ಷಿಸುವನು.

**ದ್ರೌಪದೀಶಪತಿ ವಿಠಲರು :** ಅನಳಪಕ್ವವ ಗೈಸಿ ||

**ಭಾವಸೂಚನ :** ಅನಳೇತಿ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿ**

"ಅನಲ ಇತಿ" ಭಗವಂತನ ವಸ್ತುಗಳನ್ನು ಭಗವಂತನಲ್ಲಿ ಸಮರ್ಪಿಸುವದನ್ನು, ದೃಷ್ಟಾಂತ ಮುಖದಿಂದ ತಿಳಿಸುತ್ತಾರೆ ಅನಲ ಎಂಬ ಪದ್ಯದಿಂದ || ೬ ||

**ಅವತರಣಿಕಾ :** ಹಿಂದಿನ ಪದ್ಯ ಪರಿಯಂತವಾಗಿ, ಜ್ಞಾನಿವಿಜ್ಞಾನಿ ಲಕ್ಷಣ ತದನುಭೋಕ್ತೃತ್ವಕರ್ಮ ಶ್ರೀಹರಿಗೆ ಅರ್ಪಿಸುವ ಬಗೆ ಹೇಳಿ, ಈ ಪದ್ಯದಿಂದ ಜೀವರ ಸ್ವರೂಪ ಪರಿಮಿತಿ ಅತ್ಯಣುತ್ವ ಹೇಳುತ್ತಾರೆ. ಮುಂದೆ ಜೀವನಸ್ವರೂಪದಲ್ಲಿ ಭಗವದ್ರೂಪಗಳನ್ನು ವಿಸ್ತರಿಸುತ್ತಾರೆ.

**ಮೂಲ :**

**ಕುದುರೆಬಾಲದ ಕೊನೆಯ ಕೂದಲು ।**
**ತುದಿವಿಭಾಗವ ಮಾಡಿ ಶತವಿಧ ।**
**ವದರೊಳೊಂದನು ನೂರು ಭಾಗವ ಮಾಡಲೆಂತಿಹುದೊ ॥**
**ವಿಧಿಭವಾದಿ ಸಮಸ್ತ ದಿವಿಜರ ।**
**ಮೊದಲು ಮಾಡಿ ತೃಣಾಂತ ಜೀವರೊ ।**
**ಅಧಿಕ ನ್ಯೂನತೆಯಿಲ್ಲವೆಂದಿಗು ಜೀವಪರಮಾಣು ॥ ೭ ॥**

**ಪದ್ಯಾರ್ಥ :** ಜೀವನ ಅಣುತ್ವ ಹೇಳುತ್ತಾರೆ. ಕುದುರೆ ಬಾಲದ ಕೊನೆಯ ತುದಿಯನ್ನು, ಶತವಿಧಮಾಡಿ = ೧೦೦ ಭಾಗಮಾಡಿ, ಆ ನೂರು ಭಾಗದಲ್ಲಿ ಪುನಃ ನೂರು ಭಾಗಮಾಡಿದರೆ ೧೦೦ × ೧೦೦ = ೧೦೦೦೦ ಹತ್ತು ಸಾವಿರ ಭಾಗ ಎಷ್ಟು ಅಣುವಾಗುತ್ತದೋ, ಅಷ್ಟು ಜೀವನಸ್ವರೂಪ ಪರ ಮಾಣು ಇರುವುದು. ಇಷ್ಟು ಅಣುವಾದರೂ, ಚಿನ್ಮಯ ತೇಜೋಮಯ ವಾಗಿಪ್ಪದು. ಈ ಜೀವನ ಅಣುತತ್ವವು-ವಿಧಿಭವಾದಿ ಸಮಸ್ತ ದಿವಿಜರ ಮೊದಲುಮಾಡಿ=ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳ ಆರಂಭಿಸಿ, ತೃಣಾಂತ ಜೀವರ, ಅಲ್ಪಜೀವರ ಸ್ವರೂಪವು ಸಹ ಒಂದೇ ಸಮಾನವಾಗಿರುವುದು. ಕಿಂಚಿತ್ತಾದರೂ ಅಧಿಕ ನ್ಯೂನತೆ ಎಂದಿಗೂ ಇಲ್ಲ. ಹೀಗೆ ಜೀವ ಪರಮಾಣು ಹೆಚ್ಚು ಕಡಮೆ ಇಲ್ಲದಲೆ ಒಂದೇ ಸಮನಾಗಿರುವುದು. ಆದರೆ ಜೀವರ ಶಕ್ತಿ ತಾರತಮ್ಯಾನುಸಾರವಾಗಿ ತೃಣಾದಿ ಬ್ರಹ್ಮದೇವರವರೆಗೆ, ಅಧಿಕ ಶಕ್ತಿ ಅಧಿಕ ತೇಜಸ್ಸು ಮಾತ್ರ ಇರುವುದು. ಜೀವನು ಚಿನ್ಮಯನು, ಕರ ಚರಣಾದಿ ಸಮಸ್ತ ಇಂದ್ರಿಯಗಳಿಂದ ಯುಕ್ತಸ್ವರೂಪಗನು, ಈ ಜೀವನ ಅತ್ಯಣು ಇಂದ್ರಿಯಗಳಲ್ಲಿ ಅನಂತ ಅತ್ಯಣು ಅಣು ಹರಿಯ ರೂಪಗಳು. ಇದನ್ನು ೧೪ ವಿಧ ತಾರತಮ್ಯ ತಿಳಿದರೆ ಜೀವನ ಪರಮಾಣುತ್ವ ಜೀವರ ಶಕ್ತಿ ಪ್ರಭೇದ ಗೊತ್ತಾಗುವುದು. ಇಂತಹ ಹರಿಯ ಶಕ್ತಿ.

**ದ್ರೌಪದೀಶಪತಿ ವಿಠಲರು :** ಕುದುರೆ ಬಾಲದ ಕೊನೆಯ ಕೂದಲ ತುದಿ ನೂರು ಭಾಗಮಾಡಿ ಮತ್ತದರೊಳಗೆ ಒಂದು ಭಾಗ ನೂರು ಮಾಡಿದರೆ ಅಷ್ಟು ಸರ್ವಜೀವರ ಪ್ರಮಾಣಾ ಅಂದರೆ ಹತ್ತು ಸಹಸ್ರ ಭಾಗ ಆಯಿತು. ಜೀವನ ಚಿಚ್ಛರೀರ ಪ್ರಮಾಣಾ ೧೦೦೦೦ ಅಧ್ಯಾತ್ಮಮಾಲಾ ವಚನ ॥

**ಭಾವಸೂಚನ :** ಜೀವಪ್ರಮಾಣಂ ನಿರೂಪ ಇತಿ || ಕುದುರೇತಿ || ತದುಕ್ತಂ ಛಲಾರೀಯಾಂ || ಬಾಲಾಗ್ರ ಶತಭಾಗಸ್ಯ ಶತಧಾಭಿದ್ಯತಶ್ಚಯಾಃ || ಭಾಗೋಜೀವಶ್ಚ ವಿಜ್ಞಾಯೇತಿ| ತದುಕ್ತಂ ದಾಸವರ್ಯೇಪಿ|| ಕುದುರೆ ಬಾಲದ ಕೊನೆಕೂದಲು ಹತ್ತು ಸಾವಿರ ಭಾಗವಮಾಡಿ ಅದರ ಪ್ರಮಾಣ ನಿಶ್ಚಯ ಜೀವನು | ಇದೆ ಬ್ರಹ್ಮಾದಿಗಳೊಳಗೆ ಒಂದೇ ಪ್ರಮಾಣವು ಇದ್ದರೂ, ಅಧಿಕಾರ ಭೇದಗುಣವು ನೋಡೋಯಂತ ಸುಳಾದಿಯಲ್ಲಿ || ೭ ||

**ವಿಶೇಷ ವಿಚಾರಾಂಶ:** "ಅತ್ಯಣುಜೀವವಿದೆ ಅನಾದಿಯಿಂದಲಿ" ಎಂಬ ವಿಜಯದಾಸರ ಸುಳಾದಿ – ಜೀವ ಅಚ್ಛೇದ್ಯ ಅಭೇದ್ಯತೋಯ ಗರಳ ಶಸ್ತ್ರ ಪಾವಕ ಮಿಗಿಲಾದ ಉಪಹತಿಯಿಂದ ಸಾವಿಲ್ಲ, ಸಾವಿಲ್ಲ | ಆವಾವ ಕಾಲಕ್ಕೆ **ಪಾವನ್ನವಾಗಿಪ್ಪದು ಪರಮಸೂಕ್ಷ್ಮ |** ಆವಿರಾನಂದಭಾವ ಭರಿತ ವಲ್ಲದೆ ಇದಕೆ, **ನೋವಾಗದು ಕಾಣೋ ನಿಜರೂಪದಿ ||** ಉಪಾಸನಾ ಭಾಗ ಸು. (೧೧) ಪುಟ ೩೧ – ಪರಮ ಸೂಕ್ಷ್ಮವಾದುದರಿಂದ ಮೇಲಿನ ದೃಷ್ಟಾಂತ ತೋರಿಸಿದ್ದಾರೆ. ಇನ್ನು ಜೀವಸ್ವರೂಪದೇಹ-ಸ್ವರೂಪೇಂದ್ರಿಯಲ್ಲಿ ಭಗವಂತನು ಅತ್ಯಂತಾಣು ಅಣು ಜೀವನಿಂದಲೂ ಪರಮ ಸೂಕ್ಷ್ಮನಾಗಿದ್ದಾನೆಂದು ಮುಂದೆ ಹೇಳುತ್ತಾರೆ. ಈ ವಿವರ ಮಾನಸಸ್ಮೃತಿಯಲ್ಲಿ ಅತ್ಯಾವಸ್ಯ ನೋಡುವುದಾಗಿ ಪ್ರಾರ್ಥಿಸುವೆ. ಗ್ರಂಥ ವಿಸ್ತಾರ ಭಯದಿಂದ ಇಲ್ಲಿ ಕೊಟ್ಟಿಲ್ಲ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಜೀವ ಪರಿಮಾಣಂ | "ಬಾಲಾಗ್ರ ಶತಭಾಗಸ್ಯ ಶತಧಾ ಭಿದ್ಯತಶ್ಚಯಃ || ಭಾಗೋ ಜೀವಃ ಸ ವಿಜ್ಞೇಯಃ ಸ ಆನಂತ್ಯಾಯ ಕಲ್ಪತೇ ||" ಇತಿ ಶ್ರುತ್ಯುಕ್ತ ಮಾಹ—"ಕುದುರೆ" ಇತಿ || "ವಿಧಿ" ಇತಿ || ಇದೇ ಬ್ರಹ್ಮಾದಿಗಳಿಗೆ ಒಂದೇ ಪ್ರಮಾಣ; ಅಧಿಕಾರಾತನಾಭೇದ" ಇತಿ ಪೂರ್ವಾರ್ಯಾಃ || ೭ ||

### ಕನ್ನಡಾರ್ಥ

"ಕುದುರೆಯ ಬಾಲದ ತುದಿಯನ್ನು ನೂರು ಸಲ ಭಾಗಿಸಬೇಕು. ಅದರ ಒಂದು ಭಾಗವನ್ನು ಮತ್ತೆ ನೂರು ಸಲ ವಿಭಜಿಸಬೇಕು. ಆ ಕೊನೆಯ ನೂರನೆಯ ಒಂದು ಭಾಗಕ್ಕೆ ಜೀವನ ಪರಿಮಾಣವು ಸರಿಹೋಗುತ್ತದೆ" ಎಂದು ಶ್ರುತಿಯಲ್ಲಿ ಹೇಳಿದಂತೆ ಜೀವನ ಪರಿಮಾಣವನ್ನು ಹೇಳುತ್ತಾರೆ – "ಕುದುರೆ" ಎಂಬ ಪದ್ಯದಿಂದ. ಈ ಜೀವರ ಪರಿಮಾಣದ ವಿಷಯದಲ್ಲಿ

"ಇದೇ ಬ್ರಹ್ಮಾದಿಗಳಿಗೆ" ಎಂಬ ಪ್ರಾಚೀನರಾದ ಆರ್ಯರ ವಚನಗಳು ಪ್ರಮಾಣವಾಗಿರುತ್ತವೆ. || ೭ ||

**ಅವತರಣಿಕಾ :** ಪರಮ ಸೂಕ್ಷ್ಮನಾದ ಜೀವನ ಸ್ವರೂಪ ದೇಹದಿ ಅನೇಕ ಹರಿಯ ರೂಪಗಳು ಇರುವವು. ಅಲ್ಲದೆ ಜೀವಸ್ವರೂಪ-ಹೃದಯ ಶ್ವೇತವರ್ಣ ಅಷ್ಟ ದಳ ಕಮಲದಲ್ಲಿ ಜೀವಾಂತರ್ಯಾಮಿ ಬಿಂಬರೂಪನು ಮೂರು ರೂಪಗಳಿಂದ ಇರುವ ಕ್ರಮ ಹೇಳುತ್ತಾರೆ.

**ಮೂಲ :**

**ಜೀವನಂಗುಷ್ಠಾಗ್ರ ಮೂರುತಿ ।**
**ಜೀವನಂಗುಟ ಮಾತ್ರ ಮೂರುತಿ ।**
**ಜೀವನ ಪ್ರಾದೇಶ ಜೀವಾಕಾರ ಮೂರ್ತಿಗಳು ॥**
**ಏವಮಾದಿ ಅನಂತರೂಪದಿ ।**
**ಯಾವುದವಯವಗಳೊಳು ವ್ಯಾಪಿಸಿ ।**
**ಕಾವ ಕರುಣಾಳುಗಳ ದೇವನು ಈ ಜಗತ್ರಯವ ॥ ೮ ॥**

**ಪದ್ಯಾರ್ಥ :** ಜೀವನಂಗುಷ್ಠಾಗ್ರಮೂರುತಿ=ಜೀವನ ಸ್ವರೂಪ ಹೃತ್ಕಮಲ ತುದಿಯಲ್ಲಿ, ಜೀವಸ್ವರೂಪವೆ ಅತ್ಯಣು. ಶ್ರೀ ಬಿಂಬರೂಪನಾದ ಹರಿಯು, ೧ **ಜೀವನ ಅಂಗುಷ್ಠ ಅಗ್ರ**=ತುದಿ ಎಷ್ಟು ಪರಮ ಸೂಕ್ಷ್ಮ ವಿರುತ್ತದೆಯೋ ಜೀವನ ಅಂಗುಷ್ಠಾಗ್ರಮೂರ್ತಿ ಅಗ್ರೇಶ, ಅಂತರ್ಯಾಮಿ. ಜೀವಬಿಂಬನೆಂದು ವಿಜಯರ ವಚನ. ೨ **ಜೀವನಂಗುಟ ಮಾತ್ರ ಮೂರುತಿ** = ಜೀವನ ಹೃದಯಾಷ್ಟ ಶ್ವೇತವರ್ಣ ಕಮಲನಾಳದಲ್ಲಿಪ್ಪ - ಜೀವನ ಅಂಗುಷ್ಠ ಎಷ್ಟು ಇರುವುದೋ, ಅಷ್ಟೇ ಪ್ರಮಾಣದಿಂದ ಅಂಗುಷ್ಠ ಮಾತ್ರ ಮೂರ್ತಿ=ಈತನೇ ಮೂಲೇಶ, ಅಷ್ಟಭುಜ ನಾರಾಯಣ, ಹಂಸ ಇತ್ಯಾದಿ ನಾಮದಿಂದ ಕರೆಸುವನು. ೩ **ಜೀವನ ಪ್ರಾದೇಶ ಮೂರುತಿ** ॥ ಜೀವನ- ಪ್ರಾದೇಶ=ಜೀವನ ಗೇಣು, ಚೋಟು. ಇದರಷ್ಟೇ ಪ್ರಾದೇಶ ಮೂರ್ತಿ ಜೀವಾಧಾರವಾಗಿ ನಿಂತಂಥಾ ರೂಪ. ೪ **ಜೀವಾಕಾರ ಮೂರ್ತಿಗಳು**=ಜೀವನು ಎಷ್ಟು ಆಕೃತಿ ಇರುವ ಆನೆ ಸಿಂಹ ತುರಗ ಮನುಜ ದೇವಾದಿ ಎಂಥ ಸ್ವರೂಪವುಳ್ಳವನೋ ಶ್ರೀಹರಿಯು ಆ ಜೀವಾಕಾರದಿಂದ ಇದ್ದಾನೆ. (ಶ್ರೀ ವಿಜಯದಾಸರು, ಚಿದ್ದೇಹಾಕಾರಾ ಆನಂದಮಯವಯ್ಯಾ)

ಎಂದು ಜೀವಾಕಾರಮೂರ್ತಿ ವರ್ಣಿಸಿದ್ದಾರೆ. ಏವಮಾದಿ = ಇವೇ ಮೊದಲು ಮಾಡಿ, ಅನಂತರೂಪದಿಂದ, ಯಾವದವಯುಗಳೊಳು ವ್ಯಾಪಿಸಿ = ಜೀವನ ಯಾವತ್ತು ಸ್ವರೂಪ ಅವಯುವಗಳಲ್ಲಿ ವ್ಯಾಪಿಸಿ, ನಿತ್ಯದಲ್ಲಿದ್ದು, ಜೀವನನ್ನು ಕಾವ = ಕಾದುಕೊಂಡಿರುವ, ಈ ಬಿಂಬನಾದ ಹರಿಯು, ಮಹಾಕರುಣಾಳು ಗಳಾದ ಬ್ರಹ್ಮಾದಿ ದೇವತೆಗಳಿಗೆ = ದೇವ, ಈಶ ಸರ್ವೋತ್ತಮ – ಕ್ರೀಡಾದಿ ಗುಣವಿಶಿಷ್ಟನು, ಬಹಿಃಕಾಲ ರೂಪದಿಂದ ಈ ಜಗತ್ರಯುವನ್ನು, ಕಾವ = ರಕ್ಷಿಸುವ.

**ದ್ರೌಪದೀಶಪತಿ ವಿಠಲರು :** ಜೀವನಂಗುಷ್ಠಾಗ್ರಮೂರುತಿ.

**ಭಾವಸೂಚನ :** ಜೀವೇತಿ ||೮|| ೬ನೇ ಸಂಧಿ ಕೊನೆಯಲ್ಲಿ ಚಿತ್ರ. **ವಿಶ್ವ** ರೂಪಧ್ಯಾನೋಪಾಸನ ಮತ್ತು ಈ ಸಂಧಿ ಪದ್ಯ (೧೯) ಕೊನೆಗೆ **ಕೊಟ್ಟ** ಚಿತ್ರ ನೋಡುವುದು.

**ವಿಶೇಷ ಸೂಚನ :** ಮಾನಸ ಸ್ಮೃತಿಯಲ್ಲಿ ಜೀವಾಂತರ್ಯಾಮಿ ಭಗವದ್ರೂಪಗಳ ವಿವರ ಹೇಳುತ್ತಾರೆ. ಜೀವನ ಸ್ವರೂಪ ದೇಹ ಅಂಗಾಂಗ ಗಳಲ್ಲಿ ಪರಮಾತ್ಮನ ಅಂಗಾಂಗಗಳು ಅವಿಚ್ಛಿನ್ನವಾಗಿ ಶಷ್ಪದೇಕ ಪ್ರಕಾರವಾಗಿ ಅತ್ಯಂತ ಭಿನ್ನವಾಗಿರುತ್ತವೆ. ವಾಸುದೇವ ಪರಮಾತ್ಮನ ಶಿರಸ್ಸು, ಜೀವನ ಶಿರಸ್ಸಿನಲ್ಲಿ, ನಾರಾಯಣನು ಮಧ್ಯಸ್ಥಾನ – ಜೀವನ ಮಧ್ಯಸ್ಥಾನದಲ್ಲಿ – ಪ್ರದ್ಯುಮ್ನ ಪರಮಾತ್ಮ ದಕ್ಷಿಣ ಪಕ್ಷ – ಜೀವನ ದಕ್ಷಿಣ ಪಕ್ಷದಲ್ಲಿ, ಅನಿರುದ್ಧ ಪರಮಾತ್ಮನ ವಾಮಪಕ್ಷ – ಅದು ಜೀವನ ವಾಮಪಕ್ಷದಲ್ಲಿ, ಸಂಕರ್ಷಣ ಪರಮಾತ್ಮನ ಪಾದ – ಜೀವನ ಪಾದದಲ್ಲಿ. ಹೀಗೆ ಪರಮಾತ್ಮನ ಅಂಗಗಳು ಜೀವನ ಅಂಗದಲ್ಲಿರುವುವು. ವಿಷ್ಣು ವಾಗೇಂದ್ರಿಯದಲ್ಲಿ, ನೃಸಿಂಹ ಜೀವ, ಘ್ರಾಣದಲ್ಲಿ ಕಪಿಲನು – ಜೀವನ ಕಣ್ಣಿನಲ್ಲಿ ಪರಮಾತ್ಮನ ಚಕ್ಷುಸು, ಜೀವನ ಚಕ್ಷುಸ್ಸಿನಲ್ಲಿ ಇರುವುದೆಂದು ಅನುವ್ಯಾಖ್ಯಾದಲ್ಲಿ ಹೇಳಿದೆ.

ಇನ್ನು ಜೀವನ ಶ್ವೇತವರ್ಣ ಹೃತ್ಕರ್ಣಿಕಾಸ್ಥಿತ ಆತ್ಮನಾಮಕ ನಾರಾ ಯಣನೆಂದು ದ್ವಿತೀಯ ಸ್ಕಂಧದ ತಾತ್ಪರ್ಯದಲ್ಲಿ ಹೇಳಿದೆ. ಈತನೇ ಜೀವನ ಹೃನ್ಮಂಡಲ, ನರಸಿಂಹನು ಸದಾ ಜೀವನಲ್ಲಿ ಇರುತ್ತಾನೆ. ಕಾರಣ ಜೀವ ನಾಮಕನು. ಅನಿರುದ್ಧ ಜೀವನ ಅಂತಃಶರೀರದಲ್ಲಿ ವ್ಯಾಪ್ತನಾಗಿರುತ್ತಾನೆ. (ಛಾಂದೋಗ್ಯ) ಸರ್ವ ಅಹಂಕಾರಗಳಿಗೆ ಭಂಜಕನಾದುದರಿಂದ – ಜೀವನ

ಅಹಂಕಾರದಲ್ಲಿ ಇರುತ್ತಾನೆ. ಜೀವನ – ಅಂತಃಪ್ರೇರಕನಾದ ವಿಷ್ಣು – ಅಂತರಾತ್ಮನು. ಈ ರೂಪವೇ ಜೀವನಿಂದ ಉಪಾಸ್ಯ, ಪರಮಾತ್ಮನು ಸರ್ವದಾ ಇಷ್ಟರೂಪದಿಂದ ಸರ್ವದಾ ಜೀವನಲ್ಲಿ ಚರಿಸುವನೆಂದು ಐತರೇಯ ದಲ್ಲಿ ಹೇಳಿವೆ. ಮತ್ಸ್ಯಾದಿ ಸಮಸ್ತವಾದಂಥ ವಿಷ್ಣುವಿನ ಅವತಾರಗಳು ತತ್ತತ್ ಶಕ್ತಿಯಿಂದ ಯುಕ್ತವಾಗಿ, ಜೀವನ ಸ್ವರೂಪೇಂದ್ರಿಯುಗಳೊಳಗೆ, ಉಪಾಸ್ಯ ವಾಗಿ ಇರುವಂಥಾವು ಎಂದು ಚಿಂತಿಸಬೇಕೆಂದು ಛಾಂದೋಗ್ಯದಲ್ಲಿ ಹೇಳಿವೆ. ಹೀಗೆ ಜೀವನ ಸ್ವರೂಪ ಶ್ವೇತವರಣ ಅಷ್ಟಪತ್ರದಲ್ಲಿ ಜೀವನ ಸ್ವರೂಪ ದೇಹ ದೊಳಗೆ ಇಷ್ಟು ರೂಪದಿಂದ ಇರುವನೆಂದು ನಿತ್ಯ ಚಿಂತಿಸಿ, ಇದೇ ರೂಪಗಳನ್ನೇ ಸ್ಥೂಲಶರೀರ ಅಷ್ಟಕಮಲ ಹೃತ್ಪದ್ಮದಲ್ಲಿ ಧ್ಯಾನ ಮಾಡಬೇಕು. ಜೀವನ ಸ್ವರೂಪವು ಅತ್ಯಣುವಾದರೂ, ಬಿಂಬನಾದ ಹರಿಯು ಅತ್ಯಂತ ಅಣುತರನಾಗಿ ಜೀವನಲ್ಲಿದ್ದು ಜೀವನ ಅಸ್ತಿತ್ವಕ್ಕೆ ಕಾರಣನು. ಜೀವನ ಸ್ವರೂಪೇಂದ್ರಿಯ ಗಳಲ್ಲಿ ತನ್ನ ಸ್ವರೂಪೇಂದ್ರಿಯಗಳನ್ನಿಟ್ಟು ಪ್ರೇರಿಸುವನು. ಇಂಥಾ ಮಹಾ ಶಕ್ತಿ ಬಿಂಬನದು. ಉಪಾಸನಾಭಾಗ ಸುಳಾದಿ ಪುಟ ೨೬೧, ೨೬೨ ನೋಡಿರಿ. ಮತ್ತು ಪ್ರಾಣೇಶ ವಿಠಲರ ಪದ–ಹೃದಯಮಂದಿರ ಈ ಪರಿ ಎಂಬ ಪದ ನುಡಿ ೯ ರಿಂದ ೨೧ ನುಡಿಯುವರೆಗೆ ವಿವರದಿಂದ ಹೆಚ್ಚು ತಿಳಿಯುತ್ತದೆ. ಉಪಾಸನಾ ಸುಳಾದಿ ಪುಟ ೨೧೦-೨೧೧.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಜೀವಸ್ಥ ಭಗವದ್ರೂಪಾಣಿ ಅನುವದತಿ – "ಜೀವೇತಿ ||" ಬೃಹದ್ ಭಾಷ್ಯೇ ಚ – "ಹೃತ್ಕರ್ಣಿಕಾ ಮೂಲಗತಃ ಸೋಽಂಗುಷ್ಠಾಗ್ರ ಪ್ರಮಾಣಕಃ || ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ || ಅಂಗುಷ್ಠ ಮಾತ್ರೇ ಪುರುಷೇ ಕರ್ಣಿಕಾಗ್ರ ಸ್ಥಿತೌ ಹರೌ || ಪ್ರವಿಶಂತಿ ಸುಷುಪ್ತೌ ತು ||" "ಹೃದಯೇ ಸರ್ವಗೋ ವ್ಯಾಪೀ ಪ್ರಾದೇಶಃ ||" ಇತಿ ಚ || ೮ ||

## ಕನ್ನಡಾರ್ಥ

ಜೀವನಲ್ಲಿರುವ ಭಗವದ್ರೂಪಗಳನ್ನು ಅನುವದಿಸಿ ಹೇಳುತ್ತಾರೆ— "ಜೀವನಾಂಗುಷ್ಠಾಗ್ರ ಮೂರುತಿ" ಎಂಬ ಪದ್ಯದಿಂದ. ಬೃಹದಾರಣ್ಯ ಭಾಷ್ಯ ದಲ್ಲಿ (ಅ.೬. ಬ್ರಾ.೧.) "ಹೃದಯ ಕಮಲದ ಮೊಗ್ಗೆ (ಕರ್ಣಿಕೇ)ಯ ಮೂಲ (ತುದಿ) ದಲ್ಲಿರುವ ಅಂಗುಷ್ಠ (ಹೆಬ್ಬೆರಳಿನ ತುದಿ) ದ ತುದಿಯಷ್ಟು ಪರಿಮಾಣ

(ಅಳತೆ) ವುಳ್ಳ – ಆ ಹರಿಯ ರೂಪವು ಸರ್ವಜೀವರಿಗೂ ಆಧಾರಸ್ಥಾನನಾಗಿರುವುದರಿಂದ ಆಶ್ರಯನಾಗಿರುತ್ತಾನೆ. ಈ ರೂಪಕ್ಕೆ ಮೂಲೇಶನೆಂದು ಕರೆಯುತ್ತಾರೆ. ಇವನಲ್ಲಿ ಸಕಲ ಜೀವರು ಆಶ್ರಯವನ್ನು ಪಡೆದುಕೊಂಡಿರುತ್ತಾರೆ. ಹೃದಯಕಮಲದ ಕರ್ಣಿಕೆಯ (ಮೊಗ್ಗೆಯ) ಮೂಲದಲ್ಲಿರುವ ಅಂಗುಷ್ಟ ಮಾತ್ರ ಪರಿಮಿತಿಯುಳ್ಳ (ಹೆಬ್ಬೆರಳಿನಷ್ಟೇ ಅಳತೆಯುಳ್ಳ) ಶ್ರೀ ಹರಿಯನ್ನು (ಮೂಲೇಶನನ್ನು) ಸುಷುಪ್ತಿಕಾಲದಲ್ಲಿ ಎಲ್ಲ ಜೀವರೂ ಪ್ರವೇಶಿಸುತ್ತಾರೆ. ಹೃದಯದಲ್ಲಿ ತುಂಬ ವ್ಯಾಪಿಸಿದ ಹೆಬ್ಬೆರಳಿನ ತುದಿಯಿಂದ ಆರಂಭಿಸಿ ದೇಶಿನೀ (ಎರಡನೆಯ ಬೆರಳು) ಕೊನೆಯ ತುದಿಯವರೆಗಿನ ಪರಿಮಾಣವುಳ್ಳ ಅಂದರೆ ಚೋಟು ಪರಿಮಿತಿವುಳ್ಳ – ಪ್ರಾದೇಶನಾಮಕನಾದ ಹರಿಯು ಜೀವರಿಗೆ ಆಧಾರನಾಗಿರುತ್ತಾನೆ" ಎಂದು ನಿರೂಪಿತವಾಗಿರುತ್ತದೆ. ಜೀವ ಹೃದಯಗತವಾದ ಪ್ರಾದೇಶ – ಮೂಲೇಶ ರೂಪಗಳನ್ನು ಈ ಭಾಷ್ಯವಚನಗಳಿಗನುಸಾರವಾಗಿ – ಈ ಪದ್ಯದಲ್ಲಿ ಹೇಳಿರುವುದಾಗಿ ತಿಳಿಯಬೇಕು. ॥ ೮ ॥

**ಅವತರಣಿಕಾ :** ಜೀವನ ಅಂಗುಷ್ಠಮಾತ್ರ ಮೂರುತಿಯೇ ಬಿಂಬನಾಮಕ ಹರಿ. ಈತನಿಗೆ ಪ್ರಾಜ್ಞ, ವಿಶ್ವಂಭರ ಎಂದು ಕೋವಿದರು ಕರೆಯುವರೆಂದು ಈ ಪದ್ಯದಿಂದ.

ಮೂಲ :

**ಬಿಂಬ ಜೀವಾಂಗುಷ್ಠ ಮಾತ್ರದಿ ।**
**ಇಂಬುಗೊಂಡಿಹ ಸರ್ವರೊಳು ಸೂ ।**
**ಕ್ಷ್ಮಾಂಬರದಿ ಹೃತ್ಕಮಲ ಮಧ್ಯನಿವಾಸಿಯೆಂದೆನಿಸಿ ॥**
**ಎಂಬರೀತಗೆ ಕೋವಿದರು ವಿ ।**
**ಶ್ವಂಭರಾತ್ಮಕ ಪ್ರಾಜ್ಞಭಕ್ತ ಕು ।**
**ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ ೯ ॥**

**ಪದ್ಯಾರ್ಥ :** ಜೀವಾಂಗುಷ್ಠ ಮಾತ್ರದಿ ಇರುವನೆ ಬಿಂಬ, ಅಗ್ರೇಶನು, ಸರ್ವರೊಳು = ಸರ್ವ ಜೀವರಲ್ಲಿ, ಸೂಕ್ಷ್ಮ ಹೃದಾಂಬರದಿ = ಜೀವನ ಸೂಕ್ಷ್ಮವಾದ ಹೃದಯಾಕಾಶದಿ, ಹೃತ್ಕಮಲ ಮಧ್ಯನಿವಾಸಿ ಎಂದೆನಿಸಿ, ಬಿಂಬನು ಇಂಬುಗೊಂಡಿಹನು = ಜೀವನ ಸ್ವರೂಪ ಶ್ವೇತವರ್ಣ ಹೃದಯಕಮಲ ಮಧ್ಯದಲ್ಲಿ ಆಶ್ರಯನಾಗಿ ಜೀವಾಂತರ್ಯಾಮಿ ಇರುವನು. ಈತನಿಗೆ ಕೋವಿ

ಪರು = ಜ್ಞಾನಿಗಳು, ವಿಶ್ವಂಭರಾತ್ಮಕ-ಪ್ರಾಜ್ಞ = ಪ್ರಾಜ್ಞನೆಂದು ಕರೆಯು ವರು. ಇದೇ ಉಪನಿಷತ್ ಪ್ರಸಿದ್ಧ. ಈ ಪ್ರಾಜ್ಞನಾದ ಬಿಂಬನೇ, ವಿಶ್ವಂ ಭರಾತ್ಮಕ = ಸಮಸ್ತ ಜಗತ್ತಿನಲ್ಲಿ ವ್ಯಾಪಿಸಿರುವನೆಂದು, ಈ ಪರಿ ಬಲ್ಲ ಭಜಕ ರನ್ನು = "ಜೀವಾಂತಃ ಪ್ರೇರಕೋ ವಿಷ್ಣು ರಂತರಾತ್ಮೇತಿಯಂ ವಿದುಃ ||" ಈತನೇ ಅಂತರಾತ್ಮನೆಂದು ತಿಳಿದು, ಜಗತ್ತಿನಲ್ಲಿ ವ್ಯಾಪಿಸಿದ್ದಾನೆ. "ಶ್ವೇತ ದ್ವೀಪಗತೋಽಹ್ಯಾತ್ಮಾ ಹೃತ್ಪದ್ಮೇಷು ವ್ಯವಸ್ಥಿತಃ || ತಯೋರೈಕ್ಯಂ ವಿಜಾ ನೀಯಾ, ಚಿಂತನಂ ಪರಮಾರ್ಚನಂ ||" ಎಂದು ಅರಿತು ಭಜಿಸುವ ಭಕ್ತ ರನ್ನು ಸಂತೈಸುವನು.

**ದ್ರೌಪದೀಶಪತಿ ವಿಠಲರು :** "ಬಿಂಬ ಜೀವಾಂಗುಷ್ಠ ಮಾತ್ರದಿ | ವಿಶ್ವಂಭರಾತ್ಮಕ ಪ್ರಾಜ್ಞ ||"

**ಭಾವಸೂಚನ :** ಬಿಂಬೇತಿ || ಇಂಬುಗೊಂಡಿಹ ಸ್ಥಳ ಮಾಡಿಕೊಂಡು ಇದ್ದಾನೆ. ಸೂಕ್ಷ್ಮೇತಿ || ತಸ್ಯಾಂತೇ ಸುಷಿರಂ ಸೂಕ್ಷ್ಮಮಿತಿ ಶ್ರುತೇಃ ||೯||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಬಿಂಬ" ಇತಿ || "ಅತಃ ಕರ್ಣಿಕಾಗ್ರಗತ ಪ್ರಾಜ್ಞರೂಪಮೇವ ಬಿಂಬ ರೂಪ ಮಿತಿ ಸಿಧ್ಯತಿ" ಇತಿ ರತ್ನಮಾಲಾಯಾಮ್ || ೯ ||

18223

## ಕನ್ನಡಾರ್ಥ

ಈ ಪದ್ಯದಿಂದ ಬಿಂಬರೂಪಿ ಹರಿಯ ಸ್ಥಿತಿಯನ್ನು ಹೇಳುತ್ತಾರೆ. ಹೃತ್ಕಮಲ ಮಧ್ಯವರ್ತಿಯಾದ ಅಂಗುಷ್ಠ ಪರಿಮಿತವಾದ ಪ್ರಾಜ್ಞರೂಪವೆಂದು ಬಿಂಬರೂಪಕ್ಕೆ ಕರೆಯುತ್ತಾರೆ. ಸತ್ತತ್ವ ರತ್ನಮಾಲೆಯಲ್ಲಿ "ಹೃದಯಕಮಲ ಕರ್ಣಿಕೆಯ ತುದಿಯಲ್ಲಿ ಇರುವ ಪ್ರಾಜ್ಞರೂಪವೇ ಬಿಂಬರೂಪವೆಂದು ಸಿದ್ಧ ವಾಗುವುದು" ಎಂದು ಹೇಳಿರುವುದು. ಈ ವಿಷಯದಲ್ಲಿ ಆಧಾರವಾಗಿರು ತ್ತದೆ. || ೯ ||

ಅವತರಣಿಕಾ : ಹಿಂದೆ ಹೇಳಿದ ಜೀವನ ಹೃತ್ಕಮಲದಲ್ಲಿಪ್ಪ ಅಗ್ರೇಶ - ಮೂಲೇಶ ಪ್ರಾದೇಶ ಮೂರ್ತಿ. ಜೀವನ ಆಕಾರಮೂರ್ತಿ. ಜೀವ ಯಾವದವಯ ಗಳಲ್ಲಿಪ್ಪ ಮೂರ್ತಿಗಳೇ - ಸ್ಥೂಲದೇಹ ಪರಿಯಂತ ವ್ಯಾಪಿಸಿರುವ - ವಿವರ ಹೇಳು ತ್ತಾರೆ.

**ಮೂಲ :**

**ಪುರುಷನಾಮಕ ಸರ್ವಜೀವರೊ ।**
**ಳಿರುವ ದೇಹಾಕಾರ ರೂಪದಿ ।**
**ಕರಣನೀಯಾಮಕ ಹೃಷೀಕಪನಿಂದ್ರಿಯಂಗಳಲಿ ॥**
**ತುರಿಯನಾಮಕ ವಿಶ್ವತಾ ಹ ।**
**ನ್ನೆರಡು ಬೆರಳುಳಿದುತ್ತಮಾಂಗದಿ ।**
**ಎರಡಧಿಕಯೆಪ್ಪತ್ತುಸಾವಿರ ನಾಡಿಯೊಳಗಿಪ್ಪ ॥ ೧೦ ॥**

**ಪದ್ಯಾರ್ಥ :** ಪುರುಷನಾಮಕ = ಪುರಿಶೇತೀತಿ = ಪುರುಷನಾಮಕ, ಹರಿ ಸರ್ವಜೀವರೊಳಗಿರುವನೇ – ದೇಹಾಕಾರ ರೂಪದಿ = ಲಿಂಗ–ಅನಿರುದ್ಧ-ಸ್ಥೂಲದೇಹಾಕಾರ ರೂಪದಲ್ಲಿ ಇರುವನು, ಈತನಿಗೂ ಪುರುಷನೆಂದು ಹೆಸರು. ಕರಣನಿಯಾಮಕ = ಜೀವನ ಸ್ವರೂಪ ಇಂದ್ರಿಯ ನಿಯಾಮಕನೇ – ಸ್ಥೂಲ ದೇಹಗತ ಇಂದ್ರಿಯಗಳಲ್ಲಿ ವಿಷಯಾಸಕ್ತಿಕೊಡುವ, ಹೃಷೀಕಪ= "ದಥ್ರೇಯು ಸ್ತ್ರ್ವಂದ್ರಿಯಾಣ್ಯಾಹು ಹೃಷಿಕಾಣೀತಿ ಚಾಪ್ಯುತೇ ಇತಿ ಶಬ್ದ ನಿರ್ಣಯೇ" ಅಥವಾ ಹೃಷೀಕಾಣಾಂ=ಇಂದ್ರಿಯಾಣಾಂ ಈಶ ಸಕಲೇಂದ್ರಿಯ ಪ್ರೇರಕ ಅಥವಾ "ಹೃಷ್ಟಾನಾ ಬ್ರಹ್ಮರುದ್ರದೇವಾಃ ಯಸ್ಮಾತ್ ಸಹೃಷೀಕೇಶಃ= ಯಾವ ಪರಮಾತ್ಮನಿಂದ ರಮಾಬ್ರಹ್ಮ ರುದ್ರೇಂದ್ರಾದಿ ದೇವತೆಗಳು ಹೃಷ್ಟ ರಾಗುವದರಿಂದ, ಹೃಷಿಕೇಶನು ಇಂದ್ರಿಯಗಳಲ್ಲಿರುವ ; ತುರಿಯನಾಮಕ, ವಿಶ್ವ=ನಾಲ್ಕನೇ ರೂಪವಾದ ಅಥವಾ ಮುಕ್ತಿಯನ್ನು ಕೊಡುವ ವಾಸುದೇವನಿಗೆ ವಿಶ್ವನೆಂದು ಪೆಸರು ಉಂಟು (ಶ್ರೀ ವಿಜಯರ ಸುಳಾದಿ ಇವೆ). ಇಂತಹ ತುರಿಯನು, ಭ್ರೂ ಮಧ್ಯದಿಂದ ಆರಂಭಿಸಿ, ಹನ್ನೆರಡು ಬೆರಳುಳಿದುತ್ತಮಾಂಗದಿ= ಹನ್ನೆರಡು ಅಂಗುಲಿಮೇಲೆ ಶಿರ ಬ್ರಹ್ಮರಂಧ್ರದಲ್ಲಿ ಇರುವನೆಂದು ನಾರಾಯಣ ಉಪನಿಷತ್ತಿನಲ್ಲಿ ಹೇಳಿದೆ. ಈ ಮರ್ಮವನ್ನರಿಯದೇ ೧೨ ಬೆರಳು ಎತ್ತರ ಶಿರದ ಮೇಲೆಂದು ಹೇಳುತ್ತಾರೆ. ಇದು ಉಪನಿಷತ್ ವಾಕ್ಯ ವಿರೋಧವಿದೆ. ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ=ಸ್ಥೂಲ ದೇಹಗತ ೭೨ ಸಾವಿರ ನಾಡಿಯಲ್ಲಿರುವನು. (ಇಲ್ಲಿ ಜೀವನ ಸ್ವರೂಪ ದೇಹದ ೭೨ ಸಾವಿರ ನಾಡಿಗಳಲ್ಲೆಂದು ಕೆಲವರ ಅಭಿಪ್ರಾಯ). ಸ್ಥೂಲದೇಹಗತ ಸುಷುಮ್ನಾನಾಡಿಯಲ್ಲಿ ಹೃತ್ಕಮಲ ಮಧ್ಯಮೂಲೇಶನ ಪಾದಾಶ್ರಯದಲ್ಲಿ ಮುಖ್ಯಪ್ರಾಣನ ಪಾದದಡಿ

ಜೀವನು ಲಿಂಗ ಅನಿರುದ್ಧ ದೇಹದಿಂದ ಯುಕ್ತನಾಗಿರುವನು. ಅಲ್ಲಿ ೭೨ ಸಾವಿರ ನಾಡಿಗಳೇ ಇಲ್ಲ–ಜ್ಞಾನಿಗಳ ಮತ.

**ದ್ರೌಪದೀಶಪತಿ ವಿಠಲರು :** ಪುರುಷನಾಮಕ ಸರ್ವ || ತುರಿಯ ಉತ್ತಮಾಂಗದಿ ಎಂದರೆ, ಚಿದಾನಂದ ಶರೀರದ ಶಿರಸ್ಸಿನಲ್ಲಿ ೧೨ ಬೆರಳಿನ ಮ್ಯಾಲೆ ಅಂದರೆ ಅನಿರುದ್ಧ ದೇಹದ ಮೇಲಿರುವ ಸ್ಥೂಲ ದೇಹದೊಳಗೆ, ೭೨ ಸಾವಿರ ನಾಡಿಗಳೊಳಗೆ ಇಪ್ಪಾ || ೧೦ || (ಈ ಜ್ಞಾನಿಗಳು ಒಳ್ಳೇ ಸರಿಯಾದ ವಿವೇಚನದಿಂದ ಈ ಸಮಂಜಸ ಅರ್ಥವೇ, ವೇದೋಪನಿಷದಗಳ ನಿಜ ಭಾವ ಗರ್ಭಿತ ಮತ್ತು ಶ್ರೀ ವಿಜಯದಾಸರ ವಾಕ್ಯಗಳು. ಇವರಿಗೆ ಸಂವಾದ ರೂಪವಾಗಿವೆ.)

**ಭಾವಸೂಚನ :** ಪುರುಷೇತಿ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪುರುಷ ನಾಮಕ" ಇತಿ || "ತುರೀಯ" "ವಿಷ್ಣುಃ ತುರೀಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ ||" ಇತಿ ಮಾಂಡೂಕ ಭಾಷ್ಯೇ || "ಕೇಶಾಂತೇ ವರ್ತತೇ ತುರ್ಯಃ ಕಪಾಲಾತ್ ಉಪರಿಸ್ಥಿತಃ || ಇತಿ ಚ || ೧೦ ||

## ಕನ್ನಡಾರ್ಥ

ದೇಹದಲ್ಲಿ ಇರುವ ಪುರುಷ ವಿಶ್ವ ತುರೀಯ ರೂಪಗಳನ್ನು ಈ ಪದ್ಯದಿಂದ ತಿಳಿಸುತ್ತಾರೆ. ಅದರಲ್ಲಿ ತುರೀಯ ರೂಪದ ವಿಷಯದಲ್ಲಿ "ವಿಷ್ಣುವು ತುರೀಯ ರೂಪದಿಂದ ಶಿರಸ್ಸಿನಲ್ಲಿಯೇ ಭ್ರೂಮಧ್ಯದಿಂದ ದ್ವಾದಶ ಬೆರಳಿನ ಊರ್ಧ್ವ ಭಾಗದಲ್ಲಿ ಇರುತ್ತಾನೆ" ಎಂದು ಹೇಳುವ ಮಂಡೂಕ ಭಾಷ್ಯ ವಚನವು ಆಧಾರವಾಗಿರುತ್ತದೆ ಮತ್ತು "ಕಪಾಲದ ಮೇಲುಗಡೆ ಕೂದಲುಗಳ ಕೊನೆಯಲ್ಲಿ ತುರೀಯ ರೂಪವಿರುವದು" ಎಂದು ಹೇಳುವ ವಾಕ್ಯಗಳೂ ಆಧಾರವಿರುತ್ತವೆ. || ೧೦ ||

**ಅವತರಣಿಕಾ :** ಈ ತುರೀಯ ನಾಮಕ ಪರಮಾತ್ಮ (ವಿಶ್ವ)ನು, ಜೀವನ ಸ್ವರೂಪ ದೇಹದ ಒಳಗೆ, ಹೊರಗೆ ಲಿಂಗಾನಿರುದ್ಧ ಸ್ಥೂಲಗಳಲ್ಲಿದ್ದು ಜೀವರಿಂದ ನಾನಾ ತರದ ಕರ್ಮಗಳನ್ನು ಮಾಡಿಸಿ ಬ್ರಹ್ಮಾದಿಗಳ ಕೈಯಿಂದ ಸೇವೆ ಕೊಳ್ಳುವನೆಂದು ಜೀವಕೃತಕರ್ಮಾಚರಿಸಿದರೂ ನಿರ್ಲೇಪನು ಎಂದು ಉಪದೇಶಿಸುತ್ತಾರೆ.




ಮೂಲ :

**ವ್ಯಾಪಕನು ತಾನಾಗಿ ಜೀವ ಸ್ವ ।**
**ರೂಪ ದೇಹದ ವೊಳಹೊರಗೆ ನಿ ।**
**ರ್ಲೇಪನಾಗಿಹ ಜೀವಕೃತ ಕರ್ಮಗಳನಾಚರಿಸಿ ॥**
**ಶ್ರೀಪಯೋಜ ಭವೇರರಿಂದ ಪ್ರ ।**
**ದೀಪವರ್ಣ ಸ್ವಮೂರ್ತಿ ಮಧ್ಯಗ ।**
**ತಾ ಪೊಳೆವ ವಿಶ್ವಾದಿರೂಪದಿ ಸೇವೆ ಕೈಕೊಳುತ ॥ ೧೧ ॥**

**ಪದ್ಯಾರ್ಥ :** ಈ ತುರೀಯ ನಾಮಕನೆ; ಜೀವನ ಸ್ವರೂಪ ದೇಹದ ಒಳಗೆ, ಅಂತರಾತ್ಮನಾಗಿ, ವ್ಯಾಪಕನಾಗಿರುವನಲ್ಲದೆ–ಜೀವನ ಸ್ವರೂಪ ದೇಹದ ಹೊರಗೆ ಇರುವ ಲಿಂಗ-ಅವ್ಯಕ್ತ ಅನಿರುದ್ಧ ಸ್ಥೂಲ ದೇಹಗಳಲ್ಲಿ ವ್ಯಾಪಕ ನಾಗಿರುವನಲ್ಲದೆ, ಜೀವಾಂತಃ ಪ್ರೇರಕನಾದ ಹರಿಯು, ಜೀವಕೃತ ಕರ್ಮ ಗಳನಾಚರಿಸಿ=ಜೀವರಿಂದ ಮಾಡತಕ್ಕ ಕರ್ಮಗಳಲ್ಲಿ ಅಂತಃ ತಾನು ಪ್ರೇರಿಸಿ, ಜೀವರಿಂದ ಮಾಡಿಸಿದರೂ, ತಾನು ನಿರ್ಲೇಪನಾಗಿರುವ=ಕರ್ಮಫಲ ಅನುಭವಿ ಸುವದಿಲ್ಲ, ಕರ್ಮಜಿತನಾಗಿರುವನು. "ಕರ್ಮ ಕರ್ಮ ಕೃತ ಕರ್ಮ ಕೃತಾ ಗಮ ಕರ್ಮಫಲಪ್ರದ ಕರ್ಮಜಿತಾ ॥ ಕರ್ಮಬಂಧ ಮಹಕರ್ಮ ವಿಮೋಚನ ಕರ್ಮ ನಿಗ್ರಹ ವಿಕರ್ಮನಾಶ ತವದಾಸೋಽಹಂ ॥" ಎಂದು ದಾಸರ ವಚನ. ಹೀಗೆ ಕರ್ಮ ನಿರ್ಲೇಪನಾಗಿ, ಪ್ರದೀಪವರ್ಣ ಸ್ವಮೂರ್ತಿ ಮಧ್ಯಗ=ಅರುಣ ವರ್ಣ ಕಾಂತಿಯಿಂದ ಬಹು ಪ್ರಕಾಶಿತನಾಗಿ, ಸ್ವಮೂರ್ತಿಗಣ ಮಧ್ಯಗಃ ಎಂತ ಸ್ವಸ್ವರೂಪಗಳಾದ ತನ್ನ ವಿಶ್ವಾದಿ=ವಿಶ್ವ ತೈಜಸ ಪ್ರಾಜ್ಞ ತುರ್ಯ ಆತ್ಮ- ಅಂತರಾತ್ಮ ಜ್ಞಾನಾತ್ಮ ಪರಮಾತ್ಮ, ಇವೆ ಸ್ವಮೂರ್ತಿ ನಾರಾಯಣನಿಗೆ ಸೇವ್ಯ ರೂಪಗಳು, ಎಂದು (ನಾರಾಯಣಾಷ್ಟಾಕ್ಷರ ಮಂತ್ರ ತಂತ್ರ ಸಾರದಲ್ಲಿ ಸರ್ವಜ್ಞರ ಉಕ್ತಿ) ಹೀಗೆ ವಿಶ್ವಾದಿ ರೂಪದಿಂದ ಶ್ರೀ ಪಯೋಜ ಭವೇರರಿಂದ= ಬ್ರಹ್ಮ ವಾಯುಗಳಿಂದ ಸೇವಾ ಮಾಡಿಸಿಕೊಳ್ಳುತ್ತ, ತಾನು ಪೊಳೆವನು. **ಈ** ರೀತಿ ಸ್ಥೂಲ ಬಿಂಬನಾಗಿ ಹೊಳೆದು, ಸಾಧನಾನಂತರ ಗುರುಪ್ರಸಾದದಿಂದ ಸಂಚಿತಾಗಾಮಿ ಕರ್ಮನಾಶಗೈದು, ಜೀವಾಂತರ್ಯಾಮಿ ಬಿಂಬನು, ಇಹೈವ= ಈ ದೇಹದಲ್ಲೆ ಕಾಣಿಸಿಕೊಳ್ಳುವನು. ಪ್ರಕಾಶಮಾನನಾಗಿ ಕಾಣಿಸುವನು.

**ದ್ರೌಪದೀಶಪತಿ ವಿಠಲರು :** ವ್ಯಾಪಕನು ತಾನಾಗಿ ॥ ಈ ತುರ್ಯ

ನಾಮಕ ಪರಮಾತ್ಮ ಸ್ವರೂಪ ದೇಹದ ವೊಳಹೊರಗೆ, ಸ್ವರೂಪ ಕಮಲನಾಡಿ ಧಾತು, ಇಂದ್ರಿಯಗಳಲ್ಲಿ ವ್ಯಾಪ್ತ ॥ ೧೧ ॥

(ಇದೊಂದು ರೀತಿ–ಅರ್ಥ–ಸಮಂಜಸವಾದರೂ, ಕರ್ಮಗಳನಾಚರಿಸುವದು, ಜೀವನ ಸ್ವರೂಪೇಂದ್ರಿಯದಲ್ಲಿ ಹರಿ ನಿಂತು ತನ್ನ ರೂಪದಿಂದ ಪ್ರೇರಿಸಿ ಸ್ಥೂಲ ದೇಹಗತ ಸ್ಥೂಲ ಕರ್ಮವಾಚರಿಸುತ್ತಾನೆ.) ಕಾರಣ ಸ್ಥೂಲಾದಿ ದೇಹಗಳಲ್ಲೆಂಬುದು ಸಂಪ್ರದಾಯಾರ್ಥ.

**ಭಾವಸೂಚನ :** ವ್ಯಾಪಕೇತಿ ॥ ಪ್ರದೀಪೇತಿ ॥ ವಿಶ್ವೇತಿಮೂರ್ತಯೋಽಷ್ಟಾಪಪಿಥ್ಯೇಯಾಃ ॥ ಚಕ್ರಶಂಖ ವರಾಭಯೈಃ । ಯುಕ್ತಾ ಪ್ರದೀಪ ವರ್ಣಾಶ್ಚೇತಿ ॥ ಸಾರ ಸಂಗ್ರಹೇ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವ್ಯಾಪಕನು" ಇತಿ ॥ ಪಯೋಜ–ಪದ್ಮಮ್ ॥ "ಪ್ರದೀಪವರ್ಣಾಶ್ಚ" ಇತ್ಯುಕ್ತೇಃ ॥ ೧೧ ॥

### ಕನ್ನಡಾರ್ಥ

ವ್ಯಾಪಕನಾಗಿರುವ ಶ್ರೀಹರಿ ಚಿಂತನೆಯ ಬಗೆಯನ್ನು ನಿರೂಪಿಸುತ್ತಾರೆ. "ವ್ಯಾಪಕನು" ಎಂಬ ಪದ್ಯದಿಂದ. ಪಯೋಜವೆಂದರೆ ಕಮಲವೆಂದು ಅರ್ಥ.

"ವಿಶ್ವಾದಿ ರೂಪಗಳು "ಪ್ರಾದೀಪವರ್ಣವುಳ್ಳವುಗಳು" ಎಂದು ತಂತ್ರಸಾರದಲ್ಲಿ ನಿರೂಪಿಸಲಾಗಿರುತ್ತದೆ ॥ ೧೧ ॥

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಶ್ರೀಹರಿಯು ಜೀವನ ಸ್ವರೂಪ ದೇಹದಲ್ಲಿ ವ್ಯಾಪಕನಾಗಿರುವಂತೆ, ಶ್ರೀಹರಿಗೆ ಮುಖ್ಯ ಪ್ರತಿಬಿಂಬರಾದ ಜಗತ್ತಿಗೆ ದ್ವಿತೀಯ ಈಶ್ವರರಾದ ಐತರೇಯೋಪನಿಷತ್ ಪ್ರತಿಪಾದ್ಯರಾದ ಶ್ರೀ ವಾಯುದೇವರು ಪವನ ನಾಮದಿಂದ ಸ್ವರೂಪ ದೇಹದಲ್ಲಿದ್ದು ಕರಣ ನಿಯಾಮಕರಾಗಿರುವರೆಂದು ಈ ಪದ್ಯದಿಂದ ಹೇಳುತ್ತಾರೆ.

**ಮೂಲ :**

**ಗರುಡ ಶೇಷ ಭವಾದಿ ನಾಮವ ।**
**ಧರಿಸಿ ಪವನ ಸ್ವರೂಪ ದೇಹದಿ ।**
**ಕರಣ ನಿಯ್ಯಾಮಕನು ತಾನಾಗಿಪ್ಪ ಹರಿಯಂತೆ ॥**

**ಸರಿಸಿಜಾಸನ ವಾಣಿ ಭಾರತಿ |**
**ಭರತನಿಂದೊಡಗೂಡಿ ಲಿಂಗದಿ |**
**ಇರುತಿಹರ್‍ಮಿಕ್ಕಾದಿತೇಯರಿಗಿಲ್ಲವಾಸ್ಥಾನ || ೧೨ ||**

**ಪದ್ಯಾರ್ಥ :** ಗರುಡಶೇಷ ಭವಾದಿನಾಮವಧರಿಸಿ=ಅಹಂಕಾರ ತತ್ವಾಭಿ ಮಾನಿಗಳಾದ ಗರುಡದೇವರು, ಶೇಷದೇವರು, ಭವಾದಿ ರುದ್ರದೇವರೇ ಮೊದ ಲಾದ ಸಮಸ್ತ ತಾತ್ವಿಕ ದೇವತೆಗಳ ನಾಮುವನ್ನು ಧರಿಸಿ, ಆಯಾ ನಾಮು ಗಳಿಂದ ಕರೆಸುತ್ತ, ಪವನಃ=ಪುನಾತೀತಿ ಪವನಃ, ಪವಿತ್ರ ಮಾಡುವನ್ಯಾರೋ ಅವನಿಗೆ ಪವನನೆಂದು ಹೆಸರು. ಅಥವಾ, ಪವತ ಇತಿ ಪವನಃ, ಲೋಕೈರ್ವಿನ ನೀಯತ್ವಾ ತ್ಪವನಃ || ಪವನ=ಪವಿತ್ರಮಾಡುವ ವಾಯುದೇವರು, ಸ್ವರೂಪ ದೇಹದಿ=ಜೀವನ ಚಿಛ್ಛರೀರದಲ್ಲಿ "ಪವಮಾನಾಽಭಿದೋ ವಾಯುಃ ಉತ್ತ ಮಾನಾಂ ಶರೀರಗಃ" ಎಂಬ ಪ್ರಮಾಣದಿಂದಲೂ, ನಿಸ್ಸಂದೇಹವಾಗಿ, ಶ್ರೀಹರಿಯ ಪರಮಾನುಗ್ರಹದಿಂದ ವಾಯುದೇವರು ಜೀವಸ್ವರೂಪೇಂದ್ರಿಯ ಗಳಲ್ಲಿ ಗರುಡಾದಿ ನಾಮುಗಳನ್ನು ಧರಿಸಿ, ಕರಣ ನಿಯಾಮುಕನು=ಇಂದ್ರಿಯ ಗಳ ನಿಯಾಮುಕನು, ತಾನಾಗಿಪ್ಪ ಹರಿಯಂತೆ=ತಾನೇ ಪವನನೇ ಎಂದು ನಿಶ್ಚಯಾರ್ಥ ಬೋಧಕ, ವಾಯುದೇವರೇ ತಾನೆ ಇಂದ್ರಿಯ ನಿಯಾಮುಕನು. ಹರಿಯಂತೆ=ಬಿಂಬನಾದ ಹರಿಯು ಯಾವ ಪ್ರಕಾರವಾಗಿ ಇರುವನೋ, ಬಿಂಬನಾದ ಹರಿಯ ಪ್ರತಿಬಿಂಬರಾದ ವಾಯುದೇವರು ಶ್ರೀಹರಿಯ ಅನುಗ್ರಹ ದಿಂದ ಇಂದ್ರಿಯ ನಿಯಾಮುಕರಾಗಿರುವರು. ಪವಮಾನನು ಸ್ವರೂಪ ದೇಹ ದಲ್ಲಿದ್ದರೂ ಮುಂದೆ ಲಿಂಗ ದೇಹದಲ್ಲಿ ಸರಸಿಜಾಸನ=ಪದುಮಾಸನ-ಬ್ರಹ್ಮ, ವಾಣಿ=ಸರಸ್ವತೀದೇವಿ, ಭಾರತಿ=ಪ್ರಕಾಶಮಾನನಾದ ವಾಯುವಂತರ್ಗತ -ರತಿ-ಭಕ್ತಿಯುಳ್ಳ ಭಾರತಿದೇವಿಯರಿಂದ ಒಡಗೂಡಿ, ಭರತ=ಭ-ಪ್ರಕಾಶ ಮಾನನಾದ ಬಿಂಬರೂಪಿ ಹರಿಯಲ್ಲಿ ನಿತ್ಯರತನಾಗಿರುವ ಭರತ-ವಾಯು, ಈ ನಾಲ್ವರು ಒಡಗೂಡಿ=ಈ ನಾಲ್ವರೂ ಕೂಡಿಕೊಂಡು ಶ್ರೀ ಆಜ್ಞೆಯಿಂದ ರಮಾಭಿಮನ್ಯವಾದ ಲಿಂಗದೇಹದಲ್ಲಿದ್ದು, ತತ್ಕಾರಣವಾದ ೧೬ ಕಲೆ ಗುಣ ಗಳಿಗೆ ಪ್ರವರ್ತಕರಾಗಿರುವರು. ಮಿಕ್ಕಾದ ಆದಿತೇಯರಿಗೆ ಆ ಸ್ಥಾನವು ಇಲ್ಲ. ರುದ್ರಾದಿ ಉಳಿದ ದೇವತೆಗಳಿಗೆ ಲಿಂಗದಲ್ಲಿ ಪ್ರವೇಶವಿಲ್ಲ. ಹೀಗೆ ದಾಸ ರಾಯರ ಭಾವವು ಸಪ್ರಮಾಣವಾಗಿವೆ.

ಶ್ರೀ ವಿಜಯದಾಸಾರ್ಯರು "ಸ್ಥೂಲಾಂಗುಟ ಪ್ರಮಾಣ ಮೂರುತಿ ಪ್ರಾಜ್ಞ | ಮೂಲೇಶನಂಗುಷ್ಠಾಗ್ರಪರಿಮಿತನು, ಕೇಳಿ ಪ್ರಾದೇಶ ಮೂರುತಿ ಪುರುಷ ನಾಮಕನು | ಕಾಲಕಾಲಕೆ ಬಿಡದೇ ಪೂಜಾರ್ಹರು | ಮೂಲ ಮುಖ್ಯ ಗುರುವು ಪವಮಾನ ದೇವತೆ | ಮೂಲೇಶನ ಪಾದ ಬಳಿಯು ವಾಸ | ವಾಲಗ ಮಾಡುವ ಸರ್ವೋಗವಾಗಿ ಹೀ | ಯಾಳದಿಂದ ಅಕರವ ಮುಗಿದು ನಿಂದು | ಬಾಳುವ ಜೀವನು ಪ್ರಾಣನಂಘ್ರಿಯರೇಣು | ತಾಳಿ ಆತನ ಪಾದ ಸಾಮೀಪ್ಯದಿ | **ವ್ಯಾಳಿವ್ಯಾಳಿಗೆ ವಾಯುಹಂಸ ಮಂತ್ರವ ಮೂರು | ಏಳು ಸಾವಿರದಾರುನೂರು ಜಪಿಸಿ** | ಆಳಾಗಿ ಇದ್ದ ಜೀವಕ್ಕೆ ಪುಣ್ಯ ತಂದೀವ" ನೆಂದು ಅಧ್ಯಾತ್ಮ ಸುಳಾದಿ, ತಾಳ ೧೩ ಝಂಪಿಯಲ್ಲಿ ಹೇಳಿದ್ದಾರೆ. ಪುಟ ೩೯ ನೋಡಿರಿ. ಮತ್ತು ದಾಸಾರ್ಯರು ಹರಿಕಥಾಮೃತಸಾರ ಸಂಧಿ ೭, ಪದ್ಯ ೫ರಲ್ಲಿ "ಈ ಶರೀರ **ಚತುಷ್ಟಯಗಳೊಳು** | ಕೋಶ ಧಾತುಗ **ಭಾರತಿಪ ಪ್ರಾಣೇಶ** ಇಪ್ಪತ್ತೊಂದು ಸಾವಿರದಾರುನೂರೆನಿಪ || ಶ್ವಾಸ ರೂಪಕ ಹಂಸ" ಮಂತ್ರ ಜಪಿಸುವರೆಂದು, ಮತ್ತು ನಾಡಿ ಪ್ರಕರಣ ಸಂಧಿ ೧೨ ಪದ್ಯ ೪೪ರಲ್ಲಿ "**ಈರೆರಡು ದೇಹದೊಳಿದ್ದು ಸ** | **ಮೀರದೇವನು** ಶ್ವಾಸ ಜಪನಾ | ನೂರಧಿಕವಾಗಿಪ್ಪ ಎಂಭತ್ತಾರು ಸಹಸ್ರ | ತಾ ರಚಿಸುವನು ದಿವಸ ಒಂದಕೆ| ಮೂರು ವಿಧ ಜೀವರೊಳಗಿದ್ದು ಖ | ರಾರಿ **ಕರುಣಾಬಲವದೆಂತು ಟೊಪವನರಾಯನೊಳು** || ಎಂದು ಆಜ್ಞಾಪಿಸಿದ್ದಾರೆ. ಈ ಶರೀರ ಚತುಷ್ಟಯ ಮತ್ತು **ಈರೆರಡು** ದೇಹದೊಳು = ಈ ಪದಗಳ ಅರ್ಥವು, ಸ್ವರೂಪ-ಲಿಂಗ-ಅನಿರುದ್ಧ-ಸ್ಥೂಲವೆಂತಲೇ ಅರ್ಥದಿಂದ ಸ್ವರೂಪ ದೇಹದಲ್ಲಿ ವಾಯು ದೇವರ ಪ್ರವೇಶ ಉಂಟೆಂದೇ ಅರ್ಥ.

**ದ್ರೌಪದೀಶಪತಿ ವಿಠಲರು:** ಗರುಡಶೇಷ ಭವಾದಿ ನಾಮದಿ | ಸರ್ವೇಂದ್ರಿಯ ನಿಯಾಮಕ ಮುಖ್ಯ ಪ್ರಾಣದೇವರು, ಆದರದಿಂದ ಸ್ವರೂಪೇಂದ್ರಿಯ ನಿಯಾಮಕ, ಗರುಡಶೇಷ ನಾಮ ರೂಪಗಳಿಂದ ಸಾಂದ್ರಾಂಶ ದಿಂದ ಸಕಲ ವ್ಯಾಪಾರ ವ್ಯಾಪ್ತರಾಗಿರುತ್ತಾನೆ.

(ಇಲ್ಲಿ ಸಾಂದ್ರಾಂಶ ಹರಿಯಂತೆ ಎಂಬ ಪದಕ್ಕೆ ಅರ್ಥವಾಗುತ್ತದೆ ಸದೃಶತ್ವ).

**ಭಾವಸೂಚನ:** ಗರುಡೇತಿ || ಲಿಂಗದೇಹ ಸಹಿತ ಪ್ರಭಂಜನಃ ||

ಹ್ಯೈವೀಯ ಸ್ವರೂಪದೇಹೆ ಅಸ್ತಿನವೇತಿ ವಿಪ್ರತಿ ಪತ್ತಿಃ || **ನಾಸ್ತೀತಿ ಪೂರ್ವ ಪಕ್ಷಃ ||** ತಸ್ಯಸತ್ವೇ ಅನ್ಯೇಷಾಮುಪಿಸ್ಥಿತಸ್ಯಾತ್, ನನು–ಸುಪ್ತಿ ಕಾಲೇ ಸರ್ವೇ ಮುಪರತ್ವೇಪಿ ಪ್ರಾಣಾಗ್ನೇ ಇತ್ಯುಕ್ತವಾಯೋಃ ಸ್ಥಿತಿವತ್ ತದಾಪಿ ಸ್ಥಿತಿರೀತಿಚೇನ್ನಾ ಇಯಂಚ ಸಂಭಾವನೀಯ ನಿಶ್ಚಯಸ್ತು ಕಥಮಿತಿಚೇನ್ನಾ ||

**ವಾಯೋಃ ಭಗವದನುಗ್ರಹ ವಿಶೇಷಾತ್** ತತ್ರಾಪಿ ಅಸ್ತೀತ್ಯೇವ ನಿಶ್ಚಯೋಪ ಪತ್ತೇಃ | ಕಿಮತ್ರ ಗಮಕಮಿತಿಚೇದುಚ್ಯತೇ || ಭಾಗವತ ತಾತ್ಪರ್ಯ ದೀಪಿಕಾಯಾಂ **ಶ್ರೀ ನರಹರಿತೀರ್ಥ ಶ್ರೀಪಾದ ವಿರಚಿತಾಯಾಂ** "ಮುಕ್ತಾನಾಂ ಸಂಸೃತಿಸ್ತಾನಾಂ ನೀಚಾನಾಂ ದೇಹಗೋಹ ಸಹಿತಿ ಏಕಾದಶ ತಾತ್ಪರ್ಯ ವ್ಯಾಖ್ಯಾನಾವಸರೇ ಇಥ್ಥಮುಕ್ತಂ|| ಜೀವಾಸ್ತು ತ್ರಿವಿಧಾಃ ಪ್ರೋಕ್ತಾ ಉತ್ತಮಾ ಮಧ್ಯಮಾಧಮಃ || ಉತ್ತಮಾದೇವತಾ ಪ್ರೋಕ್ತಾಃ | ಋಷ್ಯಾದ್ಯಾಮಧ್ಯಮಾಸ್ಮೃತಾಃ ಅಧಮಾ ಮಾನುಷೋತ್ತಮಾಃ | ಕೇಚಾಪಿ ತ್ರಿವಿಧಾಸ್ಮೃತಾಃ || ಸಾತ್ವಿಕಾ ರಾಜಸಾಸ್ತತ್ರ ತಾಮಸಾದಿ ಪ್ರಭೇದತಃ | **ತೇಷು ಸರ್ವೇಷು** ಜೀವೇಷು ದೇಹೇಷು ಚ ವಸತ್ಯಯಂ | **ಪವಮಾನಾಭಿದೋ ವಾಯುಃ** ಉತ್ತಮಾನಾಂ ಶರೀರಗಃ|| ಸ್ವರೂಪೇಂದ್ರಿಯ ದೇಹೇಷು ಮಾತರಿಶ್ವಾಭಿಧಾನತಃ || ಸ್ಥೂಲದೇಹಗತಸ್ಯೋಪಿ ಮುಖ್ಯ ಪ್ರಾಣಾಭಿಧೋಹಿಚಃ || ಧತ್ತೇ ಲಿಂಗಶರೀರಸ್ಥಃ ಸೂತ್ರಂ ನಾಮ ಮಹಾ ಪ್ರಭುಃ || ಸೂಕ್ಷ್ಮ ದೇಹಗತಸ್ಯೋಽಪಿ ಸೂಕ್ಷ್ಮ ರೂಪೀತಿ ಚೋಚ್ಯತೇ || ಮಧ್ಯಮಾಧಮ ದೇಹೇಷು ಪ್ರಾಣಾಪಾನಾಭಿದಾನತಃ || ಪೂರ್ವೋಕ್ತೇಷು ಚಾ ಸರ್ವೇಷು ಸ್ಥೂಲ ದೇಹೇಂದ್ರಿಯಾದಿಷು| **ಸ್ವರೂಪ ದೇಹಬುಧ್ಯಾಧಿ** ಸ್ಥಿತತ್ವೇನ ಮಹಾವಿಭುಃ ಪ್ರೇರಯೇತ್ಯಖಿಳಂ ವಿಶ್ವಂ ಜಂಗಮಾಜಂಗಮತ್ತಥಾ || ತತ್ತ ದೇಹಗತಃ ಪ್ರಾಣಃ ತತ್ತ ದೇಹಸ್ಥ ಮೂರ್ತಿನಾ || ಅನಿರುದ್ಧಾದಿ ನಾಮ್ನಾಹಿ ಸರ್ವ ಪ್ರೇರಕ ಮೂರ್ತಿನೇತಿ **ಪವಮಾನ ಸಂಹಿತಾಯಾಂ** || ತಸ್ಮಾತ್ ಸ್ವರೂಪದೇಹೇ ಶ್ರೀ ವಾಯು ದೇವ ತಿಷ್ಠತ್ಯೇವ **ನ್ಯಾಯವಿವರಣೇ ಚ ಉತ್ಕ್ರಾಂತಿಪಾದೆ||** "ಇಂದ್ರಿಯ ಯಸ್ಥೈಃ ಸ್ವರೂಪೈಸ್ತು | ಜ್ಞಾನಂಜನಯತ್ಯಸೌ | ಮನಸ್ಥೇನ ವಿಶೇಷೇಣ ಕಾಮೈಃ ಕರ್ಮಕೃದೇವಸಃ || ಪ್ರಥಕ್ ಸ್ಥಿತೇನ ರೂಪೇಣ ಜೀವಂಧಾರಯತಿ ಪ್ರಭೋ | ಜೀವಸ್ಥಿತೇನ ರೂಪೇಣ ವೇದಯತ್ಯಹ ಮಿತ್ಯಪಿ || **ಪ್ರಾಣ**

**ಏಕೋವಶೀ ನಿತ್ಯಂ** । ಬಾಹ್ಯಾಂತಃಕರಣೇಶ್ವರಃ ತಾನ್ಯೇ **ತಾನ್ಯವಶಾ** ನ್ನೈವ ತಥಾಪಿ ಕೃಪಯೈವಸಃ ॥ "ಪೃಥಕ್ ಶಕ್ತೋಽಪಿ ತದ್ಗೈಸ್ತು ಸ್ವರೂಪೈ ಸ್ತದ್ಗಕಾರ್ಯಕೃತ । "ತಸ್ಯೇಶೋ ಭಗವಾನ್ ವಿಷ್ಣುಃ ಏವಮೇಷಯಥಾನ್ಯ ಶ್ರುತೇಃ ।" (ಯಥಾಕ್ರಮ ಮಿತಿ) ಇದಕ್ಕೆ **ತಾಮ್ರಪರ್ಣೀಯ** ॥ ಮನ ಸ್ಥೇನ ವಿಶೇಷೇಣ ಮನೋಗತೇನ ರೂಪೇಣ ಜ್ಞಾನಂ ಜನಯತೀತಿ॥ ಕಾಮ್ಯೈಃ ಕಾಮಗತ್ಯೈಃ ರೂಪೈಃ ಕರ್ಮಂಕರೋತಿ ಪೃಥಕ್‌ಸ್ಥಿತೇನ ಬಿಂಬ ಭಗವತ್ಸನ್ನಿಧಿ ಗತೇನ ಪ್ರಾಣನಾಮ್ನಾ ಜೀವಸ್ಥಿತೇನ ಜೀವಸ್ವರೂಪಾಂತಃಕರಣಗತೇನ ಸರ್ವಾನ್ ವಶೀಕರೋತೀತಿ ವಶೀ ॥ ಪ್ರಾಕೃತ ವಾಯುಲೀಲಾಮೃತೇಽಹಾ । ಜೀವಾಂತರ್ಯಾಮಿಗಳಾದ ಕಾರಣ ಆ ರೂಪಗಳು ತದುಪೇಕ್ಷಯಾ ಅಣು ಪರಮಾಣುಗಳು ॥ ೧೨ ॥

## ಇನ್ನು ಕೆಲವು ಪ್ರಮಾಣಗಳು

"ಶ್ರುತಿ ಪ್ರಮಾಣ "ಘರ್ಮಸಮಂತಾ ತ್ರಿವೃತ ವ್ಯಾಪತು ಸ್ತತೋ ಜುಷ್ಟಿಂ ಮಾತರಿಶ್ವಾಜಗಾಮ ॥" ಸ್ವರೂಪ ದೇಹದಲ್ಲಿ ದೀಪ್ತರಾದಂಥಾ ವ್ಯಾಪ್ತರಾದಂಥಾ ಭಗವದ್ರೂಪಗಳ ಸೇವಾ ಮಾಡೋದರಗೋಸುಗ ವಾಯು ದೇವರು ಕೂಡಾ ಪ್ರವೇಶ ಮಾಡಿದ್ದಾರೆಂದು ತಾಮ್ರಪರ್ಣಿ ಟಿಪ್ಪಣಿಯಲ್ಲಿಯೂ ಹೇಳಿದ್ದಾರೆ. ಜೀವನ ಸ್ವರೂಪಾಂತಃಕರಣಗಳಲ್ಲಿ ಕೇಶವಾದಿ ಕೃಷ್ಣಾಂತ ರೂಪಗಳಿಂದ ಶ್ರೀಹರಿ ಹ್ಯಾಂಗ ಇದ್ದಾನೋ ತದ್ವತ್ ರುದ್ರಾದಿ ತತ್ವೇಶರ ನಾಮಧಾರಣ ಮಾಡಿಕೊಂಡು ವಾಯುದೇವರು ಸ್ವರೂಪಾಂತಃಕರಣದಲ್ಲಿ ತಾವಿದ್ದು ಜೀವರ ಕಾರ್ಯವನ್ನು ನಡೆಸುತ್ತಾ ಸರ್ವರನ್ನೂ ವಶಮಾಡಿಕೊಂಡು ಇದ್ದಾರೆಂಬೋ ಸಿದ್ಧವಾದ ಪ್ರಮೇಯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸಂಕ್ಷಿಪ್ಯ ಉಕ್ತಾಂ ಸ್ವರೂಪಸ್ಥಿತಿಂ ವಾಯೋಃ ವ್ಯನಕ್ತಿ "ಗರುಡ" ಇತಿ॥ ಅತ್ರ ಕೇಚಿತ್ ನ ಸಹಂತೇ ಸಮೀರಸ್ಯ ಸ್ಥಿತಿಂ ಲಿಂಗಸ್ವರೂಪಯೋಃ ॥ "ಪ್ರಾಣನಾಮ್ನಾ ಜೀವಗತಃ ।" "ಧತ್ತೇ ಲಿಂಗ ಶರೀರಸ್ಥಃ" "ಸೂತ್ರನಾಮ" ಇತಿ ರುದ್ರಾದ್ಯಧಿಕ ಮಾಹಾತ್ಮ್ಯೈಕ್ತ್ಯರ್ಥಂ ಪ್ರಸಕ್ತ "ಜೀವಸ್ಥಿತೇನ ರೂಪೇಣ ವೇದಯತಿ ಅಹಮಪಿ" ಇತಿ ಪವಮಾನ ಸಂಹಿತಾನ್ಯಾಯ ವಿವರಣ ದ್ರೋಹಿಣಃ ಇತ್ಯಪೇಕ್ಷ್ಯಾಃ ॥ ೧೨ ॥

**ಕನ್ನಡಾರ್ಥ**

ಹಿಂದೆ ಸಂಕ್ಷೇಪದಿಂದ ಹೇಳಲ್ಪಟ್ಟ ವಾಯುದೇವರ ಸಜೀವ ಸ್ವರೂಪ ಲಿಂಗ ದೇಹಗಳಲ್ಲಿ ವ್ಯಾಪಿಸಿರುವ ಮಹಿಮೆಯನ್ನು ವಿಶದಪಡಿಸುತ್ತಾರೆ. "ಗರುಡ" ಇತಿ ॥ ಇಲ್ಲಿ "ವಾಯುದೇವರು ಜೀವರ ಲಿಂಗ ಹಾಗು ಸ್ವರೂಪ ಶರೀರಗಳಲ್ಲಿ ವ್ಯಾಪಿಸಿರುವರು" ಎಂಬುದನ್ನು ಕೆಲವರು ಸಹಿಸುವದಿಲ್ಲ-ಒಪ್ಪುವದಿಲ್ಲ. "ಪ್ರಾಣವೆಂಬ ಹೆಸರುಳ್ಳವರಾಗಿ ಜೀವರಲ್ಲಿ ಇರುತ್ತಾನೆ." ಲಿಂಗ ಶರೀರದಲ್ಲಿ ಇರುತ್ತ ಇಂದ್ರಿಯಾದಿಗಳನ್ನು ನಿಯಮಿಸುತ್ತಾನೆ ಸೂತ್ರನಾಮಕ ವಾಯುವು" ಎಂಬುದಾಗಿ "ರುದ್ರ ಮುಂತಾದವರಿಗಿಂತಲೂ ಅಧಿಕವಾದ ಮಾಹಾತ್ಮ್ಯವು ವಾಯುದೇವರಿಗೆ ಇರುತ್ತದೆ" ಎಂದು ತಿಳಿಸುವ ಪ್ರಸಂಗದಲ್ಲಿ ಉದಾಹರಿಸ ಲಾಗಿರುವ "ಜೀವರಲ್ಲಿ (ಸ್ವರೂಪ ದೇಹದಲ್ಲಿ) ಇರುವ ರೂಪದಿಂದ **"ನಾನು-(ವಾಯುವು) ತಿಳಿದು ಕೊಳ್ಳುತ್ತೇನೆ"** ಎಂದು ಉಕ್ತವಾಗಿರುವ **ಪವಮಾನ ಸಂಹಿತಾ ವಾಕ್ಯವನ್ನೇ** ಎತ್ತಿ ಹಿಡಿದು ತೋರಿಸಿರುವ ನ್ಯಾಯ ವಿವರಣದಿಂದ ವಿರೋಧ ಬಂದು ಅವರಿಗೆ ದ್ರೋಹ ಬರುವದರಿಂದ "ವಾಯುವು ಜೀವ ಸ್ವರೂಪ ಶರೀರದಲ್ಲಿ ವ್ಯಾಪ್ತನಲ್ಲ" ಎಂಬ ಮತವೂ ಅದನ್ನು ಅಂಗೀ ಕರಿಸುವವರೂ ಮನ್ನಣೆಗೆ ಯೋಗ್ಯರಲ್ಲ, ನಿಂದ್ಯರು ॥ ೧೨ ॥

**ವಿಶೇಷ ವಿಚಾರಾಂಶ**

ವಾಯುದೇವರಿಗೆ ಸ್ವರೂಪ ದೇಹದಲ್ಲಿ ಪ್ರವೇಶ ಇಲ್ಲೆಂಬುವರು ಹರಿ ವಾಯುಗಳ ದ್ರೋಹಿಗಳೆಂಬುದು ಬಹು ಸತ್ಯವಾದುದು. ವಾಯುದೇವರ ಲ್ಲಿಪ್ಪ ಹರಿಯ ಕರುಣಾ ಶಕ್ತಿ ಬಲಾದಿಗಳು ತಿಳಿಯದವ-ತಾಮಸನೆಂದು ಗರುಡ ಪುರಾಣ ವಚನವಿದೆ. ಮೇಲೆ ವಿವರಿಸಿದ, ಇಷ್ಟು ಪ್ರಮಾಣಗಳನ್ನರಿ ಯದೇ ನೋಡದೆ, ಸಂಪ್ರದಾಯ ಗುರುಗಳಿಂದ ತಿಳಿಯದೇ ವಾಯುದೇವರಿಗೆ ಸ್ವರೂಪದಲ್ಲಿ ಪ್ರವೇಶವಿಲ್ಲವೆಂದು ಹೇಳುತ್ತಾ ಅನೇಕ ಆಕ್ಷೇಪಗಳನ್ನು ಮಾಡು ತ್ತಾರೆ. ಆ ಆಕ್ಷೇಪಗಳಿಗೆಲ್ಲ ಸರಿಯಾದ ಉತ್ತರ ಕೊಡುವುದು ಮುಕ್ತಿ ಯೋಗ್ಯರ ಕರ್ತವ್ಯ. ಈ ತಿಳುವಳಿಕೆ ಸಜ್ಜನರಿಗೆ ಮಾಡುವದು ಮಹಾ ಸಾಧನ-ಹರಿವಾಯುಗಳ ಸೇವೆ. ಇದರಲ್ಲಿ ದುರಾಗ್ರಹ ಹಿಡಿದವರೇ ದ್ರೋಹಿ ಗಳು-ನಿಂದ್ಯರು ಎಂದು ನಿಶ್ಚಯ ಉಪನಿಷತ್ ವಾಕ್ಯದಂತೆ. ದಾಸರು-"ಹೊತ್ತು ಹೊತ್ತಿಗೆ ಪಾಪ ಕರ್ಮ ಪ್ರ । ವರ್ತಕರ ನಿಂದಿಸದ ತನಗಿಂ । ದುತ್ತಮರ

ಗುಣ ಕೊಂಡಾಡದಿಪ್ಪ | ಮರ್ತ್ಯರಿಗೆ ಗೋ ಬ್ರಾಹ್ಮಣ ಸ್ತ್ರೀ | ಹತ್ಯ ಮೊದಲಾದಖಿಳ ದೋಷಗ | ಳಿತ್ತಪನು ಸಂದೇಹ ಬಡಸಲ್ಲಖಿಳ ಶಾಸ್ತ್ರಮತ ||" ಎಂದು ಹೇಳಿದ್ದಾರೆ. ಅನಾದಿಯಿಂದ ಇಂಥ ಅಜ್ಞಾನ ವೈಷ್ಣವಾಭಾಸಕರಲ್ಲಿ ಸೇರಿದೆ. ಅದನ್ನು ತೆಗೆಯಲು ಶಕ್ಯವಿಲ್ಲವಾದರೂ ಅಸಜ್ಜನರ ಸಹವಾಸ ದೋಷ ಅವರ ಗ್ರಂಥ ನೋಡುವದರಿಂದ ಸಜ್ಜನರಿಗೆ ಬಂದ ಅಜ್ಞಾನ ಪರಿಹಾರ ಗೋಸುಗವೇ ಅದು ನಿಂದ್ಯವೆಂದು ತಿಳಿಸುವದೇ ಮುಖ್ಯ ಧರ್ಮ-ಶ್ರೀ ಸರ್ವಜ್ಞರ ವಚನ. ೧೫ನೇ ಸರ್ಗ ಸುಮಧ್ವ ವಿಜಯದಲ್ಲಿ ವಿಸ್ತಾರವಾಗಿ ಬಣ್ಣಿಸಿದೆ. ಈ ವಿಷಯ ಅನುವ್ಯಾಖ್ಯಾನದಂತೆ ಸುಧಾಕಾರರ ವಚನವೂ ಇದೆ. ಕಾರಣ ಇದರಲ್ಲಿ ಸಜ್ಜನರಾದವರು ಆಗ್ರಹ ತೊಡದೇ ಸುಜ್ಞಾನ ಸಂಪಾದಿಸಿ ದಾಸರ ಕರುಣಾದ್ವಾರಾ ಹರಿವಾಯುಗಳ ಪ್ರಸಾದವೇ ಮುಕ್ತಿ ಎಂದು ಹಿರಿಯರ ವಚನ.

**ಆಕ್ಷೇಪ :** ಬ್ರಹ್ಮಾದಿ ತೃಣಾಂತ ಜೀವರು ಅತ್ಯಣುಗಳು. ಕಾರಣ ಒಬ್ಬ ಜೀವನ ಸ್ವರೂಪದಲ್ಲಿ ಇನ್ನೊಬ್ಬ ಜೀವನ ಪ್ರವೇಶ ಕೂಡುವದಿಲ್ಲ.

**ಉತ್ತರ :** ಎಲ್ಲ ಜೀವರ ಅಣುತ್ವವಾದರೂ, ತೃಣ ಜೀವರಾರಂಭಿಸಿ ವಾಯು ಬ್ರಹ್ಮ ಪರಿಯಂತವಾಗಿ ಅವರ ಶಕ್ತಿ ಬಲ ಅಣಿಮಾಗರಿಮಾ ಸ್ವರೂಪ ಶಕ್ತಿ ಜ್ಞಾನ ಮುಂತಾದವು ಸ್ವರೂಪದಲ್ಲೇ ಅಡಗಿವೆ. ಬ್ರಹ್ಮಾದಿ ಸಾಂಶ ಜೀವಿಗಳು ಮುಕ್ತಿಯಲ್ಲಿ ಸಹ ಅನೇಕ ಅಂಶ ಅಣು ಮಹತ್ವಾದ ಶಕ್ತಿಯಿಂದ ತೆಗೆದುಕೊಳ್ಳುವರು. ವಾಯುದೇವರ ಅಂಶ ಅಂಶಿಗಳಿಗೆ ಯಾವ ಕಾಲಕ್ಕೂ ಭೇದವಿಲ್ಲ, ನೋವಿಲ್ಲ. ಶ್ರೀ ಹನುಮಂತದೇವರು ಸಮುದ್ರೋಲ್ಲಂಘನ ಕಾಲಕ್ಕೆ ಮಹಾ ರೂಪ ತೆಗೆದುಕೊಂಡರು. ಲಂಕಾ ಪ್ರವೇಶ ಕಾಲಕ್ಕೆ "ಭೂತ್ವಾ ಬಿಡಾಲ ಸಮತೋ ನಿಶಿತಾಂ ಪುರೀಂ ಚ" ಬಿಡಾಲ ಸಮದೇಹ ಉಳ್ಳವರಾದರು, ಇತ್ಯಾದಿ. ಇದರಂತೆ ಅವರ ಸ್ವರೂಪಕ್ಕಿಂತಲೂ ಅಣುತ್ವ ಹೊಂದಿ ಜೀವನಲ್ಲಿ ಪ್ರವೇಶ ಮಾಡುವ ಶಕ್ತಿ ಹರಿಯ ಶಕ್ತಿಯಿಂದ ವಾಯುದೇವರಿಗೆ ಉಂಟು, ಅಲ್ಲದೇ ತೇಜೋರೂಪಶಕ್ತಿ ಬಲಶಕ್ತಿ ಉಂಟು. ಅಂಶ ಸ್ವರೂಪ, ಆನಂದ-ಬಲಜ್ಞಾನಾದಿ ತಾರತಮ್ಯ ಚನ್ನಾಗಿ ತಿಳಿಯಬೇಕು. ಇಂತಹ ಜೀವನ ಸ್ವರೂಪ ಪ್ರವೇಶ ಶಕ್ತಿ ವಾಯುವಿಗೆ ಉಂಟೆಂದು ಅನೇಕ ಆಧಾರಗಳು ಇವೆ.

೨. **ಆಕ್ಷೇಪ :** ಆದರೆ ವಾಯುದೇವರಿಗೆ ಲಿಂಗವಿದೆ, ಸಲಿಂಗರಾಗಿ ಜೀವನ ಸ್ವರೂಪ ಪ್ರವೇಶ ಕೂಡುವದಿಲ್ಲ.

**ಉತ್ತರ :** ವಾಯುದೇವರಿಗೆ ಬ್ರಹ್ಮ–ವಾಯು–ವಾಣಿ–ಭಾರತಿಯರು ಈ ನಾಲ್ಕು ಜನಕ್ಕೆ ಲಿಂಗದೇಹವು ದಗ್ಧ ಪಟದೋಪಾದಿಯಾಗಿದೆ. (ಹೇಗೆ ಗ್ಯಾಸಿನ ಬತ್ತಿ–ಮೆಂಟಲ್ ಸುಟ್ಟರೂ ತೇಜೋರೂಪವಾಗಿ ಅಗ್ನಿಪ್ರಖರವಾಗಿ ಹೇಗೆ ಪ್ರಕಾಶ ಮಾಡುತ್ತದೆಯೋ ಹಾಗೆ) ವಾಯುದೇವರಿಗೆ ಪ್ರಕೃತಿ ಬಂಧಕ ಕಾರ್ಯಗಳೇ ಇಲ್ಲ. ಅವರಿಗೆ ಮೂಲ ಅಂಶದಲ್ಲಿಯೂ, ಅವತಾರಗಳಲ್ಲಿಯೂ ಅಜ್ಞಾನಾದಿಗಳಿಲ್ಲ. ಅವರ ತೇಜೋಮಯ ರೂಪ–ಬಲ ಜ್ಞಾನಾದಿಗಳ ದ್ವಾರಾ ಭಗವಂತನ ಕೃಪೆಯಿಂದ ಜೀವನ ಸ್ವರೂಪದಲ್ಲಿಯೂ, ವೈಕುಂಠ ಶ್ರೀ ಭಾಗದಲ್ಲಿಯೂ ಇದೇ ವಾಯುದೇವರಿಗೆ ಪ್ರವೇಶ ಉಂಟೆಂದು ಪ್ರಮಾಣಗಳು. ವೈಕುಂಠ ವರ್ಣನಾದಿಗಳಲ್ಲಿ ದೊರೆಯುವವು. ಕಾರಣ ಸಲಿಂಗರಾದಾಗ್ಯೂ ಲಿಂಗ ಕಾರ್ಯವಿಲ್ಲದ ಕಾರಣ ವಾಯುದೇವರಿಗೆ ಜೀವನ ಸ್ವರೂಪದಲ್ಲಿ ಪ್ರವೇಶ ಉಂಟು.

೩. **ಆಕ್ಷೇಪ :** ಸುಷುಪ್ತಿ ಕಾಲದಲ್ಲಿ ಜೀವನಲ್ಲಿ ಹಂಸಮಂತ್ರ ಮತ್ತು ಅಸೃಜ್ಯಾವಸ್ಥೆಯಲ್ಲಿ ಜೀವನ ಶ್ವಾಸೋಚ್ಛ್ವಾಸ ಮಾಡುವದು ಹರಿಯಲ್ಲವೇ ?

**ಉತ್ತರ :** ಗಾಢಾಂಧಕಾರವಾದ ಅಸೃಜ್ಯಾವಸ್ಥೆಯಲ್ಲಿ ಜೀವನು ನಿಶ್ಚೇಷ್ಟ, ಕ್ರಿಯಾರಹಿತನಾದರೂ ಶ್ವಾಸೋಚ್ಛ್ವಾಸ ಹರಿಯೇ ಮಾಡಿಸುವನು. ಕಾಲಕ್ಲುಪ್ತ ಶ್ವಾಸಕ್ಲುಪ್ತವಿಲ್ಲ ಬರೆ ಉಸಿರಾಡಿಸುವದು. ಆದರೆ ಸೃಷ್ಟ್ಯಾರಂಭ ಕಾಲದಲ್ಲಿ ಶ್ರೀ ವಾಯುದೇವರು–ಸೃಷ್ಟನಾದ ನಂತರ ಜೀವರ ಸ್ವರೂಪ ದೇಹ ದಲ್ಲಿ ಹರಿಯ ಆಜ್ಞೆಯಂತೆ, ಹರಿಯ ಸೇವೆಗೋಸುಗ ಪ್ರವೇಶ ಮಾಡಿದ ರೆಂದು "ಘರ್ಮಾಸಮಂತಾ" ಇತ್ಯಾದಿ ಶ್ರುತಿಗಳು ಹೇಳುತ್ತವೆ. ಇದು ಅಪ್ರಮಾಣವಾಗದಿದ್ದರೆ ಇನ್ನೊಂದು ಶ್ರುತಿ ತೋರಿಸರಿ-ಇದೆ ಉತ್ತರ. ಅಲ್ಲದೇ ಮಹಾ ಪ್ರಳಯ ಕಾಲದಲ್ಲಿ ವಾಯುದೇವರಿಗೆ ಅಜ್ಞಾನಾದಿ ದೋಷಗಳಿಲ್ಲ– ಸದಾ ಎಚ್ಚತ್ತು ಶ್ರೀಹರಿಯ ಧ್ಯಾನರತರಾಗಿ ಜೀವನಲ್ಲಿ ಹಂಸಮಂತ್ರ ಜಪ ಮಾಡುವರಿಗೆ ಶಕ್ತಿ ಹೇಗೆ ಕುಂಠಿತವಾಯಿತು? ಇದಕ್ಕೆ ಉತ್ತರವೇನು ?

೪. **ಆಕ್ಷೇಪ :** ವಾಯುದೇವರಿಗೆ ಸ್ವರೂಪದಲ್ಲಿ ವ್ಯಾಪ್ತಿ ಇರುವ ದೆಂದು ಬರೀ ಬಾಯಿ ಮಾತೆ? ಇದಕ್ಕೇನಾದರೂ ಪ್ರಮಾಣ ಹೇಳುವಿರಾ ?

**ಉತ್ತರ :** ಬೇಕಾದಷ್ಟು ಪ್ರಮಾಣ ಮೇಲೆ ಉದಹರಿಸಿದೆ. ಬೇಕಾದರೆ ಮತ್ತೂ ಪ್ರಮಾಣವಿದೊ ತಿಳಿದುಕೊಳ್ಳಿ. "ಪವಮಾನಾಭಿದೋ ವಾಯುಃ ಜೀವಾನಾಂ ಚ ಸ್ವರೂಪಗಃ ॥ ತತ್ವ ದೇವಾಭಿಧಾನೇನ ತತ್ವ ಕಾರ್ಯಾಣಿ ನಿತ್ಯಶಃ । ಕುರ್ವನ್ ಬಿಂಬ ಇವದೇವೋ ಹರೆ ರಾಜ್ಞಾನುಸಾರತಃ ॥" ಇತಿ ಪ್ರಕಾಶ ಸಂಹಿತಾ ॥ ಹೀಗೆ ವಾಯುದೇವರಿಗೆ ಸ್ವರೂಪ ವ್ಯಾಪ್ತಿ ಇದ್ದ ಕಾರಣ ದಾಸಾರ್ಯರು ಮುಖ್ಯ ಪ್ರಾಣಾಧಿಷ್ಟಿತ್‌ನಾದ ಬಿಂಬೋಪಾಸನೆ ಮುಖ್ಯವೆಂದು ತಾಮ್ರಪರ್ಣಿ ಆಚಾರ್ಯರ ಟಿಪ್ಪಣಿ ಇದೆ. ಟೀಕಾ ಭಾಗ (೧) ಪುಟ ೬೦-೬೧ರಲ್ಲಿ ಸ್ಪಷ್ಟ ಹೇಳಿದ್ದಾರೆ.

ಮತ್ತು ಶ್ರೀ ಜಗನ್ನಾಥ ದಾಸವರ್ಯರೇ—ಹರಿಕಥಾಮೃತಸಾರ ಸಂಧಿ (೧) ಪದ್ಯ ನಾಲ್ಕರಲ್ಲಿಯೂ, ಸಂಧಿ ೭, ಪದ್ಯ ೫, ಸಂಧಿ ೧೨, ಪದ್ಯ ೪೪ ರಲ್ಲಿಯೂ ಸ್ವರೂಪ ದೇಹದಲ್ಲಿ ಲಿಂಗ ಅನಿರುದ್ಧ ಸ್ಥೂಲದಲ್ಲಿ ಹೀಗೆ ನಾಲ್ಕು ದೇಹಗಳಲ್ಲಿ **ಅಬ್ಜಜ ಕಲ್ಪಪರಿಯಂತ** ತಾ ರಚಿಸುವನೆಂದು ಹೇಳಿದ್ದಾರೆ. ಕಾರಣ "ಘರ್ಮಾಸಮಂತಾ" ಎಂಬುವ ಶ್ರುತಿಯಂತೆ ಶ್ರೀ ವಾಯುದೇವರ ಸೂಕ್ಷ್ಮ ಸೃಷ್ಟಿಯಲ್ಲಿ ಪ್ರಾರಂಭಕ್ಕೆ ಸಲಿಂಗರಾದರೂ ಎಲ್ಲ ಜೀವರಲ್ಲಿ ಪ್ರವೇಶಿಸಿ ಬ್ರಹ್ಮಕಲ್ಪ ಪರಿಯಂತರ ಶ್ವಾಸ ಜಪಗಳು ಮಾಡುತ್ತಾರೆಂದು ಹೇಳಿದ್ದು ಈ ಪ್ರಮಾಣ ಸಾಕಲ್ಲವೆ ?

೫. **ಆಕ್ಷೇಪ :** ಹಾಗಾದರೆ, ಪವನ ಶಬ್ದಕ್ಕೆ ವಾಯುವೇ ಎಂತ ಯಾಕೆ ಅರ್ಥ ಮಾಡಬೇಕು, ಪವನ ಶಬ್ದ ಹರಿಯೆಂತ ಹೇಳಿದರೆ ಒಳ್ಳೇದಲ್ಲವೆ ?

**ಉತ್ತರ :** ಸಕಲ ಶಬ್ದ ವಾಚ್ಯನು ಹರಿಯೇ ! ಆದರೆ ಇಲ್ಲಿ ಪವನ ಶಬ್ದಕ್ಕೆ ನಿರಾವಕಾಶವಾಗಿ ವಾಯುವೇ ಎಂತ ಅರ್ಥ ಮಾಡಬೇಕು. ಮೇಲೆ ಉದಹರಿಸಿದ ಪ್ರಮಾಣಗಳೇ ಸಾಕು. ಆದರೂ ದಾಸಾರ್ಯರು ಜ್ಞಾನಿಗಳು. "ಗರುಡ ಶೇಷ ಭವಾದಿ ನಾಮವ ಧರಿಸಿ ಪವನ ಸ್ವರೂಪದೇಹದಿ, ತಾನಾಗಿಪ್ಪ ಹರಿಯಂತೆ। ಎಂದು ಹೇಳಿದ್ದೆ ಸಾಕಲ್ಲವೆ? ಪವನನು ಎಲ್ಲ ತತ್ವ ದೇವತೆಗಳಿಗೂ ಕರಣ ನಿಯಾಮಕನಲ್ಲವೆ ? ಪವನನು ಮುಖ್ಯ ತಾತ್ವಿಕನಾಗಿದ್ದ ಮೇಲೆ, ಹರಿಯೇ ಎಲ್ಲ ರೂಪಗಳನ್ನು ಧಾರಣ ಮಾಡಿದ ಮೇಲೆ ಪವನನನ್ನೇ ಬಿಟ್ಟು

ಉಳಿದ ಗರುಡ ಶೇಷ ಭವಾದಿ ನಾಮ ಧರಿಸಿ ಬದಲಾಗಿ ಪವನ–ಗರುಡ ಶೇಷ ಭವಾದಿ ಎಂತ ಏಕೆ ಹೇಳಿಲ್ಲವೆಂದು ಅರಿತರೆ ಸಾಕು. ಪವನನೇ ಹರಿಯಂತೆ–ಹರಿಯಾಜ್ಞೆಯಂತೆ ಇರುವನೆಂದು ಮಥಿತಾರ್ಥ. ಬೇರೆ ಅರ್ಥ ಮಾಡಲಿಕ್ಕೆ ಅವಕಾಶವೇ ಇಲ್ಲ. ಶಂಕಾ ಬಂದರೆ ನಿರರ್ಥಕವಾದುದು.

೬. **ಆಕ್ಷೇಪ**: ಹಾಗಾದರೆ, ಕಂಕಣಾಕಾರ ಸುಳಾದಿ, ನಾರಾಯಣ ಮಂತ್ರದಲ್ಲಿ ಸ್ವಮೂರ್ತಿಗಣ ಮಧ್ಯಗ ಎಂತು ಭಗವಂತ ಸ್ವಮೂರ್ತಿ ಎಂತ ಹೇಳಿದ್ದಾರೆ. ಪವನನ ಪ್ರಸ್ತಾಪವೇ ಇಲ್ಲ.

**ಉತ್ತರ**: ಕಂಕಣಾಕಾರ ಸುಳಾದಿಲಿ ಎಲ್ಲಿ ಹೇಳಿದ್ದಾರೆಂಬುದು ನೀವು ಅರಿಯದೇ ದೊಡ್ಡವರ ಹೆಸರು ಹೇಳಿ ಮೋಸಗೊಳಿಸುವದು ತರವಲ್ಲ. ಮತ್ತೂ ಹೆಚ್ಚಿನ ಕಿಚ್ಚು ಕಟ್ಟದಿರ್ಯಾ? ಮೂಲ ಕಂಕಣಾಕಾರ ಓಂ ಫಣಿ ಓಂ=ಎಂದು ಹೇಳಿದ್ದು ಬಹು ಸಾರ್ಥಕ್ಯ. ಕಾಲ ನಿಯಾಮಕ ರೂಪಕ್ಕೂ-ಬಿಂಬ ರೂಪಕ್ಕೂ ಐಕ್ಯ ಚಿಂತನೆ, ಇದರೊಳು ಏಳು ಕೋಟಿ ಮಂತ್ರಾರ್ಥ ಉಂಟು. ಅಧ್ಯಾತ್ಮ, ಅಧಿದೈವ ಅಧಿಭೂತ, ಅಧಿಕಾರತನಭೇದ ತಿಳಕೊಂಬ ಜೀವರಿಗೆ ಎಂದು ವಿಜಯದಾಸರು ಅಪ್ಪಣೆ ಕೊಡಿಸಿದ್ದಾರೆ. ಈ ಮೂರ ರಲ್ಲಿಯೂ, ವಾಯ್ವಂತರ್ಗತ ಹರಿಯನ್ನೇ ಉಪಾಸಿಸಬೇಕೆಂದು ಪ್ರಕಾಶ ಸಂಹಿತಾ ಭಾಗವತಾದಿಗಳಲ್ಲಿ ನಿರವಕಾಶ ಪ್ರಮಾಣ ಹೇಳಿದ್ದಾರೆ. ಕಂಕಣಾ ಕಾರ ಸುಳಾದಿ ಏತಕ್ಕೆ ಪ್ರಸಕ್ತಿಯಾಯಿತು? ಅದರ ಕ್ರಮವೇನೆಂಬುದು ಚನ್ನಾಗಿ ತಿಳಿಯಿರಿ. ನಮ್ಮ ಮಂಡಲ ಪ್ರಕಟನೆ (೬೧) ನೋಡಿ ಮನವರಿತರೆ ಗೊತ್ತಾಗುವದು.

೭. **ಆಕ್ಷೇಪ**: ಹಾಗಾದರೆ, ಬೃಹದಾರಣ್ಯ ಭಾಷ್ಯ ಮುಕ್ತರ ವಿಷಯ. ಮುಕ್ತಾ ಭಗವದತ್ತ ಭೋಗಾನ್ ಭುಂಜಂತೇ ನಾಸ್ತಿನಾಸ್ತ್ಯೇವ ತತ್ವಮಾನಿನಃ ಎಂತು ಪ್ರಮಾಣವಿದೇ! ಜೀವನ ಸ್ವರೂಪದ ಸೃಷ್ಟಿಕಾಲ–ಮುಕ್ತಿಯಲ್ಲಿ ಒಂದೇ ಪ್ರಕಾರವಿರುತ್ತದೆ, ಅಲ್ಲಿ ವಾಯುವಾದಿ ತತ್ವೇಶರು ಇಲ್ಲ–ಇಲ್ಲಿಯೂ ಇಲ್ಲ ಈ ಪ್ರಮಾಣವೇ ಸಾಕು.

**ಉತ್ತರ**: ಮುಕ್ತರಲ್ಲಿ ತತ್ವಾಭಿಮಾನಿಗಳಿಲ್ಲವಾದರೂ ಮುಕ್ತಾವಸ್ಥಾ ದಲ್ಲಿಯೂ ಅಧಮರು ಉತ್ತಮರಾಧೀನರಾಗಿರುತ್ತಾರೆ. "ಚಿನುಮಯ ಶರೀರದಿ ಚತುರ ಮುಕ್ತಿಯುಂಟು। ಗುಣವಧಿಕ ಉಳ್ಳಂಥ ಉತ್ತಮರೋತ್ತಮರ

ಜನಕೆ । ಘನ ಅಂಶಾ ಅಂಶಗಳಿಂದ ವ್ಯಕ್ತವೈಯ್ಯಾ । ವನಜ ಸಂಭವ ಮೊದ ಲಾದ ಮುಕ್ತರು **ನಿಯಾಮಕರು** । ಅನುದಿನ ತಮಗಿಂದ ನೀಚರಿಗೆ । **ತನುವಿನೊಳಗಲ್ಲದೇ ಬಾಹಿರದಿ ಎನೆಸಲ್ಲ ।** ಅನಿಲನೇ ಮೋಕ್ಷದಲಿ ಬ್ರಹ್ಮದೇವಾ" ಎಂದು ಶ್ರೀ ವಿಜಯದಾಸರ ಮುಕ್ತ ಪ್ರಕರಣ ಸುಳಾದಿ ತಾರ ತಮ್ಯ ಸು॥ ಪುಟ ೧೩೪. ಈ ಎಲ್ಲ ವಿಚಾರವನ್ನರಿತು ಶ್ರೀಮದಾಚಾರ್ಯರ ಭಾಷ್ಯಕ್ಕೆ ಅರ್ಥ ಮಾಡಬೇಕು. ಮುಕ್ತಿಯಲ್ಲೂ ಒಂದು ಕಲ್ಪದ ಜೀವಿಗಳು ಮುಕ್ತ ಬ್ರಹ್ಮನ ವಶದಲ್ಲಿಪ್ಪರು. ಇವರಿಗೆ ಮುಕ್ತಿಯಾದರೂ, "**ಹರಿವಾಯು ಗಳ** ತತ್ವಾಭಿಮಾನಿ ದೇವತೆಗಳಿಗೆ ಸಾಯುಜ್ಯವೆಂಬ ಮುಕುತಿ ನೋಡಯ್ಯಾ" (ಗುರು ಪುರಂದರ ವಿ ॥) ಸೃಷ್ಟಿ, ಸ್ಥಿತಿ, ಲಯ, ಮುಕ್ತಿ ಈ ನಾಲ್ಕೂ ಕಾಲ ಗಳಲ್ಲಿಯೂ, ರಮಾ ಬ್ರಹ್ಮ ವಾಯು ದ್ವಾರವೇ ಶ್ರೀಹರಿಯ ಎಲ್ಲ ವ್ಯಾಪಾರ. ಇದು ಚೆನ್ನಾಗಿ ಮನವರಿವುದು ಆದ್ಯ ಕರ್ತವ್ಯ. ಹೀಗಿರುವ ಕಾರಣ ಈ ಆಕ್ಷೇಪವು ಸರ್ವಥಾ ಕೂಡದು.

೮. **ಆಕ್ಷೇಪ :** ಹಾಗಾದರೆ ಶಾಂಡಿಲ್ಯ ತತ್ವದಲ್ಲಿ ॥ ತತ್ರ ವಿಷ್ಣೋ ಜೀವಾಂತರ್ಗತಸ್ನ ಜೀವಕರ್ಮಂ ಸ್ವಯಮೇವ ಕಾರಯತಿ ॥" ಇತ್ಯಾದಿ ಪ್ರಮಾಣಕ್ಕೆ ಏನು ಅರ್ಥ?

**ಉತ್ತರ :** ಈ ಆಕ್ಷೇಪವೇ ಇಲ್ಲಿ ಕೂಡುವದಿಲ್ಲ. ಜೀವನ ಸ್ವರೂ ಪೇಂದ್ರಿಯಗಳಿಂದ ಕರ್ಮವಾಗುವದಿಲ್ಲ. ಜೀವಾಂತಃ ಪ್ರೇರಕನಾದ ಹರಿಯು ಇರುವ ಬಗೆ ಮೊದಲಿಗೆ ತಿಳಿಯಲಿ ಬೇಕು. "ಜೀವನ ವದನದಲ್ಲಿ ವದನಾ, ನಯನದಲ್ಲಿ ನಯನಾ" ಎಂಬ ವಿಜಯರ ಉಕ್ತ್ಯನುಸಾರ ಜೀವಂತರ್ಯಾಮಿ ಯಾಗಿ ವಾಯು..। ಈ ವಾಯು ಈ ಕಲ್ಪದಲ್ಲಿ ಪ್ರವೇಶ ಮಾಡಿದ ನಂತರವೇ ಜೀವನ ಜ್ಞಾನೇಚ್ಛಾ ಪ್ರಯತ್ನಾದಿಗಳಲ್ಲಿ ವಾಯುವಿನ ಶಕ್ತಿದ್ವಾರಾ ತನ್ನ ಸ್ವರೂಪೇಂದ್ರಿಯಗಳಿಂದ ಪ್ರೇರಿಸಿ ಲಿಂಗದೇಹದಲ್ಲಿ ವಾಯುದ್ವಾರಾ ಇಚ್ಛಾ ತ್ರಯ ಶಕ್ತಿಪ್ರದನಾಗಿ ಕಾರಣರಾಗಿ ನಿಲ್ಲಿಸಿ-ಸ್ಥೂಲದಲ್ಲಿ ಕಾರ್ಯ ಮಾಡಿಸು ವನು. (ಜ್ಞಾನಕರ್ಮಂ ಸ್ವಯಮೇವ ಕರೋತಿ) ಎಂದೇ ಈ ಪ್ರಮಾಣಕ್ಕೆ ಅರ್ಥವೇ ಹೊರ್ತು, ಬೇರೆ ಅರ್ಥವೇ ಇಲ್ಲ.

೯. **ಆಕ್ಷೇಪ :** ಈ ಪದ್ಯದ ಕೊನೆ ೨ನೇ ಭಾಗದಲ್ಲಿ, ಸರಸಿಜಾಸನ ವಾಣಿ ಭಾರತಿ-ಭರತನಿಂದೊಡಗೂಡಿ ಲಿಂಗದಿ ಈ ಪದ್ಯಕ್ಕೆ ವೈಯರ್ಥ ಬರು

ತ್ತದೆ. ಲಿಂಗದೇಹಕ್ಕೆ ರಮಾದೇವಿ ಅಭಿಮಾನಿ, ಇಲ್ಲಿ ವಾಯ್ವಾದಿಗಳೇ ಇಲ್ಲ-ಇದಕ್ಕೇನು ಉತ್ತರ?

**ಉತ್ತರ**: ವಾಯುವಿಗೆ ಹರಿಯಾಜ್ಞೆಯಿಂದ ಸ್ವರೂಪಕರಣ ನಿಯಾಮಕತ್ವ ಉಂಟು, ತತ್ಪ್ರೇರಕ ಹರಿ. ಇದೆಲ್ಲ ಒಡಂಬಟ್ಟ ಮೇಲೆ ರಮಾ ಮುಖ್ಯಾಧಿಷ್ಠಾನವಾದ ಲಿಂಗದೇಹದಿ-ಭರತನು, ಬ್ರಹ್ಮ ಸರಸ್ವತಿ ಭಾರತಿಯರಿಂದೊಡಗೂಡಿ, ಅಮುಖ್ಯಾಭಿಮಾನಿಗಳು ಇದ್ದೇ ಇರುವರು, ಹರಿ ರಮಾದಿಗಳು ಎಲ್ಲ ದೇಹಕ್ಕೂ ಎಲ್ಲ ತತ್ವಗಳಿಗೂ, ಮುಖ್ಯ ವಾಯುದ್ವಾರಾ ಪ್ರೇರಕರು. ಇಲ್ಲಿಯೂ ಅಮುಖ್ಯಾಭಿಮಾನಿಗಳಾಗಿ ಲಿಂಗದಲ್ಲಿರುವರು.

೧೦. **ಆಕ್ಷೇಪ**: ಅನಾದಿ ಲಿಂಗದಲ್ಲಿಲ್ಲ-ಸಾದಿಲಿಂಗ=ಅಣುಲಿಂಗದಲ್ಲಿ ಈ ವಾಯ್ವಾದಿ ನಾಲ್ಕು ಜನರ ಪ್ರವೇಶವೆಂದು ಹೇಳಿದ್ದಾರೆ. ಈ ಅನಾದಿ ಲಿಂಗ ಅಣು ಲಿಂಗವೇನು ?

**ಉತ್ತರ**: ಲಿಂಗದೇಹಕ್ಕೆ ಅನಾದಿ ಅನಿತ್ಯತ್ವ ಹೇಳಿದ್ದಾರೆ ಹೊರ್ತಾಗಿ ಸಾದಿಲಿಂಗ ಅಣುಲಿಂಗವೆಂದು ಎಲ್ಲಿಯೂ ಯಾವ ಗ್ರಂಥಗಳಲ್ಲಿಯೂ ಹೇಳಿಲ್ಲ. ಎಲ್ಲಿ ಹೇಳಿದೆಂಬುದು ಪ್ರಮಾಣಗಳೂ ಹೇಳುವದಿಲ್ಲ. ಪ್ರಕಾಶ ಸಂಹಿತೆ ಇತ್ಯಾದಿ ಗ್ರಂಥಗಳಂತೆ ಶ್ರೀ ವಿಜಯದಾಸರ ಸೃಷ್ಠಿ ಪ್ರಕರಣದಲ್ಲಿ ಲಿಂಗ ಶರೀರ ಉತ್ಪತ್ತಿ ತದ್ಬಿಂಮಗಳು, ಲಿಂಗದಿಂದ ಅವ್ಯಕ್ತ ಶರೀರ (ಇದು ಲಿಂಗದಲ್ಲಿಯೇ ಗಣನಾ) ಅವ್ಯಕ್ತದಿಂದ ಅನಿರುದ್ಧ ಶರೀರ, ಅನಿರುದ್ಧದಿಂದ ಪ್ರಾಕೃತ ಶರೀರ (ಈ ಪ್ರಾಕೃತ ಶರೀರ ಅನಿರುದ್ಧದಲ್ಲೆ ಗಣನಾ) ಅನಿರುದ್ಧ ಶರೀರದಿಂದ ಸ್ಥೂಲ ಶರೀರ=ಹೀಗೆ ದೇಹಗಳ ಸೃಷ್ಟಿಕ್ರಮ. ಇವರಲ್ಲಿ ಬ್ರಹ್ಮದೇವರಿಗೆ ಒಟ್ಟಿಗೆ ೫೬ ದೇಹಗಳು ಎಂದು ಎಲ್ಲ ವಿವರ ಸೂಕ್ಷ್ಮವಾಗಿ ಹೇಳಿದ್ದಾರೆ. ಇದರನ್ನರಿಯದೇ ತತ್ವಾಭಿಮಾನಿ ವಾಯುದೇವರ ಸಾಮರ್ಥ್ಯ ತಿಳಿಯದೇ ಮನಬಂದ ತೆರ ಆಕ್ಷೇಪಗಳು ಕೂಡುವದಿಲ್ಲ. ಶ್ರೀ ಜಗನ್ನಾಥದಾಸರು ಶ್ರೀ ವಿಜಯರ ವಾಕ್ಯಕ್ಕೆ ವಿರೋಧವಿರುವ ತಾಮಸಾದಿ ಪ್ರಮಾಣಗಳು ಗ್ರಾಹ್ಯವಿಲ್ಲ. ಕಾರಣ ಆಗ್ರಹದಿಂದ ವಾಯುದೇವರಿಗೆ ಸ್ವರೂಪವ್ಯಾಪ್ತಿ ಇಲ್ಲವೆಂದು ಮನ ಬಂದಂತೆ ಆಕ್ಷೇಪ ಮಾಡಿದರೆ ಅವರ ಆಕ್ಷೇಪಗಳು ನಿಂದ್ಯವೇ ಸರಿ. ಒಂದು ಸುಳ್ಳು ಕೇಸಿನಲ್ಲಿ ಒಬ್ಬ ವಕೀಲನು ತನ್ನ ಸುಳ್ಳು ಪಕ್ಷವನ್ನು ಸಾಧಿಸಬೇಕಾಗಿ ಅನೇಕ ಹರಟೆಗಳಿಂದ ತುಂಬಿ ಕಾಯದೇ ಅರ್ಥವನ್ನು ವಿಪರೀತವಾಗಿ ತಿರುಗಿಸಿ

ದರೆ ನ್ಯಾಯಮೂರ್ತಿ ಕೇಳುವನೆ? ಆ ಮಾತುಗಳಿಗೆ ಯಾವ ಪ್ರೋದ್ಬಲ ವಿಲ್ಲೆಂದು ಹೊಡೆದು ಹಾಕಿ ನ್ಯಾಯತೀರ್ಪು ಮಾಡುವನು. ಕಾರಣ ಅಪ ರೋಕ್ಷ ಜ್ಞಾನಿಗಳಾದ ದಾಸಾರ್ಯರ ವಾಕ್ಯಗಳಿಗೆ ಹಿಂದುಮುಂದು ಅರಿ ಯದೇ ಅಪಾರ್ಥಗಳನ್ನು ಮಾಡಿದರೆ, ಧರ್ಮ ರಕ್ಷಕನಾದ ಯಮಧರ್ಮನು ಸುಮ್ಮನಿರುವನೆ?

ಕಾರಣ ಸಜ್ಜನರು ವಾಯು ಮಹಾತ್ಮೆ ಚನ್ನಾಗಿ ಅರಿತು ವಾಯು ದೇವರ ವ್ಯಾಪ್ತಿ ಸ್ವರೂಪದಲ್ಲಿ ಉಂಟೆಂದು ನಿತ್ಯ ದಾರಢ್ಯದಿಂದ ತಿಳಿದು ಧೇನಿ ಸುವದೇ ಪರಮ ವಿಷ್ಣು ಪ್ರೀತಿಕರ ವೈಷ್ಣವ ಧರ್ಮವೆಂದು ಕರಜೋಡಿಸಿ ಎರಗುವೆ.

ಅವತರಣಿಕಾ: ಜೀವನು ಸ್ವರೂಪದಲ್ಲಿ ಯಾವ ಆಕೃತಿಯುಳ್ಳವನೋ ಅದರಂತೆ ಜೀವಕ್ಕೆ ಅನಾದಿ ಲಿಂಗವು ಸಾವಕಾಶದಿಂದ ಇರುವದು. ಈ ಲಿಂಗ ದೇಹದ ಸ್ವರೂಪ ಅಲ್ಲಿರುವ ಅಭಿಮಾನಿದೇವತೆ ಇತ್ಯಾದಿ ಈ ಪದ್ಯದಿಂದ ಹೇಳುತ್ತಾರೆ.

ಮೂಲ:

**ಜೀವನಕೆ ತುಷದಂತೆ ಲಿಂಗವು ।**
**ಸಾವಕಾಶದಿ ಪೊಂದಿಸುತ್ತಲು ।**
**ಪ್ರಾವರಣ ರೂಪದಲಿ ಇಪ್ಪುದು ಭಗವದಿಚ್ಛೆಯಲಿ ॥**
**ಕೇವಲ ಜಡಪ್ರಕೃತಿಯಿದಕಧಿ ।**
**ದೇವತೆಯು ಮಹಲಕುಮಿಯೆನಿಪಳು ।**
**ಆ ವಿರಜೆಯ ಸ್ನಾನ ಪರಿಯಂತರದಿ ಹತ್ತಿಹದು ॥ ೧೩ ॥**

**ಪದ್ಯಾರ್ಥ:** ಜೀವನಕೆ=ಜೀವನ ಸ್ವರೂಪ ದೇಹಕ್ಕೆ, ಲಿಂಗವು= ಲಿಂಗದೇಹವು, ಜೀವನ ಆಕೃತಿ ಸ್ವರೂಪದಂತೆ, ಅಕ್ಕಿಗೆ ಮೇಲೆ ತುಷದಂತೆ= ಹೊಟ್ಟಿನಂತೆ, ಸಾವಕಾಶದಿ=ಜೀವಕ್ಕೆ ಹತ್ತದಂತೆ, ಜೀವಕ್ಕೂ ಲಿಂಗ ದೇಹಕ್ಕೂ ಗಜ್ಜುಗದಲ್ಲಿರುವ ಬೀಜಕ್ಕೂ ಗೊರಟಗೂ ಹೇಗೆ ಸಮ್ಮಂಧವಿಲ್ಲದೇ ಇರುವುದೋ ಅದರಂತೆ ಸುತ್ತಲೂ ಸುತ್ತುಗಟ್ಟಿ, ಪ್ರಾವರಣ ರೂಪದಲಿ ಇಪ್ಪುದು=ತೇಜೋ ರೂಪವಾಗಿ ಮೂರು ಆವರಣದಿಂದ ಸುತ್ತಲೂ ಇರು ವದು. ಈ ಲಿಂಗದೇಹವು, ಇದು ಕೇವಲ ಭಗವದಿಚ್ಛೆಯಲ್ಲಿ, ಕೇವಲ ಭಗ

ವಂತನ ಇಚ್ಛಾದಿಂದ ಅನಾದಿಯಿಂದ ಇರುವದು. ಸೃಷ್ಟಿ ಪ್ರಾರಂಭಕಾಲದಿ ನಾರಾಯಣೋದ್ಭೂತ ವಾಸುದೇವ ನಸ್ವೇದ=ನ್ವೈ ಬೆವರಿನಿಂದ ಉಬ್ಬಿ ಚಿದಾನಂದ ಸ್ವರೂಪ ಜೀವನ ಸ್ವರೂಪ ದೇಹಕ್ಕೂ ಜಡನಾದ ಲಿಂಗದೇಹಕ್ಕೂ ಶ್ರೀಹರಿಯು ಇಚ್ಛಾದಿಂದ ಸಂಬಂಧವಾಗುವದು. ಇದು ಕೇವಲ ಜಡವು. ಇದಕ್ಕೆ ಮೂಲ ಜಡಪ್ರಕೃತಿಗೆ ಅಭಿಮಾನಿಯಾದ, ಅಧಿದೇವತೆಯು, ಮಹಾಲಕ್ಷ್ಮೀದೇವಿಯು, ಆ ವಿರಜೆಯ ಸ್ನಾನ ಪರಿಯಂತರದಿ ಹತ್ತಿಹದು.=ಇದು ಜೀವನು ಸಾಧನಮಾಡಿ ಮುಕ್ತಿಗೆ ಹೋಗಲು, ಬ್ರಹ್ಮದೇವರ ಸಂಗಡ ವಿರಜಾನದಿ ಸ್ನಾನಮಾಡಿಸಿ ಲಿಂಗವನ್ನು ಕಳೆಯುವನು. ವಿರಜಾಸ್ನಾನವರೆಗೂ ಇದರ ಬಿಡುಗಡೆ ಇಲ್ಲ. ಇಲ್ಲಿ ಅಧಿದೇವತೆ ಲಕುಮಿ ಮುಖ್ಯವಾದರೂ, ಅಮುಖ್ಯರಾದ ಬ್ರಹ್ಮ, ವಾಯು, ವಾಣಿ, ಭಾರತಿ ನಾಲ್ವರೂ ಇದ್ದು ೧೬ ಕಲೆಗಳ ಲಿಂಗ-ದೇಹದ ಕಾರ್ಯ ಮಾಡಿಸುವರು. ಏಕೆಂದರೆ ಇವರು ನಾಲ್ವರಿಗೆ ಲಿಂಗದೇಹದ ಕಾರ್ಯವಿಲ್ಲ. ತತ್ತದಾಕಾರ ಸದೃಶೌರ್ಲಿಂಗದೇಹರನಾದಿಭಿಃ । ಕಂಚು ಕೈರಿವ ಸಂಛನ್ನಾ ತತ್ತ್ ವರ್ಣೈ ಪ್ರಥಕ್ ಪ್ರಥಗಿತಿ ವಿಷ್ಣುರಹಸ್ಯೆ ॥ ಜಡಾಖ್ಯ ಪ್ರಕೃತಿ ಸರ್ವಜೀವಾನಾಂ ಲಿಂಗರೂಪಾಣೀತಿ ಪ್ರಕಾಶ ಸಂಹಿತೆ ಪ್ರಮಾಣಗಳು.

**ದ್ರೌಪದೀಶಪತಿ ವಿಠಲರು :** ಜೀವನಕೆ ತುಷದಂತೆ ಲಿಂಗವು ಆದರ್ಶ ಪಟದಂತೆ ಲಿಂಗವು ॥

**ಭಾವಸೂಚನ :** ಜೀವನ ಇತಿ ॥ ತುಷವು=ತವುಡು ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿ

"ಜೀವನಿಗೆ" ಇತಿ ॥ "ಲಿಂಗಂ ಸ್ವರೂಪಸದೃಶಂ ಮುಕ್ತಾವಲ್ಯಾಂ ಉದಾಹೃತಮ್ ॥" "ತತ್ತದಾಕಾರ ಸದೃಶೈಃ ಲಿಂಗದೇಹೈಃ ಅನಾದಿಭಿಃ ॥ ಕಂಚುತ್ಯೈಃ ಇವ ಸಂಛನ್ನಾಃ ತತ್ತದ್ವರ್ಣೈಃ ಅನಾದಿಭಿಃ ॥" ಇತಿ ವಿಷ್ಣುರಹಸ್ಯೇ ॥ "ತುಷವಲ್ಲಿಂಗ ದೇಹೇತಿ ॥ ಪ್ರಕಾಶ ಸಂಹಿತಾಯಾಂ ಚ ॥ ಪೊಂದಿ= ಹೊಂದಿ, ಪ್ರಕೃತಿ ಪದಂ ಪೂರ್ವ ಮನ್ವೇತಿ ॥ ೧೩ ॥

## ಕನ್ನಡಾರ್ಥ

"ಲಿಂಗ ಶರೀರವು-ಜೀವರ ಸ್ವರೂಪ ದೇಹಕ್ಕೆ ಸದೃಶವಾಗಿರುವದು" ಎಂದು ಮುಕ್ತಾವಲಿ ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿರುತ್ತದೆ. "ಆ ಆ ಸ್ವರೂಪಾ

ಕಾರಗಳಿಗೆ ಸದೃಶವಾದ ಅನಾದಿಗಳಾದ ಲಿಂಗದೇಹಗಳಿಂದ ಅನಾದಿಗಳಿಂದ ಆ ಆ ವರ್ಣ(ಬಣ್ಣ) ಗಳ ಕಂಚುಕ (ವಸ್ತ್ರ)ಗಳಿಂದಲೋ ಎಂಬಂತಿರುವ ಲಿಂಗ ದೇಹಗಳಿಂದ ಜೀವರು ಆಚ್ಛಾದಿತರಾಗಿರುತ್ತಾರೆ" ಎಂದು ವಿಷ್ಣು ರಹಸ್ಯದಲ್ಲಿ ಹೇಳಲಾಗಿರುತ್ತದೆ. "ಲಿಂಗ ದೇಹವು-ತುಷ "ಭತ್ತದ ಮೇಲಿನ ಕವಚ ತ್ವಚ" ದಂತೆ" ಎಂದು ಪ್ರಕಾಶ ಸಂಹಿತೆಯಲ್ಲಿಯೂ ಹೇಳಲಾಗಿರುತ್ತದೆ. ಪ್ರಕೃತಿ ಎಂಬುದನ್ನು ಹಿಂದಿನ ಜಡಪದಕ್ಕೆ ಅನ್ವಯಿಸಿ "ಪ್ರಕೃತಿಯು ಕೇವಲ ಜಡ; ಇದಕ್ಕಧಿ ದೇವತೆಯು ಮಹಾ ಲಕುಮಿಯೆನಿಪಳು" ಎಂಬುದಾಗಿ ವಾಕ್ಯವನ್ನು ಪೂರ್ತಿಗೊಳಿಸಬೇಕು || ೧೩ ||

**ಅವತರಣಿಕಾ :** ಲಿಂಗಶರೀರ ಕಲೆಗಳನ್ನು ಹೇಳುತ್ತಾ, ಲಿಂಗದೇಹ ಅನಿರುದ್ಧ ದೇಹದ ಮಧ್ಯ ದಲ್ಲಿ ಇರುವ ಜೀವಚ್ಛಾದಿಕ ಪರಮಾಚ್ಛಾದಿಕ ಆವರಣ ಲಕ್ಷಣಗಳನ್ನು ಈ ಪದ್ಯದಿಂದ ವಿವರಿಸುತ್ತಾರೆ.

**ಮೂಲ :**

**ಆರಧಿಕ ದಶಕಳೆಗಳುಳ್ಳ ಶ ।**
**ರೀರ ಅನಿರುದ್ಧಗಳ ಮಧ್ಯದಿ ।**
**ಸೇರಿ ಇಪ್ಪವು ಜೀವಪರಮಾಚ್ಛಾದಿಕ ದ್ವಯವು ॥**
**ಬಾರದಂದದಿ ದಾನವರನತಿ ।**
**ದೂರಗೈಸುತ ಶ್ರೀ ಜನಾರ್ದನ ।**
**ಮೂರು ಗುಣದೊಳಗಿಪ್ಪನೆಂದಿಗು ತ್ರಿವೃತು (ತರ್ು)**
**ಯೆಂದೆನಿಸಿ ॥ ೧೪ ॥**

**ಪದ್ಯಾರ್ಥ :** ಆರಧಿಕ ದಶಕಳೆಗಳುಳ್ಳ=೬+೧೦ ಹತ್ತಕ್ಕೆ ಆರು ಹೆಚ್ಚಾದ=೧೬ ಕಳೆಗಳುಳ್ಳ ಶರೀರವೆಂದರೆ ಲಿಂಗಶರೀರ ಸತ್ವ ರಜೋ ತಮೋ ಪರಿಚ್ಛೇದವೆಂದು ಮೂರು ಆವರಣ.

**ಸುಳಾದಿ :** "ಸತ್ವಾದಿ ಪರಿಚ್ಛೇದವುಳ್ಳ ಹತ್ತಿಕೊಂಡಿಪ್ಪದು ತ್ರಿವಿಧರಿಗೆ ಉತ್ತಮ ಜ್ಞಾನಿಗಳಿಗೆ ಮೊದಲು ಪರಿಚ್ಛೇದ-ಸತ್ವಗುಣದ ಅವರ್ಕವೆನ್ನಿ। ನಿತ್ಯ ಸಂಸಾರಿಗೆ ರಾಜಸ ಗುಣವಹದು। ಮತ್ತೆ ತಮೋ ಯೋಗ್ಯರಿಗೆ ತಮೋ ಪರಿಚ್ಛೇದ। ಪ್ರತ್ಯೇಕವಾಗಿಪ್ಪದು ಒಂದಕ್ಕೊಂದು ಬಿಡದೆ। ಮತ್ತು ಮುಂದೆ

ನುಟ್ಟ ತಾಳದಲ್ಲಿ-"ಪ್ರಥಮ ಪರಿಚ್ಛೇದದಲಿ ಮನಸು ಉಂಟು । ದ್ವಿತೀಯ ಪರಿಚ್ಛೇದದಲಿ ದಶೇಂದ್ರಿಯಗಳು । ತೃತೀಯ ಪರಿಚ್ಛೇದದಲಿ ಶಬ್ದಾದಿಗಳು । ಚ್ಯುತವಾಗದೆ ಇಪ್ಪವು 'ಕಾರಣ ರೂಪದಲ್ಲಿ । ಪ್ರತಿಪ್ರತಿ ಕಲ್ಪಕ್ಕೆ ಪೂರ್ವಿಗೆ ಪರಿನುಳ ವ್ಯಾ । ಪುತವಾಗಿದ್ದಂತೆ ಪೊಂದಿಕೊಂಡಿಪ್ಪವು । ಕೃತಿ ರಮಣ ನಮ್ಮ **ವಿಜಯವಿಠ್ಠಲ ತಾನೆ** । ಸತತ ಜೀವರ ಕೈಯ್ಯಾ ಚೇಷ್ಟೆಯ ಮಾಡಿಸುವ ॥ ೨ ॥ ಸೃಷ್ಟಿ ಪ್ರಕರಣ ಸುಳಾದಿ ೧೪೩-೧ ಮನಸ್ಸು, ೧೦ ದಶೇಂದ್ರಿಯ, ೫ ಶಬ್ದಾದಿ ತನ್ಮಾತ್ರಾಗಳು ಹೀಗೆ ೧೬ ಕಳೆಗಳುಳ್ಳ ಲಿಂಗಶರೀರ ಮತ್ತು ಅನಿರುದ್ಧ ಶರೀರ ಮಧ್ಯದಿ=ಲಿಂಗ ಅನಿರುದ್ಧ ಶರೀರಗಳ ನಡುವೆ ಸೇರಿ ಇಪ್ಪವು ಜೀವ ಪರಮಾಚ್ಛಾದಿಕದ್ವಯವು=ಲಿಂಗಶರೀರದ ಮೇಲೆ ಅನಿರುದ್ಧ ಶರೀರದವರೆಗೆ "ಜೀವಾಚ್ಛಾದಿಕಾ ಪರಮಾಚ್ಛಾದಿಕಾ ಎಂಬ ಎರಡು ಪಟಲ ಆವರಣಗಳು ಇರುವವು. ಇವೆ ಅಜ್ಞಾನ ಮೋಹಾದಿಗಳಿಗೆ ಕಾರಣ. ಇವನ್ನು ಬಾರದಂದದಿ ದಾನವರನು ಅತಿ ದೂರಗೈಸುತ ಜನಾರ್ದನನು=ಲಿಂಗ ಶರೀರಕ್ಕೆ ದಾನವ ದೈತ್ಯರ ಉಪಟಳ ತಾಕದಂತೆ ಶ್ರೀ ಜನಾರ್ದನ ರೂಪಿ ಹರಿಯು, ಶ್ರೀ ಭೂದುರ್ಗಾ ಅಂತರ್ಯಾಮಿಯಾಗಿ, ಮೂರು ಗುಣದೊಳಗೆ= ಸತ್ವ ರಜೋ ತಮೋಗುಣಗಳಲ್ಲಿದ್ದು ತ್ರಿವೃತುಯೆಂದೆನಿಸಿ=ಮೂರು ಗುಣದಲ್ಲಿದ್ದು ಕಾರ್ಯ ನಡೆಸುವನೆಂದು ಪದ್ಯಾಭಿಪ್ರಾಯ.

**ವಿಶೇಷ ಸೂಚನೆ :** ಜೀವಾಚ್ಛಾದಿಕ ಪರಮಾಚ್ಛಾದಿಕವು ಎಲ್ಲಿವೆ? ಕೆಲವರು ಜೀವನ ಸ್ವರೂಪಕ್ಕೆ ಹತ್ತಿದವು ಎಂದೂ, ಕೆಲವರು ಲಿಂಗದ ಮೇಲೆ ಇರುವುವು ಎಂದೂ ಬಹುಕಾಲದಿಂದ ಪಂಡಿತರುಗಳಲ್ಲಿ ವಿವಾದವು ನಡೆದಿದೆ.

ಈ ಶಾಸ್ತ್ರ ಮರ್ಯಾದೆ ಪ್ರಮೇಯವನ್ನು **ಶ್ರೀ ವಿಜಯದಾಸರು** ವಿಸ್ತಾರವಾಗಿ "ಜಡಕೇವಲ" ಎಂಬ ಸುಳಾದಿ ಸೃಷ್ಟಿ ಪ್ರ॥, ೨೯, ಪುಟ ೧೪೭, ತ್ರಿವಿಡಿ ತಾಳದಲ್ಲಿ,

"ಬಿಂದು ಬಿಂದುಗಳಲ್ಪ ಪರಮಾಣು ಸಮೇತ । ಒಂದೊಂದು ಸೂಕ್ಷ್ಮ ತತ್ವಂಗಳಿಂದಲಿ । ಮುಂದೆ ಕಾರ್ಯಗಳೈಯ್ಯಾ ಅನಿರುದ್ಧ ಶರೀರ । ಪೊಂದಿಕೊಂಡಿಪ್ಪದು ಲಿಂಗದಂತೆ । ಹಿಂದಣಾಗಮ ಕೇಳಿ ಪ್ರಾಂತ್ಯಭಾಗಗೆ ಸಂ । ಬಂಧವಾಗಿಪ್ಪವು ಪ್ರಕೃತಿ ಎರಡು (ಅನಿರುದ್ಧ ಶರೀರ ಉತ್ಪನ್ನವಾಗದಕ್ಕಿಂತಲು ಮೊದಲೆ ಪ್ರಾಂತ್ಯಭಾಗ-ಲಿಂಗದಮೇಲೆ ಅನಿರುದ್ಧದ ಒಳಗೆ ಕುಂದದೆ ಪೆಸ

ರುಂಟು **ಜೀವಪರಮಾಚ್ಛಾದಿಕಾ** । ನೆಂದೆಂಬ ನಾಮುಗಳು **ಜಡತವು ವರ್ನ** । ಸಂದಿದೆ ಲಿಂಗ ಅನಿರುದ್ಧ ಮಧ್ಯ । **ಬಂಧಕಾ ದೃಷ್ಟಜನ ಅಲ್ಲಿ ಇಲ್ಲ** । ಇಂದಿರೆ ಅಜವಾಯು ಇವರ ಹೆಂಡರು ಆ । ನಂದಾಭಿಮಾನಿಗಳು ಲಕುಮಿ ನಿತ್ಯ । ಸಂದೇಹಗೊಳಸಲ್ಲ ಅನಿರುದ್ಧ ದೇಹದಲಿ । ಬಂದು ಪ್ರವೇಶ ನಾದರು ತಾತ್ವರು । ವಂಧದಲ್ಲಿಯಿರೆ **ಇಲ್ಲಿ ದುಷ್ಟ । ಮುಂದಿಗಳಿಬ್ಬರು ಸ್ತ್ರೀ ವಾಚಕರಯ್ಯಾ** । ಅಂದಕೆ ಪಾರಭಿಮಾನರಾಗಿ । ಸುಂದರ ಗುಣ ವುಳ್ಳ ವಾಣಿ ಭಾರತಿ ಗಿರಿಯ । ನಂದನೆ ಶಚಿ–ಇವಗೆ ಪ್ರೇರಕರೊ । ಹಿಂದಿನ ಪರಮೇಷ್ಠಿ ಕಲ್ಪದಲಿ ಆ ಗುಣ । ದಿಂದ ಈರ್ವರು ಸಾಧನ ಮಾಡಿ ಬಂದು। ದ್ವಂದ್ವಾಚ್ಛಾದಿಕದಲ್ಲಿ ಸ್ತ್ರೀಯರು । ನಿಂದು ಜೀವರಿಗೆ ಪ್ರತಿಕೂಲರವರು ॥ ಎಂದು ಪೇಳುತ್ತ ಮುಂದೆ, ಅಟ್ಟತಾಳದಲ್ಲಿ–"ಇದು ಮೂಲ ಕಾರಣ ಅವಿದ್ಯ ಧರ್ಮವು । ಇದು ಕಲಿ ಇರಲಿಕ್ಕೆ ಆವಾಸ ಸ್ಥಾನವಾಗಿದೆ । ಇದು ಮಹಾ ಪ್ರಬಲ ಸೂತಕ ಪ್ರಾರಬ್ಧ । ಒದಗಿ ಬಂದಾಗಲು ಕಲಿಯ ಒಡಗೂಡಿ ಅಧಿಕ ಅಧಿಕವಾಗಿ ವ್ಯಥೆ ಬಡಿಸುವುದು । ಮುದದಿಂದ ಬ್ರಹ್ಮಾಂಡ ಬಾಹಿರದಲ್ಲಿ ಇದ್ದ । **ತ್ರಿದಶರಲ್ಲಿ ಇವರ ಕಾರ್ಯವೆ ಕೊಳ್ಳದು** । ಪದುಮ ಕಲ್ಪದಲ್ಲಿ ಪದುಮಜನಿಂದ ಪುಟ್ಟದ ಜೀವರಾಶಿಗೆ ವ್ಯಥೆ ಕಾರಣವೆನ್ನಿ । ಇದಕ್ಕಿಂತ ಮೇಲವತಾರ ಧರ್ಮದಲಿ । ತದುಪರಿ ಮನುಜರಿಗೆಂತು ಪೇಳುವದೇನು । ವಿಧಿ ಪಿತ ವಿಜಯ ವಿಠಲನ ಲೀಲೆ । ಅದುಭುತವಾಗಿದೆ–ತುತಿಸಬಲ್ಲವರಾರು ॥ ೧೪ ॥

ಮತ್ತು **ಗುರು ಪುರಂದರ ವಿಠಲರ ಸುಳಾದಿ** ತಾರತಮ್ಯ ಸುಳಾದಿ **ಪುಟ** ೧೨೨, ಮನುಜೋತ್ತಮರಿಂದ ಮೊದಲಾಗಿ । ತೃಣ ಜೀವರಿಂದ ಕಡೆ ಯಾಗಿ । ಜೀವಾಚ್ಛಾದಿಕ ಪರಮಾಚ್ಛಾದಿಕವೆಂದು ಬೇರಿಪ್ಪದು । ಜೀವಾ ಚ್ಛಾದಿಕವನು ಸಂಹರಿಸೆ । ಪರಮಾಚ್ಛಾದಿಕ ಕಡೆಗೊತ್ತಿ । ಮುಕ್ತರ ಮಾಡುವೆ ಅನಾದಿ ಕಾಲದಿ । ಮುಕುತಿದಾಯಕ ಗುರು ಪುರಂದರ ವಿಠಲ ಆಲೋಕ ದಲ್ಲಿಪ್ಪದು ॥ ೩ ॥

ಇಂಥ ಪ್ರತಿಬಂಧಕರಾದ ಜೀವದ್ವಯರನ್ನು ನಿಗ್ರಹಿಸೆಂದು ಇಂದಿರೆಯ ಪ್ರಾರ್ಥನೆಯಂತೆ ಶ್ರೀಹರಿಯು ತೊಳಗಿಸುವನು. ಮುಂದೆ ಪಚೆಯಲ್ಲಿ :

"ಜೀವಕೆ ಪ್ರತಿಬಂಧವಾಗಿದ್ದ ಜನರಿವರು ।
ದೇವೇಶ ವಿಜಯ ವಿಠ್ಠಲನಿಂದ ತೊಲಗುವರು ॥

ಎಂದು ವಿಸ್ತರಿಸಿದ್ದಾರೆ. ಅಲ್ಲದೇ ಮುಕ್ತಿಯಲ್ಲಿ ಜೀವನ ಮೇಲಿದ್ದ ಹರಿಯ ಇಚ್ಛಾವರ್ಕವಲ್ಲವೆಂದು ಶಾಸ್ತ್ರ ಸಮ್ಮತ ಇಚ್ಛಾವರ್ಕ ವಿವೇಚನೆ ಮುಂದೆ ಪ್ರಸಂಗಾನುಕೂಲ ಮಾಡುವೆವು. "ರಕ್ಕಸಾರಿಯ ಇಚ್ಛಾವರ್ಕ ವೊಂದುಂಟು ಇವರಿಗೆ" ಮುಕ್ತರ ಸುಳಾದಿ.

**ದ್ರಾಪದೀಶಪತಿ ವಿಠಲರು :** ಆರಧಿಕ ದಶಕಳೆ ॥ ಷೋಡಶ ಕಳಾತ್ಮಕ ಲಿಂಗ ಶರೀರದ ಮ್ಯಾಲೆ, ಅತಿಶಯ ಅನಿರುದ್ಧ ಶರೀರದವೊಳಗೆ ಪರಿಚ್ಛೇದ ದ್ವಯವಿದ್ದರೂ ಇಂದಿರೆ ಪ್ರೇರಕಳು, ಅನಿರುದ್ಧ ಶರೀರದಲ್ಲಿ ಇವರ ಕಾರ್ಯ.

**ಭಾವಸೂಚನ :** ಆರೇತಿ ॥ ಲಿಂಗ ಶರೀರತ್ರಿ ಆವರಣದಿತಿ । ತ್ರಿಷು ವರ್ತತ ಇತಿ ॥ ೧೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಆರಧಿಕ" ಇತಿ ॥ ಜೀವಗುಣಾಚ್ಛಾದಿಕಾ ಜೀವಾನಾಂ ಹರ್ಯಪರೋಕ್ಷ ವಿಘಟಿಕಾ ಪರಮಾಚ್ಛಾದಿಕಾ ॥ ದಶಮಸ್ಕಂಧ ತಾತ್ಪರ್ಯೇ ಶ್ರುತಿಗೀತಾ ಪ್ರಬೋಧನೇ। ಋಗ್ಭಾಷ್ಯ ಗೀತಾ ತಾತ್ಪರ್ಯಾ ಯಾದುಪತ್ಯ ಸುಧಾಸು ಚ ॥ ಸತ್ತತ್ವ ರತ್ನಮಾಲಾಯಾಂ ತಟ್ಟೀಕಾಯಾಂ ಯಾ ಚ ವಿಚಾರಿತಮ್॥ ಪ್ರಮೇಯಮೇತತ್ ಘಟನಾಕೃತಾಹತಿ ಸುಘಟ್ಟನೇ ॥ ಪ್ರಮೇಯ ಮುಕ್ತಾವಲ್ಯಾಂ ತು ಪ್ರಮಾಣೀಕೃತ್ಯ ಗಾರುಡಂ "ನಿತ್ಯ ಸಂಸಾರಿಣೀಂ ಈಶ ಅಪಪಾಸಾಯಾನ್ಯಾಂ ಹನ ಪ್ರಭೋ ॥ ವಿಜ್ಞಾಪನೇ ತೀಂ ದಿರೋಕ್ತೇಃ ಸುಖ ದುಃಖ ಪ್ರದಾನತಃ ॥ ಜೀವದ್ವಯುಂ ಚೈತದೇಹೇ ಸ್ಥಿತಂ ವ್ಯಾಜ್‌ಪೂರ್ವಕೋ ಮಹಾನ್ ॥ ಘಟ್ಯ ಧಾತುರತಿ ದ್ವೇಷಿತಾಂ ಅಸ್ಯಾ ವಕ್ತಿ ತದ್ಗತಿಮ್ ॥" ಇತಿ ಪ್ರಕಾಶಕಾ ರತ್ನಮಾಲಾಯಾಂ ಸುವಿಚಾರಿತಮ್ ॥ ೧೪ ॥

**ಕನ್ನಡಾರ್ಥ**

ಜೀವಗುಣಗಳನ್ನು ಜೀವನಿಗೆ ತಿಳಿಯದಂತೆ (ಮಾಡುವ) ಆವರಿಸಿರುವದು "ಜೀವಾಚ್ಛಾದಿಕಾ" ಎಂದು ಹೇಳಿಸಿಕೊಳ್ಳುತ್ತದೆ. ಜೀವರಿಗೆ ಪರಮಾತ್ಮನ ಅಪರೋಕ್ಷ ಜ್ಞಾನವಾಗದಂತೆ ಪ್ರತಿಬಂಧಕವಾಗಿರುವದು. "ಪರ

ಮಾಚ್ಛಾದಕ" ಎಂದು ಎನಿಸುತ್ತದೆ. ಈ ವಿಷಯವು ಶ್ರುತಿಗೀತಾ ವ್ಯಾಖ್ಯಾನ ಸಂದರ್ಭದಲ್ಲಿ ಭಾಗವತ ದಶಮಸ್ಕಂಧ ತಾತ್ಪರ್ಯ ವ್ಯಾಖ್ಯಾನಗಳಲ್ಲಿಯೂ, ಗೀತಾ ತಾತ್ಪರ್ಯ, ಋಗ್ಭಾಷ್ಯ, ಸುಧಾ ಯಾದುಪತ್ಯ ಮುಂತಾದ ಮೂಲ ಟೀಕಾ ಟಿಪ್ಪಣಿಗಳಲ್ಲಿ ವಿಶದವಾಗಿ ನಿರೂಪಿತವಾಗಿರುತ್ತದೆ. ಸತ್ತತ್ವ ರತ್ನ ಮಾಲಾ ಹಾಗೂ ಅದರ ಟೀಕಾದಲ್ಲಿಯೂ ನಿರೂಪಿಸಲಾಗಿರುತ್ತದೆ. ಈ ಪ್ರಮೇಯವು "ವ್ಯಾಘಟ್ಟ ಮೋಕ್ಷಪದವೀಂ" ಎಂಬ ಶ್ಲೋಕ ವ್ಯಾಖ್ಯಾ ಸಂದರ್ಭದಲ್ಲಿ ಬಂದಿರುತ್ತದೆ. ಪ್ರಮೇಯ ಮುಕ್ತಾವಲಿಯಲ್ಲಿ ಗರುಡ ಪುರಾಣ ವಚನದ ಆಧಾರದಿಂದ ಇದನ್ನು ಸಮರ್ಥಿಸಿರುತ್ತದೆ. "ನಿತ್ಯ ಸಂಸಾರ ವನ್ನು ತಂದು ಒಡ್ಡುವ ಪ್ರಕೃತಿ ಬಂಧಗಳಲ್ಲಿ ಒಂದನ್ನು ಅಪಸರಣಮಾಡು. ಅಂದರೆ ತೆಗೆದು ಹಾಕು. ಇನ್ನೊಂದನ್ನು ಸಂಹಾರಮಾಡು. ಅಂದರೆ **ಜೀವಾಚ್ಛಾದಿಕೆಯಾದುದನ್ನು ಸಂಹರಿಸು : ಪರಮಾಚ್ಛಾದಕವಾದು ದನ್ನು ಅಪಸರಣ ಮಾಡಬೇಕು** ಎಂದು ಅರ್ಥ ಹೇಳಿರುತ್ತಾರೆ. "ಘಟ* ಈ ಧಾತುವು ಅತಿ ದ್ವೇಷವನ್ನು ತಿಳಿಸುವದರಿಂದ ಅನೇಕ ಸುಖದುಃಖಗಳಿಗೆ ಕಾರಣವಾಗಿ ಇರುವ ಎರಡು ದುಷ್ಟ ಪ್ರಕೃತಿಗಳನ್ನು ಅಭಿಮನ್ಯ ಮಾನವಾದ ದುರ್ದೇವತೆಗಳನ್ನು (ಜೀವದ್ವಯವನ್ನು) ಪ್ರತಿ ಜೀವರಲ್ಲಿರುವ ಈ ಎರಡು ದುರ್ದೇವತೆಗಳನ್ನು ಜೀವಾಚ್ಛಾದಿಕೆಗೆ ಹನನ ಅಂದರೆ ಆ ದೇವತೆಯಿಂದ ಅಭಿ ಮಾನ್ಯ ಮಾನವಾದ ಅಚಿತ್ ಪ್ರಾಕೃತಿಗೆ ನಾಶವಾಗುವ ಕಾಲದಲ್ಲಿಯೇ ಅದಕ್ಕೂ ನಾಶವೆಂದು ಸಗುಣಾಚ್ಛಾದಿಕೆ ದುರ್ದೇವತೆಗೆ ತದಭಿಮನ್ಯ ಮಾನ ವಾದ ಅಚಿತ್ಪ್ರಕೃತಿಗೆ ನಾಶವಿಲ್ಲದೇ ಕೇವಲ ಅಪಸರಣವಿರುವದರಿಂದ ಕೇವಲ ಅಪಸರಣವೆಂಬ ವ್ಯಾಘಟ್ಟನವಿದೆಯೆಂದು ತಿಳಿಯಬೇಕು. ಪರಮಾಚ್ಛಾದಿ ಕೆಯು ನಿತ್ಯ ಸಂಸಾರಿಣಿಯಾದುದರಿಂದ ಅದಕ್ಕೆ ತಮಃಪ್ರಾಪ್ತಿವೆಂಬ ಪರಿಹಾರ ವಿಲ್ಲ ಎಂದು ಹೇಳುತ್ತಾರೆ.

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಲಿಂಗ ಅನಿರುದ್ಧ ಶರೀರ ಮಧ್ಯಸ್ಥಿತಿ ಹೇಳುತ್ತಾ ಈ ಪದ್ಯದಲ್ಲಿ ಅನಿರುದ್ಧ ದೇಹದಲ್ಲಿ ದೇವದೈತ್ಯರು ಇರುವ ಸ್ಥಳ ಮನೆ. ಅನಿರುದ್ಧ ಶರೀರದಲ್ಲಿದ್ದು ಒಂದಂಶದಿಂದ ಸ್ಥೂಲ ಶರೀರದಲ್ಲಿ ತಾತ್ವಿಕ ದೇವದೈತ್ಯರು ಪರಸ್ಪರ ಸ್ಪರ್ಧೆಯಿಂದ ಕಾರ್ಯ ಮಾಡುವರೆಂದು ಉಪದೇಶಿಸುತ್ತಾರೆ.

ಮೂಲ :

**ರುದ್ರ ಮೊದಲಾದಮರರಿಗೆ ಅನಿ ।**
**ರುದ್ಧ ದೇಹವೆ ಮನೆಯೆನಿಸುವುದು ।**
**ಇದ್ದು ಕೆಲಸವ ಮಾಡರಲ್ಲಿಂದಿತ್ತ ಸ್ಥೂಲದಲಿ ॥**
**ಕ್ರುದ್ಧ ಖಳ ದಿವಿಜರು ಪರಸ್ಪರ ।**
**ಸ್ಪರ್ಧೆಯಿಂದಲಿ ದ್ವಂದ್ವಕರ್ಮ ಸ ।**
**ಸಮೃದ್ಧಿಗಳನಾಚರಿಸುವರು ಪ್ರಾಣೇಶನಾಜ್ಞೆಯಲಿ ॥ ೧೫ ॥**

**ಪದ್ಯಾರ್ಥ :** ಅನಿರುದ್ಧ ದೇಹವೆ ಲಿಂಗದ ಮೇಲಿರುವ ಅನಿರುದ್ಧ ಶರೀರವು. ರುದ್ರ, ಇಂದ್ರ ಮೊದಲಾದ ದೇವತೆಗಳಾದ ತತ್ವ ದೇವರ್ಕಳಿಗೂ, ಕುತತ್ವಾಭಿಮಾನಿಗಳಾದ ಕಲ್ಯಾದಿ ದೈತ್ಯರಿಗೂ ಇರಲಿಕ್ಕೆ ಮನೆ ಸ್ಥಳವಾಗಿರುವುದು. ಈ ಅನಿರುದ್ಧ ಶರೀರದಲ್ಲಿ ದೇವದೈತ್ಯ ತಾತ್ವಿಕರಿದ್ದು, ಕೆಲಸವ ಮಾಡರು=ಅಲ್ಲಿ ಇವರ ವ್ಯಾಪಾರವಿಲ್ಲ. ಇವರು ಇರಲಿಕ್ಕೆ ಮಾತ್ರ ಅವಕಾಶ, ಅಲ್ಲಿಂದಿತ್ತ ಸ್ಥೂಲದಲಿ=ಅನಿರುದ್ಧ ಶರೀರದಿಂದ ಇತ್ತ ಈಚೆಗೆ ಅಂದರೆ ಬಾಹ್ಯದಲ್ಲಿರುವ ಸ್ಥೂಲದಲಿ=ಸ್ಥೂಲ ದೇಹದಲ್ಲಿ,ಕೃದ್ಧ ಖಳ=ಕೋಪಾವಿಷ್ಟರಾದ ಖಳ=ಪಾಪಿ ದೈತ್ಯರು,ದಿವಿಜರು=ತತ್ವಾಭಿಮಾನಿ ದೇವತೆಗಳು, ಪರಸ್ಪರ ಸ್ಪರ್ಧೆಯಿಂಪಲಿ=ಒಬ್ಬರಿಗೊಬ್ಬರು, ಮತ್ಸರದಿಂದ ತಿಕ್ಕಾಡುತ್ತ ದ್ವಂದ್ವ ಕರ್ಮ=ಪುಣ್ಯ ಕರ್ಮಗಳನ್ನು ದೇವತೆಗಳು, ಪಾಪ ಕರ್ಮಗಳನ್ನು ದೈತ್ಯರು ಸಮೃದ್ಧಿಗಳನಾರಿಚಸುವರು ॥ ವಿಪುಲವಾಗಿ ಅನೇಕ ಪುಣ್ಯ ಪಾಪಾದಿ ಕರ್ಮಗಳನ್ನು ಆಚರಿಸುವರು, ಪ್ರಾಣೇಶನಾಜ್ಞೆಯಲಿ=ಶ್ರೀ ಪ್ರಾಣದೇವರ ಆಜ್ಞೆಯಿಂದ, ತಾವು ಪುಣ್ಯ ಪಾಪಕರ್ಮ ಆಚರಿಸುತ್ತ ಮಾಡುತ್ತ ಜೀವರುಗಳಿಂದ ಮಾಡಿಸುವರು ॥ ೧೫ ॥

**ದ್ರೌಪದೀಶಪತಿ ವಿಠಲರ** ಟಿಪ್ಪಣಿ ಈ ಪದ್ಯ ಈ ಸಂಧಿ ಕೊನೆವರೆಗೆ ಇಲ್ಲ.

**ಭಾವಸೂಚನ :** ರುದ್ರೇತಿ ॥ ೧೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ರುದ್ರ" ಇತಿ ॥ ಇತ್ತ-ಇದ್ದ । ದ್ವಂದ್ವೇತಿ ॥ ಅನುಪದಂ ವಕ್ಷ್ಯಾಮಃ ॥ ೧೫ ॥

## ಕನ್ನಡಾರ್ಥ

"ರುದ್ರ ಮೊದಲಾದವರು" ಎಂಬ ಪದ್ಯದಲ್ಲಿ "ಇತ್ತ" ಎಂದು ಪಾಠವನ್ನು ಕಲ್ಪಿಸಿದಂತೆ ತೋರುತ್ತದೆ. "ದ್ವಂದ್ವ"ವನ್ನು ಮುಂದೆಯೇ ಶೀಘ್ರದಲ್ಲಿಯೇ ವಿವರಿಸುತ್ತೇವೆ || ೧೫ ||

**ಅವತರಣಿಕಾ :** ಸ್ಥೂಲ ಶರೀರದಲ್ಲಿ ಬ್ರಹ್ಮಾದಿ ದೇವತೆಗಳೆಲ್ಲರೂ ನಿರ್ಭಯದಿಂದ ಜೀವನ ಯೋಗ್ಯತಾನುಗುಣವಾಗಿ ಕರ್ಮತ್ರಯ ಮಾಡಿಸುತ್ತಾರೆಂದು ಆಜ್ಞಾಪಿಸುತ್ತಾರೆ.

**ಮೂಲ :**

**ಮಹಿಯೊಳಗೆ ಸುಕ್ಷೇತ್ರ ತೀರ್ಥವು ।**
**ತುಹಿನ ವರುಷ ವಸಂತ ಕಾಲದಿ ।**
**ದಹಿಕ ದೈಶಿಕ ಕಾಲಿಕತ್ರಯ ಧರ್ಮಕರ್ಮಗಳ ॥**
**ದ್ರುಹಿಣ ಮೊದಲಾದಮರರೆಲ್ಲರು ।**
**ಅವಹಿಸಿ ಗುಣಗಳನುಸರಿಸಿ ಸ ।**
**ನ್ನಿಹಿತರಾಗಿದ್ದೆಲ್ಲರೊಳು ಮಾಡುವರು ನಿರ್ಭಯದಿ ॥ ೧೬ ॥**

**ಪದ್ಯಾರ್ಥ :** ಮಹಿಯೊಳಗೆ=ಭೂಮಂಡಲದಲ್ಲಿ, ಪೃಥ್ವಿಯಲ್ಲಿ, ಸು=ಸಮಾಚೀನವಾದ ಶ್ರೀಹರಿಯ ವಿಶೇಷ ಸನ್ನಿಧಾನವಾದ-ಕ್ಷೇತ್ರ ಬದರಿ ಮುಂತಾದ ಅನೇಕ ಕ್ಷೇತ್ರಗಳು, ತೀರ್ಥವು=ಗಂಗಾದಿ ಪುಷ್ಕರ ಮೊದಲಾದ ತೀರ್ಥಗಳಲ್ಲಿ ಮಾಡತಕ್ಕ ಧರ್ಮಗಳನ್ನೂ ಕರ್ಮರೂಪವಾಗಿ ದೇಶಿಕ ಕರ್ಮವೆನಿಸುವವು, ತುಹಿನ=ಹೈಮಂತ, ಚಳಿಗಾಲ-ವಸಂತ ಬೇಸಿಗೆ ಕಾಲ, ವರ್ಷ=ಮಳೆಗಾಲದಲ್ಲಿ ಮಾಡತಕ್ಕ ಮಾಸ ಧರ್ಮೋಕ್ತ ಧರ್ಮಗಳನ್ನೂ, ದಹಿಕ=ದೇಹದಿಂದ ಆಗತಕ್ಕ ಸಕಲ ಕರ್ಮಗಳನ್ನೂ ದ್ರುಹಿಣ ಮೊದಲಾದ ಮರರೆಲ್ಲರು, ಬ್ರಹ್ಮನೇ ಮೊದಲಾಗಿ ರುದ್ರ ಇಂದ್ರ ದೇವತೆಗಳಾದ ಸಕಲ ತಾತ್ವಿಕ=ಅಮರರೆಲ್ಲರೂ-ದೇವತೆಗಳೆಲ್ಲರೂ, ಧರ್ಮ ಕರ್ಮಗಳನ್ನು ವಹಿಸಿ= ಒಪ್ಪಿಕೊಂಡು-ಗುಣಗಳ ಅನುಸರಿಸಿ=ತ್ರಿವಿಧ ಸ್ವಭಾವ ಗುಣಗಳ ದೈಹಿಕ, ದೈಶಿಕ ಕಾಲಿಕ ಮೂರು ಗುಣಗಳಿನುಸರಿಸಿ-ಸನ್ನಿಹಿತರಾಗಿದ್ದೆಲ್ಲರೊಳು=ತಾರತಮ್ಯದಿಂದ ಎಲ್ಲ ತತ್ವಗಳಲ್ಲಿ ಪ್ರಾಣದೇವರು ನಿಂತು, ತತ್ವಾಭಿಮಾನಿಗಳ

ದ್ವಾರಾ ಪುಣ್ಯ ಕರ್ಮಗಳನ್ನೂ, ದೈತ್ಯಾದಿಗಳಲ್ಲಿ ತತ್ವದೇವತೆಗಳು ನಿರ್ಭಯದಿ ನಿಂತು, ಎಲ್ಲ ಧರ್ಮಕರ್ಮಗಳ ವ್ಯಾಪಾರ ಮಾಡುವರು. ಎಲ್ಲ ತಾತ್ವಿಕ ದೇವತೆಗಳಿಗೆ ಎಲ್ಲ ದೈತ್ಯ ತಾತ್ವಿಕರಲ್ಲಿ ಪ್ರೇರಣೆಮಾಡುವ ಶಕ್ತಿ ಶ್ರೀ ಹರಿ ಇತ್ತುದು.

**ಭಾವಸೂಚನ:** ನಿರ್ಭಯೇತಿ ॥ ಪಾಪಭಯ ಶೂನ್ಯ ಇತ್ಯರ್ಥಃ "ಉಕ್ತ ಹರಿಯಾಜ್ಞಾ ಕಾರಣಾದೇವಾನದೇವಾಃ ಪಾಪಮಾಪ್ನುಯಂತಿ ॥೧೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಕ್ತಂ ಕರ್ಮತ್ರಯಂ ವ್ಯನಕ್ತಿ— "ಮಹಿ" ಇತಿ ॥ ತುಹಿನಃ ಹಿಮ ॥ ೧೬ ॥

## ಕನ್ನಡಾರ್ಥ

"ಮಹಿಯೊಳಗೆ" ಎಂಬ ಪದ್ಯದಿಂದ–ದ್ರುಹಿಣ, ಬ್ರಹ್ಮ ಮುಂತಾದವರು ದೈಹಿಕ, ದೈಶಿಕ, ಕಾಲಿಕವೆಂಬ ಮೂರು ಕರ್ಮಗಳನ್ನು ಮಾಡಿಸುವ ರೀತಿ ಯನ್ನು ವಿಶದಪಡಿಸುತ್ತಾರೆ. ತುಹಿನವೆಂದರೆ ಹಿಮವೆಂದು ಅರ್ಥ. ॥ ೧೬ ॥

ಅವತರಣಿಕಾ: ಹಿಂದಿನ ಪದ್ಯಗಳಲ್ಲಿ ಸ್ವರೂಪ-ಲಿಂಗ–ಅನಿರುದ್ಧ-ಸ್ಥೂಲ ಈ ನಾಲ್ಕು ದೇಹಗಳ ವಿವರ ಹೇಳಿ, ಸ್ಥೂಲದಲ್ಲಾಗುವ ಕರ್ಮತ್ರಯ ವಿಸ್ತರಿಸುತ್ತಾ, ಸಿಂಹಾವಲೋಕನದಿಂದ ಪೂರ್ವದಲ್ಲಿ ವಿಸ್ತರಿಸಿದಂತೆ ಸುಷುಮ್ನಾ ನಾಡಿ ವಿವರ ಹೇಳುತ್ತಾರೆ. ಏಕೆಂದರೆ ಹಿಂದಿನ ಪದ್ಯ ೮ ರಿಂದ ೧೧ರವರೆಗೆ ಬಿಂಬನ ವಿಚಾರ ಹೇಳಿ ಇನ್ನು ಬಿಂಬತ್ರಯಕಾರ್ಯ ತದುಪಾಸನಾ ಕ್ರಮ ಪದ್ಯ ೨೪ರವರೆಗೆ ಹೇಳುತ್ತಾರೆ.

ಮೂಲ :

**ಕೇಶಸಾಸಿರ ವಿಧ ವಿಭಾಗವ ।**
**ಗೈಸಲೆನಿತನಿತಿಹ ಸುಷುಮ್ನವು ।**
**ಆಶಿರಾಂತದಿ ವ್ಯಾಪಿಸಿಹದೀ ದೇಹ ಮಧ್ಯದಲಿ ॥**
**ಆ ಸುಷುಮ್ನಕೆ ವಜ್ರಕಾರ್ಯ ಪ್ರ ।**
**ಕಾಶಿನೀ ವೈದ್ಯುತಿಗಳಿಹವು ಪ್ರ ।**
**ದೇಶದಲಿ ಪಶ್ಚಿಮಕೆ ಉತ್ತರ ಪೂರ್ವ ದಕ್ಷಿಣಕೆ ॥ ೧೭ ॥**




**ಪದ್ಯಾರ್ಥ :** ಕೇಶಸಾಸಿರ ವಿಭಾಗವಗೈಸಲೆನಿತನಿತಿಹ ಆ ಸುಷುಮ್ನವು ಒಂದು ಕೂದಲ ಎಳೆಯಲ್ಲಿ ಸಾವಿರ ಭಾಗಮಾಡಿದರೆ ಅಂದರೆ ಉದ್ದಾಗಿ ಸೀಳಿ

ವರೆ ಎಷ್ಟು ಸೂಕ್ಷ್ಮವೋ ಅಷ್ಟು ಸಣ್ಣಾಗಿ ಸೂಕ್ಷ್ಮವಾಗಿರುವ ಸುಷುಮ್ನವು-ಸುಷುಮ್ನಾ ನಾಡಿಯು, ತುಂದಿಯಿಂದ ಆರಂಭಿಸಿ, ಶಿರಃ ಮೂರ್ಧ್ನಿವರೆಗೆ ವ್ಯಾಪಿಸಿಹುದು-ನೆಟ್ಟಗೆ ಹೋಗಿರುವದು. ಈ ದೇಹ ಮಧ್ಯದಲಿ=ಈ ಸ್ಥೂಲ ನಡುದೇಹದವೊಳಗೆ ಇರುವದು. ಈ "ಸುಷುಮ್ನಾ ಸೈವ ಪಂಚಪ್ರಭೇದಿನಿ" ಎಂಬ ಉಕ್ತ್ಯನುಸಾರ ಐದು ಪ್ರಕಾರ ಭೇದವುಳ್ಳದು, ಪಶ್ಚಿಮಕೆ ವಜ್ರಿಕಾ ಎಂತಲೂ, ಉತ್ತರಕ್ಕೆ ಆರ್ಯಾ ಎಂತಲೂ, ಪೂರ್ವಕ್ಕೆ ಪ್ರಕಾಶಿನೀ ಎಂತಲೂ, ದಕ್ಷಿಣಕ್ಕೆ ವೈದ್ಯುತಿ ಎಂತಲೂ, ಮಧ್ಯದಲ್ಲಿ ಸುಷುಮ್ನವೇ ಬ್ರಹ್ಮನಾಡಿ ಎಂದು ಕರೆಸುತ್ತದೆ. ಮಾನಸ ಸ್ಮೃತಿಯಲ್ಲಿಯೂ ಪ್ರಕಾಶ ಸಂಹಿತೆ ತಂತ್ರಸಾರದಲ್ಲೂ ಹೇಳಿದ್ದಾರೆ.

**ಭಾವಸೂಚನ:** ಕೇಶೇತಿ ತದುಕ್ತಂ ಅಧ್ಯಾತ್ಮೇ ॥ ಈ ಸ್ಥೂಲದೇಹದಲ್ಲಿ ನಾಭಿ ಕೆಳಗೆ ಆರಂಗುಲ ಪರಿಮಿತ ದೇಶಾರಂಭಿಸಿ, ಶಿರಃ ಪರಿಯಂತರಾ ಸುಷುಮ್ನಾ ನಾಡಿ ಅದು ಒಂದು ಕೂದಲು ಸಹಸ್ರಭಾಗ ಮಾಡಿದರೆ ಒಂದು ಎಷ್ಟು ಸಣ್ಣದೋ ಅಷ್ಟು ಸಣ್ಣ ಎಂತ ॥ ವಜ್ರಕೇತಿ ಏತತ ಪ್ರಾಗ ವಿವೃತ್ತಂ ॥ ೧೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕೇಶ" ಇತಿ ॥ "ಆಮೂರ್ಧಾನಂ ಋಜುಸ್ಥಿತೇಃ॥ ಇತ್ಯುಕ್ತೇಃ ॥೧೭॥

## ಕನ್ನಡಾರ್ಥ

ಸುಷುಮ್ನಾ ನಾಡಿಯ ಸ್ಥಿತಿಯನ್ನು ವಿವರಿಸುತ್ತಾರೆ. "ಆಶಿರಾಂತದಿ ವ್ಯಾಪಿಸಿಹುದೀ ದೇಹ ಮಧ್ಯದಲ್ಲಿ" ಎಂದು ಹೇಳಿದ ಸಂಗತಿಗೆ "ನಾಭಿಯ ಮೂಲಾಧಾರದಿಂದಾರಂಭಿಸಿ ಮಸ್ತಕದವರೆಗೆ ಸರಳವಾಗಿ ಹೊರಟಿರುವದು ಸುಷುಮ್ನಾ ನಾಡಿ" ಎಂದು ಹೇಳುವ "ಆಮೂರ್ಧಾನಂ" ಎಂಬ ವಚನವು ಆಧಾರವಾಗಿರುತ್ತದೆ. ॥೧೭॥

**ಅವತರಣಿಕಾ:** ಹಿಂದೆ ಅನೇ ಸಂಧಿಯಲ್ಲಿ ವಿವರಿಸಿದಂತೆ ಬ್ರಹ್ಮನಾಡಿ ಮಧ್ಯದಲ್ಲಿ ಇಪ್ಪ ತ್ರಿಕೋಣ ವಹ್ನಿಮಂಡಲ ಮಧ್ಯವರ್ತಿಯಾದ ಸಂಕರ್ಷಣನಿದ್ದು ಷಟ್ಕೋಣ ಮಂಡಲದಲ್ಲಿ ಶೋಷಿತನಾದ ಪಾಪ ಪುರುಷನನ್ನೆ ದಹಿಸಿ ಬ್ರಹ್ಮನಾಡಿಯೊಳಗೆ ಬಾರದಂತೆ ಮಾಡಿ ಶಿರದಲ್ಲಿಪ್ಪ ವಾಸುದೇವನನ್ನು ಐದಿಸುವನೆಂದು ಹೇಳುತ್ತಾರೆ.

ಮೂಲ :

**ಆ ನಳಿನಭವ ನಾಡಿಯೊಳಗೆ ತ್ರಿ।**
**ಕೋಣ ಚಕ್ರವು ಇಪ್ಪುದಲ್ಲಿ ಕೃ।**
**ಶಾನು ಮಂಡಲ ಮಧ್ಯಗನು ಸಂಕರುಷಣಾಹ್ವಯನು ॥**
**ಹೀನ ಪಾಪಾತ್ಮಕ ಪುರುಷನ ದ।**
**ಹಾನ ಗೈಸುತ ದಿನದಿನದಿ ವಿ।**
**ಜ್ಞಾನಮಯ ಶ್ರೀ ವಾಸುದೇವನ ಐದಿಸುವ ಕರುಣಿ ॥ ೧೮ ॥**

**ಪದ್ಯಾರ್ಥ:** ಆ ನಳಿನಭವ ನಾಡಿಯೊಳಗೆ=ಆ ಎಂಬುದು ದೂರದಲ್ಲಿಪ್ಪ ವಸ್ತುವಿನ ನಿದರ್ಶನಕ್ಕೆ ಪ್ರಯೋಗ ನಳಿನಭವನಾಡಿ=ಕಮಲಭವ=ಉತ್ಪನ್ನ ಬ್ರಹ್ಮನಾಡಿ ಮಧ್ಯ ದೇಹದಲ್ಲಿ ಇರುತ್ತಿರಲಾಗಿ ಆ ಎಂದು ದೂರದಲ್ಲಿದ್ದುದು ಎಂದು ಏಕೆ ಪ್ರಯೋಗಮಾಡಿದರು ಎಂದರೆ ಸಮೀಪದಲ್ಲಿ ಒಳಗಿದ್ದೂ, ಸ್ಥೂಲಮತಿಗಳ ಕಣ್ಣಿಗೆ ಕಾಣಿಸದಿರುವ ಕಾರಣ ಆ ಎಂಬುದು ಸಾರ್ಥಕ್ಯವೆ! ಇಂಥ ಬ್ರಹ್ಮನಾಡಿಯೊಳಗೆ ತ್ರಿಕೋಣ ಚಕ್ರ=ಮೂರು ಮೂಲೆಯ ವಹ್ನಿಮಂಡಲವು ತೇಜೋರೂಪವಾಗಿರುವದು, ಕೃಶಾನುಮಂಡಲ ಮಧ್ಯಗ ಸಂಕರ್ಷಣಾಹ್ವಯನು=ಅಗ್ನಿಮಂಡಲ ಮಧ್ಯದಲ್ಲಿರುವ ಹರಿಯು, ಸಂಕರ್ಷಣನೆಂಬ ನಾಮದಿಂದ ಇದ್ದು, ಹೀನ ಪಾಪಾತ್ಮಕ ಪುರುಷನ ದಹಾನ ಗೈಸುತ ದಿನದಿನದಿ=ನೀಚನಾದ-ಸಮಸ್ತ ದೇಹವು ಪಾಪದಿಂದ ತುಂಬಿದ-ಪಾಪ ಪುರುಷನನ್ನು (ಅನೇಕ ಅಂಶದಿಂದಿರುವ ಕಲಿಪುರುಷನನ್ನು), ಪ್ರತಿದಿನ ಅನೇಕ ಅಂಶದಿಂದ ಬ್ರಹ್ಮನಾಡಿ ಪ್ರವೇಶಮಾಡಗೊಡದಂತೆ ದಹಿಸಿದರೂ, ಪುನಃ ಎರಡನೇ ದಿನ ಎರಡನೇ ಅಂಶಗಳು ಉತ್ಪನ್ನ, ಇಂಥ ಸಾಂಶ ಕಲಿ ಪುರುಷನನ್ನು ದಹಿಸುತ್ತ, ದೇಹಶುದ್ಧಿಗೋಸುಗ ಶಿರದಲ್ಲಿಪ್ಪ ಅಮೃತವೃಷ್ಟಿ ಗರೆಸುವ ವರುಣಬೀಜ ವಾಚ್ಯ ವಾಸುದೇವನನ್ನು ಕೂಡಿ ಅಮೃತವೃಷ್ಟಿ ಗರೆಯುವನು.

**ಭಾವಸೂಚನ :** ಆ ನಳಿನೇತಿ ॥ ನಳಿನಭವನಾಡಿ=ಬ್ರಹ್ಮನಾಡೀ ಏತದಪಿ ಪ್ರಾಕ್ ವಿವರ್ತನಂ ॥ ೧೮ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಆ ನಳಿನ ಭವ" ಇತಿ ॥

## ಕನ್ನಡಾರ್ಥ

ಪದ್ಯಾರ್ಥವು ಸುಲಭವಿದೆ.

**ಅವತರಣಿಕಾ:** ಹಿಂದೆ ೮ನೇ ಪದ್ಯದಲ್ಲಿ ಅಗ್ರೇಶಮೂಲೇಶ ಪ್ರಾದೇಶನ ವಿಚಾರ ಹೇಳಿದರು. ಮುಂದೆ ಜೀವನ ಸ್ವರೂಪಾದಿ ೪ ದೇಹ ಅಲ್ಲಿಪ್ಪ ರೂಪ ಹೇಳುತ್ತ ಈಗ ಸಿಂಹಾವಲೋಕನದಿಂದ ಮೂಲೇಶನ ಪಾದಾಶ್ರಿತ ಮುಖ್ಯಪ್ರಾಣ, ತತ್ಪಾದಾವಲಂಬಿ ಜೀವನ ಇರುವಿಕೆ ಈ ಪದ್ಯದಿಂದ ನಿರೂಪಿಸುತ್ತಾರೆ.

**ಮೂಲ :**

**ಮಧ್ಯನಾಡಿಯ ಮಧ್ಯದಲಿ ಹೃ ।**
**ತ್ಪದ್ಮ ಮೂಲದಿ ಮೂಲಪತಿ ಪದ ।**
**ಪದ್ಮಮೂಲದಲಿಪ್ಪ ಪವನನ ಪಾದ ಮೂಲದಲಿ ॥**
**ಹೊದ್ದಿಕೊಂಡಿಹ ಜೀವಲಿಂಗನಿ ।**
**ರುದ್ಧ ದೇಹವಿಶಿಷ್ಟನಾಗಿ ಕ ।**
**ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥ ೧೯ ॥**

**ಪದ್ಯಾರ್ಥ :** ಮಧ್ಯನಾಡಿಯ = ಸುಷುಮ್ನಾ ಮಧ್ಯ ನಾಡಿಯು ಬ್ರಹ್ಮ ನಾಡಿಯ ಮಧ್ಯದಲ್ಲಿ—ಒಳಗೆ, ಹೃತ್ಪದ್ಮ ಮೂಲದಲಿ = ಹೃದಯಾಷ್ಟದಳ ಮೂಲನಾಳ ದುರ್ಗಾಭಾಗದಲ್ಲಿ, ಮೂಲ ಪತಿಪದ = ಮೂಲೇಶ ನಾರಾಯಣ ಅಷ್ಟಬಾಹುಯುಕ್ತ ಮೂಲೇಶನ, ಪದಪದ್ಮ = ಪಾದಕಮಲ ಮೂಲದಲಿ = ಅಡಿಯಲ್ಲಿ ಪಾದಾಶ್ರಯ ಮಾಡಿಕೊಂಡು, ಪವನನು ಇಪ್ಪ = ಇರುವನು. ಈ ಪ್ರಾಣದೇವರ ಪಾದ ಮೂಲದಲ್ಲಿ, ಜೀವ = ಜೀವನು, ಲಿಂಗ ಅನಿರುದ್ಧ ದೇಹವಿಶಿಷ್ಟನಾಗಿ = ಲಿಂಗದೇಹ ಅನಿರುದ್ಧ ದೇಹದಿಂದ ಸಹಿತನಾದ ಜೀವನು, ಪೊದ್ದಿಕೊಂಡಿಹನು = ಹೊಂದಿಕೊಂಡಿರುವನು; ಆಶ್ರಯಮಾಡಿಕೊಂಡಿರುವನು. ಕಪರ್ದಿ ಮೊದಲಾದಮರರೆಲ್ಲರು = ಕಪರ್ದಿ = ಗಂಗೆಯಿಂದ ತೋಯಲ್ಪಟ್ಟ ಜಡೆಗಟ್ಟಿದ ಕೂದಲು ಉಳ್ಳ ರುದ್ರದೇವರೇ ಮೊದಲಾದ ದೇವತೆಗಳೆಲ್ಲರೂ, ಹೃದಯಾಷ್ಟ ೮ ದಳ ಕಮಲದಲ್ಲಿ, ಭಗವಂತನ ಸೇವೆಗೋಸುಗ–ಜೀವನಿಗೆ ಆಯಾ ಬುದ್ಧಿ ಕೊಡಲೋಸುಗ–ಮೂಲೇಶನ ಆಗಮನ ತಮ್ಮ ತಮ್ಮ ದಳಗಳಿಗೆ ಯಾವಾಗ್ಗೆ ಆಗುವದೆಂದು, ಕಾದುಕೊಂಡಿಹರು = ಕೃತಾಂಜಲಿಪುಟರಾಗಿ ಮೂಲೇಶನ ನಿರೀಕ್ಷಿಸುತಿಹರು.

**ಭಾವಸೂಚನ :** "ಮಧ್ಯೇತಿ ಉಕ್ತಂಚ" ಜೀವ ಹೃತ್ಕರ್ಣಿಕಾದಲ್ಲಿ ಜೀವಾಂಗುಷ್ಠ ಪ್ರಮಾಣದಿಂದ, ಆತ್ಮನಾಮಕ ಬಿಂಬಭೂತ ಭಗವಂತ ಇದ್ದಾನೆ, ಆತನಿಗೆ ಮೂಲೇಶನೆಂತಲೂ ನಾಮ. ಆತನ ಪಾದದಲಿ ಪ್ರಾಣ ದೇವರು ಕೈಮುಗಿದುಕೊಂಡು, ಮೂಲೇಶನ ಹಿಂಭಾಗದಲ್ಲಿ ಇದ್ದ ನಾರಾಯಣಾ, ಆ ಮೂಲೇಶ ಅಗ್ರೇಶ ಇವರಿಗೆ ಎದುರಾಗಿ ಪೂರ್ವಾಭಿಮುಖದಿಂದ ಇದ್ದಾರೆ. ಆತನ ಪಾದ ಮೂಲದಲಿ ಜೀವನು ಇದೇ ಪ್ರಕಾರದಿಂದ ಇದ್ದಾನೆ. ಇದು ಮುಕ್ತಿ ತತ್ವದಲ್ಲಿ ಹೇಳಿದೆ. "ವಿಷ್ಣುರ್ಮೂಲೇಶ ಇತಿತು ವಿಜ್ಞಾನಾತ್ಮೇತಿ ತಂವಿದುಃ । ತಸ್ಮಾದಗ್ರೇಶ ಮೂಲೇಶ ಪ್ರಾದೇಶ ಇತಿ ನಾಮಕಾಃ । ಮೂರ್ತಯಃ ಸಂತಿ ಹೃತ್ಪದ್ಮೇ ತ್ರಯ ಆನಂದರೂಪಿಣಃ ॥ ವರ್ತತೇ ಮೂಲೇಶ ಪಾದಸನ್ನಿಧೌ ಪ್ರಾಣನಾಮಕಃ ॥ ಬದ್ಧಾಂಜಲಿ ಸ್ವರೂಪಾಣಾಂ ತ್ರಯಾಣಾಂ ಪುರತಃ ಸದಾ । ಪೂರ್ವಾಭಿಮುಖ ತಶ್ಚೈವ ವರ್ತತೇ ಜೀವ ಏವತು ॥ ಮುಖ್ಯ ಪ್ರಾಣ ಪದಾಂಭೋಜ ಸನ್ನಿಧೌತದ್ವದೇವಹಿ ॥ ಇತಿ ಮುಕ್ತಿತತ್ವೇ ॥ ೧೯ ॥

**ವಿಶೇಷ ಸೂಚನೆ :** ಶ್ರೀ ವಿಜಯದಾಸರ ಸುಳಾದಿ ೧೦ ಉಪಾಸನಾ ಭಾಗ ಪುಟ ೩೫-ತ್ರಿವಿಡಿ ತಾಳ ॥ "ಹೃದಯನಿಮ್ನದ ಮಧ್ಯ ಮಧ್ಯ ನಾಡಿಯ ಮಧ್ಯ ಹುದಗಿಪ್ಪ ಅನಿರುದ್ಧ ದೇಹವದಕೇ ಹದಿನಾಲ್ಕು ದಳವುಳ್ಳ ಪೊಳೆವ ರಕುತ ವರ್ಣ (ಆರು ದಳ ನಾಭಿಯಲ್ಲಿವು ೮ ದಳ ಹೃದಯ ಎರಡೂ ಸಂಪುಟಾಕಾರವಾಗಿಪ್ಪವು ಇದಕೆ ೧೪ ದಳವೆಂದು ಇನ್ನೊಂದು ಸುಳಾದಿಲಿ ಹೇಳಿರುವರು) ಇದೆ ಅಷ್ಟದಳವೆಂದು ಎನಿಸಿತಿದಕೋ । ಅದರ ಕರ್ನಿಕೆ ಮೇಲೆ ರಾಮ (೩) ಮೂರ್ತಿಗಳುಂಟು. (ರಾಮ ಎಂದರೆ ಮೂರು ಸಂಜ್ಞಾ ಎಂದು ಜೋತಿಷ ಗ್ರಂಥ) ಮೊದಲಗ್ರ-ಮಧ್ಯ-ಮೂಲೇಶ ಭಗವಾನ್ । ಮುದದಿಂದ ಮೂಲೇಶನ ಪಾದಾಂಗುಟದಲ್ಲಿ । ವಿಧಿಪಟ್ಟಕ್ಕೆ ಸೇರುವ ಪ್ರಾಣವಾಸ । ಇದನೆ ಗ್ರಹಿಸಿ ಈತನ ಪಾದ ಮೂಲಾಶ್ರಯ ಕದಲದಂತೆ ಜೀವಯಿಪ್ಪ ನೋಡು। ಪದುಮಾಷ್ಟ ದಳದಲ್ಲಿ ಲೋಕಪಾಲಕರುಂಟು । ಸನ್ನಿಧವಾಗಿಪ್ಪರು ಸೇವೆ ಮಾಡುತಲಿ॥ ಇತ್ಯಾದಿ, ಶ್ರೀ ವಿಜಯದಾಸರ ವಚನದಂತೆ ಶ್ರೀ ದಾಸರಾಯರ ಭಾವಗರ್ಭಿತವಿದೆ.

ಶ್ರೀ ಗೋಪಾಲದಾಸರು ಚಿತ್ರಿಸಿದ ಚಿತ್ರ.

ಈ ಅಗ್ರೇಶ ಪ್ರಾದೇಶ ಮೂಲೇಶ ತತ್ಪಾದಾಶ್ರಯ. ಎದುರಿಗೆ ಮುಖ್ಯ ಪ್ರಾಣದೇವರು. ಮುಖ್ಯ ಪ್ರಾಣರ ಪಾದಾಶ್ರಯ ಜೀವನೂ ಕೈಮುಗಿದು ಕೊಂಡು ಪ್ರಾಣಾಂತರ್ಯಾಮಿಯಾದ, ಅಗ್ರೇಶನಾದ ಬಿಂಬ "ಲಕ್ಷ್ಮೀಧರಾ ಉಭಯರಿಂದ ಕೂಡಿಕೊಂಡು, ಶೇಷಶಾಯಿಯಾಗಿ—ಕಲ್ಪವೃಕ್ಷದ ಕೆಳಗೆ ಕುಳಿತಿದ್ದಾನೆ. ಈತನೇ ಅಗ್ರೇಶ ಬಿಂಬ ಜೀವಾಂತರ್ಯಾಮಿ ರೂಪ. ಈ ಜೀವಾಂತರ್ಯಾಮಿ ಪವನ ಪ್ರಾಣದೇವರು ಸಹ ಅಗ್ರೇಶನ ಪಾದದಲ್ಲಿ ಕೈಮುಗಿದುಕೊಂಡು ನಿಂತಿದ್ದಾರೆ. ಈ ಚಿತ್ರದಲ್ಲಿದ್ದ ರೂಪ ನೋಡಿ ನೋಡುತ್ತ ಪ್ರತಿನಿತ್ಯ ಧ್ಯಾನೋಪಾಸನೆಮಾಡಲು ಗುರ್ವಂತರ್ಗತ ಗೋಪಾಲ ವಿಠಲನು ಒಲಿಯುವನು. ಶ್ರೀ ವಿಜಯಗೋಪಾಲ ಶ್ರೀ ಜಗನ್ನಾಥ ಶ್ರೀ ಪ್ರಾಣೇಶವಿಠಲರು ಸಜ್ಜೀವರಲ್ಲಿ ಕರುಣಿಸಿದ್ದಾರೆ. ಇವರ ಪರಮೋಪಕಾರವೇ ಮುಕ್ತಿಗೆ ಸಾಧನ—ಇದೆಲ್ಲ ವಿವರ ಶ್ರೀ ಪುರಂದರ ಸೂತ್ರಕ್ಕೆ ಭಾಷ್ಯ ಟಿಪ್ಪಣಿ ರೂಪವಾಗಿವೆ.

೧. ಅಗ್ರೇಶ, ೨. ವಿಮಲಾದಿ ನವಮೂರ್ತಿ, ೩. ಶಕ್ತ್ಯಾದಿ ೧೧ ಮೂರ್ತಿ, ೪. ಪ್ರಾದೇಶ ಮೂರ್ತಿ, ೫. ಮೂಲೇಶ ಅಷ್ಟಭುಜ, ೬. ಎದುರಿಗೆ ಮುಖ್ಯ ಪ್ರಾಣ, ೭. ಜೀವ ಅಗ್ರೇಶನಲ್ಲಿ ಮೇಲುದೃಷ್ಟಿ ಇಟ್ಟದ್ದಾನೆ, ೮. ಬುಡದಲ್ಲಿ ೫ ಶ್ವೇತವರ್ಣ ಅಷ್ಟದಳ ಕಮಲ.

ಇತರ ರೂಪಗಳು ಚಿಕ್ಕ ಚಿಕ್ಕವಾಗಿವೆ. ಇದರ ವಿವರ:

ಸುತ್ತಲು ಹೃನ್ಮಂಟಪ ವಿವರ—೫ ಬಾಗಿಲು ಇಲ್ಲಿ ೪ ಮಾತ್ರ ಕಾಣಿಸು ವವು. ೧ ಪೂರ್ವಕ್ಕೆ, ಸೂರ್ಯ–ಪ್ರಾಣ–ದ್ವಾರಪಾಲಕರು. ೨ ದಕ್ಷಿಣಕ್ಕೆ ಚಂದ್ರ–ವ್ಯಾನ. ೩ ಪಶ್ಚಿಮಕ್ಕೆ ಅಗ್ನಿ–ಅಪಾನ, ೪ ಉತ್ತರಕ್ಕೆ ಇಂದ್ರ–ಸಮಾನ. ೫ ಊರ್ಧ್ವಕ್ಕೆ ಉದಾನ ವಾಯು ಹೀಗೆ ಚಿಂತಿಸಬೇಕು.

## ಇನ್ನು ಸುತ್ತಲೂ ಪೀಠ ದೇವತೆಗಳು

೧. ಮಧ್ಯ ಪರಮಪುರುಷ, ಅಗ್ರೇಶ. ೨ ಸವ್ಯಕ್ಕೆ ಗುರು. ೩ ದಕ್ಷಿಣ ದಲ್ಲಿ ಸರ್ವ ದೇವತೆಗಳು. ೪ ಪುನಃ ಸವ್ಯದಲ್ಲಿ ಗುರು. ಇನ್ನು ಅಗ್ನಿದಿಕ್ಕಿನ ಕ್ರಮದಿಂದ ೫ ಗರುಡ, ೬ ವೇದವ್ಯಾಸ, ೭ ದುರ್ಗಾ, ೮ ಸರಸ್ವತೀ, ಪೀಠ ಊರ್ಧ್ವಭಾಗ, ೯ ಧರ್ಮಾಧಿಪತಿ–ಯಮ, ೧೦ ಜ್ಞಾನಾಧಿಪತಿ–ವಾಯು, ೧೧ ವೈರಾಗ್ಯಾಧಿಪತಿ–ರುದ್ರ, ೧೨ ಐಶ್ವರ್ಯಾಧಿಪತಿ–ಇಂದ್ರ, ಪೀಠಫಲಕದಲ್ಲಿ

೧೩ ಅಧರ್ಮಾಧಿಪತಿ-ನಿಋಋತಿ, ೧೪ ಅಜ್ಞಾನಾಧಿಪತಿ–ದುರ್ಗಾ, ೧೫ ಅವೈರಾಗ್ಯಾಧಿಪತಿ–ಕಾಮ, ೧೬ ಅನೈಶ್ವರ್ಯಾಧಿಪತಿ–ರುದ್ರ. **ಪೀಠಾಧೋ ಭಾಗದಲ್ಲಿ** ೧ ಪರಮಪುರುಷ, ೨ ಆಧಾರರೂಪಿಣಿ ಶಕ್ತಿ, ೩ ವಿಷ್ಣು ಕೂರ್ಮ, ೪ ವಾಯು ಕೂರ್ಮ, ೫ ಅನಂತ ಶೇಷ, ೬ ಶೇಷ ಫಣಾಶ್ರಿತ ಪೃಥ್ವಿ, ೭ ಕ್ಷೀರ ಸಾಗರ, ೮ ರಮಾರೂಪ ಶ್ವೇತ ದ್ವೀಪ, ೯ ರಮಾರೂಪ ದಿವ್ಯಮಂಟಪ, ೧೦ ರಮಾರೂಪ ಕಂದನಾಳ ಸಹಿತ ಪದ್ಮ—ಈ ೧೦ ರೂಪಗಳನ್ನು ವಿಶ್ವರೂಪ ಧ್ಯಾನೋಪಾಸನ ಪಟದಲ್ಲಿ(೬ನೇ ಸಂಧಿ ಕೊನೆಯಲ್ಲಿ) ಕೊಟ್ಟಿದೆ ನೋಡುವದು.

## ಪದ್ಮಭೂಮಿ ಷಟ್‌ಕೋಣದಲ್ಲಿ

೧೭ ದಕ್ಷಿಣ ಕೋಣಕ್ಕೆ ಸೂರ್ಯ, ೧೮ ವಾಮಕೋಣಕ್ಕೆ ಚಂದ್ರ, ೧೯ ಸಮ್ಮುಖದಲ್ಲಿ ಹುತಾಶನ(ತ್ರಿಕೋಣಾಕೃತಿ ಕಪ್ಪುಮಂಡಲ) ೨೦ ದಕ್ಷಿಣಕ್ಕೆ ಶ್ರೀದೇವಿ, ೨೧ ವಾಮ ಭೂದೇವಿ, ೨೨ ಮಧ್ಯ ದುರ್ಗಾದೇವಿ, ಉಪಬರ್ಹಣ ರೂಪ, ೨೩ **ಸೋಪಾನ ಸ್ಥಳದಲ್ಲಿ** ೧ ಆತ್ಮ, ೨ ಅಂತರಾತ್ಮ, ೩ ಪರಮಾತ್ಮ, ೪ ಜ್ಞಾನಾತ್ಮ—(ಈ ನಾಲ್ಕು ಚಿತ್ರ ಕಾಣುವದಿಲ್ಲ.)

ಪೂರ್ವಾದಿ ಶ್ವೇತವರ್ಣ ಕಮಲ ೮ ದಳದ ಮೇಲಿರುವ ಅಗ್ರೇಶ ಶ್ರೀ ಭೂದುರ್ಗಾ ರೂಪ, ಕೆಳಗೆ ಚಿತ್ರದಲ್ಲಿ ೯ ರೂಪಗಳು: ೧ ವಿಮಲ, ೨ ಉತ್ಕರ್ಷಿಣಿ, ೩ ಕ್ರಿಯಾ, ೪ ಯೋಗ, ೫–೬ ಪ್ರಹ್ವಿ, ೭ ಸತ್ಯಾ, ೮ ಈಶಾನ, ೯ ಮಧ್ಯೇ ಅನುಗ್ರ ಈ ಒಂಭತ್ತು ರೂಪಗಳು. ಪೀಠಪೂಜಾದಲ್ಲಿ ಧೇನಿಸುವ ಕ್ರಮವು. ದಾಸರ ಚಿತ್ರಕಲೆ ರಮಣೀಯವಾದುದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಧ್ಯೇ" ಇತಿ॥ "ಮಧ್ಯೇ ಸುಷುಮ್ನಾ" ಇತ್ಯುಕ್ತೇಃ॥ ತಸ್ಯಾಂ "ವಿಷ್ಣುಃ ಮೇ ಹೃದಯಾಂಭೋಜೇ ಸುಷುಮ್ನಾ ನಾಡಿ ಮಧ್ಯಗೇ ॥ ದಿವ್ಯ ದೇವಮಯೇ ಪೀಠೇ ವೈಕುಂಠೇ ಇವ ಮೋದತೇ" ॥ ಇತಿ ರತ್ನಮಾಲಾ ॥ "ಮೂಲೇಶ ಚರಣಾಧಃ ಶ್ರೀ ಮುಖ್ಯ ಪ್ರಾಣಃ ಕೃತಾಂಜಲಿಃ" ॥ ಇತಿ ಉಪಾಸಾಯಾಂ" ॥ ಏಕಾದಶ ಭಾಗವತ ತಾತ್ಪರ್ಯೇ "ತೇನೈವ ಕ್ರಮಯೋಗೇನ ಪ್ರಾಣಂ ದೃಷ್ಟ್ವಾ ಹರಿಂ ತಥಾ ॥ ಏಷ್ಟವ್ಯಾ ಮುಕ್ತಿಪದವೀ ನಾನ್ಯಥಾ ತು ಕಥಂಚನ" ॥ ಇತಿ ॥ ಛಾಂದೋಗ್ಯೇಚ—"ಏವಂ ವಿದಿತ್ವಾ ಸಂಸಾರಾತ್ ಮುಕ್ತಿ ಮೇಷ್ಯತ್ಯಸಂಶಯಃ" ॥ ಇತಿ ॥ "ಬಿಂಬರೂಪಂ ಹರಿಂ ದೃಷ್ಟ್ವಾ

ಹರಿ ಪಾದಾಬ್ಜ ಸಂಸ್ಥಿತಮ್ ॥ ಸ್ವಂ ಚ ಪಶ್ಯತ್ಯಾಪರೋಕ್ಷ್ಯಾತ್ ನಿವೃತ್ತಾ ಶೇಷಬಂಧನಃ" ॥ ಇತಿ ರತ್ನಮಾಲಾ ॥ "ಯದಾ ಸ್ವರೂಪಂ ಜಾನಾತಿ" ಇತಿ ದ್ವಿತೀಯ ತಾತ್ಪರ್ಯೇ ॥ ತತ್ರೈವ — "ತ್ಯಕ್ತ್ವಾ ದೇಹಾದ್ಯಾತ್ಮಭಾವಂ ಜೀವರೂಪೇ ಹೃದಿಸ್ಥಿತೇ ॥ ದೃಷ್ಟ್ವಾತ್ಮಭಾವಂ ತಂ ಚಾಪಿ ಹರಿಪಾದಾಬ್ಜ ಸಂಸ್ಥಿತಮ್" ॥ ಇತಿ ॥ ಸಮಾಧಿಯೋಗೇ ಸಂಪೂರ್ಣೇ ಹೃದಿ ಪಶ್ಯತಿ ಕೇಶವಮ್॥ ಜೀವಂ ತತ್ಪ್ರತಿ ಬಿಂಬಂ ಚ"॥ ಇತಿ ಏಕಾದಶ ತಾತ್ಪರ್ಯೇ॥೧೯॥

## ಕನ್ನಡಾರ್ಥ

ಜೀವನ ಇರುವಿಕೆಯನ್ನು ಈ ಪದ್ಯದಿಂದ ತಿಳಿಸುತ್ತಾರೆ. ಮಧ್ಯನಾಡಿಯೆಂದರೆ "ಸುಷುಮ್ನಾ" ನಾಡಿ ಎಂದು ತಿಳಿಯಬೇಕು. "ಸುಷುಮ್ನಾ ನಾಡಿಯು ಮಧ್ಯದಲ್ಲಿ ಇರುವುದಾಗಿ ತಿಳಿಯಬೇಕು" ಎಂದು ಪ್ರಮಾಣವಿರುತ್ತದೆ. "ಈ ಸುಷುಮ್ನಾ ನಾಡಿಯಲ್ಲಿ ನಡುವಿರುವ ನನ್ನ ಹೃದಯ ಕಮಲದಲ್ಲಿ ದಿವ್ಯವಾದ ಸಕಲ ದೇವಮಯವಾದ ಪೀಠದಲ್ಲಿ ವೈಕುಂಠದಲ್ಲಿ ಮೋದಿಸುತ್ತಿರುವಂತೆ ಶೋಭಿಸುತ್ತ ನಾರಾಯಣನು ಇರುತ್ತಾನೆ" ಎಂದು ರತ್ನಮಾಲೆಯಲ್ಲಿ ನಿರೂಪಿಸಲಾಗಿರುತ್ತದೆ. ಈ ಸುಷುಮ್ನಾ ನಾಡೀ ಮಧ್ಯದಲ್ಲಿರುವ ಹೃತ್ಪದ್ಮದ ಮೂಲದಲ್ಲಿರುವ ನಾರಾಯಣನ,-ಮೂಲೇಶನ ಚರಣಗಳ ಕೆಳಗಡೆಯಲ್ಲಿ ಮುಖ್ಯಪ್ರಾಣನು ಕೈಜೋಡಿಸಿ ಉಪಾಸಿಸುತ್ತಿರುತ್ತಾನೆ" ಎಂದು ಉಪಾಸನಾ ಗ್ರಂಥದಲ್ಲಿ ಹೇಳಲಾಗಿರುತ್ತದೆ. ಏಕಾದಶ ಭಾಗವತ ತಾತ್ಪರ್ಯದಲ್ಲಿ "ಇದೇ ಕ್ರಮಯೋಗದಿಂದಲೇ ಪ್ರಾಣನನ್ನೂ ಅವನಿಂದ ಆರಾಧಿತ ಚರಣ ಕಮಲವುಳ್ಳ ಶ್ರೀ ಹರಿಯನ್ನೂ ಸಾಕ್ಷಾತ್ಕರಿಸಿಕೊಂಡ ನಂತರದಲ್ಲಿಯೇ ಮುಕ್ತಿಯನ್ನು ಪಡೆಯಬಲ್ಲನೇ ವಿನಃ ಬೇರೆ ಗತಿಯಿರುವದಿಲ್ಲ" ಎಂದು ನಿರೂಪಿತವಾಗಿರುತ್ತದೆ. "ಹೀಗೆ ತಿಳಿದು ಉಪಾಸಿಸಿದವನು ನಿಶ್ಚಿತವಾಗಿಯೂ ಸಂಸಾರದಿಂದ ಮುಕ್ತನಾಗುತ್ತಾನೆ" ಎಂದು ಛಾಂದೋಗ್ಯ ಭಾಷ್ಯದಲ್ಲಿಯೂ ಉಕ್ತವಾಗಿರುತ್ತದೆ. "ಬಿಂಬರೂಪೀ ಹರಿಯನ್ನೂ ಅವನ ಪಾದಸರೋಜದಲ್ಲಿ ನಿಂತಿರುವ ಮುಖ್ಯಪ್ರಾಣನನ್ನೂ, ಅಪರೋಕ್ಷೀಕರಿಸಿದ ನಂತರ ಅಶೇಷ ಕ್ಲೇಶಮಯವಾದ ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆ" ಎಂದು ರತ್ನಮಾಲೆಯಲ್ಲಿ ನಿರೂಪಿತವಾಗಿರುತ್ತದೆ. "ಯಾವಾಗ ಸ್ವರೂಪವನ್ನು-ಅಲ್ಲಿ ಬಿಂಬರೂಪದಿಂದಿರುವ ಶ್ರೀ ಹರಿಯನ್ನೂ ತಿಳಿಯುತ್ತಾನೋ ಆಗ ಮುಕ್ತ

ನಾಗುವನು" ಎಂದು ಎರಡನೆಯ ಸ್ಕಂಥ ತಾತ್ಪರ್ಯದಲ್ಲಿ ಉಕ್ತವಾಗುತ್ತದೆ. ಅಲ್ಲಿಯೇ "ದೇಹಾತ್ಮಭಾವ-ದೇಹವೇ ನಾನು. ದೈಹಿಕ ವಸ್ತುಗಳೇ ನನ್ನವು." ಎಂಬ ಅಭಿಮಾನವನ್ನು ತೊರೆದು ಜೀವಸ್ವರೂಪ ಹೃದಯದಲ್ಲಿ ಸನ್ನಿಹಿತನಾಗಿರುವ ಬಿಂಬರೂಪೀ ಹರಿಯನ್ನೂ ಅವನ ಪಾದಪದ್ಮದಲ್ಲಿ ಕೈಜೋಡಿಸಿ ನಿಂತಿರುವ ಮುಖ್ಯ ವಾಯುದೇವನನ್ನೂ ಸಾಕ್ಷಾತ್ಕರಿಸಿ ಧ್ಯಾನೋಪಾಸನೆಯು ಸಂಪೂರ್ಣವಾಗಲು ಹೃದಯದಲ್ಲಿರುವ ಕೇಶವನನ್ನು ಕಾಣುತ್ತ ಹರಿಗೂ ತನಗೂ ಬಿಂಬ ಪ್ರತಿಬಿಂಬ ಭಾವವನ್ನು ಸಾಕ್ಷಾತ್ಕರಿಸಿ ಮುಕ್ತನಾಗುತ್ತಾನೆ." ಎಂದು ಭಾಗವತ ಏಕಾದಶ ಸ್ಕಂಧದ ತಾತ್ಪರ್ಯದಲ್ಲಿ ವಚನವಿರುತ್ತದೆ.॥೯॥

**ಅವತರಣಿಕಾ:** ಹೃದಯಕಮಲನಾಳ ಕೆಳಭಾಗದಲ್ಲಿಪ್ಪ ಮೂಲೇಶನಾದ ಹಂಸ ನಾಮಕನು, ಹೃತ್ಕಮಲ ಎಂಟು ದಳಗಳಲ್ಲಿ ಸಂಚಾರಮಾಡುತ್ತ ಕಮಲದಳಾಭಿಮಾನಿಗಳಾದ ಇಂದ್ರಾದಿ ಅಷ್ಟದಿಕ್ಪಾಲಕರಿಂದ ಸೇವೆ ಕೈಕೊಳ್ಳುತ್ತಾನೆಂದು ಈ ಪದ್ಯದಿಂದ ಹೇಳುತ್ತಾರೆ.

ಮೂಲ :

**ನಾಳ ಮಧ್ಯದಲಿಪ್ಪ ಹೃತ್ಕೀ।**
**ಲಾಲಜದೊಳಿಪ್ಪಷ್ಟದಳದಿ ಕು।**
**ಲಾಲ ಚಕ್ರದ ತೆರದಿ ಚರಿಸುತ ಹಂಸನಾಮಕನು ॥**
**ಕಾಲಕಾಲಗಳಲ್ಲಿ ಎಣ್ದೆಶೆ।**
**ಪಾಲಕರ ಕೈಸೇವೆಗೊಳುತ ಕೃ ।**
**ಪಾಳು ಅವರಭಿಲಾಷೆಗಳ ಪೂರೈಸಿ ಕೊಡುತಿಪ್ಪ ॥ ೧೦ ॥**

**ಪದ್ಯಾರ್ಥ:** ನಾಳ ಮಧ್ಯದಲಿಪ್ಪ=ಹೃದಯಕಮಲ. ನಾಳ=ದೇಟಿನ ಮಧ್ಯದಲ್ಲಿರುವ ಹಂಸನಾಮಕನಾದ ಮೂಲೇಶನು,ಹೃತ್ಕೀಲಾಲಜದೊಳಿಪ್ಪಷ್ಟ ದಳದಿ=ಹೃದಯ ಕಮಲದೊಳಗಿರುವ-ಎಂಟು ದಳದಲ್ಲಿ, ಕುಲಾಲ ಚಕ್ರದ ತೆರದಿ=ಕುಂಬಾರನು ಮಡಿಕೆ ಮಾಡಲು ತಿರುಗಿಸುತ್ತಿರುವ ಗಾಲಿಯು ಹೇಗೆ ಚಕ್ರರೂಪ ದುಂಡಾಕಾರವಾಗಿ ತಿರುಗುತ್ತದೆಯೋ ಹಾಗೆ ಪೂರ್ವಾದಿ ದಳಗಳಲ್ಲಿ (ಮೂಲೇಶನು) ಸಂಚರಿಸುತ್ತ, ಎಣ್ದೆಸೆ ಪಾಲಕರ ಕೈಸೇವೆಗೊಳುತ=ಎಂಟು ದಿಕ್ಕಿನ ಕಮಲ ದಳಗಳಲ್ಲಿರುವ, ಇಂದ್ರಾದಿ ಎಣ್=ಎಂಟು ದಿಶೆ=ಎಂಟು ದಿಕ್ಕಿನ ದಿಕ್ಪಾಲಕರೆ ದಳಾಭಿಮಾನಿಗಳಾಗಿರುವರು, ಇವರ

ಕೈಯಿಂದ ಸೇವಾ ಮಾಡಿಸಿಕೊಳ್ಳುತ್ತ ಅಥವಾ ಇವರ ಸೇವಾ ಸ್ವೀಕರಿಸುತ್ತ, ಕೃಪಾಳು=ಕರುಣಾಕರನಾದ ಮೂಲೇಶಬಿಂಬನು, ಅವರಭಿಲಾಷೆಗಳ ಪೂರೈಸಿ ಕೊಡುತಿಪ್ಪ=ಜೀವನಿಗೆ ಕಾಲಕಾಲಕೆ ಪುಟ್ಟುವ ಆಶೆಗಳನ್ನು, ದಿಕ್ಪಾಲರಾದ ದಳಾಭಿಮಾನಿಗಳ ದಳದಲ್ಲಿ ಬಂದು ಪ್ರೇರಿಸಿ, ದಳಾಭಿಮಾನಿಗಳ ದ್ವಾರಾ (ಅವರಭಿಲಾಷೆ ಅವರು ಮಾಡತಕ್ಕ ಭಗವತ್ ಸೇವಾರೂಪವಾದ ಇಚ್ಛಾ) ಜೀವನಿಗೆ ಕೊಟ್ಟು, ದೇವತೆಗಳು ಕೃತಕೃತ್ಯರೆಂದೆನಿಸಿ ದಿಕ್ಪಾಲಕರ ಇಚ್ಛಾ ಪ್ರದಾತೃತ್ವ ಶಕ್ತಿ ಇತ್ತು ದೇವತೆಗಳ ಮನೋರಥವನ್ನು ಕೊಡುವನು. ಜೀವನಿಗೆ ಹರಿಯಿಚ್ಛೆಯಿಂದ ಸುಬುದ್ಧಿ ದುರ್ಬುದ್ಧಿ ಕೊಡುವದೆ ಅವರ ಅಭಿಲಾಷೆಯು–ಇದೇ ಹರಿಸೇವೆ.

**ಭಾವಸೂಚನ:** ನಾಳೇತಿ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ನಾಲ" ಇತಿ ॥ ಕೀಲಾಲಜಂ=ಪದ್ಮಮ್ ॥ ಎಣ್=ಎಂಟು ೨೦.

## ಕನ್ನಡಾರ್ಥ

"ಹೃತ್ಕಮಲ ಮಧ್ಯನಿವಾಸಿಯಾದ ನಾರಾಯಣನು ಹಂಸರೂಪದಿಂದ ಕಮಲದ ಅಷ್ಟದಲಗಳಲ್ಲಿ ಸಂಚರಿಸುತ್ತ, ಅಷ್ಟ ದಿಕ್ಪಾಲಕರ ಸೇವೆಯನ್ನು ಸ್ವೀಕರಿಸಿ ಅನುಗ್ರಹಿಸುವನು." ಎಂಬುದು ಸಾರ. ಕೀಲಾಲಜವೆಂದರೆ ಪದ್ಮವೆಂದು ಅರ್ಥ. ಎಣ್ದೆಶೆಗೆ ಎಂದರೆ "ಎಂಟು ದಿಕ್ಕುಗಳು" ಎಂದು ಅರ್ಥ. ॥ ೨೦ ॥

**ಅವತರಣಿಕಾ:** ಎಂಟು ದಳ ದಳಾಭಿಮಾನಿಗಳಾದ ಎಣ್ದೆಶೆ ಪಾಲಕರ ಉಪಾಸ್ಯ ರೂಪಗಳ ವಿವರಣೆಯನ್ನು ಈ ಪದ್ಯದಲ್ಲಿ ಮಾಡುತ್ತಾ, ಮೂಲೇಶನು ಎಂಟು ದಳಗಳಲ್ಲಿ ಸಂಚರಿಸಿ, ಅವರಿಗೆ ಸಂತೋಷಬಡಿಸುವನೆಂದು ಈ ಪದ್ಯದಿಂದ ವಿವರಿಸುತ್ತಾರೆ.

ಮೂಲ :

**ವಾಸವಾನುಜ ರೇಣುಕಾತ್ಮಜ ।**
**ದಾಶರಥಿ ವೃಜಿನಾರ್ದನಮಲ ಜ ।**
**ಲಾಶಯಾಲಯ ಹಯವದನ ಶ್ರೀ ಕಪಿಲ ನರಸಿಂಹ ॥**

**ಈ ಸುರೂಪದಿ ಅವರವರ ಸಂ।**
**ತೋಷಬಡಿಸುತ ನಿತ್ಯ ಸುಖಮಯ।**
**ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ ॥ ೨೧ ॥**

**ಪದ್ಯಾರ್ಥ:** ೧ ಪೂರ್ವ ದಳದಲ್ಲಿ-ಇಂದ್ರ ಇಲ್ಲಿ ವಾಸವಾನುಜ= ಇಂದ್ರನ ಅನುಜ ಉಪೇಂದ್ರನಾಮಕ ಹರಿ. ೨ ಅಗ್ನಿ ದಿಕ್ಕಿನ ಅಗ್ನಿದಳದಲ್ಲಿ- ಅಗ್ನ್ಯಂತರ್ಗತ, ರೇಣುಕಾತ್ಮಜ=ರೇಣುಕಾದೇವಿಯ ಮಗನಾದ ಪರಶು ರಾಮ ದೇವರು. ೩ ದಕ್ಷಿಣ ದಳಾಭಿಮಾನಿ ಯಮದೇವರ ಉಪಾಸ್ಯ ದಾಶರಥಿ=ದಶರಥನಿಂದ ಅವತರಿಸಿದ ಶ್ರೀ ಸೀತಾರಾಮಚಂದ್ರ, ೪ ನಿಯತಿ ದಿಕ್ಕಿನ ದಳಾಭಿಮಾನಿ ನಿಋುರುತಿಯ ಉಪಾಸ್ಯ 'ಜನಾರ್ದನ ಮೂರ್ತಿ, ೫ ಪಶ್ಚಿಮ ದಳಾಭಿಮಾನಿ ವರುಣನ ಉಪಾಸ್ಯ, ಜಲಾಶಯಾಲಯ=ಜಲಾ ಶಯವಾದ ಸಮುದ್ರದಲ್ಲಿ ಅವತಾರಮಾಡಿದ ಮತ್ಸ್ಯರೂಪಿ ಪರಮಾತ್ಮ (ಹೀಗೆ ತಂತ್ರಸಾರ ವಚನ) ೬ ವಾಯವ್ಯ ದಳಾಭಿಮಾನಿ, ಪ್ರವಾಹ ವಾಯು ಉಪಾಸ್ಯ, ಶ್ರೀ ಹಯಗ್ರೀವ ರೂಪಿ ಹರಿಯು, ೭ ಉತ್ತರ ದಳಾಭಿಮಾನಿ ಕುಬೇರನ ಉಪಾಸ್ಯ ಕಪಿಲದೇವರು. ೮ ಈಶಾನ್ಯ ದಳಾಭಿಮಾನಿ ಶ್ರೀ ರುದ್ರ ದೇವರ ಉಪಾಸ್ಯ ಶ್ರೀ ಲಕ್ಷ್ಮೀನರಸಿಂಹ. ಈ ಸುರೂಪದಿ=ಸಮೀಚೀನ ಚಿನ್ಮಯ ರೂಪಗಳಿಂದ, ಅವರವರ, ಜೀವರ ಹೃತ್ಕಮಲ ದಳಾಭಿಮಾನಿ ಗಳನ್ನು, ಸಂತೋಷಬಡಿಸುತ್ತಾ=ಅವರಿಗೆ ಪ್ರೀತಿ ಆನಂದವನ್ನು ಕೊಡು ತ್ತಾನೆ. ಈ ಮೂಲೇಶನು ಎಂಥವನೆಂದರೆ ನಿತ್ಯ ಸುಖಮಯ=ನಿರಂತರ ಜ್ಞಾನಾನಂದಾತ್ಮಕ ಚಿತ್‌ಸುಖವಪುಷ. ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ=ಈತನೇ ಬಿಂಬರೂಪಿ ಹರಿ ಅಗ್ರೇಶ ಮೂಲೇಶನಿಗೆ ಅತ್ಯಂತ ಅಭೇದವೆನಿಪ ಕಾರಣ ಈತನೇ ಬಿಂಬನೆಂದೆನಿಸುತ್ತಾನೆ.

**ಭಾವಸೂಚನ:** ವಾಸವೇತಿ ॥ ಬಿಂಬೇತಿ ॥ ಸ್ಥೂಲಾಂಗುಷ್ಠಾಮಿತೋ ದೇಹೆ ಜೀವಾಂಗುಷ್ಠ-ಮಿತೋ ಹೃದೇತಿ ॥ ೨೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

***ವಾಸವೇತಿ** ॥ ಓಂ * ದಧಾನೋ ಗೋಮದ ಶ್ವವತ್ಸುವೀರ್ಯ ಮಾದಿತ್ಯ ಜೂತ ಏಧತೇ ॥ ಸದಾರಾಯಾ ಪುರುಸ್ಪೃಹಾ ತಮಿಂದ್ರಂ ದಾನ

ಮೀಮಹೇ (ಶವಸಾನಮ್) ॥ *ಓಂ ॥ ಭಕ್ತೇಭ್ಯಃ ಗವಾಶ್ವಾದಿ ಕರೋತಿ ಇತಿ ಕಃ ॥ ಸೌರಾದಿ ಪ್ರಕಾಶಃ ಪಃ ದಾತವ್ಯತ್ವೇನ ಅಸ್ತಿ ಇತಿ ಪಿಃ ॥ ಜಗತ್ ಪರಿವರ್ತಯತಿ ಇತಿ ಲಃ ॥ ಸರ್ವತ್ರ ಕರ್ಮಧಾರಯೇ ಕಪಿಲಃ ॥ ವಾಮನಃ । ಜಲಾಶಯಾಲಯಃ ನಾರಾಯಣಃ ॥ ಓಂ ॥ *ರೋದಸೀ ಮಹೀ ಸಮೀಚೀ ಸಮಜಗ್ರಭೀತ್ ॥ ತಮೋಭಿರಿಂದ್ರ ತೇ (ತಂ) ಗುಹಃ ॥ ಯ ಇಂದ್ರ ಯತಯಸ್ತ್ವಾ ಭೃಗವೋ ಯೇ ಚ ತುಷ್ಟುವುಃ ॥ ಓಂ ॥ * ॥ ಅನೇನ ವಾಸಃ ಸ್ವವಿಹಿತ ಕರ್ಮಾನುಷ್ಠಾನೇನ ಅವಸ್ಥಾನಮ್ ॥ ತತ್ ವಾರಯತಿ ಇತಿ ವಾಸವಃ ಅಸುರಃ ತಮೋರೂಪಃ ॥ ತಂ ಅನು ಸಮ್ಯಕ್ ಜಯತಿ ಹರತಿ । ತತ್ ವಾಸವಾನುಜ ॥ ೨೧ ॥

## ಕನ್ನಡಾರ್ಥ

ಹೃತ್ಕಮಲದಲ್ಲಿ ಇರುವ ಕಪಿಲ ಮುಂತಾದ ಎಂಟು ರೂಪಗಳನ್ನು ಹೇಳುತ್ತಾರೆ. "ವಾಸವಾನುಜ" ಎಂಬ ಪದ್ಯದಿಂದ ಈ ಪದ್ಯದಲ್ಲಿ ಹೇಳಿರುವ "ಕಪಿಲ" ಎಂಬ ನಾಮವನ್ನು ವಿವರಿಸುವ ಬೃಹತೀ ಮಂತ್ರವನ್ನು ವ್ಯಾಖ್ಯಾನ ಕಾರರು ಉದಾಹರಿಸುತ್ತಾರೆ. "ಭಕ್ತರಿಗೆ ಗೋವು-ಅಶ್ವ ಮುಂತಾದ ಸಂಪತ್ತು ಗಳನ್ನು ಉಂಟುಮಾಡುವವನು "ಕ" ಎನಿಸುತ್ತಾನೆ. ಸೂರ್ಯಪ್ರಕಾಶ ಮುಂತಾದವುಗಳನ್ನು ಕೊಡುವುದಕ್ಕೋಸ್ಕರ ತನ್ನಲ್ಲಿಟ್ಟುಕೊಂಡಿರುವದರಿಂದ "ಪಿ" ಎನಿಸುತ್ತಾನೆ. ಜಗತ್ತನ್ನು ಪರಿವರ್ತಿಸುವದರಿಂದ ವಿವಿಧ ಗತಿಗಳಿಂದ ನಡೆಯುವಂತೆ ಪ್ರೇರಿಸುವದರಿಂದ "ಲ" ಎನಿಸಿಕೊಳ್ಳುತ್ತಾನೆ. ಒಟ್ಟಿಗೆ ಕರ್ಮ ಧಾರಯ ಸಮಾಸವಾದುದರಿಂದ ಭಕ್ತರಿಗೆ ಅಶ್ವ ಗೋ ಮುಂತಾದ ಐಶ್ವರ್ಯ ಕಾರಿಯೂ, ಪ್ರ ಸೂರ್ಯಪ್ರಕಾಶ ಮುಂತಾದವುಗಳನ್ನು ಕೊಡುವವನೂ, ಜಗತ್ಪ್ರವರ್ತಕನೂ ಆದವನು "ಕಪಿಲ" ಎನಿಸಿಕೊಳ್ಳುತ್ತಾನೆ.

ವಾಸವಾನುಜ ಎಂಬ ಪದಕ್ಕೆ "ಉಪೇಂದ್ರ" ಎಂದು ಒಂದು ಅರ್ಥ. "ಜಲಾಶಯಾಲಯ"ವೆಂದರೆ ಕ್ಷೀರಸಮುದ್ರಶಾಯಿಯಾದ "ನಾರಾಯಣ" ಎಂದು ಅರ್ಥ. ಇನ್ನು "ವಾಸವಾನುಜ" ಎಂಬ ವಿಷ್ಣುನಾಮವನ್ನು ಬೃಹತೀ ಋಙ್ಮಂತ್ರವು ವಿವರಿಸುತ್ತದೆ. ಅದರ ಸಾರವನ್ನು ಇಲ್ಲಿ ವಿವರಿಸುತ್ತೇವೆ. ವಾಸವೆಂದರೆ "ತಮತಮಗೆ ವಿಹಿತವಾದ ಕರ್ಮಗಳಲ್ಲಿ ಅನುಷ್ಠಾನಮಾಡುತ್ತ ಆಸಕ್ತವಾಗಿರುವದು." ಎಂದು ಅರ್ಥ. ಇಂಥ ವಾಸವನ್ನು-ವಿಹಿತ ಕರ್ಮಾ

ನುಷ್ಠಾನ ಮಾಡುತ್ತಿರುವ ಅವಸ್ಥೆಯನ್ನು, ವ-ತಡೆಹಿಡಿಯುವ ತಮೋರೂಪಿ ಅಸುರನು-"ವಾಸವ"ನೆನಿಸಿಕೊಳ್ಳುತ್ತಾನೆ. ಇಂಥ ತಮೋರೂಪೀ ಅಸುರ ನನ್ನು, ಅನು-ಚನ್ನಾಗಿ (ತಿರುಗಿ ಸಮೀಪ ಬರದಂತೆ) ಜ-ಜಯಿಸು, ಸಂಹ ರಿಸುವದರಿಂದ "ವಾಸವಾನುಜ" ಎನಿಸಿಕೊಳ್ಳುತ್ತಾನೆ. ॥ ೨೧ ॥

**ಅವತರಣಿಕಾ:** ಅಷ್ಟದಳ ಹೃತ್ಕಮಲದಲ್ಲಿ ಮೂಲೇಶನು ಪೂರ್ವಾದಿ ದಳ ವಿಡಿದು ನೈರುತ್ಯಾದಿ ದಳಗಳಲ್ಲಿ ಸಂಚಾರಮಾಡುವಾಗ ಯಾವ ಯಾವ ದಳಗಳಲ್ಲಿ ಮೂಲೇಶ ಸಂಚರಿಸಿ ದಳಾಭಿಮಾನಿಗಳ ದ್ವಾರಾ ಏನೇನು ಬುದ್ಧಿ ಪ್ರೇರಣಾ ಮಾಡಿ ಸುತ್ತಾನೆಂಬುದನ್ನು ದಾಸಾರ್ಯರು ವಿವರಿಸುತ್ತಾರೆ. (೨೨, ೨೩, ೨೪ ಈ ಮೂರು ಪದ್ಯಗಳಿಂದ) ಇಲ್ಲಿ ೪ ದಳಗಳ ವಿಚಾರ ಹೇಳಿದ್ದಾರೆ.

ಮೂಲ :

**ಸುರಪನಾಲಯ ಕೈದಿದರೆ ಮನ ।**
**ವೆರಗುವದು ಸತ್ಪುಣ್ಯ ಮಾರ್ಗದಿ ।**
**ಬರಲು ವಹ್ನಿಯ ಮನೆಗೆ ನಿದ್ರಾಲಸ್ಯ ಹಸಿತೃಷೆಯು ॥**
**ತರಣಿ ತನಯ ನಿಕೇತನದಿ ಸಂ ।**
**ಭರಿತ ಕೋಪಾಟೋಪ ತೋರುವು ।**
**ದರ ವಿದೂರನು ನಿಋುರುತಿಯಲಿರೆ ಪಾಪಗಳ ಮಾಳ್ಪ ॥ ೨೨ ॥**

**ಪದ್ಯಾರ್ಥ:** ಸುರಪನಾಲಯಕೈದಿದರೆ=ಪೂರ್ವ ದಳಾಭಿಮಾನಿಯಾದ, ಸುರಪ=ದೇವೇಂದ್ರನ, ಆಲಯಕ್ಕೆ=ಪೂರ್ವ ದಳದಲ್ಲಿ ಇಂದ್ರದೇವರ ಆವಾಸ ವಾದ ಕಾರಣ ಮನೆ-ಆಲಯವೆಂತ ಹೇಳಿದ್ದಾರೆ. ಇಂದ್ರನ ಪೂರ್ವದಳಕ್ಕೆ ಐದಿದರೆ ಮೂಲೇಶನು ಬಂದರೆ, ಜೀವನ ಮನಸ್ಸು, ಎರಗುವದು ಸತ್ಪುಣ್ಯ ಮಾರ್ಗದಿ=ಸಮೀಚೀನವಾದ ಒಳ್ಳೇ ಭಗವತ್ಪ್ರೀತಿಕರವಾದ ಕೆಲಸ ಮಾಡ ಬೇಕೆಂಬ ಮಾರ್ಗ=ಹಾದಿ ಹಿಡಿದು ಪುಣ್ಯ ಬುದ್ಧಿಯಲಿ ಮನಸ್ಸಾಗಿ ಪುಣ್ಯ ಕೆಲಸ ಮಾಡುವನು. ಮೂಲೇಶನು ವಹ್ನಿಯ ಮನೆಗೆ ಬರಲು, ನಿದ್ರಾಲಸ್ಯ ಹಸಿವೆ ತೃಷಿಯು=ಅಗ್ನಿದಿಕ್ಕಿನ ಅಗ್ನಿದಳಕ್ಕೆ ಬರಲು, ನಿದ್ರೆಯು, ಕೆಲಸದಲ್ಲಿ ಆಲಸ್ಯ, ಬೇಸರಿಕೆ, ಹಸಿವೆ ನೀರಡಿಕೆಯು, ಪುಟ್ಟುವದು. ದಕ್ಷಿಣ ದಿಕ್ಕು ಆದ ತರಣಿತನಯನಿಕೇತನ=(ಮನೆ) ದಕ್ಷಿಣ ದಳದಿ ಸೂರ್ಯಪುತ್ರನಾದ ಯಮ ದೇವರಲ್ಲಿಗೆ ಬರಲು, ಸಂಭರಿತ ಕೋಪಾಟೋಪ ತೋರುವ=ತುಂಬಿದ

ರೌದ್ರಾವೇಶ–ಉಗ್ರವಾದ ಸಿಟ್ಟು, ಸಿಟ್ಟಿನ ಅಬ್ಬರ ಜೀವನಿಂದ ತೋರಿಸುವನು, ಮುಂದೆ ಸಾಗಿ ನೈರುತ್ಯದಳಕ್ಕೆ ಮೂಲೇಶನು, ಅರವಿದೂರನು=ತಾನು ಪಾಪ ರಹಿತನಾದಾಗ್ಯೂ ಹರಿಯು, ನಿಋುರುತಿ ದ್ವಾರಾ, ಜೀವನ ಕಡೆಯಿಂದ ಪಾಪ ಕೆಲಸಗಳನ್ನು ಮಾಡಿಸುವ.

**ಭಾವಸೂಚನ:** ಸುರಪೇತಿ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಹರೇಃ ಚರಣಕ್ರಮೇಣ ಅಷ್ಟದಲೇಷು ವೈಚಿತ್ರ್ಯಮಾಹ–"ಸುರಪ" ಇತಿ || ಪೂರ್ವಸ್ಯಾಂ ಪುಣ್ಯಬುದ್ಧಿಃ ಸ್ಯಾತ್ ಆಗ್ನೇಯ್ಯಾಂ ಕ್ಷುತ್ತೃಡಾದಿಕಂ|| ಯಾಮ್ಯೇ ದಲೇ ಕ್ರೂರಬುದ್ಧಿಃ ನೈಋತ್ಯಾಂ ಪಾಪಬುದ್ಧಿಕೃತ್ || ಇತಿ ಹೃದಯ ಪದ್ಮವಿಚಾರೇ || ೨೨ ||

**ಕನ್ನಡಾರ್ಥ**

ಹಂಸರೂಪಿಯಾದ ಶ್ರೀ ಹರಿಯು ಸಂಚರಿಸುತ್ತಿರುವದನ್ನು ಅನುಸರಿಸಿ (ಹೃದಯಾಷ್ಟದಲ ಕಮಲದಲ್ಲಿ) ಆಗುವ ವಿಚಿತ್ರವಾದ ಬೇರೆಬೇರೆಯಾಗಿರುವ ಮನೋವೃತ್ತಿಗಳನ್ನು ಹೇಳುತ್ತಾರೆ–"ಸುರಪನಾಲಯಕೈದಿದರೆ" ಎಂಬ ಪದ್ಯ ದಿಂದ. "ಶ್ರೀ ಹಂಸನು ಪೂರ್ವದಲ್ಲಿಯ ದಲದಲ್ಲಿ ಸಂಚರಿಸಿದರೆ ಪುಣ್ಯದಲ್ಲಿ ಮನಸ್ಸು ಹುಟ್ಟುತ್ತದೆ. ಆಗ್ನೇಯ ದಿಕ್ಕಿನ ದಲಕ್ಕೆ ಬಂದರೆ ಹಸಿವೆ ನೀರಡಿಕೆ ಗಳು ಮನಸ್ಸಿನಲ್ಲಿ ಉಂಟಾಗುತ್ತವೆ. ದಕ್ಷಿಣದ ದಲದಲ್ಲಿ ಬಂದರೆ ಕ್ರೂರ ಬುದ್ಧಿಯು, ಕೋಪ ಮುಂತಾದ ಭಾವಗಳು ಹುಟ್ಟುವವು. ನೈರುತ್ಯದಲದಲ್ಲಿ ಇದ್ದರೆ ಪಾಪ ಕಾರ್ಯದಲ್ಲಿ ಹಾತೊರೆಯುವ ಮನೋವೃತ್ತಿಯಾಗುತ್ತದೆ." ಎಂದು ಹೃದಯ ಪದ್ಮ ವಿಚಾರದಲ್ಲಿ ಹೇಳಲಾಗಿರುತ್ತದೆ. || ೨೨ ||

**ಅವತರಣಿಕಾ:** ಈ ಪದ್ಯದಲ್ಲಿ ಮೂಲೇಶನು ಪಶ್ಚಿಮ, ವಾಯುವ್ಯ, ಉತ್ತರ, ಈಶಾನ್ಯ ಈ ನಾಲ್ಕು ದಳಗಳಲ್ಲಿ ಸಂಚರಿಸಿ ಜೀವನಿಂದ ಏನೇನು ಕೃತ್ಯಗಳನ್ನು ದಳಾ ಭಿಮಾನಿಗಳ ದ್ವಾರಾ ಮಾಡಿಸುವನೆಂದು ನಿರೂಪಿಸುತ್ತಾರೆ.

ಮೂಲ :

**ವರುಣನಲ್ಲಿ ವಿನೋದ ಹಾಸ್ಯವು |**
**ಮರುತನೊಳು ಗಮನಾಗಮನ ಹಿಮ |**
**ಕರ ಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವುದು ||**

**ಹರನ ಮಂದಿರದಲ್ಲಿ ಗೋ ಧನ ।**
**ಧರಣಿ ಕನ್ಯಾದಾನಗಳು ವೊಂ ।**
**ದರಘಳಿಗೆ ತಡೆಯದಲೆ ಕೊಡುತಿಹ ಚಿತ್ತಪುಟ್ಟುವುದು ॥ ೨೩ ॥**

**ಪದ್ಯಾರ್ಥ:** ಹೃತ್ಕಮಲ ಪಶ್ಚಿಮ ದಳಕ್ಕೆ ವರುಣದೇವರು ಅಭಿಮಾನಿಗಳು-ವರುಣನಲ್ಲಿ ವಿನೋದ ಹಾಸ್ಯವು=ಮೂಲೇಶನು ವರುಣ ದಳಕ್ಕೆ ಬಂದು ವರುಣದೇವರ ದ್ವಾರಾ ಜೀವನಿಗೆ ಉತ್ಸುಕತೆಯ ಆನಂದ, ಹಾಸ್ಯ=ನಗುಚಾಟಕೆ ಮಾಡುವ ಬುದ್ಧಿ, ವಾಯುವ್ಯ ದಳಕ್ಕೆ ಅಭಿಮಾನಿಯಾದ ಪ್ರವಾಹ ವಾಯುವಿನಲ್ಲಿ ಮೂಲೇಶ ಬರಲು, ಆ ವಾಯು ದ್ವಾರಾ, ಜೀವನಿಗೆ ಗಮನಾಗಮನ=ಹೋಗಿಬರುವ, ತಿರುಗಾಡುವ ಇಚ್ಛೆ ಹುಟ್ಟಿಸುವ, ಹಿಮಕರ=ಚಂದ್ರ, ಧನಾಧಿಪರು ಇಬ್ಬರು ಉತ್ತರದಳಕ್ಕೆ ಅಭಿಮಾನಿಗಳು. ಇವರಲ್ಲಿ ಮೂಲೇಶನು ಬರಲು ಕುಬೇರಾದಿಗಳ ದ್ವಾರಾ ಜೀವನಿಗೆ ಧರ್ಮದ ಬುದ್ಧಿಯು ಜನಿಸುವದು. ಧರ್ಮ ಮಾಡಬೇಕೆಂಬ ಬುದ್ಧಿ ಪ್ರೇರಿಸುವವನು ಹರಿಯೆ. ಹರನ ಮಂದಿರದಲ್ಲಿ=ಈಶಾನ್ಯ ದಳಕ್ಕೆ ಅಭಿಮಾನಿಯಾದ, ಹರ=ರುದ್ರದೇವರಲ್ಲಿ ಮೂಲೇಶ ಬರಲು, ವೈರಾಗ್ಯಾಧಿಪತಿಯಾದ ಶಂಭುವಿನ ದ್ವಾರಾ ಜೀವನಿಗೆ ಗೋ=ಆಕಳು, ಧನ=ದ್ರವ್ಯಾದಿ, ಧರಣಿ=ಭೂಮಿ, ಕನ್ಯಾದಾನಗಳು ಒಂದರಘಳಿಗೆ ತಡೆಯದಲೆ ಕೊಡುತಿಹ ಚಿತ್ತಪುಟ್ಟುವುದು. ಇಂತಹ ದಾನಗಳನ್ನು ಬಹು ತ್ವರೆಯಿಂದ ಮಾಡಬೇಕೆಂಬ, ಚಿತ್ತ ಮನಸ್ಸು ಮೂಲೇಶನು ಪುಟ್ಟಿಸುವನೆಂದು ದಾಸಾರ್ಯರ ಅಭಿಪ್ರಾಯ. ಮನಾದಿಗಳು ಜಡ, ದೇವತೆಗಳು ಜೀವ ಅಸ್ವತಂತ್ರರು. ಶ್ರೀ ಹರಿಯು ತತ್ತತ್‌ಸ್ಥಾನ ದೇಶ ತತ್ತತ್ಕಾಲ ಕ್ರಿಯೆಗಳಲ್ಲಿ ಬುದ್ಧಿ ಇತ್ತು ಮಾಡಿಸುವನೆಂದು ತಿಳಿಯಬೇಕು.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವರುಣ" ಇತಿ ॥ "ವಾರುಣ್ಯಾಂತು ವಿನೋದಾದಿ ವಾಯವ್ಯಾಂ ಗಮನಾಗಮನಂ ॥ ಕೌಬೇರ್ಯಾಂ ರತಿಬುದ್ಧಿಃಸ್ಯಾತ್ ಐಶಾನ್ಯೇ ದ್ರವ್ಯದಾನಕೃತ್ ॥ ೨೩ ॥

**ಕನ್ನಡಾರ್ಥ**

ಆ ಹಂಸನು ವರುಣ ದಿಕ್ಕಿನಲ್ಲಿ-ಪಶ್ಚಿಮ ದಿಕ್ಕಿನಲ್ಲಿ-ದಲದಲ್ಲಿ ಬಂದರೆ ವಿನೋದ ಮುಂತಾದವುಗಳಲ್ಲಿ ಮನಸ್ಸು ಹೋಗುತ್ತದೆ. ವಾಯವ್ಯ ದಿಕ್ಕಿನ

ದಲದಲ್ಲಿ ಬಂದರೆ ಬರಹೋಗುವ ವ್ಯಾಪಾರಗಳು-ಸಂಚಾರಗಳು ಇವುಗಳಲ್ಲಿ ಮನಸ್ಸು ಹರಿಯುತ್ತದೆ. ಉತ್ತರ ದಿಕ್ಕಿನ ದಲದಲ್ಲಿ ಬಂದರೆ ರತಿಕ್ರೀಡಾ ಬುದ್ಧಿಯು ಹುಟ್ಟುತ್ತದೆ. ಈಶಾನ್ಯ ದಿಕ್ಕಿನ ದಲದಲ್ಲಿ ಬಂದರೆ ದ್ರವ್ಯದಾನ ಮಾಡುವ ಸುಬುದ್ಧಿಯು ಹುಟ್ಟುತ್ತದೆ. ॥ ೨೩ ॥

**ಸೂಚನೆ:** ಈ ಪ್ರಮಾಣದಲ್ಲಿ ಉತ್ತರದಿಕ್ಕಿಗೆ ಮೂಲೇಶ ಬರಲು ರತಿ-ಬುದ್ಧಿ ಎಂದು ಹೇಳಿದ್ದಾರೆ. "ಹಿಮಕರ ಧನಾಧಿಪನಲ್ಲಿ ಧರ್ಮದ ಬುದ್ಧಿ ಪುಟ್ಟುವದು, ಇದು ವಿಚಾರಾಂಶವಾಗಿದೆ.

**ಅವತರಣಿಕಾ:** ಹೃದಯ ಮಧ್ಯದಲ್ಲಿ, ಕೇಸರ, ಲಿಂಗದೇಹದಲ್ಲಿ ಮೂಲೇಶನು ಚರಿಸಿದರೆ ಆಗುವ ವ್ಯಾಪಾರ ಹೇಳುತ್ತಾ, ಕಮಲಕರ್ಣಿಕಾದಲ್ಲಿ ಪುನಃ ಜಾಗ್ರತಿ ಹೀಗೆ ಅವಸ್ಥಾತ್ರಯಗಳು ಜೀವನಿಗೆ ಒದಗಿಸುವನೆಂದು ನಿರೂಪಿಸುತ್ತಾರೆ.

ಮೂಲ :

**ಹೃದಯದೊಳಗೆ ವಿರಕ್ತಿ ಕೇಸರ ।**
**ಕೊದಗೆ ಸ್ವಪ್ನ ಸುಷುಪ್ತಿ ಲಿಂಗದಿ ।**
**ಮಧುಹ ಕರ್ಣಿಕೆಯಲ್ಲಿ ಬರೆ ಜಾಗ್ರತೆಯು ಐದುವದು**
**(ಪುಟ್ಟುವದು) ॥**
**ಸುದರುಶನ ಮೊದಲಾದ ಅಷ್ಟಾ ।**
**ಯುಧವ ಪಿಡಿದು ದಿಶಾಧಿಪತಿಗಳ ।**
**ಸದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ ॥ ೨೪ ॥**

**ಪದ್ಯಾರ್ಥ:** ಮೂಲೇಶನು ಹೃದಯದಲ್ಲಿ ಬರಲು, ವಿರಕ್ತಿ ವಿಷಯ ವೈರಾಗ್ಯ ಪುಟ್ಟಿಸುವ, ಕಮಲ ಕೇಸರ=ವೆಂದರೆ ಹೂವಿನಲ್ಲಿ ಕೇವಲ ಕೂದಲೆಳೆಯಷ್ಟು ಸಣ್ಣಾಗಿ ಸ್ವಲ್ಪ ಹಳದಿ ವರ್ಣದಿಂದ ಉದ್ದಾಗಿ ಎಳೆಗಳಂತೆ ಬಹು ಮೃದುವಾಗಿ ತೋರುವುದು ಇದಕ್ಕೆ ಕೇಸರವೆನ್ನುತ್ತಾರೆ. ಪ್ರತಿ ಹೂವಿನಲ್ಲಿ ಸಾಮಾನ್ಯ ಇರುತ್ತದೆ. ಈ ಕೇಸರಗಳಲ್ಲಿ ಮೂಲೇಶ ಬರಲು, ಜೀವನಿಗೆ ಸ್ವಪ್ನವಾಗುವುದು, ಲಿಂಗದಿ ಮೂಲೇಶನು ಬರಲು, ಅನಿರುದ್ಧ ಶರೀರಯುಕ್ತನಾದ ಲಿಂಗಶರೀರದಲ್ಲಿ ಮೂಲೇಶನು ಪ್ರವೇಶಮಾಡಲು, ಜೀವನಿಗೆ ಸುಷುಪ್ತಿ ಅವಸ್ಥಾ ನಿದ್ರಾವಸ್ಥಾ ಒದಗುವುದು. (ಅಗ್ರೇಶ, ಪ್ರಾದೇಶ, ಮೂಲೇಶರೇ ವಿಶ್ವ ತೈಜಸ ಪ್ರಾಜ್ಞ, ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣರೆಂದು ಕರೆಸು

ತ್ತಾರೆ. ಶ್ರೀ ವಿಜಯದಾಸರ ವಚನ) ಮಧುಹ=ಮಧು=ಶ್ರೀಹರಿಯು ಸುಖಪೂರ್ಣನಾದ ಕಾರಣ ಮಧು ಎನಿಸುತ್ತಾನೆಂದು ಉಪನಿಷದ್ವಾಕ್ಯ, ಇಂತಹ ಸುಖವನ್ನು ದೈತ್ಯಾದಿಗಳಿಂದ ಹರಣಮಾಡಿ ಸತ್ಪುಣ್ಯ ಸುಖವನ್ನು ದೇವತೆಗಳಿಗೆ ತಂದೀವ ಕಾರಣ ಮಧುಹನೆಂದು ಶ್ರೀ ಹರಿಗೆ ನಾಮ. ಈ ಮೂಲೇಶನು, ಕಮಲ ಕರ್ಣಿಕೆಗೆ ಬರಲು=ಕರ್ಣಿಕಾ, ಕಮಲದಲ್ಲಿ ಬೀಜ ಕೋಶ, ಜೀವನಿಗೆ ಜಾಗ್ರತೆ ಪುಟ್ಟಿಸುವನು. ಇಂತು ಸುದರುಶನ ಮೊದಲಾದ ಅಷ್ಟಾಯುಧವ ಪಿಡಿದು=ಸುದರ್ಶನ=ಚಕ್ರ, ಶಂಖ, ಖಡ್ಗ, ಚರ್ಮ, ಗದೆ, ಪದ್ಮ, ಕಾರ್ಮುಕ=ಬಿಲ್ಲು, ಬಾಣ ಈ ಪ್ರಕಾರ ಎಂಟು ಭುಜದಲ್ಲಿ ಎಂಟು ಆಯುಧಗಳನ್ನು ಪಿಡಿದು, ದಿಶಾಧಿಪತಿಗಳಾದ ಇಂದ್ರಾದಿಗಳ ದಳಗಳಲ್ಲಿ ಸಂಚರಿಸುತ್ತ ಈ ರೀತಿ ಜೀವನಿಗೆ ಬುದ್ಧಿಯನ್ನು ಕೊಡುವನು.

**ಸೂಚನೆ:** ಹರಿಕಥಾಮೃತ ಮೂಲ ಬರೆದ ಪುಸ್ತಕದಲ್ಲಿನ ಪ್ರಮಾಣಗಳನ್ನೇ ಭಾವಸೂಚನಾಕಾರರು ಕೊಟ್ಟಿದ್ದಾರೆ.

**ಭಾವಸೂಚನ:** ಸುರಪೇತಿ । ವರುಣೇತಿ (ಹಿಂದಿನ ಪದ್ಯ ೨೨-೩೩ ಆರಂಭದಿಂದ) ತದುಕ್ತಂ ಗೀತಾಸಾರೇ ॥ ಪೂರ್ವದಳೇ ಪುಣ್ಯಬುದ್ಧಿ, ರಗ್ನೌ ನಿದ್ರಾಲಸ್ಯಾಧಿಕಂ ॥ ಯಾಮ್ಯದಳೇ ಕ್ರೂರಬುದ್ಧಿ ನೈಋತ್ಯಾಂ ಪಾಪಬುದ್ಧೀಕೃತ್ ॥ ವಾರುಣ್ಯಾಂಚ ಪರಿಕ್ರೀಡಾ ವಾಯುವ್ಯಾಂ ಗಮನಾಗಮೌ। ಕುಬೇರೆ ರತಿ ಬುದ್ಧಿಸ್ಯಾತ್ । ಈಶಾನ್ಯೇ ದ್ರವ್ಯದಾನ ಕೃತ್॥ ಮಧ್ಯೇ ವೈರಾಗ್ಯಬುದ್ಧಿಸ್ಯಾತ್ ಸ್ವಪ್ನಾವಸ್ಥಾತು ಕೇಸರೇ । ಜಾಗ್ರತ್‌ಜ್ಞೇಯಾ ಕರ್ಣಿಕಾಯಾಂ ಲಿಂಗೇ ಚೈವ ಸುಷುಪ್ತಿಕೇತಿ ಸೂತ್ರೇತಿ ಲಿಂಗ ಶರೀರಗತ ॥ ೨೪ ॥

**ಶ್ರೀ ವಿಜಯದಾಸಾರ್ಯರು** ಉಪಾಸನಾ ಭಾಗ ಸುಳಾದಿ ಪುಟ ೩೫ರಲ್ಲಿ (ಹಿಂದೆ ೧೯ನೇ ಪದ್ಯದಡಿ ಕೊಟ್ಟ ಸುಳಾದಿಯಲ್ಲೇ ಮುಂದೆ) "ಪದುಮಾಷ್ಟದಳದಲ್ಲಿ ಲೋಕಪಾಲಕರುಂಟು । ಸನ್ನಿಧವಾಗಿಪ್ಪನು ತಮ್ಮ ಸೇವಕರೊಡನೆ । ಪದೋಪದಿಗೆ ಉಪೇಂದ್ರ ರಾಮ-ಭಾರ್ಗವ ರಾಮ । ಅದು ಭೂತ ಜನಾರ್ದನ ಮತ್ಸ್ಯ ತುರಂಗ । ವದಗಿ ಕಲ್ಕಿ, ನೃಕೇಸರಿಯು ಪೂಜಿಪರಯ್ಯಾ । ಬುಧರು ಒಂದಾಗಿ ವಸುಗೇಳು ಜನ (ಸಪ್ತ ಕಮಲಗಳಲ್ಲಿ ಒಂದೊಂದು ಕಮಲದಲ್ಲಿ ೭-೭ ಜನ ಮರುತುಗಳು ಉಂಟೆಂದು ಎರಡನೇ ಪ್ರಮಾಣ ಸುಳಾದಿ ಇವೆ) ಮೂಲೇಶನು । ಸುದರುಶನ ಶಂಖ-ಖಡ್ಗ-ಚರ್ಮ-

ಗದ। ಪದುಮ ಕಾರ್ಮುಕ ಬಾಣ ಧರಿಸಿ ಅಷ್ಟಾ। ಯುಧ ನಾಲ್ಕೆರಡು ಬಾಹುವುಳ್ಳ ನಾರಾಯಣಾ। ಪದುಮ ಕೂಡಲಿ ಪಹರೆಯ ತಿರುಗುವ। ಪದುಮ ವಿಕಸಿತವಾಗೆ ಜಾಗ್ರತೆ ಎಂದೆನ್ನಿ। ಪದುಮ ಸ್ವಲ್ಪ ಮುದರಿದರೆ ಸ್ವಪ್ನಕಾಲ। ಮುದರಿ ಪೋದರೆ ಸುಪ್ತಿ ಜೀವ ಪ್ರಾಜ್ಞ ದೇವನ್ನ। ವದನದೊಳ ಗಿಳಿದರೆ ನಿಶ್ಚೇಷ್ಟನೋ। ಇದರಂತೆ-ಮೂರಾವಸ್ಥೆಯಾದಡೆ ವ್ಯಾಪಾರಂ।

**ಅಷ್ಟದಳ ಕಮಲ ಮೂರ್ತಿಗಳ ಚಿತ್ರ.**



ಚ–ದುರಾವೃತ್ತಿಯಲ್ಲಿ ಆಗುವುದು ಸಿದ್ಧ । ಪದುಮ ಈ ಪರಿಯಲ್ಲಿ ಐದು ಕಡೆ ಇಪ್ಪದು । ಇದರಲ್ಲಿ ಪಂಚ ಭಗವದ್ರೂಪವು । ಬದಿಯಲ್ಲಿ ಇಪ್ಪಳು ಲಕುಮಿ ಐದು ರೂಪ ತ್ರಿದಶಗಣ ತುಂಬಿಹದು ನಿಬಿಡವಾಗಿ । ಹೃದಯಾಖ್ಯ ಪಟ್ಟಣಕೆ ಐದು ಬಾಗಿಲ ಉಂಟು । ತದುಪರಿ ದ್ವಾರಪಾಲಕರಿಪ್ಪರು । ಸದರವಿಲ್ಲದೆ ಜನರು ಪ್ರತ್ಯೇಕ ಪ್ರತ್ಯೇಕ । ಮಧುಸೂದನನ ವಾಲಗ ಮಾಡುವರು । **ಇದು ಎಲ್ಲ ಪೇಳಿದ್ದು ಜೀವೇಶ ಪದುಮ ಬಹು** । ವಿಧಗಳೆಲ್ಲ ನಾಡ್ಯಾಂತರ ಪ್ರವೇಶ । ಉದರ ಬ್ರಹ್ಮಾಂಡ ಭರಿತ ವಿಜಯವಿಠ್ಠಲರೇಯಾ । ಬದಿಗನು ತಾನಾಗಿ ನಿರ್ಮಾಣ ಮಾಡುವಾ ॥ ೫ ॥ ಈ ಪ್ರಕಾರ ಸುಳಾದಿಲಿ ವಿವರಣೆ ಮಾಡಿದ್ದಾರೆ. ಅಲ್ಲದೇ ಮಾನಸ ಸ್ಮೃತಿಯಲ್ಲಿಯೂ ಇದರ ವಿವರಣೆಯಿದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹೃದಯ" ಇತಿ॥ "ಮಧ್ಯೇ ವೈರಾಗ್ಯ ಬುದ್ಧಿಃ ಸ್ಯಾತ್ ಸ್ವಪ್ನಾವಸ್ಥಾತು ಕೇಸರೇ ॥ ಜಾಗ್ರಾವಸ್ಥಾ ಕರ್ಣಿಕಾಯಾಂ ಲಿಂಗಂ ಚೈವ ಸುಷುಪ್ತಿಕೃತ್" ॥ ಇತಿ ॥ ಆಶಾ=ದಿಕ್ ॥ ೨೪ ॥

## ಕನ್ನಡಾರ್ಥ

ಹಂಸರೂಪಿ ಹರಿಯು ಹೃದಯ ಮಧ್ಯದಲ್ಲಿ ಬಂದರೆ ವೈರಾಗ್ಯ ಬುದ್ಧಿಯು ಹುಟ್ಟುತ್ತದೆ. ಹೃದಯ ಕಮಲದ ಕೇಸರದಲ್ಲಿ ಸಂಚರಿಸಿದರೆ ಸ್ವಪ್ನಾವಸ್ಥೆಯು ಹುಟ್ಟುತ್ತದೆ. ಹೃದಯ ಕಮಲದ ಕರ್ಣಿಕೆಯಲ್ಲಿ ಬಂದರೆ ಜಾಗ್ರದವಸ್ಥೆಯು ಹುಟ್ಟುತ್ತದೆ. ಹೃದಯ ಕಮಲದ ಮೂಲದಲ್ಲಿ (ಲಿಂಗದಲ್ಲಿ) ಬಂದರೆ ಸುಷುಪ್ತಿ "ಗಾಢ ನಿದ್ರಾವಸ್ಥೆ"ಯು ಹುಟ್ಟುತ್ತದೆ ಎಂದು ಹೃದಯಪದ್ಮ ವಿಚಾರವಾಗಿ ಹೇಳಲಾಗಿರುತ್ತದೆ. ಆಶಾ=ದಿಕ್ಕು. ॥ ೨೪ ॥

**ಅವತರಣಿಕಾ :** ಹಿಂದೆ ಹೇಳಿದಂತೆ ಸ್ವದೇಹದಲ್ಲಿ ಭಗವದ್ರೂಪ ಚಿಂತನೆ, ಹೃತ್ಕಮಲ ಬಿಂಬೋಪಾಸನೆಯನ್ನರಿಯದೆ ಅನುಸಂಧಾನ ರಹಿತರಾಗಿ ಬಾಹಿರದಲ್ಲಿ ದೇಶಾಟನ ಮಾಡಿ ತೀರ್ಥಾದಿಗಳಲ್ಲಿ ಸ್ನಾನ ಮಾಡಿದೆವು ಎಂದು ಡಂಭಾಚಾರದ ವೃತ್ತಿ ತೋರಿದರೆ ಏನೂ ಫಲವಿಲ್ಲ-ಹೃದ್ಗತ ಪರಮಾತ್ಮನ ಧ್ಯಾನವೇ ಮುಖ್ಯ.

ಮೂಲ :

**ಸೂತ್ರನಾಮಕ ಪ್ರಾಣಪತಿ ಗಾ ।**
**ಯತ್ರಿ ಸಂಪ್ರತಿಪಾದ್ಯನಾಗೀ ।**
**ಗಾತ್ರದೊಳು ನೆಲೆಸಿರಲು ತಿಳಿಯದೆ ಕಂಡಕಂಡಲ್ಲಿ ॥**
**ಧಾತ್ರಿಯೊಳು ಸಂಚರಿಸಿ ಪುತ್ರ ಕ ।**
**ಳತ್ರ ಸಹಿತನುದಿನದಿ ತೀರ್ಥ ।**
**ಕ್ಷೇತ್ರಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು ॥೨೫॥**

**ಪದ್ಯಾರ್ಥ :** ಸೂ ತ್ರ ನಾ ಮ ಕ ಪ್ರಾಣಪತಿ=ಸೂತ್ರನಾಮಕನಾದ ವಾಯುದೇವರು ಲಿಂಗ ಶರೀರದಲ್ಲಿದ್ದು, ಅನಿರುದ್ಧ ಸ್ಥೂಲಶರೀರಗಳಿಗೆ ಕಾರ್ಯ ಪ್ರವರ್ತಕರಾಗುವರು. ಇಂತಹ ಸೂತ್ರನಾಮಕ ವಾಯು, ಪತಿ=ಒಡೆಯ ತಂದೆ ಸಂಕರ್ಷಣ ರೂಪಿ ಹರಿಯು, ಹಂಸಾದಿ ಅನೇಕ ರೂಪಗಳಿಂದಲೂ, ಬಿಂಬತ್ರಯನಾಗಿಯೂ, ಗಾಯತ್ರಿ ಸಂಪ್ರತಿಪಾದ್ಯನಾಗಿ=ಗಾಯತ್ರೀ ಛಂದಸ್ಸುಗತ ಗಾಯತ್ರೀ ಮಂತ್ರ ಪ್ರತಿಪಾದ್ಯನಾಗಿ=ಸ್ತೋತ್ರಮಾಡಿಸಿ ಕೊಳ್ಳುತ್ತ, ಅಂದರೆ ಗಾಯಿತ್ರಿಯಿಂದ ಪುರುಷಸೂಕ್ತ ದ್ವಾರ ಸಕಲ ವೇದ ಆವಿರ್ಭಾವವಾಗಿರುವುವು ಮತ್ತು ಗಾಯತ್ರೀ ವರ್ಣಗಳಿಂದಲೇ ಕೇಶವಾದಿ ರೂಪಗಳುಳ್ಳ ಹರಿಯು, ಗಾತ್ರದೊಳು=ಸ್ಥೂಲಾದಿ ದೇಹಗಳಲ್ಲಿ ನೆಲಸಿರಲು, ಪ್ರಾಣಾಂತರ್ಯಾಮಿಯಾಗಿದ್ದು ಸಕಲ ಕಾರ್ಯ ಮಾಡಿಸುತ್ತಾನೆಂಬುದನ್ನು ತಿಳಿಯದೇ=ಈ ಅನುಸಂಧಾನ ಮರೆತು, ನಾನೇ ದೇಹಬಲಿಷ್ಠ, ಧನವಂತ, ಪುತ್ರಕಳತ್ರ ಉಳ್ಳವನೆಂಬ ಗರ್ವಿಕೆಯಿಂದ ಕೇವಲ ಡಂಭಾಚಾರದಿಂದ, ಖ್ಯಾತಿಗೋಸುಗ, ಧಾತ್ರಿಯೊಳು ಸಂಚರಿಸಿ=ಭೂಮಂಡಲದಲ್ಲಿ ತಿರುಗುತ್ತಾ, ಪುತ್ರ ಮಿತ್ರ ಪತ್ನ್ಯಾದಿಗಳಿಂದ ಕೂಡಿಕೊಂಡು, ತೀರ್ಥಕ್ಷೇತ್ರ ಯಾತ್ರೆ ಮಾಡಿದೆವು=ತೀರ್ಥಾಭಿಮಾನಿ ದೇವತೆ-ತದ್ಗತ ಹರಿಯನ್ನು ತಿಳಿಯದೇ, ಆ ತೀರ್ಥಾಭಿಮಾನಿ ದೇವತೆಗಳು ಎನ್ನ ಸ್ವಕ್ಷೇತ್ರವಾದ ದೇಹದಲ್ಲಿ ಇರುವರೆಂದು ಅರಿಯದೇ ಆಹೋ ನಾವು ಎಲ್ಲ ತೀರ್ಥ ಮಾಡಿದ್ದೇವೆ-ಪುಣ್ಯವಂತರೆಂದು ಕೊಚಿಕೊಳ್ಳುತ್ತ ಹಿಗ್ಗುವರು. ಸ್ವದೇಹ ಹೃತ್ಕಮಲ ನಿವಾಸಿಯಾದ ಭಗವಂತನನ್ನು ಅರಿಯದ ಅಜ್ಞಾನಿಗಳು ಮಾತ್ರ ಸಂತೋಷಬಡುವರು. "ಗಂಗೆ ಮಿಂದರೆ ಮಲವು ಹಿಂಗಿತಲ್ಲದೇ ರಂಗ ದೊರೆಯನೋ ಭಕುತ ಸಂಗ ದೊರೆಯದೆ 'ಧ್ಯಾನ

ಮಾಡಿದವ ಸ್ನಾನ ಮಾಡಿದವ' ಧ್ಯಾನ ರಹಿತನಾದ ಮನುಜಾ ಏನು ಕರ್ಮ ಮಾಡಿದರೇನು ಆನೆ ಕಪಿಥ್ಥ ನುಂಗಿದಂತೆ" (ಶ್ರೀ ವಿಜಯದಾಸರು).

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಸೂತ್ರ" ಇತಿ ॥ ೨೫ ॥

**ಅವತರಣಿಕಾ:** ಹಿಂದೆ ವಿವರಿಸಿದ ಎಲ್ಲ ದೇಹಗಳಲ್ಲಿಪ್ಪ ರೂಪಗಳನ್ನು, ಸ್ವರೂಪ ಲಿಂಗ ಅನಿರುದ್ಧ ಸ್ಥೂಲ ದೇಹಗಳಲ್ಲಿ ಮುಖ್ಯವಾಗಿ ನಿಯಾಮಕರಾಗಿ ಕಾರ್ಯ ಪ್ರವರ್ತಿ ರೂಪಗಳಲ್ಲಿ ಐಕ್ಯ ಚಿಂತಿಸಬೇಕೆಂಬುದಾಗಿ ಉಪದೇಶಿಸುತ್ತಾರೆ.

**ಮೂಲ :**

**ನಾರಸಿಂಹ ಸ್ವರೂಪದೊಳಗೆ ಶ ।**
**ರೀರ ನಾಮದಿ ಕರೆಸುವನು ಹದಿ ।**
**ನಾರು ಕಳೆಗಳು ಉಳ್ಳಲಿಂಗದಿ ಪುರುಷ ನಾಮಕನು ॥**
**ತೋರುವನು ಅನಿರುದ್ಧದೊಳು ಶಾಂ ।**
**ತೀರಮಣ ಅನಿರುದ್ಧ ರೂಪದಿ ।**
**ಪ್ರೇರಿಸುವ ಪ್ರದ್ಯುಮ್ನ ಸ್ಥೂಲ ಕಳೇವರದೊಳಿದ್ದು ॥ ೨೬ ॥**

**ಪದ್ಯಾರ್ಥ :** ನಾರಸಿಂಹರೂಪೀ ಪರಮಾತ್ಮ, ಶರೀರವೆಂಬ ನಾಮದಿ (ಹಿಂದಿನ ಸಂಧಿಗಳಲ್ಲಿ ವಿವರಿಸಿದಂತೆ) ಮತ್ತು ಸಂಧಿ (೧) ಮಂಗಳಾಚರಣ ಶ್ಲೋಕದಲ್ಲಿ ವಿವರಿಸಿದಂತೆ ನರಸಿಂಹನು ಶರೀರನಾಮ=ಜೀವ ಜೀವ-ಶರೀರ ನಾಮದಿಂದ ಸ್ವರೂಪದೊಳಗಿದ್ದು ನಾರಸಿಂಹನೆಂದು ಕರೆಸಿಕೊಳ್ಳುತ್ತಾನೆ. ಹದಿನಾರು ಕಳೆಗಳು ಉಳ್ಳ ಲಿಂಗದಿ ಪುರುಷನಾಮಕನು-ಪಂಚಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯ, ಪಂಚತನ್ಮಾತ್ರಾ ಒಂದು ಮನಸ್ಸು ಹೀಗೆ ೧೬ ಕಳಾ ಯುಕ್ತವಾದ ಲಿಂಗದೇಹದಲ್ಲಿ, ಪುರುಷ ನಾಮಕನು=ಪುರೀಸೇತಿತಿ-ಪುರುಷ ನೆಂದು ಲಿಂಗದಲ್ಲಿ ತೋರುವನು. ಅನಿರುದ್ಧದೊಳು-ಶಾಂತೀರಮಣ ಅನಿರುದ್ಧ ರೂಪದಿ=ಅನಿರುದ್ಧ ದೇಹದಲ್ಲಿ ಶಾಂತಿದೇವಿಯ ಪತಿಯಾದ ಅನಿರುದ್ಧನಾಮಕ ಹರಿಯು ಅನಿರುದ್ಧ ರೂಪದಿ ಇರುವನು. ಪ್ರೇರಿಸುವ ಪ್ರದ್ಯುಮ್ನ ಸ್ಥೂಲ ಕಳೇವರದೊಳಿದ್ದು =ಸ್ಥೂಲ ಶರೀರದಲ್ಲಿ ಸಕಲ ತತ್ವೇಶರ ದ್ವಾರಾ ಜೀವರಿಗೆ ಪ್ರೇರಿಸಿ, ಪ್ರದ್ಯುಮ್ನರೂಪಿ ಹರಿಯು, ಸಕಲ ಕಾರ್ಯಗಳನ್ನು ಮಾಡಿಸುವನು ॥ ೨೬ ॥

**ಸೂಚನೆ :** ವ್ಯಾ. ದಾ. ಸಿ. ಕೌಮುದೀಕಾರರು ತಮ್ಮ ಟಿಪ್ಪಣಿಯಲ್ಲಿ ಈ ನಾಲ್ಕೂ ಭಗವದ್ರೂಪಗಳ ನಾಮ ವಿವರಣೆ ಮುಂತಾದವುಗಳನ್ನು ಬಹು ಸ್ವಾರಸ್ಯವಾಗಿ ಬರೆದಿರುವರು, ಮುಂದೆ ನೋಡಿ.

**ಭಾವಸೂಚನ :** ನ್ಹಾರಸಿಂಹೇತಿ ॥ ತದುಕ್ತಂ ಪ್ರಮೇಯ ಚಂದ್ರಿಕಾಯಾಂ ॥ ನರಸಿಂಹೋ ವಾಸುದೇವಾತ್ಮಾ ಸ್ವರೂಪೇತಿಷ್ಟತಿ ಪ್ರಭುಃ ॥ ಕಲಾ ಷೋಡಶಭಿರ್ಯುಕ್ತೋ ಪುರುಷಃ ವರ್ತತೇಽನಿಶಂ ॥ ಅನಿರುದ್ಧೇ ಅನಿರುದ್ಧಸ್ತು ಪ್ರದ್ಯುಮ್ನ ಸ್ಥೂಲದೇಹಗಃ ॥ ಸೃಷ್ಟೌ ಪುರುಷ ರೂಪೇಣ ಕೃತಂ ದೇಹ ಚತುಷ್ಟಯಮಿತಿ ॥ ೨೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಾರಸಿಂಹ" ಇತಿ ॥ ಓಂ ॥* ಏವಾ ಮಹಾನ್ ಬೃಹದ್ದಿವೋ ಅಥರ್ವಾ (ವಿವಕ್ತಿ) ನದಂ ವ ಓದತೀನಾಂ ॥ ಅವೋಚತಾಸ್ವಾಂ ತನ್ವಮಿಂದ್ರಮೇವ ನದಂ ಯೋ ಯುವತೀನಾಂ ॥* ಓಂ॥ ನರಸಿಂಹವತ್ ವಪುಃ ಆಕೃತಿಃ ಯಸ್ಯ ಸ ತಥೋಕ್ತಃ॥ ಶೀರ್ಯತ ಇತಿ ಶರಿತ್ವಾತ್ ಈ ರಣಾಚ್ಚೈವೇತ್ಯುಪ್ಯುಕ್ತೇಃ ॥ ಪುರುಷಃ "ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ವರ್ತಮಾನಃ ನೈನೇನ ಕಿಂಚನಾನಾವೃತಂ" ಇತ್ಯಾದಿ ಶ್ರುತೇಃ । ಪುರು ಪುರುಷಾರ್ಥಂ ಸನೋತಿ ದದಾತಿ ವಾ । ಷಣದಾನೇ ॥ ಅನಿರುದ್ಧಃ ಓಂ ॥* ಪಕ್ವಂ ಫಲಮಂ ಕೀವ(ಚ)ಧೂನುಹೀಂದ್ರ ಸಂಪಾವರಣಂ ವಸು ॥ ಸ್ವಯುರಿಂದ್ರ ಸ್ವರಾಳಸಿ ಸ್ಮದ್ದಿ(ದ್ದಿ)ಷ್ಟಃ ಸ್ವಯಶಸ್ತರಃ ಸವಾವೃಧಾನಃ ॥ ಓಂ ॥* ಅನಿಃ ಚೇಷ್ಟತಃ ಫಲಾನಾಂ ಪ್ರಾಪಕಃ। ರುದ್ಧಃ ಸರ್ವೇಷಾಂ ರೋಧಕಃ। ಸ್ವರಾಟ್। ಸ ಚಾಸೌ ಸ (ಸ ಇತಿ) ತಥೋಕ್ತಃ ॥ ೨೬ ॥

## ಕನ್ನಡಾರ್ಥ

ಜೀವ ಸ್ವರೂಪ ಮುಂತಾದ ದೇಹಗಳಲ್ಲಿ ಭಗವದ್ರೂಪಗಳ ಚಿಂತನವನ್ನು ಹೇಳುತ್ತಾರೆ "ನಾರಸಿಂಹ" ಎಂಬ ಪದ್ಯದಿಂದ.

"ನಾರಸಿಂಹ" ಎಂಬ ನಾಮವನ್ನೂ, "ಅನಿರುದ್ಧ" ಎಂಬ ನಾಮವನ್ನೂ ವಿವರಿಸುವ ಬೃಹತೀ ಮಂತ್ರಗಳನ್ನು ಉಲ್ಲೇಖಿಸಿರುತ್ತಾರೆ. "ನರ-ಸಿಂಹಾಕಾರವುಳ್ಳವನು ನಾರಸಿಂಹನು" ಎಂಬುದು ನಾರಸಿಂಹ ನಾಮಕ್ಕೆ ಬೃಹತೀ ಮಂತ್ರಾನುಗುಣವಾದ ಅರ್ಥ. ಈ ನಾರಸಿಂಹರೂಪೀ ಹರಿಯು "ಶರೀರ"

ವೆಂಬ ಶಬ್ದದಿಂದ ಹೇಳಿಸಿಕೊಳ್ಳುತ್ತಾನೆ-ಜೀವ ಸ್ವರೂಪ ದೇಹದಲ್ಲಿ ಇರುತ್ತಾನೆ.

ಲಿಂಗ ಶರೀರದಲ್ಲಿ-ಷೋಡಶ ಕಲಾಮಯವಾದುದರಲ್ಲಿ "ಪುರುಷ" ನಾಮದಿಂದ ಇರುತ್ತಾನೆ. "ಈ ಪ್ರಸಿದ್ಧನಾದ ಹರಿಯು ಎಲ್ಲ ಶರೀರಗಳಲ್ಲಿ ಇರುತ್ತಾನೆ ಮತ್ತು ಈ ಹರಿಯಿಂದ ವ್ಯಾಪಿಸಲ್ಪಡದ ಯಾವ ವಸ್ತುವೂ ಇರುವದಿಲ್ಲ" ಎಂದು ಶ್ರುತಿ ಇರುವದರಿಂದ ದೇಹದಲ್ಲಿರುವ ಪರಮಾತ್ಮನಿಗೆ ಪುರುಷನೆಂದು ಕರೆಯುತ್ತಾರೆ. ಅನಿರುದ್ಧ ಶರೀರದಲ್ಲಿ ಅನಿರುದ್ಧ ರೂಪದಿಂದ ಇರುತ್ತಾನೆ. ಅನಿರುದ್ಧ ನಾಮಕ್ಕೆ ಬೃಹತೀ ಮಂತ್ರಾನುಗುಣವಾದ ಅರ್ಥ "ಅನಿ"=ಕ್ರಿಯಾ ವ್ಯಾಪಾರಗಳನ್ನು ಪ್ರವರ್ತಿಸುವವನು ಅಂದರೆ ಫಲ ಮುಂತಾದವುಗಳನ್ನು ಕ್ರಿಯಾನುಸಾರವಾಗಿ ತಂದುಕೊಡತಕ್ಕವನು; "ರುದ್ಧ"=ಸರ್ವ ಸ್ವತಂತ್ರನಾದುದರಿಂದ ಎಲ್ಲರನ್ನೂ ನಿರೋಧಿಸುವವನು. ಆದುದರಿಂದ ಪರಮಾತ್ಮನು ಅನಿರುದ್ಧನು" ॥ ೨೬ ॥

ಅವತರಣಿಕಾ: ಹಿಂದೆ ಸಂಧಿ ೮-ರಲ್ಲಿ ಪೇಳದಿದ್ದ ಸ್ಥೂಲದೇಹಗತ-ಸಪ್ತಧಾತುಗಳಲ್ಲಿಪ್ಪ ರೂಪಗಳನ್ನು ಸ್ಥೂಲ ಮತಿಗಳಿಗೆ ತಿಳಿಸಲು, ದೇಹದ ಮೇಲ್ ಕಾಣಿಸುವ ತ್ವಗಾದಿ ಸಪ್ತ ಧಾತುಗಳ ವಿವರಣೆ ಮಾಡುತ್ತಾರೆ. ಮಾನಸ ಸ್ಮೃತಿಯಲ್ಲಿ ಮೊದಲಿಗೆ ಪೇಳಿದ್ದಾರೆ. ದಾಸರು ಕೊನೆಗೆ ವಿಸ್ತರಿಸಿದ್ದಾರೆ. ಜ್ಞಾನಿಗಳ ವಚನಗಳನ್ನು ಸರಿಯಾಗಿ ತಿಳಿಸಲು ಸದ್ಗುರುಗಳು ಮಾರ್ಗದರ್ಶಕರಾಗಬೇಕು.

ಮೂಲ :

**ಮೊದಲು ತ್ವಕ್ಚರ್ಮಗಳು ಮಾಂಸವು ।**
**ರುಧಿರಮೇದೋ ಮಜ್ಜವಸ್ಥಿಗ ।**
**ಳಿದರೊಳಗೆ ಏಕೋನ ಪಂಚಾಶನ್ಮರುದ್ಗಣವು ॥**
**ನಿಧನ ಹಿಂಕಾರಾದಿ ಸಾಮಗ ।**
**ಅದರ ನಾಮದಿ ಕರೆಸುತೊಂಭ ।**
**ತ್ತಧಿಕ ನಾಲ್ವತ್ತೆನಿಪ ರೂಪದಿ ಧಾತುಗಳೊಳಿಪ್ಪ ॥ ೨೭ ॥**

**ಪದ್ಯಾರ್ಥ:** ಮೊದಲು=ಸ್ಥೂಲ ದೇಹದಮೇಲೆ ಮೊದಲಿಗಿರುವ ತ್ವಕ್, ತ್ವತು ದಪ್ಪಾದ ತೊಗಲು, ತ್ವಕ್ಕಿನವೊಳಗೆ ಸಮ್ಮಂಧಿಸಿದ ಬಿಳುಪಾದ ಚರ್ಮ. ಇದರವೊಳಗೆ ಮಾಂಸ-ಮಾಂಸದಲ್ಲಿ ರುಧಿರ=ರಕ್ತ, ರಕ್ತದಲ್ಲಿ

ಮೇದೋ-ಮೇದೋದಿಂದ ಮಜ್ಜಾ. ಅಲ್ಲಿಂದ ಅಸ್ಥಿ ಎಲುವುಗಳು, ಹೀಗೆ ಸಪ್ತಧಾತುಗಳಲ್ಲಿ-ಏಕೋನಪಂಚಾಶದ್ ಮರುದ್ಗಣವು, ೪೯ ಜನರು ಮರುತುಗಳು (ಇವರಲ್ಲಿಪ್ಪ ಪ್ರಾಣ ರೂಪಗಳು) ಮತ್ತು ಸಪ್ತ ಸಾಮಗಳಲ್ಲಿಪ್ಪ ಭಗವದ್ರೂಪಗಳು ಸಂಧಿಯ ಸಾರದಲ್ಲಿ ವಿವರಿಸಿದೆ. ಹೀಗೆ ನಿಧನ-ಹಿಂಕಾರಾದಿ ಏಳು ಸಾಮಗತ ರೂಪಗಳು ಅದೇ ನಾಮದಿಂದ ಕರೆಸುತ್ತ ಒಂಭತ್ತಧಿಕ ನಾಲ್ವತ್ತು ರೂಪದಿ=ನಾಲ್ವತ್ತರೊಂಭತ್ತ ರೂಪದಿಂದ ಶ್ರೀಹರಿಯು ಸಪ್ತ ಧಾತುಗಳೊಳಗಿಪ್ಪನು ॥ ೨೭ ॥ ಮಾನಸ ಸ್ಮೃತಿಯಲ್ಲಿಯೂ ಹೇಳಿದ್ದಾರೆ.

**ಭಾವಸೂಚನ:** ಮೊದಲೇತಿ ॥ ಏತತ್ ಅಧ್ಯಾತ್ಮೇ ಸ್ಪಷ್ಟ ॥

**ಸೂಚನೆ:** ೨೮ನೇ ಪದ್ಯವು ಈ ಪದ್ಯಕ್ಕೆ ಸಂಬಂಧಿಸಿದುದರಿಂದ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ೨೭-೨೮ ಎರಡೂ ಪದ್ಯಗಳ ಭಾವ ಸಂಗ್ರಹಿಸಿ ಒಂದೆಡೆ ರಚಿಸಿದ್ದಾರೆ. ೨೮ನೇ ಪದ್ಯದಲ್ಲಿ ನೋಡುವದು.

**ಅವತರಣಿಕಾ:** ಇನ್ನು ಸಪ್ತ ಧಾತುಗಳಲ್ಲಿಯೂ, ಅನ್ನಮಯಾದಿಕೋಶ ಐದು ಉಂಟು. ಅಲ್ಲಿಯೂ ಸಪ್ತಸಾಮಗನಾಮಕನಾದ ಹರಿಯು ಇದ್ದು, ಜೀವರಿಗೆ ಕ್ಲುಪ್ತ ಭೋಗಗಳನ್ನು ಕೊಡುತ್ತ ತ್ರಯಾವಸ್ಥೆಗಳನ್ನು ಕೊಡುವನೆಂದು ಈ ಸಪ್ತ ಧಾತುಗತವಾದ ರೂಪ ಅವಶ್ಯವಾಗಿ ಚಿಂತನೀಯವೆಂದು ಉಪದೇಶಿಸುತ್ತಾರೆ.

ಮೂಲ :

**ಸಪ್ತಧಾತುಗಳೊಳಹೊರಗೆ ಸಂ ।**
**ತಪ್ತ ಲೋಹಗತಾಗ್ನಿಯಂದದಿ ।**
**ಸಪ್ತಸಾಮಗನಿಪ್ಪ ಅನ್ನಮಯಾದಿ ಕೋಶದೊಳು ॥**
**ಲಿಪ್ತನಾಗದೆ ತತ್ತದಾಹ್ವಯ ।**
**ಕ್ಲುಪ್ತಭೋಗವ ಕೊಡುತ ಸ್ವಪ್ನ ಸು ।**
**ಷುಪ್ತಿ ಜಾಗ್ರತೆಯೀವ ತೈಜಸ ಪ್ರಾಜ್ಞ ವಿಶ್ವಾಖ್ಯ ॥ ೨೮ ॥**

**ಪದ್ಯಾರ್ಥ:** ಸಪ್ತಧಾತುಗಳೊಳ ಹೊರಗೆ=ಅಂದರೆ ಈ ಏಳು ಧಾತು, ತ್ವಕ್ಕು ಚರ್ಮಾದಿಗಳ ಒಳಗೆ, ಕ್ರಮವಾಗಿ ಒಂದರೊಳಗೆ, ಒಳಗಿರುವ ಧಾತುಗಳ ಹೊರಗೆ-ಹೀಗೆ ಸಪ್ತ ಧಾತುಗಳಲ್ಲಿ ಕ್ರಮವಾಗಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಈ ಐದೂ ಕೋಶಗಳಲ್ಲಿ ಸಪ್ತಸಾಮಗ=ಸಾಮವೇದ ಪ್ರತಿಪಾದ್ಯ, ಪ್ರಸ್ಥಾವ ಹಿಂಕಾ

ರಾದಿ ೭ ರೂಪಗಳು, ಸಂತಪ್ತ ಲೋಹಗತಾಗ್ನಿಯಂದದಿ=ಕಾದ ಕಬ್ಬಿಣದಲ್ಲಿ ಪ್ರಜ್ವಲಿಸುವ ಕೆಂಡದಂತೆ ತೇಜೋ ರೂಪದಿಂದ, ಸಪ್ತಸಾಮಗ–ಪ್ರಸ್ತಾವಾದಿ ೭ ರೂಪಗಳಿಂದ, ತತ್ತದಾಹ್ವಯನಾಗಿ, ಆಯಾ ಹೆಸರುಗಳಿಂದ ಕರೆಸುತ್ತಾ ಇದ್ದು, ಕ್ಲುಪ್ತ ಭೋಗವ ಕೊಡುತ=ಜೀವನಿಗೆ, ಬಲಪುಷ್ಟಿ ಸೌಂದರ್ಯಾದಿ ಮತ್ತು ಕರ್ಮಾನುಸಾರವಾಗಿ ಯಾವ ದೇಹಗಳಲ್ಲಿ ಎಷ್ಟೆಷ್ಟು ಕರ್ಮ ಅನು ಭೋಕ್ತವ್ಯವೆಂದು ಸತ್ಯ ಸಂಕಲ್ಪನು ನಿಯಮಿಸಿದ್ದಾನೆ. ಇದೇ ಕ್ಲುಪ್ತ ಭೋಗಗಳನ್ನು ಕೊಡುತ್ತಾನೆ. ಜೀವನಿಗೆ ಸ್ವಪ್ನ–ಸುಷುಪ್ತಿ ನಿದ್ರಾ ಜಾಗ್ರ ದವಸ್ಥಾತ್ರಯುಗಳನ್ನೂ ಕ್ರಮವಾಗಿ, ತೈಜಸ=ಸ್ವಪ್ನ, ನಿದ್ರಾಪ್ರಾಜ್ಞ, ವಿಶ್ವನು ಜಾಗ್ರದವಸ್ಥಾ ಕೊಡುತ್ತಾರೆಂದು ಅಭಿಪ್ರಾಯ (ಸಂಧಿಯ ಸಾರದಲ್ಲಿ ಇದರ ವಿವರ ನೋಡಿರಿ). ವ್ಯಾ. ದಾ. ಸಿ. ಕೌಮುದಿಕಾರರು ಸಪ್ತ ಧಾತುಗಳ ನಾಮ ವಿವರಣ ಅಲ್ಲಿಪ್ಪ ರೂಪ ಕಾರ್ಯಗಳ ವಿವರಣೆ ಬರೆದಿರುವರು ಈ ಜ್ಞಾನಿ ಗಳೇ ತಾರಕರು.

**ಭಾವಸೂಚನ:** ಸಪ್ತೇತಿ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮೊದಲು" ಇತಿ || "ಅಸ್ಥಿರಶ್ಚಾಸ್ಥಿನಾಮಕಃ ||" ಅಸ್ಥಿಸ್ಥಿತೋ ಹರಿಃ|| ಸ್ಪರ್ಶ ಸಂಸ್ಥಿತಃ ಸ್ಪರ್ಶನಾಮಕಃ || ಸ್ಪರ್ಶಹೇತುತ್ವತಃ ಸ್ಪರ್ಶನಾಮಾ ಸ ಭಗ ವಾನ್ ಹರಿಃ || ಮಜ್ಜಾಸುಸ್ಥಃ ಸ ಮಜ್ಜಾಖ್ಯಃ ಮದಂ ಜನಯತೀತಿ ಹ || ಪ್ರಮಾಣಂ ಸಾರಯೇತ್ ಯಸ್ಮಾತ್ ಮಾಂಸಾಖ್ಯಃ ಮಾಂಸ ಸಂಸ್ಥಿತಃ || ಲೋಹಿತಾಖ್ಯಃ ರಕ್ತವರ್ಣಃ ಲೋಹಿತಸ್ಥಃ ಜನಾರ್ದನಃ||" ಇತಿ ಐತರೇಯೇ|| ನಿಧನ ಹಿಂಕಾರಾದಿ ಪ್ರಸ್ತಾವೋದ್ಗೀಥ ಪ್ರತಿಹಾರೋಪದ್ರವಾಹ್ವ ಸಪ್ತಸಾಮಾನಿ|| ಪಂಚಕಂ ನಿರುಕ್ತಮ್ ದ್ವಯಂ ಚ "ಆದಿಃ ಕಲ್ಪಾದಿ ಹೇತುತ್ವಾತ್ ||" ಇತಿ|| "ದುಷ್ಟೋಪದ್ರವ ಕರ್ತೃತ್ವಾತ್ ||" ಇತಿ ಚ ಛಾಂದೋಗ್ಯೇ || ೨೮ ||

**ಕನ್ನಡಾರ್ಥ**

"ತ್ವಕ್, ಚರ್ಮ, ಮಾಂಸ, ರುಧಿರ, ಮೇದಸ್ಸು, ಮಜ್ಜಾ, ಅಸ್ಥಿ ಹೀಗೆ ಸಪ್ತಧಾತುಗಳಿರುತ್ತವೆ. ಸ್ಥೂಲ ದೇಹದಲ್ಲಿರುವ ಈ ಸಪ್ತ ಧಾತುಗಳಲ್ಲಿ ಹರಿಯು ಆಯಾ ನಾಮಕ ರೂಪಗಳಿಂದ ಇರುತ್ತಾನೆ. "ಅಸ್ಥಿರ–ಅತಿ ಸ್ಥಿರ ನಾದುದರಿಂದ ಅಸ್ಥಿಯಲ್ಲಿ ಅಗ್ನಿಶಬ್ದ ವಾಚ್ಯನಾಗಿ ಹರಿಯು ಇರುತ್ತಾನೆ.

ಸ್ಪರ್ಶೇಂದ್ರಿಯದಲ್ಲಿದ್ದು ಸ್ಪರ್ಶವನ್ನುಂಟುಮಾಡುವದರಿಂದ ಸ್ಪರ್ಶನೆಂದೆನಿಸಿಕೊಳ್ಳುತ್ತ ಸ್ಪರ್ಶ "ತ್ವಕ್" ನಲ್ಲಿ ಇರುತ್ತಾನೆ. ಮದವನ್ನು ಜನಯಿಸುವದರಿಂದ-ಹುಟ್ಟಿಸುವದರಿಂದ "ಮಜ್ಜಾ" ಎಂದು ಹೇಳಿಸಿಕೊಳ್ಳುತ್ತ ಮಜ್ಜಾದಲ್ಲಿರುವನು. ಪ್ರಮಾಣವನ್ನು ಸಾರಗೊಳಿಸುವದರಿಂದ "ಮಾಂಸ" ಎಂದು ಹೇಳಿಸಿಕೊಳ್ಳುತ್ತ-ಮಾಂಸದಲ್ಲಿ ಮಾಂಸ ನಾಮಕನಾಗಿ ಇರುತ್ತಾನೆ. ಲೋಹಿತ-ಕೆಂಪು ಬಣ್ಣದ ರೂಪವುಳ್ಳವನಾಗಿ ರಕ್ತದಲ್ಲಿ (ಲೋಹಿತ) ಇರುವದರಿಂದ ಲೋಹಿತನೆನಿಸಿಕೊಳ್ಳುತ್ತಾನೆ." ಹೀಗೆ ಐತರೇಯ ಉಪನಿಷದ್ಭಾಷ್ಯದಲ್ಲಿ ಹೇಳಲಾಗಿರುತ್ತದೆ. ಇವುಗಳಲ್ಲಿ ಶ್ರೀಹರಿಯು ಸಪ್ತಸಾಮಗಳಿಂದ ವಾಚ್ಯನಾಗಿ ಇರುತ್ತಾನೆ. ೧) ನಿಧನ, ೨) ಹಿಂಕಾರ, ೩) ಆದಿ, ೪) ಉದ್ಗೀಥ, ೫) ಪ್ರಸ್ತಾವ, ೬) ಪ್ರತಿಹಾರ, ೭) ಉಪದ್ರವ ಎಂದು ಏಳು ಸಾಮಗಳು. ಅವುಗಳಲ್ಲಿ ಐದು ಸಾಮಗಳ ವಿಷಯವಾಗಿ (ನಿಧನ, ಹಿಂಕಾರ, ಉದ್ಗೀಥ, ಪ್ರಸ್ತಾವ, ಪ್ರತಿಹಾರಗಳ) ಹಿಂದೆಯೇ ಹೇಳಲಾಗಿರುತ್ತದೆ. ಇನ್ನುಳಿದ "ಆದಿ" "ಉಪದ್ರವ"ಗಳೆಂಬ ಎರಡು ಸಾಮಗಳಲ್ಲಿ ವಾಚ್ಯವಾಗಿರುವ ಬಗೆಯನ್ನು ತಿಳಿಸುತ್ತಾರೆ. "ಪರಮಾತ್ಮನು ಕಲ್ಪಾದಿಗಳಿಗೆ ಕಾರಣನಾದುದರಿಂದ ಅಂದರೆ ಕಲ್ಪವನ್ನು ಆರಂಭಿಸುವದರಿಂದ ಕಲ್ಪಾದಿಯಲ್ಲಿ ಜಗತ್ಸೃಷ್ಟಿ ಮಾಡುವದರಿಂದಲೂ "ಆದಿ" ಎಂಬ ಸಾಮದಿಂದ ಹೇಳಿಸಿಕೊಳ್ಳುತ್ತಾನೆ." ದುಷ್ಟರಿಗೆ ಉಪದ್ರವವನ್ನುಂಟು ಮಾಡುವದರಿಂದ "ಉಪದ್ರವ" ಎಂದು ಕರೆಯಲ್ಪಡುತ್ತಾನೆ" ಎಂಬುದಾಗಿ ಛಾಂದೋಗ್ಯ ಭಾಷ್ಯದಲ್ಲಿ ನಿರೂಪಿಸಿರುತ್ತಾರೆ ||೨೭-೨೮||

**ಅವತರಣಿಕಾ:** ಈ ಸಪ್ತ ಧಾತುಗಳಲ್ಲಿ ಅಸ್ಥಿ, ಮಜ್ಜಾ, ಅಂಗುಲಿ, ಪರ್ವಗಳಲ್ಲಿ ೩೬೦ ರೂಪಗಳಂತೆ, ೧೦೮೦ ರೂಪಗಳ ಚಿಂತನಾಕ್ರಮ ತತ್ಫಲವನ್ನು ವರ್ಣಿಸುತ್ತಾರೆ.

ಮೂಲ :

**ತೀವಿಕೊಂಡಿಹವಲ್ಲಿ ಮಜ್ಜ ಕ ।**
**ಳೇವರದಿಯುಂಗುಲಿಯ ಪರ್ವದ ।**
**ಠಾವಿನಲಿ ಮುನ್ನೂರು ಅರುವತ್ತೆನಿಪ ತ್ರಿಸ್ಥಳದಿ ॥**

**ಸಾವಿರದ ಯೆಂಭತ್ತು ರೂಪವ ।**
**ಕೋವಿದರು ಪೇಳುವರು ದೇಹದಿ ।**
**ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ ॥ ೨೯ ॥**

**ಪದ್ಯಾರ್ಥ:** ತೀವಿ=ತೀವು, ತುಂಬು, ಒಳಹೋಗು, ತೀವುಕೊಂಡಿಹವಲ್ಲಿ=ಅಲ್ಲಿ ತುಂಬಿಕೊಂಡಿಹವು. ಎಲ್ಲೆಂದರೆ, ಮಜ್ಜ ಅಸ್ಥಿಯ ಮೇಲಿದ್ದ ೬ನೇ ಧಾತುವಾದ ಮಜ್ಜಾದಲ್ಲಿ ೩೬೦ ರಾತ್ರಿ ಹಗಲು ಸಂಧಿಕಾಲ ಸಂಧ್ಯಾ ದೇವತೆಗಳಲ್ಲಿ ೩೬೦ ಭಗವದ್ರೂಪ. ಕಳೇವರದಿ=ಕಲೇ ಅವ್ಯಕ್ತ ಧ್ವನೌ, ವರಂ=ಶ್ರೇಷ್ಠಂ, ಅಸ್ಪಷ್ಟವಾದ ಹೊರಗೆ ತೋರಲಿಕ್ಕೆ ಧ್ವನಿ ಶಬ್ದನಾದ ಕೊಡಲು ಶ್ರೇಷ್ಠವಾದದು ಕಳೇವರವೆಂದು ಕರೆಸುತ್ತದೆ. (ಹೀಗೆ ವಿಗ್ರಹ ಕೋಶ). "ಸಾಧನ ಶರೀರವಿದು ನೀ ದಯದಿ ಕೊಟ್ಟದು ಸಾಧಾರಣವಲ್ಲ"ವೆಂತ ದಾಸರ ವಚನ. ಬಹು ವ್ಯಕ್ತವಾಗಿ ತೋರಗೊಡದ ಭಗವಂತನನ್ನು ಅಂತರಂಗ ಉಪಾಂಶು ಧ್ವನಿಯಿಂದ ಉಚ್ಚರಿಸಿ ಜಪ ಮಾಡಲಿಕ್ಕೆ ಶ್ರೇಷ್ಠವಾದುದು. ಈ ಶರೀರ ಅಂತಃಬಾಹ್ಯ ಅವಯುವಗಳೆಲ್ಲವೂ ಕಳೇವರವೆಂತಲೇ ಕರೆಸುತ್ತವೆ. ಇಲ್ಲಿ ಕಳೇವರ ಶಬ್ದ ಶರೀರಾಂಗ ಅಸ್ಥಿ ಎಂತಲೇ ಉಪನಿಷದ್ವಾಕ್ಯದಂತೆ ದಾಸರು ಪ್ರಯೋಗಿಸಿದ್ದಾರೆ. ಇಲ್ಲವೆ ಪ್ರಮೇಯಕ್ಕೆ ಹೊಂದುವದಿಲ್ಲ-ಉಪನಿಷದ್ವಾಕ್ಯಗಳಿಗೆ ಶರೀರ ಅಂಗವಾದ ೩೬೦ ಅಸ್ಥಿಗಳಲ್ಲಿ ರಾತ್ರಿ ದೇವತೆಗಳಿಗೆ ನಿಯಾಮಕ ರೂಪಗಳಲ್ಲಿ ಹರಿಯು ೩೬೦ ರೂಪ ಅಂಗುಲಿಯ ಪರ್ವಗಳಲ್ಲಿ ಹಸ್ತ ಪಾದಾಂಗುಲಿಯ ಪರ್ವ ಕೀಲುಗಳಲ್ಲಿ ೩೬೦ ದಿವಸಾಭಿಮಾನಿ ದೇವತೆಗಳಲ್ಲಿ ೩೬೦ ಭಗವದ್ರೂಪ, ಅಸ್ಥಿಗಳ ಜೋಡಣೆಗೆ ಸಂದುಕೀಲು, ಈ ಕೀಲಿಗೆ ಅಸ್ಥಿಗೆ ಸಂಬಂಧಗೈಸಲು ಮಜ್ಜಾ ಜಿಗುಟಾದ ಪದಾರ್ಥ ಹೀಗೆ ಮೂರು ಧಾತುಗಳಲ್ಲಿ ಒಟ್ಟಗೆ ೧೦೮೦ ರೂಪಗಳಿಂದ ದೇವತೆಗಳಿಂದ ಸಹಿತನಾಗಿ, ರಮಾರಮಣ ಶ್ರೀ ಲಕ್ಷುಮಿ ರಮಣನು ಕ್ರೀಡಿಸುವನು-ವಿಹಾರ ಮಾಡುವನು ಎಂದು ಈ ಪ್ರಕಾರ ಚಿಂತಿಸಿಡರೆ ಆಯುರಭಿವೃದ್ಧಿಯಾಗುತ್ತದೆ. **ಗೋಪಾಲ ದಾಸರು.** ಮುನ್ನೂರಾ ಅರವತ್ತು ರೂಪ ಮಜ್ಜದಲ್ಲಿ । ಮುನ್ನೂರಾ ಅರವತ್ತು ರೂಪ ಅಸ್ಥಿಯಲ್ಲಿ ಮುನ್ನೂರಾ ಅರವತ್ತು ರೂಪ ಅಂಗುಲಿ ಪರ್ವದಲ್ಲಿಪ್ಪವೆಂಬಂಥ ವಿವರವನರಿಯದೇ ॥ ೫. ಯಾವತ್ತು ಕೂಡಲ್ಲಿ ಏಳು ಧಾತುಗಳೊಳು ಸಾವಿರದೆಂಭತ್ತು ರೂಪಗಳು ॥ ಉ. ಸು. ಪುಟ ೧೯೩.

**ಭಾವಸೂಚನ :** ತೀವೇತಿ–ವಿಸ್ತಾರ ಯುಕ್ತನಾಗಿ । ಅಂಗುಲೇತಿ–ಅಧ್ಯಾತ್ಮೇಚ್ಛಾ ॥ ಅಸ್ಥಿಗಳಲಿ ಮುನ್ನೂರಾ ಅರವತ್ತು, ಭಗವದ್ರೂಪ ಮಜ್ಜದಲ್ಲಿ ಮುನ್ನೂರಾ ಅರವತ್ತು, ಅಂಗುಲಿ ಪರ್ವಗಳಲ್ಲಿ ಮುನ್ನೂರಾ ಅರವತ್ತು, ಇಷ್ಟು ಕೂಡಿ ಸಾವಿರದಾಯೆಂಭತ್ತು ಭಗವದ್ರೂಪಗಳಾಗುತ್ತವೆ ॥ ೨೯ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ತೀವಿ" ಇತಿ ॥ ಸಮ್ಮರ್ದಸಿ ಪರಜ್ಞಾನಾತ್ತು ಪರ್ವಾಣಿ ವಿಷ್ಣೋಃ ರೂಪಾಣಿ ॥ ಆಸ್ಥಾನಾತ್ ಮದನಾಚ್ಚೈವ ಹ್ಯಸ್ಥಿ ಮಜ್ಜಾಭಿಧಾನಿ ಚ ॥" ಷಷ್ಟ್ಯುತ್ತರ ಶತತ್ರಯಮಿತ್ಯುಕ್ತೇಃ ॥ ಪೃಥಕ್ ಮೇಲನೇತು "ಸಾಶೀತಿಕ ಸಹಸ್ರಕಮ್" ಇತ ಚ ಐತರೇಯೇ ॥ ೨೯ ॥

**ಕನ್ನಡಾರ್ಥ**

"ತೀವಿ" ಇತಿ ॥ "ಪೂರ್ಣ ಜ್ಞಾನಮಯವಾದುದರಿಂದ ವಿಷ್ಣುವಿನ ರೂಪಗಳಿಗೆ ಪರ್ವಗಳೆಂದು ಕರೆಯುತ್ತಾರೆ.

ಅತಿದಾರ್ಢ್ಯ–ಸ್ಥೈರ್ಯವೀಯುವದರಿಂದ ಅಸ್ಥಿಗಳೆಂದೂ–ಮದವನ್ನು ಜನಯಿಸುವದರಿಂದ ಮಜ್ಜಾಗಳೆಂದೂ ಅಸ್ಥಿ–ಮಜ್ಜಾಗತ ಭಗವದ್ರೂಪಗಳಿಗೆ ಕರೆಯುತ್ತಾರೆ. ಅಸ್ಥಿ, ಮಜ್ಜಾ, ಪರ್ವ ಈ ಮೂರರಲ್ಲಿಯೂ ಪ್ರತ್ಯೇಕವಾಗಿ ಒಂದೊಂದರಲ್ಲಿ ೩೬೦ ರೂಪಗಳಂತೆ. ಒಟ್ಟಿಗೆ ೧೦೮೦ ರೂಪಗಳಿಂದ ಈ ದೇಹದಲ್ಲಿ ಇರುತ್ತಾನೆ" ಎಂದು ಐತರೇಯ ಭಾಷ್ಯದಲ್ಲಿ ನಿರೂಪಿಸಲಾಗಿರುತ್ತದೆ ॥ ೨೯ ॥

**ಅವತರಣಿಕಾ:** ಹಿಂದೆ ಸಂಧಿ ೭-೮-೯ರಲ್ಲಿ ಪೇಳಿದಂತೆ ಮಾನಸ ಸ್ಮೃತಿ ಚೆನ್ನಾಗಿ ತಿಳಿದು ಅದರಂತೆ ಈ ಎಲ್ಲ ರೂಪಗಳನ್ನೂ ಸಾವಕಾಶದಿಂದ ಸರಿಪಡಿಸಿಕೊಂಡು ನಿತ್ಯ ಈ ರೂಪಗಳನ್ನೆಲ್ಲ ದೇಹದಲ್ಲಿ ಚಿಂತಿಸಿ ಧ್ಯಾನ ಉಪಾಸನೆಗೈವ ಅಲ್ಪ ಜೀವಿಗಳಿಗೆ ಆಗುವ ಮುಕ್ತಿಯನ್ನು ನಿರೂಪಿಸುತ್ತಾರೆ.

ಮೂಲ :

**ಕೀಟ ಪೇಶಸ್ಕಾರಿ ನೆನವಿಲಿ ।**
**ಕೀಟ ಭಾವನ ತೊರೆದು ತದ್ವತ್ ।**
**ಖೇಟರೂಪವನೈದಿಯಾಡುವ ತೆರದಿ ಭಕುತಿಯಲಿ ॥**

**ಕೈಟಭಾರಿಯ ಧ್ಯಾನದಿಂದ ಭ ।**
**ವಾಟವಿಯನತಿ ಶೀಘ್ರದಿಂದಲಿ ।**
**ದಾಟಿ ಸಾರೂಪ್ಯವನು ಐದುವರಲ್ಪಜೀವಿಗಳು ॥ ೩೦ ॥**

**ಪದ್ಯಾರ್ಥ :** ಕೀಟ–ಒಂದು ತರದ ಉದ್ದಾಗಿರುವ ಹಸರು ಹುಳವನ್ನು ಪೇಶಸ್ಕಾರಿ=ಪೇಶ ಶಾಂತೀತಿ ಪೇಶೆ ಅಂದರೆ ಅವಯಾವಯುವ ಯಾವದು ಮಾಡುವದೋ ಅದಕ್ಕೆ ಪೇಶಿ ಎಂತಲೂ, ತನ್ನಂತೆ ದೇಹ ಮಾಡುವ ಶಕ್ತಿಯುಳ್ಳ ಕುಂಬಾರನ ಹುಳ, ಕುರಡಿಕುತಾರ ಮಣ್ಣಿನಿಂದ ಚಿಕ್ಕ ಮನೆ ಕಟಿ ಒಂದು ಹಸಿರು ಹುಳ ತಂದಿಟ್ಟು ಹೊರಗೆ ಹೋಗದಂತೆ ಮಾಡಿ, ಅದನ್ನು ಭಯಪಡಿಸುತ್ತಾ, ಕಾಲಕಾಲಕ್ಕೆ ತಕ್ಕ ಆಹಾರವನ್ನು ತಂದು ಅದಕ್ಕೆ ತಿನಿಸಿ ಪ್ರೀತಿ ಬಡಿಸುತ್ತದೆ. ಹೀಗೆ ಪೇಶಸ್ಕಾರಿ ನೆನವಿಲಿ ಅದೇ ಧ್ಯಾನದಿಂದ ಹಸರು ಹುಳುವು ಕಿಂಚತ್ ಭಯ–ಹೆಚ್ಚಿನ ಪ್ರೀತಿಯುಳ್ಳದ್ದಾಗಿ ಕೆಲದಿನಗಳಮೇಲೆ ಕೀಟಭಾವವ ತೊರೆದು=ಹಸಿರು ಹುಳದ ಆಕೃತಿ ದೇಹವನ್ನು ಬಿಟ್ಟು, ತದ್ವತ್=ಕುರಡಿ ಕುತಾರಿಯಂತೆ ಸೌರಂಭ ಭಯಯೋಗದಿಂದ ಆಗಿ ಖೇಟ ರೂಪವನ್ನೈದಿಯಾಡುವ ತೆರದಿ=ಹಾರಾಡುವ ರೆಕ್ಕೆಯುಳ್ಳ ಕುಂಬಾರನ ಹುಳದಂತೆಯಾಗಿ ಹೊರಗೆ ಬಂದು ಹಾರುತ್ತಲಿದೆ. ಇದರಂತೆ ಕೈಟಭಾರಿ= ಕೈಟಭನೆಂಬ ದೈತ್ಯನನ್ನು ಹರಿಯು ಸಂಹರಿಸಿದ ಕಾರಣ ಶ್ರೀಹರಿಗೆ ಕೈಟಭಾರಿ ಎಂತ ನಾಮವುಳ್ಳ ಪರಮಾತ್ಮನ ರೂಪಗಳನ್ನು ಭಕುತಿಯಲಿ=ಶುದ್ಧವಾದ ಪ್ರೀತಿ ಸ್ನೇಹದಿಂದ ಪ್ರತಿನಿತ್ಯ ಧ್ಯಾನೋಪಾಸನೆ ಮಾಡುತ್ತ ಭವಾಟವಿ ಸಂಸಾರ ಬಂಧನದಿಂದ ಭವವೆಂಬ ಅಡವಿಯನ್ನು ದಾಟಿ, ಬ್ರಹ್ಮ ಪ್ರಳಯಾಂತರದಲ್ಲಿ ವಿರಜಾ ಸ್ನಾನದಿಂದ ತ್ಯಕ್ತಲಿಂಗರಾಗಿ, ಸಾರೂಪ್ಯವನು=ಹರಿಗೆ ಸಮಾನವಾದ ರೂಪವನ್ನು ಹೊಂದುವರು, ಅಂದರೆ ಶಂಖ ಚಕ್ರ ಗದಾ ಪದ್ಮ, ಪೀತಾಂಬರ ಕಿರೀಟ ಧಾರಿಗಳಾಗಿ (ಶ್ರೀವತ್ಸ ಚಿನ್ಹ ವಿನಾ) ಸಾರೂಪ್ಯ ಮುಕ್ತಿಯನ್ನು ಹೊಂದುವರು–ಕಿಂಚಿದಲ್ಪ ಸಾಂಶ ಜೀವಿಗಳು ಅಸ್ವತಂತ್ರರು.

**ಭಾವಸೂಚನ:** ಕೀಟೇತಿ ॥ ಕೀಟಪೇಶಸ್ಕೃತಾಧ್ಯಾಮನ್ ಕುಡ್ಯಾಂ ತೇನ ಪ್ರವೇಶಿತಃ ॥ ಯಾತಿತತ್ ಸಮತಾರಾಜನ್ ಪೂರ್ವರೂಪ ಮಸತ್ಯರ್ಜ॥ ಇತ್ಯೇಕಾದಶಸ್ಕಂಧ ಭಾಗವತೋಕ್ತೇಃ ॥ ತಾತ್ಪರ್ಯ ॥ "**ತಂ ಯಥಾ ಯಥೋಪಾಸತೇ ತತ್ತಥೈವ** ಭವತೀತಿ ಶ್ರುತೇಃ ॥ ಸತ್ಯಲ್ಪಾತ್ಯಲ್ಪ

ವಿದ್ವೇಷೇ ಭೋಜನಂ ದಾಸ್ಯತೀತಿತು ॥ ಸ್ನೇಹ ಬಾಹುಲ್ಲ್ಯತಃ ಕೀಟಃ ಪೇಶಸ್ಕಾರೀ ಸಮೋಭವೇತ್ । ದ್ವೇಷೇ ಸರ್ವಾತ್ಮನಾ ನಷ್ಟೇ ಸ್ನೇಹೇ ಚೈವ ವಿವರ್ಧತೇ । ಸ್ವರೂಪತಾತದೈವಸ್ಯಾ ಕೀಟಸ್ಯೈವಂ ಹರೇರಪಿ ॥ ನಹಿ ಪೇಶಃ ಕೃತಂ ಕಿಂಚಿತ್ ಫಲ ದಾತೃತ್ವಮಿಷ್ಯತೇ ॥ ಸ್ವಾತಂತ್ರ್ಯ ದ್ವಿದ್ವಿಷಾಣಂ ಹಿ ಕೇಶವೋ ನ ಸುಖಪ್ರದ ಇತಿ ॥ ಸ್ವಾತಂತ್ರ ವಿವೇಕೆ ॥ ಶ್ರೀಮದಾಚಾರ್ಯರ ತಾತ್ಪರ್ಯ. ಅಲ್ಪಜೀವಿ=ಪರಮಾತ್ಮಗೆ ಅತ್ಯಲ್ಪ ಸಾಂಶಜೀವರು ಎಂದು. ॥ ೩೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕೀಟ" ಇತಿ ॥ ಅಲ್ಪಾಃ ದ್ವೇಷೇಣ ಶಿಶುಪಾಲಮುಖಾಃ । "ಸತ್ಯಪ್ಯತ್ಯಲ್ಪ ವಿದ್ವೇಷೇ ಭೋಜನಂ ದಾಸ್ಯತೀತಿತು ॥ ಸ್ನೇಹ ಬಾಹುಲ್ಯತಃ ಕೀಟಃ ಪೇಶಸ್ಕಾರಿ ಸಮೋ ಭವೇತ್ ॥" ಇತಿ ಏಕಾದಶ ತಾತ್ಪರ್ಯೇ ॥ ೩೦ ॥

## ಕನ್ನಡಾರ್ಥ

ಅಲ್ಪ ಜೀವಿಗಳೆಂದರೆ, ಶಿಶುಪಾಲ, ಜೀವದ್ವಯಾವೇಶಯುಕ್ತ ಮುಂತಾದವರೆಂದು ಈ ಪದ್ಯದಲ್ಲಿ ತೋರಿಸಿರುವ ದೃಷ್ಟಾಂತಾನುಗುಣವಾಗಿ ತಿಳಿಯಬೇಕು. ಶಿಶುಪಾಲನಲ್ಲಿ ಜಯನೆಂಬ ದ್ವಾರಪಾಲಕನು ಇದ್ದನು. ಈತನು ತತ್ವಾಭಿಮಾನಿಗಳಕ್ಕಿಂತಲೂ ಅಲ್ಪಭಕ್ತ ಸಾಂಶದೇವತೆ, ಜಯನಿಗೆ ಮಾತ್ರ ಸಾರೂಪ್ಯ ಮುಕ್ತಿ, ದೈತ್ಯಾಂಶ ಶಿಶುಪಾಲನಿಗೆ ತಮಸ್ಸು. "ಬಹು ಸ್ವಲ್ಪ ಪ್ರಮಾಣದಲ್ಲಿ ದ್ವೇಷಭಾವನೆಯಿದ್ದರೂ "ಭೋಜನವನ್ನೀಯುತ್ತಾನೆ" ಈ ವಿಶೇಷ ಕಾರಣದಿಂದ. ಬಹು ಭಕ್ತಿಯುತವಾದ ಸ್ನೇಹ ವಿಶೇಷವನ್ನು ಮಾಡುವದರಿಂದ ಈ ಭಕ್ತ್ಯುದ್ರೇಕದ ಫಲವಾಗಿ ಕೀಟವು ಪೇಶಸ್ಕಾರಿ ಹುಳದ ಸಾಮ್ಯ ಸಾರೂಪ್ಯವನ್ನು ಹೊಂದುತ್ತದೆ. (ಕೆಲವಂಶಗಳಲ್ಲಿ ಮಾತ್ರ) ಎಂದು ಏಕಾದಶ ಸ್ಕಂಧ ಭಾಗವತ ತಾತ್ಪರ್ಯದಲ್ಲಿ ನಿರೂಪಿಸಲಾಗಿರುತ್ತದೆ॥ ೩೦ ॥

**ಅವತರಣಿಕಾ:** ಇಂತು ಭಗವದ್ರೂಪಗಳನ್ನರಿತು, ಧ್ಯಾನೋಪಾಸನೆಯನ್ನು ಬಿಡದೆ ಮಾಡುವ ಭಕ್ತರಿಗೆ ಆಗುವ ಸತ್ಫಲ ಹರಿಪ್ರಸಾದ ದ್ವಾರಾ ಅಪರೋಕ್ಷ ಜ್ಞಾನವೆ ಆಗುತ್ತೆದೆಂದು ಪೇಳಿ ಶ್ರೀಹರಿಯ ಸ್ತೋತ್ರಗೈಯ್ಯುತ್ತಾ ಈ ಸಂಧಿಯನ್ನು ಮುಗಿಸುತ್ತಾರೆ.

ಮೂಲ :

**ಈ ಪರೀ ದೇಹದೊಳು ಭಗವ ।**
**ದ್ರೂಪಗಳ ಮರೆಯುದಲೆ ಮನದಿ ಪ ।**
**ದೋ ಪದೇ ಭಕುತಿಯುಲಿ ಸ್ಮರಿಸುತಲಿಪ್ಪ ಭಕುತರನ ॥**
**ಗೋಪತಿ ಜಗನ್ನಾಥ ವಿಠಲ ಸ ।**
**ಮೀಪಗನು ತಾನಾಗಿ ಸಂತತ ।**
**ಸಾಪರೋಕ್ಷ್ಮಿಯ ಮಾಡಿ ಪೊರೆವನು ಎಲ್ಲ ಕಾಲದಲಿ ॥ ೩೧ ॥**

ಅಂತು ಸಂಧಿ ೯ಕ್ಕೆ ಪದ ೨೭೭ ವರ್ಣಪ್ರಕ್ರಿಯಾ ಸಮಾಪ್ತ ಮಂಗಳಮಾಹ
॥ ಶ್ರೀ ಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :** ಈ ಪರೀ ದೇಹದೊಳು = ಹಿಂದೆ ಹೇಳಿದ ಪ್ರಕಾರವಾಗಿ, ಸವಿಸ್ತರವಾಗಿ ಪ್ರತಿನಿತ್ಯ ಬಿಡದೇ ಗುರುವನುಗ್ರಹ ಪೊಂದಿ ಧ್ಯಾನೋಪಾಸನೆ ಮರ್ಮವನ್ನರಿತು, ಭಗವದ್ರೂಪಗಳನ್ನು ಮರೆಯದಲೇ = ಯಾವ ಯಾವಲ್ಲಿ ಯಾವ ಯಾವ ರೂಪ ತತ್ತತ್ಕಾರ್ಯವೇನೆಂಬುದು ಚೆನ್ನಾಗಿ ನೆನಪಿನಲ್ಲಿಟ್ಟು, ಮನಸ್ಸಿನಲ್ಲಿ ಪದೋಪದಿಗೆ-ಕ್ಷಣಕ್ಷಣಕ್ಕೆ ಮನದಿ = ಮನಸ್ಸಿನಲ್ಲಿ ಭಕುತಿಯಲಿ = ಮಹಾ ದಾರಢ್ಯವಾದ ವಿಶ್ವಾಸಪೂರ್ವಕ ಸ್ನೇಹದಿಂದ, ಸ್ಮರಿಸುತಲಿಪ್ಪ = ನಿತ್ಯ ಸ್ಮರಣಮಾಡಿ ಚಿಂತನೆಮಾಡುವ ಭಕುತರನ್ನು, ಗೋಪತಿ = ಗವಾಂ ಸ್ವರ್ಗಾದೀನಾಂ ಪತಿ ಗೋಪತಿಃ ॥ ಅಥವಾ । ಗೋ ಭೂಮೇ ಗವಾಂ ಧೇನೂನಾಂ ಪತಿಃ ಗೋಪತಿ । ಅಥವಾ ಗೋ = ವೇದಾಃ ತೋಷಾಂ ಪತಿವಾ ॥ ವಿದ್ಯಾಧಿ ರಾಜೀಯೇ ॥ ಅಂದರೆ ವೇದಗಳೆಂಬ ವಾಕ್ಯಗಳನ್ನು ಪರಿಪಾಲಿಸುವ ಜಗನ್ನಾಥ ವಿಠ್ಠಲ = ಜಗತ್ತಿಗೆ ಸ್ವಾಮಿಯಾಗಿ ಜಗವೆಲ್ಲ ವ್ಯಾಪಿಸಿದ ವಿಠ್ಠಲರೂಪಿ ಶ್ರೀಹರಿಯು, ಬಿಂಬರೂಪಿಯೂ, ಸಮೀಪಗನು ತಾನಾಗಿ = ತಾನು ಒಳಗಿದ್ದರೂ ಬಹು ದಿನಗಳಿಂದ ಕಾಣಿಸದಿದ್ದರೂ, ಕರುಣಾಳು ತನ್ನನ್ನು ಈ ಪರಿ ಚಿಂತಿಸುವ ಭಕ್ತರ ಸಮೀಪಗತನು ತಾನಾಗಿ = ಕಣ್ಣಿಗೆ ಕಾಣಿಸಿಕೊಂಡು ಹೃದಯದಲ್ಲೇ ಪೊಳೆದು, ಸಾಪರೋಕ್ಷಿಯ ಮಾಡಿ = ತನ್ನ ಅಪರೋಕ್ಷವನ್ನಿತ್ತು ಪೊಳೆದು, ಎಲ್ಲ ಕಾಲದಲ್ಲಿ ಇಹ ಇಲ್ಲಿ ಈ ದೇಹದಲ್ಲಿ ಮತ್ತು ಮುಕ್ತಿಯಲ್ಲಿಯೂ ನಿರಂತರ ಪೊರೆವನು-ರಕ್ಷಿಸುವನೆಂದು ದಾಸರಾಯರ ಉಕ್ತ್ಯನುಸಾರ ಶ್ರೀಹರಿ ಬರೆದು ಬರಿಸಿದಂತೆ ಒಂಭತ್ತನೆ ಸಂಧಿ ಪದ್ಯಾರ್ಥವು ಶ್ರೀ ಮಧ್ವೇಶನಿಗೆ ಅರ್ಪಿತವಾಗಲಿ.

**ಭಾವಸೂಚನ:** 'ಈ ಪರೇತಿ' ॥ ೩೧ ॥ ಇತಿ ಶ್ರೀಮತ್ಕವಿಕುಲತಿಲಕ ಶ್ರೀಮಜ್ಜಗನ್ನಾಥ ದಾಸವರ್ಯಕೃತ ಹರಿಕಥಾಮೃತಸಾರಸ್ಯ ಭಾವಸೂಚನ ವರ್ಣಪ್ರಕ್ರಿಯಾ ಜೀವ ವಿಚಾರ ಸಂಧಿ ಸಮಾಪ್ತಃ ॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ "ಈ ಪರಿ" ಇತಿ ॥

ಗೋಪತಿಃ ಗೋಪ್ತಾ॥ ಓಂ* ಅಸ್ಮಾದ್ ಚಿತ್ರಾಭಿರವತ್‌ದಭಿಷ್ಟಿಭಿರಾನಃ ಸುವ್ನೇಷು ಯಾಮಯ ॥ ಇಮಾ ಉ(ವು)ತ್ವಾ ಪುರೂ ವ (ಪ)ಸೋ ಗಿರೋ ವರ್ಧಂತು ಯಾ ಮಮ ॥* ಓಂ ॥

ಗಾಃ ವೇದರೂಪಾಃ ಶಿರಃ । ತಾಸಾಂ ಪತಿಃ ॥ ೩೧ ॥ ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ವರ್ಣಪ್ರಕ್ರಿಯಾ ಸಂಧಿಃ ಸಮಾಪ್ತಃ ॥ ೯ ॥

## ಕನ್ನಡಾರ್ಥ

ಈ ವರ್ಣಪ್ರಕ್ರಿಯಾ ಸಂಧಿಯನ್ನು ಮುಗಿಸುತ್ತಾರೆ "ಈ ಪರಿ" ಎಂಬ ಪದ್ಯದಿಂದ.

"ಗೋಪತಿ" ಈ ನಾಮವು ವಿಷ್ಣು ಸಹಸ್ರ ನಾಮಾಂತರ್ಗತವಾದುದು. ಬೃಹತೀಮಂತ್ರಾನುಸಾರವಾಗಿ "ವೇದಗಳೆಂಬ ಗೋವು(ವಾಕ್ಯ)ಗಳನ್ನು ಪರಿಪಾಲಿಸಿ ಪತಿಯೆನಿಸುವದರಿಂದ "ಗೋಪತಿ" ಎಂದು ಅರ್ಥವಾಗುತ್ತದೆ ॥ ೩೧ ॥

ಇಲ್ಲಿಗೆ ವ್ಯಾಸದಾಸ ಸಿದ್ಧಾಂತ ಕೌಮುದಿಯ ಕನ್ನಡಾರ್ಥಾನುವಾದದಲ್ಲಿ ೯ನೆಯ ಸಂಧಿ ವರ್ಣಪ್ರಕ್ರಿಯಾ ಸಂಧಿಯು ಮುಗಿದುದು.

॥ ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ॥



ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ
ಶ್ರೀ ಗುರುರಾಜೋ ವಿಜಯತೇ

# ೧೦ ನೇ ಸರ್ವಪ್ರತೀಕ ಸಂಧಿಯ ಸಾರ

ಹಿಂದೆ ಸಂಧಿ ೬ರಲ್ಲಿ ಸ್ಥೂಲ ದೇಹ ಉತ್ಪತ್ತಿ. ಅಲ್ಲಿಪ್ಪ ತತ್ವಾಧಿಪತಿಗಳ ವಿವರಿಸಿ, ೭ನೇ ಸಂಧಿಯಲ್ಲಿ ಪಂಚ ತನ್ಮಾತ್ರಾಗತ ತಮ-ಮೋಹ-ಮಹಾ ಮೋಹ-ತಾಮಿಸ್ರ-ಅಂಧಃ ತಾಮಿಸ್ರ-ಇತ್ಯಾದಿಗಳಿಂದ ಸಂಸಾರಾವಸ್ಥೆಯಲ್ಲಿ ಜೀವನನ್ನು ಬದ್ಧನನ್ನು ಮಾಡಿ ಇವುಗಳಿಂದ ಬಿಡುಗಡೆಯಾಗುವ ಉಪಾಯ, ಹರಿಯ ರೂಪಚಿಂತನಾದಿ ೮ನೇ ಮಾತೃಕಾ ಸಂಧಿ ಅಜ್ಯಾದಿ ೫೧ ರೂಪಗಳ ವ್ಯಾಪ್ತಿ–ದೇಹವಲ್ಲಿಪ್ಪ ನಾಡಿ, ಕಮಲ–ಕಮಲಗತ ರೂಪಗಳು, ಇತರ ಅವ ಯವಗಳಲ್ಲಿಪ್ಪ ರೂಪಗಳ ಧ್ಯಾನಕ್ರಮ ಹೇಳಿ, ೯ನೇ ಸಂಧಿ ವರ್ಣಪ್ರಕ್ರಿಯೆ ಸಂಧಿಯಲ್ಲಿ ಶ್ರೀ ಹರಿಯು ಸಕಲ ವರ್ಣವೇದ ಸ್ವರವ್ಯಂಜನ ಉದಾತ್ತಾದಿ ಎಲ್ಲ ಸ್ವರಗಳಿಂದ ಪ್ರತಿಪಾದ್ಯನು, ಎಂದು ಹೇಳಿ, ಇಂಥ ವಿಜ್ಞಾನ ಸಂಪಾದಿಸಿ ಜೀವನ ಸ್ವರೂಪ ದೇಹದ ಅಣುತ್ವ, ವಾಯುದೇವರಿಗೆ ಸ್ವರೂಪದೇಹದಲ್ಲಿ ಪ್ರವೇಶ–ವಾಯ್ವಂತರ್ಗತ–ಬಿಂಬತ್ರಯ ಅಗ್ರೇಶ, ಪ್ರಾದೇಶ, ಮೂಲೇಶರ ಉಪಾಸನಾಕ್ರಮ. ಮೂಲೇಶನ ಪಾದದಲ್ಲಿ ಮುಖ್ಯಪ್ರಾಣನಿರುವ ವಿಚಾರ. ಮುಖ್ಯಪ್ರಾಣನ ಅಡಿದಾವರೆಗೆ ಸಮ್ಮುಖನಾಗಿ ಜೀವನು ಬಿಂಬದೃಷ್ಟಿ ಇಟ್ಟು ಇರುವ ವಿಧಾನ, ಇತ್ಯಾದಿ ತದುಪಾಸನಾಕ್ರಮಾದಿಗಳನ್ನು ಹೇಳಿದರು.

ಈ ಧ್ಯಾನೋಪಾಸನೆ ಕ್ರಮ. ಶ್ರೀ ಮಾನಸಸ್ಮೃತಿ ಶ್ರೀ ವಿಜಯ ದಾಸರ ತಾರತಮ್ಯ-ಸೃಷ್ಟಿ-ಉಪಾಸನಾಭಾಗ ಸುಳಾದಿ ಕ್ರಮದಂತೆ ನಿತ್ಯ ಭಗ ವದುಪಾಸನೆ ಮಾಡಬೇಕು. ಗುರುಗಳಿಂದ ಈ ವಿಷಯ ಚನ್ನಾಗಿ ಅರಿತು ಗುರೂಪದಿಷ್ಟದಿಂದ ಧ್ಯಾನಮಾಡಿದರೆ ಹರಿಯು ಒಲಿವ, ಹೀಗೆ–ತನ್ನಲ್ಲಿದ್ದ ಬಿಂಬನೇ ಸರ್ವ ಪ್ರಾಣಿಗಳಲ್ಲಿ ಸರ್ವ ದೇಶ ಕಾಲ ಧಾಮತ್ರಯದಲ್ಲಿ ಇರುವ ರೂಪಗಳೂ ಬಿಂಬೈಕ್ಯ ಚಿಂತಿಸುವದೆ ಮುಖ್ಯವೆಂದು ಪೇಳಿದರು. **ಇನ್ನು ಅವರ ಮಹಾಫಲ ಹೇಳುತ್ತಾರೆ.**

ಹೀಗೆ ಉಪಾಸನೆಯು ಪರಮ ಮುಖ್ಯವೆಂದು ಪೇಳಲು **ಸರ್ವಪ್ರತೀಕ ಸಂಧಿ** ಪ್ರಾರಂಭಿಸಿದ್ದಾರೆ. ಶ್ರೀ ನಾರಾಯಣನು, ಸರ್ವ=ಎಲ್ಲರ "ಪ್ರತೀಕಂ=

ದೇಹಮುದ್ದಿಷಂ" ಎನ್ನುವಂತೆ ಸರ್ವ ಜೀವರ ಸರ್ವ ದೇಹಗಳ ಗುಹಾಶಯನನಾಗಿ ಇರುವನು ಎಂದು ತಿಳಿದು, ತನ್ನ ಬಿಂಬನೇ ಸಕಲರಲ್ಲಿಪ್ಪನು ಎಂದರಿದು, ಸುಖದುಃಖ ಲಾಭಾಲಾಭಗಳನ್ನು ಜೀವರಿಂದ ಕೊಡುವನು–ಕೊಡಿಸುವ ಬಿಂಬನೆಂದು ದಾರಢ್ಯದಿಂದ ಸಂತತ ಹರಿಧ್ಯಾನಮಾಡಬೇಕು. ಹೀಗೆ ಸರ್ವ ಜೀವಿಗಳ ಪ್ರತೀಕ ದೇಹಗಳಲ್ಲಿ ಸರ್ವತ್ರ ಒಳ ಹೊರಗೆ ಶ್ರೀ ಕರ್ತೃತ್ವಾನುಸಂಧಾನದಿಂದ, ಸಕಲ ಕ್ರಿಯೆ ಮಾಡುತ್ತಲಿರುವುದೆ ಸದುಪಾಯವು. ಇದಕ್ಕೇನೆ ಹರಿಯೊಲಿವ. ಬ್ರಹ್ಮಾಂಡದಲ್ಲಿರುವ ಸಕಲ ತೀರ್ಥಗಳು, ನದಿಗಳು, ಪುಣ್ಯಕ್ಷೇತ್ರಗಳು ತದಭಿಮಾನಿ ದೇವತೆಗಳು ದೇಹದಲ್ಲಿರುವರು. ಕಾರಣ ನಿಷ್ಕಿಂಚನದಿಂದ ಶ್ರೀ ಹರಿಯ ಭಕ್ತಿ ಮಾಡದೇ ಡಂಭದಿಂದ, ಕಾಮದಿಂದ ಆಚರಿಸಿದರೆ ಶ್ರೀ ಹರಿಯು ತತ್ವಾಭಿಮಾನಿ ದೇವತೆಗಳ ದ್ವಾರಾ ವಿಘ್ನಮಾಡುವನು.

ಯಾರು ಸರ್ವತ್ರಗತನಾದ ಹರಿಯೇ ಬಿಂಬನೆಂದು ಹಿಂದಿನ ಸಂಧಿಗಳಲ್ಲಿ ಹೇಳಿದಂತೆ ಉಪಾಸನೆಮಾಡಿ ಶ್ರೀ ಹರಿಯನ್ನು ಚಿಂತಿಸುತ್ತಾರೋ ಅವರಿಗೆ ಸಕಲ ತತ್ವೇಶ ದೇವತೆಗಳು, ನವಗ್ರಹಾದಿಗಳೆಲ್ಲವೂ ಅನುಕೂಲರಾಗಿರುವರೆಂಬುದು ಮೊದಲಿಗೆ ಪೇಳುತ್ತಾರೆ.

ಪರಬ್ರಹ್ಮನ ವಿಮಲ ಸಚ್ಚಿನ್ಮಯ ದೇಹದಿ ಸಾಯುಜ್ಯ ಪೊಂದುವ ದೇವತೆಗಳು (ತತ್ವೇಶರು) ಬ್ರಹ್ಮ ವಾಯುಗಳೇ ಮೊದಲಾದ ಸುರರು ಹರಿಪದವನ್ನು ಸೇವಿಸುವರಿಗೆ ಅನುಕೂಲರಾಗಿ ಪಾಪಕೃತ್ಯಕ್ಕೆ ಒಳಮಾಡದೇ, ಪುಣ್ಯ ಕೃತ್ಯಗಳನ್ನೇ ಮಾಡಿಸಿ, ಇಂತಹ ಧ್ಯಾನೋಪಾಸಕ ಭಕ್ತರನ್ನು ಎಂದೂ ಕೆಡಿಸುವದಿಲ್ಲ. ಶ್ರೀ ದೇವಿಯಿಂದ ಕೂಡಿ ವಿಲಾಸ=ಸಕಲ ಬ್ರಹ್ಮಾಂಡ ಪಿಂಡಾಂಡ ಕ್ರಿಯೆಗಳ ಮಾಡಿ ವಿಹರಿಪ ಶ್ರೀ ಹರಿಯು ದಾಸರಿಗೆ ಅಪಜಯುವೂ ಎಂದೂ ಇಲ್ಲವೇ ಇಲ್ಲ. ಸರ್ವತ್ರ ಜಯವೇ ಜಯ. ಹೀಗೆ ಶ್ರೀದ=ಶ್ರಿಯಂದದಾತೀತಿ. ಶ್ರೀದ (ವಿದ್ಯಾಧಿರಾಜೀಯ) ಜ್ಞಾನೈಶ್ವರ್ಯವಾದ ಮೋಕ್ಷ ಸಂಪತ್ತು ಕೊಡುವನು. ಇಂಥ ಬಿಂಬರೂಪಿ ಹರಿಯ ಪಾದ ಕಮಲಗಳನ್ನು ಮನಾದಿ ಏಕಾದಶ ಇಂದ್ರಿಯ ಹೃದಯದಲ್ಲಿಟ್ಟು ಬಿಂಬರೂಪದಿಂದ 'ಇರುವನೆಂದು ಧ್ಯಾನದಿಂದ ತಿಳಿದು ನೋಡಿ, ಭಕ್ತಿಯಿಂದ ಸ್ತುತಿಸಿ ಹಿಗ್ಗಿ [illegible] ಪಾಡುವರಿಗೆ, ಅಂದರೆ ಸಂತತ ಭಗವಧ್ಯಾನ[illegible] ಬಾಧಿಸುವದಿಲ್ಲ. ಸಂತತ, ಆಧಿ=ಮನೋವ್ಯಥೆ ದುಃಖ, [illegible]

ಪದ್ರವಗಳಾದ ವ್ಯಾಧಿಗಳನ್ನು ಪರಿಹಾರಮಾಡಿ, ಈಶನಾದ ಶ್ರೀ ಹರಿಯ ಆಜ್ಞೆಯಿಂದ ಇಂಥ ಧ್ಯಾನರತರಾದ ಭಕ್ತರನ್ನು ಕಾದುಕೊಂಡಿರುವರು. ಇಂಥ ಭಕ್ತರಿಗೆ ಆವ ಭಯವಿಲ್ಲ. "ಸಕಲ ಗ್ರಹಬಲ ನೀನೆ ಸರಸಿಜಾಕ್ಷ" ಶ್ರೀ ಹರಿಯ ಸ್ಮರಣಧ್ಯಾನ ಬಲವಿದ್ದರೆ ಎಲ್ಲ ಬಲವೂ ಇರುವದು. **ಮತ್ತು ಇಂಥ ಧ್ಯಾನೋಪಾಸನಾರತನಾಗಿ ಸಂತತ ಹರಿಯನ್ನು ಮನದಲ್ಲಿಟ್ಟ ಯೋಗಿ ಲಕ್ಷಣ.** ಆ ಯೋಗಿಗಳು ಆಚರಿಸತಕ್ಕ ಸಕಲ ಕ್ರಿಯೆಗಳು ಹರಿ ಪರವಾಗಿಯೇ ಇರುವವು. ಅವರ ಜ್ಞಾನ ಎಂಥದೆಂದರೆ, ಸರ್ವತ್ರ ಹರಿಯು ವ್ಯಾಪ್ತನಾಗಿ ವ್ಯಕ್ತನಾಗಿರುವನೆಂದರಿದು ನೋಡುತ್ತ ಹರ್ಷಬಡುವುದೇ ಮಹಾಪೂಜೆ. ಭೂಮಿಯಲ್ಲಿದ್ದ ಸಕಲ ಗೋವುಗಳ ಹೆಜ್ಜೆಗಳಲ್ಲಿ ನಿಂತ ಉದಕಗಳು ಎಲ್ಲ ನಿರ್ಮಲಸಾದ ತೀರ್ಥೋದಕಕ್ಕೆ ಸರಿ. ಏಕೆಂದರೆ, ಗೋಪಾದ ಚಿನ್ಹೆಯಲ್ಲಿ ನಿಂತ ಉದಕಗಳಲ್ಲಿ ತೀರ್ಥಪಾದನಾದ ಹರಿಯ ರೂಪವನ್ನೆ ನೋಡುವದರಿಂದ ಎಲ್ಲವೂ ನಿರ್ಮಲ ತೀರ್ಥಗಳು. ಭೂಮಿ ಮೇಲಿದ್ದ ಮರಗಳು, ವೃಕ್ಷಗಳು, ಪರ್ವತ ಸಕಲ ಭೂತಳವು-ಒಳ್ಳೇ ಕ್ಷೇತ್ರಗಳು. ಎಲ್ಲ ಜೀವ ಸಮುದಾಯವು ಶ್ರೀ ಹರಿಗೆ ಆವಾಸ ಯೋಗ್ಯವಾದ ಚಲಪ್ರತಿಮೆಗಳು-ಪ್ರತಿಬಿಂಬರು. ಮತ್ತು ಸಕಲ ಜೀವರು ಊಟಮಾಡುವುದು ಮತ್ತು ಹರಿಭಕ್ತನಾದ ತಾನು ಊಟ ಮಾಡುವ ಅನ್ನ ಶ್ರೀಹರಿಗೆ ನೈವೇದ್ಯ. ನಿತ್ಯದಲ್ಲಿ ಹಾದಿ ನಡೆದು ಮಾರ್ಗ ಕ್ರಮಣ ಮಾಡುವದೇ ಶ್ರೀ ಹರಿಯ ನರ್ತನ-ನಲಿದಾಡುವಿಕೆ ಎಂದು ಧ್ಯಾನೋಪಾಸನರತರಾದ ಯೋಗಿಯ ವಿಚಾರವನ್ನು ಹೇಳುತ್ತಾ, ಮುಂದೆ ಈ ಧಾರಣ ಯೋಗಿಗಳಾದವರಿಗೆ, ಎಲ್ಲಿ ನೋಡಿದರಲ್ಲಿ ಹರಿ ಇರುವ ಕಾರಣ ಸರ್ವ ದೇಶವೆಲ್ಲವೂ ಪುಣ್ಯದೇಶ, ಸರ್ವ ಕಾಲಗಳಲ್ಲಿ ಕಾಲನಾಮಕ ಹರಿಯ ಕಾಲಪ್ರವರ್ತಕಾದಿಗಳನ್ನು ತಿಳಿದ ಜ್ಞಾನಿಗೆ ಸರ್ವ ಕಾಲವೂ ಪರ್ವ ಕಾಲವು. ಸೂರ್ಯ ಚಂದ್ರೋಪರಾಗಗಳು ಪುಣ್ಯ ಕಾಲಗಳು, ವಿಶೇಷ ವಿಜೃಂಭಣೆಯಿಂದಾಚರಿಪ ಹಬ್ಬದ ಕಾಲ ವಿಶೇಷಗಳು. ಸರ್ವ ಜೀವರು ದಾನಪಾತ್ರರು ಎಂದರೆ, ಸ್ಥೂಲವಾಗಿ ಪಾತ್ರಾಪಾತ್ರವರಿತು ಅನ್ನಾದಿ ದಾನಮಾಡುವುದು, ಸತ್ಪಾತ್ರರಲ್ಲಿ ದ್ರವ್ಯಾದಿ ದಾನ ಕ್ಷುದಿತನಾದವನಿಗೆ ಯಾವನಿದ್ದರೂ ಅನ್ನದಾನ ಮಾಡುವುದೆಂದು ಕೆಲವು ಪ್ರಮೇಯು ಸ್ಥೂಲ ವಿಷಯ. ಸರ್ವ ಜೀವರಲ್ಲಿ ಏಕನಾದ ಒಬ್ಬನಾಗಿರುವದರಿಂದ, ಉತ್ತಮರು ದಾನಪಾತ್ರರು. ಸರ್ವರ ದೇಹದಲ್ಲಿ

ಉತ್ತಮರಾದ ಸಕಲ ತತ್ವೇಶರು ದೇಹದಲ್ಲಿ ಇಪ್ಪರು, ಇವರಲ್ಲಿಪ್ಪ ಶ್ರೀ ಹರಿಯು ಮುಖ್ಯದಾನಪಾತ್ರನು. ಏಕೆಂದರೆ ಸರ್ವಜೀವರಿಗೆ ಜೀವದಾನ ಪ್ರದಾತೃವಾದ ಕಾರಣ ಸರ್ವಜೀವರಲ್ಲಿಪ್ಪ ಬಿಂಬ ವಿವಿಕ್ಷಾದಿಂದ, ಸರ್ವಜೀವರು ದಾನಪಾತ್ರರು ಎಂಬುದು ಒಂದು ರೀತಿ ತ್ರಿವಿಧರಲ್ಲಿ ಸಮನಾಗಿಪ್ಪ ಹರಿಯೇ ಮುಖ್ಯ ದಾನ ಪಾತ್ರ; ಮತ್ತು ಇನ್ನೊಂದು ರೀತಿ ಏನಂದರೆ ಸರ್ವ ಜೀವರೂ ದಾನ ಪಾತ್ರರೇ, ಯಾಕಂದರೆ ಜೀವರಲ್ಲಿ ಸಾತ್ವಿಕ ರಾಜಸ ತಾಮಸರೆಂಬ ತ್ರಿವಿಧರು. ಈ ತ್ರಿವಿಧರಿಗೆ ಸ್ವಭಾವಧರ್ಮ ಕರ್ಮಾನುಸರಿಸಿ ಅವರವರ ಯೋಗ್ಯತಾನು ಗುಣವಾಗಿ ದಾನಮಾಡುವದೇ ಪರಮಾತ್ಮನಿಗೆ ಪ್ರೀತಿಕರವೆಂಬುದು ಶಾಸ್ತ್ರ ಸಮ್ಮತ. ದಾನ ಶಬ್ದವು ಬಹು ವಿಶಾಲವಾಗಿರುವದು. ದಾನವೆಂದರೆ ಕೊಡೋಣವೆಂದು ಸಾಮಾನ್ಯ ಅರ್ಥ. ಮಂತ್ರಪೂರ್ವಕವಾಗಿ ಕೊಡುವದು ಸಾತ್ವಿಕ ಪಾತ್ರರಾದ ಉತ್ತಮರಲ್ಲಿ ದಾನವೆನಿಸುವುದು. ದೀನರಲ್ಲಿ ಅನು ಕಂಪಾದಿಂದ ಅವರ ಪಾಲನೆ, ಪೋಷಣೆಗಾಗಿ ಕೊಡುವ ಅನ್ನ ಉದಕ ವಸ್ತ್ರ ಕಿಂಚಿತ ದ್ರವ್ಯದಾನ (ರಾಜಸ) ದಂಬಾಹಂಕಾರ ಖ್ಯಾತಿಗೋಸುಗ ಪಾತ್ರಾ ಪಾತ್ರ ವಿಚಾರವರಿಯದೇ ಮಾಡುವದು (ತಾಮಸ) ದಾನ, ಈ ವಿವರ ಗೀತೆ ಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಕೆಲವು ಜನರಿಗೆ ಲಂಚಕೊಟ್ಟು ಅವರಿಂದ ಕಾರ್ಯ ತೆಗೆದುಕೊಳ್ಳುವದು ದಾನವೇ ಎನಿಸುತ್ತದೆ; ಇತ್ಯಾದಿಗಳು. ಹೀಗೆ ತಾಮಸರಾದ ಹರಿನಿಂದಕರಲ್ಲಿ ಮಾಡುವ ದಾನವು ಹೇಗೆಂಬುದು ಶ್ರೀ ವ್ಯಾಸ ಸಿದ್ಧಾಂತ ಕೌಮುದಿ ಟೀಕಾಕಾರರು ನಿಂದ್ಯರಾದ ತಾಮಸರಿಗೆ ಯಾವ ದಾನವೂ ಮಾಡಬಾರದೆಂದು ಬರೆದರೂ, ತಮೋ ಜೀವಿಗಳಲ್ಲಿ ಕಲಿಸನ್ನಿಹಿತನಾದ ಕಾರಣ, ಆ ಕಲಿಗೆ ವೇತ್ರಾದಿ ತಾಡನವೇ ದಾನ. ವಸ್ತ್ರ ರೂಪಗಳ ವಿಧಾನ ಚೆನ್ನಾಗಿ ವಿವೇಚಿಸಿದ್ದಾರೆ ಮುಂದೆ ನೋಡುವುದು.

ದಾಸರಾಯರ ಗುರುಗಳಾದ ಶ್ರೀ ಗೋಪಾಲದಾಸಾರ್ಯರೂ ಸಹ ಕಲಿ ಪುರುಷನಾದ ಪಾಪಿಯ ಪೂಜಿಸುವ ಬಗೆ ಚನ್ನಾಗಿ ಹೇಳಿದ್ದಾರೆ. ಇದೆ ತಮೋ ಜೀವಿಗಳಿಗೆ ದಾನ.

ಪದ : ರಾಗ ಕಾಂಬೋದಿ – ಝಂಪಿ ತಾಳ.

ಪೂಜೆಯನು ಮಾಡಿರೋ ಪಾಪ ಪುರುಷನಿಗೆ । ಪೂಜಾ ವಿಧಾನಗಳರಿದು ಕಾಲಕಾಲಗಳಲ್ಲಿ ॥ಪಲ್ಲ॥ ಕಾಯದಾಮಲ ತೋಯ ಸ್ನಾನವನು ಮಾಡಿಸಿ ।

ಬಾಯಿ ಮುಕ್ಕಳಿಸುವದಾಚಮನ ಎನಿಸಿ। ಹೇಯ ಮೈಲಿಗೆ ವಸನಗಳನೆ ವಸ್ತ್ರವ ಕೊಟ್ಟು। ಕಾಯಕಳಚಿದರೋಮ ನಖದಿಂದವನಲಂಕರಿಸಿ ॥ ೧ ॥ ನಯನ ನಾಸಿಕದಮಲ ಗಂಧಲೇಪನಮಾಡಿ। ಬಯಿವ (ಬೈವ) ನುಡಿಗಳೆ ಪುಷ್ಪ ಮಾಡರ್ಪಿಸಿ। ಪ್ರೀಯ್ಯಪಾನಾ ವಾಯುಧೂಪಮಾಡಿ। ನಯಿವೇದ್ಯ (ನೈವೇದ್ಯ) ಸ್ಥಳ ಮೆಟ್ಟು ಮಣಿಯಲ್ಲಿ ಕುಳ್ಳಿರಿಸಿ ॥ ೨ ॥ (ಮಲವಿಸರ್ಜನ ಕಾಲ ಎರಡು ಕಾಲುಗಳನ್ನು ಅವನ ಮುಖದ ದಂಡಿಯಲ್ಲಿಟ್ಟು ಅವನ ಬಾಯಲ್ಲಿ ಮಲಹಾಕುವದು) ಸುಪಿತದಲ್ಲೇ ಗುದದಮಲ ಹಸ್ತೋದಕವ ಕೊಟ್ಟು। ತಪ್ಪದಲೇ ಮೂತ್ರಪಾನುದಕವಿತ್ತು ॥ ತೃಪಿತನಾಗೆಂದವನ ತಿಪ್ಪಿಯಲಿ ಸ್ಮರಿಸುತ್ತ। ಕಪ್ಪು ವರ್ನ ಚಲುವ ಕಾಡಿಗೆ (ಗಡಿಗೆ) ನಮನೆಂದು ॥ ೩ ॥ ಅಷ್ಟಮದ ದಾರಿದ್ರ್ಯ ಅಲ್ಪ ಅಬಲನೆ ಕ್ರೂರ। ದುಷ್ಟದುರಾಗ್ರಹಿ ಬ್ರಹ್ಮಹತ್ಯಗಾರ। ಶಿಷ್ಟಜನಮಲ ಹಾರ। ನಷ್ಟ ಪ್ರತಿಷ್ಠನೇ ಎಂದು। ತುಷ್ಟಿ ಬಡಿಸುತ ಹೀಗೆ ತುತಿಗೈವುತವನ ॥ ೪ ॥ ನವವಿಧ ದ್ವೇಷಕ್ಕೆ ನೀನೆ ಅಧಿಕಾರೆಂದು। ನವವಿಧೇಂದ್ರಿಯದಿಂದ ಪೂಜೆಮಾಡು। ಪವನಾಂತರ್ಯಾಮಿ ಶ್ರೀ ಗೋಪಾಲವಿಠ್ಠಲನು। ಭವತರಿದು ತನ್ನನೂಭವವನ್ನು ನಿನಗೀವ ॥ ೫ ॥

ಹೀಗೆ ತಮೋಯೋಗ್ಯರಲ್ಲಿ ದಾನಕೊಡುವ ರೀತಿ. ಒಟ್ಟಿನ ಮೇಲೆ ತ್ರಿವಿಧ ಜೀವರಲ್ಲಿ ಯಾವ ಯಾವ ಬಗೆ ಹೇಗೆ ದಾನಮಾಡಬೇಕು, ದಾನ ಬಗೆವರಿತು ಅವರಿಗೆ ದಾನಮಾಡಿದರೆ ಅವರಂತರದಲ್ಲಿಪ್ಪ ಹರಿಪ್ರೀತನಾಗುವ= ಈ ಪ್ರಕಾರ ಸರ್ವಜೀವರು ದಾನಪಾತ್ರರೆಂದು ದಾಸರ ಹೃದಯ ಶಾಸ್ತ್ರಸಮ್ಮತ. ಇಂತು ಮೂರು ಲೋಕಗಳಲ್ಲಿರುವ ಸರುವ ಜೀವರು ದಾನಪಾತ್ರರು. ಸರ್ವ ಮಾತಾಡುವ ಮಾತುಗಳೆಲ್ಲವೂ (ಅಜಾದಿ ೫೧ ವರ್ಣಗಳಿಂದಲೇವೆ ಕೂಡಿದ ಕಾರಣ) ಮಂತ್ರಗಳು, ಹರಿಭಕ್ತರಾಡುವ ನುಡಿಯೆ ಮಂತ್ರ ಸಮಾನ, ಹರಿಭಕ್ತರು ಮಾಡುವ ಸರ್ವ ಕೆಲಸಗಳು ಗ್ರಹ ಕರ್ಮಾದಿಗಳೆಲ್ಲ ಹರಿಯ ಪೂಜಾ, ಇವೆಲ್ಲ ಅತ್ಯಂತ ಭಕ್ತರಾಗಿ, ಸಂತತ ಭಗವಂತನನ್ನು ಹೃದಯದಲ್ಲಿಟ್ಟು ವೈರಾಗ್ಯಾಧಿಪತಿ ಶರ್ವ=ರುದ್ರದೇವರಿಂದ ವಂದ್ಯನಾದ, ನಿರ್ದುಷ್ಟ ಜ್ಞಾನಾನಂದ ಪೂರ್ಣನಾದ ಬಿಂಬನಾದ ಶ್ರೀ ಹರಿಯ ಮೂರ್ತಿ ಧ್ಯಾನವುಳ್ಳ ಪರಮಭಕ್ತರಿಗೆಲ್ಲವೂ ಪುಣ್ಯದೇಶ, ಪುಣ್ಯ ಕಾಲಾದಿಗಳೆಂದು ತಿಳಿಯಬೇಕು. ಇನ್ನು ಹರಿಭಕ್ತರ ದೇಹವೇ ಕುರುಕ್ಷೇತ್ರ. ಇಲ್ಲಿ ದೇವತೆಗಳು ವಿಹಾರಮಾಡತಕ್ಕ ಕೆರೆ,

ತಟಾಕ, ಭಾವಿ, ಸರೋವರಗಳಲ್ಲಿಪ್ಪ ದೇವತೆಗಳು ಅಂದರೆ ಇವುಗಳಿಗೆ ಅಭಿಮಾನಿಗಳಾದ ದೇವತೆಗಳು, ಹರಿಭಕ್ತರ ಶರೀರದಲ್ಲಿರುವ ರೋಮಕೂಪಗಳಲ್ಲಿ ತುಂಬಿರುವರು. ಮತ್ತು ಆಕಾಶಗಂಗೆಯೆ ಮೊದಲಾದ ನದನದಿ ದೇಹಗಳಲ್ಲಿಪ್ಪ ಎಪ್ಪತ್ತೆರಡು ಸಾವಿರ ನಾಡಿಗಳೊಳಗೆ ಪ್ರವಾಹ ರೂಪದಿಂದ ಇರುವವೆಂದು ತಿಳಿದು ಅನುಭವಕೆ ತಂದು ಹರಿರೂಪ ಧ್ಯಾನಿಸುವರೇ ಯೋಗಿಗಳು. ಮತ್ತು ಯೋಗಿಗಳ ಚಿಂತನವೇನಂದರೆ ಮೂರುಕೋಟಿ ಮೇಲೆ ಎಪ್ಪತ್ತೆರಡು ಸಾವಿರ, ಭಾರತೀರಮಣನಾದ ವಾಯುವಿನಲ್ಲಿ ರಮಾವಲ್ಲಭನಾದ ಶ್ರೀ ಹರಿಯು ತಾನು ರಮಿಸುತ್ತಿರುವನೆಂದು ತಿಳಿದು ಭಗವಂತನನ್ನು ನೋಡಿ ಚಿಂತಿಸುವ ಜ್ಞಾನಿಗಳೇ ದೇವತೆಗಳು (ಅಂದರೆ ನಿರಂತರ ಜ್ಞಾನಿಯೋಗಿಗಳದೇ ಈ ರೀತಿ ಉಪಾಸನೆ) ಇಂತಹ ಸುಜ್ಞಾನಿಗಳ ಶರೀರವು ಉತ್ತಮವಾದ ಕ್ಷೇತ್ರಗಳು. ಇಂಥ ಜ್ಞಾನಿಗಳ ಅರ್ಚನೆಯೆಂದರೆ ಅವರಂತರ್ಯಾಮಿಯಾದ ಮಧ್ವೇಶನ ಅರ್ಚನೆ ಹರಿಯ ಪೂಜೆ. ಹರಿಭಕ್ತರ ಪೂಜಾ ಹರಿಯ ಪೂಜಾ.

ಇಂಥ ಜ್ಞಾನಿಗಳು ಸಂತತ ಸ್ನಾನಮಾಡುವ ಬಗೆ ಹೇಗೆ ? ಹೇಗಂದರೆ ಹೃದ್ಗತನಾದ ಬಿಂಬಮೂರ್ತಿಗೆ ಅಭಿಷೇಕವೆಂದು ಬಲ್ಲವರು, ಬಹಿರಂಗದಲ್ಲಿರುವ ವಾಪಿಕೂಪ ತಟಾಕ ನದ್ಯಾದಿಗಳ ಯಾವ ಜಲದಲ್ಲಿ ಸ್ನಾನಮಾಡಿದ್ದರೂ, ಗಂಗಾದಿ ತೀರ್ಥಾಭಿಮಾನಿಗಳು ಒಲಿದು ಬಂದು ಭಗವಂತನನ್ನು ಪೂಜಿಸಲು ಸಂಪತ್ಕರವಾದ ಸಮಸ್ತ ಇಷ್ಟಾರ್ಥವನ್ನು ಕೊಡುವರು. ಇದನ್ನು ತಿಳಿಯದೇ ಇರುವ ಜೀವರು ನಾನು ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿದೆನು ಎಂಬುವರು, ದೇವಗಂಗೆಯನ್ನು ಐದಿದರೂ ಫಲವಿಲ್ಲ. ಶ್ರೀಮದಾಚಾರ್ಯರು ಮಧ್ಯಾಹ್ನ ಕಾಲ ಸರೋವರ ಸ್ನಾನಕ್ಕೆ ಬರಲು, "ಮಾನ್ಯರು ಸರೋವರಕೆ ಬರಲು, ಆವಾಗಲೆಯೆ । ಸಾನುರಾಗದಿ ಸಕಲ ಗಂಗಾದಿ ತೀರ್ಥಾಭಿ । ಮಾನಿ ದೇವತೆಗಳುಂ ಶ್ರೇಷ್ಠ ಮಧ್ವಾರ್ಯ ಸಂಸರ್ಗ ಲೋಲ್ಯದಿ ಬಂದರೈ॥ ಶ್ರೀಸು. ಸರ್ಗ ೧೪, ಪದ್ಯ ೨೬. ವಾಯ್ವಂಶರಾದ ಸರ್ವರ ಅಂಗಸಂಗವಾಗಿ ನಾವು ಪುನೀತರಾಗುವೆವೆಂಬ ಗಂಗಾದಿ ತೀರ್ಥಾಭಿಮಾನಿಗಳಿಗೆ ಶ್ರೀ ಮಧ್ವರು ಸ್ನಾನವೆಸಗುವ ವೇಳೆ ಹೇಗೆ ತೋರಿತೆಂದರೆ,

"ವಿಮಲ ಜಲಮಧ್ಯವತಿ ನಿರ್ಮಲದಿ ಪ್ರವಿಸವೋ ।
ಅಮಿತ ಮುನಿಗಣ ಶುದ್ಧ ಹೃದಯ ಭಕ್ತಿಮಂತರೊ ।

ಕ್ರಮದಿ ಪ್ರಾಕ್‌ಮಜ್ಜನವೊ ಅಪರಿಪಕ್ವಂ ಧ್ಯಾನೊ ಅಖಿಲ
ಜ್ಞರಾ ಛಾಯವೋ ||
ಸುಮನ ವಾಸನಮುಯದ ಪ್ರತಿಮೆಯೋ ಮಜ್ಜನದ
ಸಮಯವೋ ಧ್ಯಾನ ಪರಿಪಕ್ವವೋ ಸುಜನೇಷ್ಟ |
ಪ್ರಮದ ಪೂರ್ಣರ ರೂಪೊ ಭಗವತ್ ಸ್ವರೂಪವೋ ಸ್ಫುಟ
ಪೊಂದಿದರಿಯದಾಯ್ತು || ೨೭ || ಮ.ವಿ. ಸರ್ಗ ೧೪

ಹೀಗೆ ಜ್ಞಾನಿಗಳ ಧ್ಯಾನಸ್ನಾನ ಸಲ್ಲಕ್ಷಣ. ಮತ್ತು ಸ್ನಾನಸಂಕಲ್ಪವೂ ಬಿಂಬ ಮೂರ್ತಿ ಅಭಿಷೇಕವೆಂದೆಯೆ ಮಾಡುವರೆಂದು ಜ್ಞಾನಿಗಳಾದ ದಾಸಾರ್ಯರು ಹೇಳಿದ್ದಾರೆ. 'ಸದಾಚಾರ ೧ನೇ ಕುಸುಮ ಪುಟ ೩೭ರಲ್ಲಿ' ಸ್ನಾನ ಸಂಕಲ್ಪ ವಿವರ ಚನ್ನಾಗಿ ತಿಳಿಯಬೇಕು.

"ಮಮ ಹೃದಯಾಂತರ್ಯಾಮಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ | ವಿಶ್ವ ತೈಜಸ ಪ್ರಾಜ್ಞ ತುರ್ಯ ಅಂತರಾತ್ಮ ಪರಮಾತ್ಮೇಷ್ಟ ರೂಪಾತ್ಮಕ | **ಬಿಂಬ ಮೂರ್ತಯೇ** ಸ್ನಾತು ಪುರುಷಾಧಿಷ್ಠಾನ ಸ್ಥಿತ ತತ್ವೇಶಾನ್, ಉದಕಾಧಿಷ್ಠಾನಸ್ಥ ದ್ರವರೂಪದೇವತಾನಿಕಟಂ | ಪ್ರಾಣ್ಯಂತಸ್ಥ ಸ್ವರೂಪೇಣಾ ಲಿಂಗ್ಯ | ಉತ್ತಮೋತ್ತಮ ದ್ರವರೂಪೇಷು ತಥೈವ ಸ್ನಾತ್ವಾ, ಪುಷ್ಕರಾದಿ ಬ್ರಹ್ಮಾಂತಂ ಸರ್ವೇಪಿ ಪರಮಾತ್ಮನಂ ಗತ್ವಾ ಷೋಡಶೋಪಚಾರಾನ್ ಸಮರ್ಪ್ಯ, **ತದನಂತರಂ ಸ್ವಗತ ಭಗವದ್ರೂಪೇಣ ಅನು**ಜ್ಞಾಮವಾಪ್ಯ | ಪರಸ್ಪರಂ ಸ್ವರೂಪೇಣಾನುಜ್ಞಾಂ ಚ ಗೃಹೀತ್ವಾ | ಸ್ನಾತುರ್ಜೀವಸ್ಯ ಈಶ್ವರಾನುಜ್ಞಯಾ, ಏವಂ ತತ್ತದ್ಯೋಗ್ಯ ಫಲಂ ಪ್ರಯಚ್ಛಯೇತಿ; ತ್ವಮಾಜ್ಞಾಂ ಕುರ್ವಿತ್ಯನುಸಂಧಾನಪೂರ್ವಕಂ ಪ್ರಾರ್ಥನಂ ಕೃತ್ವಾಸ್ನಾನಂ ಕರಿಷ್ಯೇ ಇತಿ ಪ್ರಾರ್ಥಯೇತ್. (ಶ್ರೀ ಗುರು ಜಗನ್ನಾಥ ವಿಠಲರು) ಇದರ ಕನ್ನಡಾರ್ಥ ಸದಾಚಾರದಲ್ಲಿ ಬರೆದದೆ, ಸುಲಭವಾಗಿದೆ. ಹೀಗೆ ಚಿಂತಿಸಿ ಮನವರಿತು ಸ್ನಾನ ಮಾಡಿದರೆ, ಬಿಂಬಮೂರ್ತಿ ಅಭಿಷೇಕವೆಂದು ಸದ್ಭಕ್ತರು ಆಚರಿಸುವರು. ವಾಮನ ಪುರಾಣೋಕ್ತ ಮಾನಸಸ್ನಾನ ಕ್ರಮವೂ ಹೀಗೆ ಇರುವದು. ಇವರೆ ಯೋಗಿಗಳು. ಇವರ ಸ್ನಾನ, ಧ್ಯಾನ, ಮೌನವೇ ಶ್ರೀಶನಿಗೆ ಇಷ್ಟ.

ಇಂತಹ ಸುಜ್ಞಾನವುಳ್ಳವರು ಯಾವ ಪರಿಯಂತರ ಬಹಿಃ ಕರ್ಮ

ಗಳನ್ನು ಮಾಡುವರೆಂದರೆ ಅದರ ವಿವರ ದೃಷ್ಟಾಂತಪೂರ್ವಕ ಹೇಳುತ್ತಾರೆ. ಹೇಗೆ ನದ=ಪುರುಷನದ (ವರುಣ) ಸಾಮಾನ್ಯವಾಗಿ ನದವೆಂದರೆ ಪಡು-ಪಶ್ಚಿಮಕ್ಕೆ ಹರಿಯುತ್ತ ಸದ್ದು ಮಾಡದೆ ಉದಧಿಗೆ ಸೇರುವವು ನದಗಳೆಂತಲೂ, ನದಿ= ಸ್ತ್ರೀವಾಚಕ (ಗಂಗಾದಿ) ನದಿಗಳು, ಪೂರ್ವಕ್ಕೆ ಹರಿದು ಸಪ್ಪಳಮಾಡದೇ ಸಮುದ್ರಕ್ಕೆ ಸೇರುವವೆಂದೂ ದಾಸಾರ್ಯರು. ಭಾರತ ಪುಣ್ಯದೇಶದಲ್ಲಿರುವ ನದ-ನದಿಗಳೆಂದು ಪ್ರಯೋಗವು ಸಾರ್ಥಕ್ಯವು. ಇದು ದೇಹದಲ್ಲಿ ಬಲಗಡೆ ಇಪ್ಪ, ಪುರುಷರೂಪ ನಾಡಿಗಳಲ್ಲಿ ಪ್ರವಹಿಸುವೆಲ್ಲವೂ ನದಗಳೆಂದು. ಎಡಗಡೆ ಇಪ್ಪ, ಸ್ತ್ರೀ ರೂಪ ನಾಡಿಗಳಲ್ಲಿಪ್ಪವು ನದಿಗಳೆಂದೂ ಸಮನ್ವಯ ಮಾಡುವವೆಂದು ದಾಸರ ಹೃದಯ. ಇಂತು ನದ ನದಿಗಳು ಹರಿಯುತ್ತಾ ಸಮುದ್ರ ಪರಿಯಂತವಾಗಿ ಪ್ರವಹಿಸಿ ಸಮುದ್ರದಲ್ಲಿ ಕೂಡುವವು. ಅಲ್ಲಿ ಈ ನದನದಿಗಳು ಬೇರೆ ಬೇರೆ ನಾಮದಿಂದ ಹರಿದರೂ, ಸಮುದ್ರದಲ್ಲಿ ಕಲೆತಮೇಲೆ ತನ್ಮಯ ಸಮುದ್ರದಂತೆ ಜನರ ದೃಷ್ಟಿಗೆ ತೋರುವವು. ಈ ನದಿಗಳು ಸಮುದ್ರ ಕೂಡುವತನಕ ಪ್ರತ್ಯೇಕವಾಗಿ ಹರಿಯುವಂತೆ ವಿಧಿ ನಿಷೇಧಕರ್ಮಗಳನ್ನು ಆಚರಿಸುವರು. ಎಲ್ಲಿ ಪರಿಯಂತವೆಂದರೆ ಭಗವಂತನನ್ನು ಕಂಡು ಅಪರೋಕ್ಷ ಹೊಂದುವ ಪರಿಯಂತ ವಿಧಿ ನಿಷೇಧಾದಿಗಳನ್ನು ಮಾಡುವರು. ಗುರೂಪದಿಷ್ಟ ಶ್ರವಣಮನನ ಮಾಡುತ್ತ, ಪ್ರತಿಯೊಂದು ಕರ್ಮಗಳಲ್ಲಿ ಭಗವದ್ರೂಪ ಚಿಂತನೆ, ಕರ್ಮ ಮಾಡುವ ಕಾಲದಲ್ಲಿ ಮರಿಯದೇ ಸ್ಮರಿಸುತ್ತಾ, ಭಗವದ್ರೂಪ ಚಿಂತಿಸಿ ನೋಡುತ್ತಾ ಮಾಡುವ ಜ್ಞಾನಿಗಳು ಕರ್ಮಗಳನ್ನು ತ್ಯಜಿಸುತ್ತಾರೆ;-ಬಿಡುತ್ತಾರೆಂದರೆ ಕರ್ಮಫಲಗಳನ್ನು ಬಿಡುತ್ತಾರೆ. ೧) ವಿಧಿತಾ ಮನುಜಾದಿಗಳು ವಿಧಿಬದ್ಧರು. ೨) ವಿಧಿನೀತಾ ರುದ್ರಾದಿಗಳು. ೩) ಸ್ವೇಚ್ಛಾನೀತಾ ಬ್ರಹ್ಮಾದಿ ಋಜುಗಣದವರು—ಹೀಗೆ ವಿಧಿಬದ್ಧರಾದ ಮನುಷ್ಯೋತ್ತಮಾದಿಗಳು, ಭಗವತ್ಪ್ರಸಾದಾರ್ಥವಾಗಿ ನಿಯಮದಿಂದ ಆಚರಿಸುವ ಕರ್ಮ, ಆಚರಿಸುವ ಕಾಲ ಭಗವದ್ರೂಪಗಳನ್ನು ತತ್ಕಾರ್ಯವನ್ನು ಅನುಭೋಗಕ್ಕೆ ತರುತ್ತಾ, ಕರ್ಮಫಲ ತ್ಯಾಗಮಾಡುತ್ತ "ಅಹರಹಃಸ್ಸಂಧ್ಯಾ ಮುಪಾಸೀತ ನಪಲಾಂಡುಂ ಭಕ್ಷಯೇತ್ ನ ಪರದಾರಾನ್ ಗಚ್ಛೇತ, ನ ಆತ್ಮಾನಾಂ ವಿಸೃಜೇತ್" ವಿಧಿವಿಹಿತವಾದ ಸಂಧ್ಯಾದಿ ಕರ್ಮಮಾಡುವುದು ನಿಷಿದ್ಧವಾದ ಕರ್ಮಬಿಡುವದು, ವೇದ ಪುರುಷನ ಶಿಕ್ಷೆಯುನ್ನು ಮೀರದೇ-ನ ಆತ್ಮಾನಂ ವಿಸೃಜೇತ್=ಪ್ರತಿಯೊಂದು

ಕ್ರಿಯೆಯೂ ಪರಮಾತ್ಮನ–ಬಿಂಬರೂಪಿ ಹರಿಯ ಪ್ರೇರಣೆಯೆಂದು ಮರಿಯದೇ ಫಲರಾಹಿತ್ಯವಾಗಿ ಕರ್ಮಮಾಡುವರು. ಹೀಗೆ ಬುಧರು ಸರ್ವತ್ರದಲಿ, ತನ್ನಲ್ಲಿ, ಕರ್ಮದಲ್ಲಿ, ಕ್ರಿಯಾದಲ್ಲಿ ಮೂರು ಸ್ಥಾನ ಭಗವದ್ರೂಪ ಚಿಂತನೆ ಬಂದರೆ ಅಖಿಳ ಕರ್ಮಗಳನ್ನು ತ್ಯಜಿಸುವರೆಂತ ಭಾವ. ಇವರಿಗೆ ಕರ್ಮಲೇಪವಿಲ್ಲ. ಯಾರಿಗೆಂದರೆ ಭಗವದಪರೋಕ್ಷಿಗಳಿಗೆ.

ಇನ್ನೂ ಈ ಧ್ಯಾನೋಪಾಸಕ ಯೋಗಿಗಳ ಲಕ್ಷಣವನ್ನು ವಿಶದೀಕರಿಸುತ್ತಾರೆ. ಅದೇನೆಂದರೆ ದೇಹದಲ್ಲಿ ವಿಧಿ ನಿಷೇಧ ಕರ್ಮಮಾಡಿಸುವರು ದೇವದೈತ್ಯರು. ಇವರಿಗೆ ಪ್ರೇರಕರಾರು, ಇವರಿಂದ ಪ್ರೇರಿತನಾಗಿ ಕರ್ಮಗಳನ್ನು ಮಾಡುವೆನೆಂದು ಹೇಗೆ ತಿಳಿಯುವುದೆಂದರೆ, ಕಲಿ ಮೊದಲಾದ ಅಖಿಲ ಪಾಪ ಕರ್ಮ ಪ್ರವರ್ತಕರಾದ ದೈತ್ಯರು ಯಾವ ಕರ್ಮಮಾಡಲೂ ಶಕ್ತರಲ್ಲ. ಈ ಕಲಿ ಮೊದಲಾದ ತತ್ವಾಭಿಮಾನಿ ಸಾಂಶ ದೈತ್ಯರಲ್ಲಿಯೂ ಬ್ರಹ್ಮ ರುದ್ರಾದಿ ತತ್ವಾಭಿಮಾನಿ ದೇವತೆಗಳು ನಿಯಮಿಸುವರಾಗಿದ್ದು, ಹರಿಯಾಜ್ಞೆಯಿಂದ ಆ ದೈತ್ಯಾದಿಗಳ ಕಲುಷ, ದುಷ್ಕರ್ಮಗಳನ್ನು ದೇವತೆಗಳು ತಾವು ಮಾಡಿಸಿ, ಕಮಲಾಕ್ಷನಾದ ಹರಿಗೆ ಅರ್ಪಿಸುತ್ತಾ, ದೋಷದೂರರಾಗಿ ಪಾಪ ಲೇಶವಾದರೂ ಲೇಪವಿಲ್ಲದೆ, ನಿಶ್ಚಲಭಕ್ತಿ ಜ್ಞಾನಪೂರ್ಣರಾಗಿ, ಈ ದೈತ್ಯಾದಿಗಳಿಂದ ಕುಕರ್ಮ ಪ್ರೇರಿಸಿದರೂ, ತಾವು ಸುಖಿಗಳು ಜ್ಞಾನಿಗಳೆಂದು ಕರೆಸುತ್ತಾರೆಂದು ತಿಳಿದು ಉಪಾಸನೆ ಮಾಡುವವರು ಯೋಗಿಗಳು ಮತ್ತು ದೇವತೆಗಳು ಆವ ಜೀವರೊಳಿದ್ದರೂ, ಯಾವ ಕರ್ಮ ವಿಧಿ ನಿಷೇಧ ಕರ್ಮಗಳನ್ನು ಮಾಡಿ ಮಾಡಿಸಿದರೂ, ಹರಿ ಪ್ರೇರಣೆಯಿಂದ ಯಾವ ರೂಪ ಗುಣ ಉಪಾಸನೆಯನ್ನೂ ಮಾಡಿದರೂ ಸರಿಯೆ, ಸುಂದರ ಮೂರ್ತಿಯಾದ ಕಾಮನ್ನೈಯ್ಯ ಪ್ರದ್ಯುಮ್ನ ರೂಪಿ ಹರಿಯ ಕರುಣಾದೃಷ್ಟಿ ಕೃಪಾನೋಟ ಬಲದಿಂದ ಭಗವದಾಜ್ಞೆಯಿಂದ ಸುಕರ್ಮ ದುಷ್ಕರ್ಮಮಾಡಿಸಿ ಚರಿಸುವಂಥಾ ದೇವತೆಗಳನ್ನು ಪಾಪಕರ್ಮಗಳು ಮುಟ್ಟಲಾರವು ಎಂಬ ದಾರಢ್ಯ ಜ್ಞಾನ ಧ್ಯಾನೋಪಾಸನ ಯೋಗಿಗಳಿಗೆ ಇರಬೇಕು. ತಾವು ಅದರಂತೆ ಆಚರಿಸಬೇಕು. ಹೇಗಂದರೆ ಲೋಕದಲ್ಲಿ ಪತಿಪತ್ನಿಯರು ಗಾರ್ಹಸ್ಥ್ಯ ಧರ್ಮ, ರತಿಕಾಲ ನಿಯಮವಿಲ್ಲದೇ ಸತಿಯು ತನ್ನ ಗಂಡನ ಕೂಡ ಮನಬಂದಂತೆ ಪ್ರತಿನಿತ್ಯದಿ ಪತಿಪತ್ನಿಯರು ಕೂಡಿ ರಮಣಮಾಡುತ್ತಾ ಆನಂದದಿಂದ ಇರುತ್ತಾ, ಅನೇಕ ಪುತ್ರರನ್ನು ಪಡೆದಾಗ್ಯೂ, ಈ ಲೋಕದಲ್ಲಿ

ಆ ಸತಿಯು ಜಿತೇಂದ್ರಿಯಳೆಂದು ಕರೆಸುತ್ತಾಳೆ. ಇದರಂತೆ ಕಾಮಜನನಿಯಾದ ಕೃತಿದೇವಿಯ ಪತಿ ಸುಂದರನಾದ ಹರಿಯ ಕಥಾಮೃತವನ್ನು=ಸವಿಯಾದ ಅಮೃತ ಹರಿಕಥಾಮೃತ ಭೋಜನದಲ್ಲಿ ರತರಾಗಿರುವ ಮಹಾತ್ಮರಿಗೆ ಸಕಲ ದೇಶ-ಕಾಲ-ಕರ್ಮ-ದೇಹ-ಜೀವಿಗಳಲ್ಲಿ ಪರಮಾತ್ಮನ ರೂಪ ಕ್ರಿಯಾಗುಣ ಗಳನ್ನು ಸ್ಮರಿಸುತ್ತ ಇದೇ ಧ್ಯಾನಂಗತರಾದ ಮಹಾತ್ಮರಿಗೆ ಇತರ ಪಾಪದೋಷ ಸಮೂಹಗಳು ಚ್ಯುತನಾಗದೆ ಒಂದರಘಳಿಗೆ ಜೀವನನ್ನು ಬಿಟ್ಟಗಲದಿರುವ ಶ್ರೀ ಹರಿಯ ದಾಸರಿಗೆ ಯಾವ ದೋಷಗಳೂ ಇಲ್ಲ. ಇಂತು ಧ್ಯಾನೋಪಾಸನೆ ರತರಾದ ಯೋಗಿಗಳ ಲಕ್ಷಣ ಗುಣ. ಅವರ ಮಾಹಾತ್ಮ್ಯೆ ಹೇಳಿದರು.

**ಇನ್ನು ಧ್ಯಾನೋಪಾಸನೆ ತಿಳಿಯದ ಅಹಂಕರ್ತೃವೆಂದು ಭಾವಿಸುವ ಅಯೋಗಿಗಳಾದ ನರರಿಗಾಗುವ ಗತಿ ಹೇಳುತ್ತಾರೆ.** ಶ್ರೀ ಹರಿಯನ್ನೂ ಶ್ರೀ ಹರಿಯ ಭಕ್ತರನ್ನೂ ಧ್ಯಾನವನ್ನೂ ಮರೆತು ಅಹಂ ನಾನೆ ಕರ್ತನೆಂಬುವನ ಗತಿ ಏನು ಹೇಗಾಗುತ್ತದೆಂಬುದನ್ನು ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ.

ಹೇಗಂದರೆ ನದಿ ತುಂಬಿ ಹರಿಯುಹತ್ತಿದೆ. ಎರಡೂ ದಡ ಸೂಸುತ್ತದೆ. ದಾಟಲು ಸಾವಿಕಾ ಹರಗೋಲು ಇವೆ. ಒಬ್ಬ ಬಲವುಳ್ಳ ಮನುಷ್ಯರಲ್ಲಿ ಬಲಿಷ್ಠ ನಾನು ಮಹಾ ಸಮರ್ಥ-ಈಜುಗಾರರಲ್ಲಿ ಗರಿಷ್ಟ, ಅಹಂಕಾರಿಗಳಲ್ಲಿ ವರಿಷ್ಠ, ಇದೇ ನಚ್ಚರ ಈ ತುಂಬಿ ಎದುರು ಬರುವ ಹೊಳೆಯುನ್ನು ಈಜಿಯೆ ಪಾರಾಗುತ್ತಾನೆಂಬ ಭ್ರಾಂತಿಯಿಂದ ನನ್ನ ಸಾಹಸ ನೋಡಿರಿ, ಧೈರ್ಯ ನೋಡಿರಿ-ಬಲ ನೋಡಿರೆಂದು ತುಂಬಿದ ನದಿಯ ಜಲದ ಎದುರು ಈಜುವೆ, ಈ ನೀರು ಹರಿಗುಂಟ ಹೋಗಲು ಅಸಮರ್ಥನೇ ಎಂದು ಜಲಕ್ಕೆ ಎದುರಾಗಿ ಈಜುತ್ತ ಹೋದರೆ, ಕೈಸೋತು ಮುಳುಗಿ ದುಃಖಪಡುವನು. ಹೀಗೆಯೇ ಅಹಂಕಾರಯುಕ್ತ ಸ್ವಕರ್ತೃತ್ವಾ ಅಭಿಮಾನದಿಂ ಭಗವಂತನ ಸಾಮರ್ಥ್ಯ ತಿಳಿಯದೇ ಆದಿ ಸೃಷ್ಟಿಯಿಂದ ಸರ್ವೋತ್ತಮನಾದ ಹರಿಯು, ತನ್ನ ಸತ್ಯ ಸಂಕಲ್ಪಾನುಸರಿಸಿ ಕ್ಲೃಪ್ತವ ಮಾಡಿದ್ದದ್ದು ಬಿಟ್ಟು, ಕೇವಲ ಅರ್ಥಪರನಾಗಿ ದುರ್ದೇವತೆಗಳಾದ ಅನ್ಯದೇವತೆಗಳನ್ನು ಆರಾಧಿಸುವನು, ತಮಸ್ಸಿನಲ್ಲಿ ಬಿದ್ದು ದುಃಖಪಡುವನು. "ಅನ್ಯ ದೇವತೆಗಳ ಕಣ್ಣೆತ್ತಿ ನೋಡದಿರಿ" ಎಂಬ ವಿಜಯ ದಾಸಾರ್ಯರ ಸುಳಾದಿ ನೋಡಿರಿ. ಶ್ರೀಕೃಷ್ಣಾಚಾರ್ಯರ ಸ್ಮೃತಿ ಮುಕ್ತಾ

ವಲಿ ದೇವಪೂಜಾ ಪ್ರ|| ದಲ್ಲಿ ವಿವರಿಸಿದ್ದಾರೆ. ಶ್ರೀಹರಿ ರಮಾ, ಈರ ನಂತರ ತತ್ವಾದಿಗಳು. ಪರಿವಾರ ದೇವತೆಗಳ ಹೊರ್ತಾಗಿ ಎಲ್ಲರೂ ಕ್ಷುದ್ರರು. ಅನ್ಯ ದೇವತೆಗಳು "ತಾಳಿಯ ಹರಿದು ಬಿಸಾಟಿ ಇಂಥ ಖೂಳ ದೇವತೆಗಳ ಹೆಸರಿಲೆ ಕಟ್ಟಿರ್ದ" ಎಂದು ಪುರಂದರದಾಸರ ವಚನ. ಇಂಥ ಅನ್ಯ ದೇವತೆಗಳ ಪೂಜಕನೂ ಮತ್ತು ಈ ಜಡದೇಹವೆ ನಾನು, ಈ ಮನೆ ಹೊಲ ನನ್ನವು, ದಾರಾ ಪುತ್ರಾದಿಗಳು ನನ್ನವರು. ತನಗೆ ಭಿನ್ನವಾದ ವಸ್ತುಗಳು ನನ್ನಿಂದ ಆಗಲುವವು ಎಂದರಿಯದೇ ಸಕಲ ಕರ್ಮಗಳು ನಾನೆ ಮಾಡುವೆ ನನಗೆ ದತ್ತ ಸ್ವಾತಂತ್ರ್ಯ ಉಂಟು. ಈ "ದತ್ತ ಕರ್ತೃತ್ವದ ಅರ್ಥವನರಿಯದೇ ವ್ಯರ್ಥ ಭಾರವ ನೀಂ ಪೊತ್ತಿರುವಿ" ಎಂಬ ದಾಸರ ವಚನದಂತೆ, ಪ್ರತಿ ನಿತ್ಯದಲ್ಲಿ ಮಾಡುವ ಕರ್ಮವು ಒಳ್ಳೇವಾದರೂ ನಾನೇ ಮಾಡುವೆನೆಂಬ ದುರಹಂಕಾರದಿಂದ ಪುಣ್ಯ ಕರ್ಮಗಳಾದ ಸ್ನಾನ-ಜಪ, ದೇವತಾರ್ಚನೆ, ವೈಶ್ವದೇವ, ಬಲಿಹರಣ ಮೊದಲಾದ ಪಂಚಯಜ್ಞ ಕರ್ಮಗಳು ಮಾಡಿದರೂ, ದೈತ್ಯಾದಿಗಳು ಆ ಕರ್ಮಗಳ ಫಲ ಶಳಕೊಂಡು ಹೋಗುವರು. ಹರಿ ವಿಸ್ಮೃತಿಯಿಂದ ಮಾಡಿದ ಪುಣ್ಯಗಳಾದರೂ ಶ್ರೀನಿವಾಸನು ಸ್ವೀಕರಿಸುವದಿಲ್ಲ. ಹೇಗಂದರೆ ಮದ್ದಾನೆ-ಮದವೇರಿದ ಆನೆಯು ಕಪಿಥ್ಥ-ಬೆಳಲ ಹಣ್ಣು ಪಕ್ವವಾದುದನ್ನು ತಿಂದರೆ, ಅದರಲ್ಲಿರುವ ಸತ್ವವೆಲ್ಲವೂ ಹೋಗಿ ಗೊರಟೆ ಮಾತ್ರ ಉಳಿಯುತ್ತದೆ. ನಿಷ್ಫಲವೆಂದು ಮೇಲೆ ತೋರುವ ಅರ್ಥ ಹೀಗೆಯೆ ಹಿಂದಿನ ಎಲ್ಲ ವ್ಯಾಖ್ಯಾನಕಾರರು ಬರೆದಿದ್ದಾರೆ. ಇದರಲ್ಲಿ ಪ್ರಚುರ ಮಾಡಿರುವ ಮೂರು ಜನ ವ್ಯಾಖ್ಯಾನಕಾರರೂ ಈ ವಿಷಯ ಮದ್ದಾನೆ ಎಂದು ಉಲ್ಲೇಖಿಸಿರುತ್ತಾರೆ. ಇದರ ಮೂಲವೇನು, ವಿಚಾರ ಮಾಡಲು ಚಿಕ್ಕ ವಯಸ್ಸಿನಿಂದ ಪ್ರಯತ್ನಿಸಿ-ನಾಲ್ಕಾರು ಸಲ ಆನೆಗಳು ಬಂದಾಗ್ಗೆ ಮಾವಟಿಗನನ್ನು ಅನುಸರಿಸಿ ಆನೆಗೆ ಟೆಂಗಿನಕಾಯಿ-ಬೆಳಲಕಾಯಿ ಹಣ್ಣುಗಳನ್ನು ತಿನ್ನಲಿಕ್ಕೆ ಕೊಡಲು, ಸರ್ವಥಾ ಅದು ನುಂಗುವದಿಲ್ಲ. ಸೊಂಡೆಯಿಂದ ಕಾಯಿಗಳನ್ನು ಒಡೆದು ಕಡಿದು ಪುಡಿ ಮಾಡಿ ತಿನ್ನುತ್ತದೆ. ಪೂರ್ತಿ ಬೆಳಲಕಾಯಿ, ಟೆಂಗಿನಕಾಯಿ ನುಂಗುವದಿಲ್ಲ. ಇದೇನು ಮರ್ಮವೆಂದು ಯೋಚಿಸುತ್ತಿರುವಾಗ, ಒಬ್ಬ ವೃದ್ಧ ಸಂಪ್ರದಾಯಜ್ಞ ಭಾಗವತದಲ್ಲಿ ನುರಿತ ದಾಸವ್ಯಾಸ ಸಾಹಿತ್ಯ ಸಮ್ಮೇಲನಮಾಡಿ ಅರ್ಥಮಾಡುವ ಜ್ಞಾನಿಗಳು ತಮ್ಮಾ ಆನೆ ಎಂದರೆ ಪ್ರಸಿದ್ಧ ಆನೆಯಲ್ಲ.

ಮದ್ದಾನೆ ಎಂದರೆ ಬೆಳಲಕಾಯಿ (ಬೇಲದಕಾಯಿ) ಯಲ್ಲಿರುವ ಒಂದು ಹುಳುವು ಬೆಳಲ ಹಣ್ಣಿನಲ್ಲಿದ್ದ ಮದ ತಿರುಳು ತಿಂದು ಕೊಬ್ಬಿರುತ್ತದೆ. ಅದು ಹಣ್ಣಿನ ಒಳಗೆ ಇರುತ್ತದೆ. ಅದಕ್ಕೆ ಮದ್ದಾನೆ ಎನ್ನುತ್ತಾರೆ. ಈ ಹಣ್ಣಿನಲ್ಲಿ ಮದ ಸೊತ್ತು ತಿಂದಮೇಲೆ ಅದು ಬುರಡಿಯಾಗಿ ಪೊಳ್ಳಾಗಿರುತ್ತದೆ. ಅದರಿಂದ ಆ ಫಲವು ನಿಷ್ಪ್ರಯೋಜನವೆಂದು ಹೇಳಿದರು." ಅವರ ವಚನದಲ್ಲಿ ನಂಬಿಕೆ ಇಟ್ಟು, ಬೆಳಲ ಗಿಡದಲ್ಲಿರುವ ಕಾಯಿ-ಹಣ್ಣು ಮಾರಾಟ ಮಾಡುವರನ್ನು ಹಿಂಬಾಲಿಸಬೇಕಾದೀತು. ಬೆಳಲ (ಬೇಲದ) ಹಣ್ಣು ಪಕ್ವವಾದಾಗ್ಗೆ ಕೆಲವು ಹಣ್ಣಿನಲ್ಲಿ ಒಳಗೆ ಹುಳಗಳು ಇದ್ದು-ಒಳಗಿನ ಸತ್ವವೆಲ್ಲ ತಿಂದು ಬುರಡಿ ಮಾಡಿ ಬಿಡುತ್ತವೆ. ಒಡೆದರೆ ಬರೆ ಹಣ್ಣು ಕಾಣುತ್ತದೆ. ಇದನ್ನು ಚನ್ನಾಗಿ ಮನ ಮುಟ್ಟಿ ನೋಡಿ, ತಿಳಿದು ಸಂಪ್ರದಾಯಜ್ಞರ ವಚನದಲ್ಲಿ ನಂಬಿಕೆ ಇಟ್ಟು, "ಆನೆ ಬೇಲದ ಹಣ್ಣು ತಿಂದ ಹಾಗೆಂಬುವ" ಹಿಂದಿನ ಗ್ರಂಥಗಳ ಆಧಾರದಿಂದ, ಆ ಹಣ್ಣು ನಿಷ್ಫಲವು ಹೇಗೋ ಹಾಗೆ, ಅಹಂಕರ್ತೃತ್ವ ಅಭಿಮಾನದಿಂದ ಮಾಡಿದ ಕರ್ಮವು ನಿರರ್ಥಕವೆಂದು ಹೇಳುತ್ತಾರೆ. ಇಂತಹ ಅಹಂಮತಿ ಯುಳ್ಳ ಮಾನವನು, ಭೂಮಂಡಲದಲ್ಲಿದ್ದ ಎಲ್ಲ ತೀರ್ಥಯಾತ್ರೆ ಮಾಡಲು ಕ್ಷೇತ್ರಗಳನ್ನು ತಿರುಗಿದರೂ ಫಲವಿಲ್ಲ ಮತ್ತು ಇವರು ಪಾತ್ರರು-ಯೋಗ್ಯ, ಇವರು ಅಪಾತ್ರರು-ಅಯೋಗ್ಯರು ದಾನಕೊಡಲು ಅರ್ಹರಲ್ಲವೆಂದು ತಿಳಿದು, ಬಹಿರರ್ಥವಾದ ಶಾಸ್ತ್ರದಂತೆ, ಅನ್ನ-ಉದಕ, ವಸ್ತ್ರ-ದ್ರವ್ಯಾದಿ ದಾನವನ್ನು ಮಾಡಿದರೂ ಏನು ಫಲವಿಲ್ಲ ಮತ್ತು ಅಹಂಮತಿಯುಳ್ಳ ಮಾನವನು ಮೈ ದೊಳೆದು ಮಡಿಯುಟ್ಟು ನಾನು ಪರಿಶುದ್ಧ ದೇಹದಿಂದ ಮಂತ್ರಗಳನ್ನು ಜಪಿ ಸುತ್ತೇನೆಂದು ಸ್ತೋತ್ರಗಳ ಅರ್ಥವನ್ನು ತಿಳಿಯದೇ ಪಾರಾಯಣ ಮಾಡಿದರೂ ಫಲವಿಲ್ಲ. ಏಕಂದರೆ ಈ ಅಹಂಮತಿಗೆ, ಶ್ರೀಹರಿಯು ಸರ್ವಗತ, ಸರ್ವ ವ್ಯಾಪ್ತ, ಸರ್ವ ಪ್ರೇರಕ, ಸ್ವತಂತ್ರನೆಂದು ತಿಳಿಯದು. ನಾನೇ ಕರ್ತಾ ಎಂದು ತಿಳಿದು ಮಾಡುವನಿಗೆ ಯಾವ ಫಲವೂ ಪುಣ್ಯವೂ ಇಲ್ಲವೇ ಇಲ್ಲ. ಮತ್ತು ಹೃತ್ಪುಂಡರೀಕದಲ್ಲಿ, ಗರುಡಾರೂಢನಾದ ಹರಿಯನ್ನು ಮನದಲ್ಲಿ ನಿಲ್ಲಿಸದೇ ತಿಳಿಯದೇ ಭಗವದ್ ವ್ಯಾಪ್ತಿಯನ್ನು ಜಗತ್ತು-ದೇಹದಲ್ಲಿ ತಿಳಿಯದೆ ಇರುವ ಮಾನವನು ಕಂಡ ಜಲದಲ್ಲಿ ಜಲಾಭಿಮಾನಿಗಳನ್ನರಿಯದೇ ಜಲದಲ್ಲಿ ಮುಳುಗಿ ದೇಹವನ್ನು ದಂಡಿಸಿದರೆ ಏನು ಫಲವಿಲ್ಲ. ಸರ್ವೋತ್ತಮನಾದ ಹರಿಯ

ಕರ್ತೃತ್ವಾನು ಸಂಧಾನ ಮರೆದು ದಂಡ, ಕಮಂಡುಲ, ಕಾಷಾಯವಸನಗಳನ್ನು ಧರಿಸಿ ಬೌದ್ಧ ಸನ್ಯಾಸಿಗಳಂತೆ ತೋರುತ್ತ ಚರಿಸಿದರೆ ಫಲವಿಲ್ಲ. ಏಕೆಂದರೆ ಯತಿ ಸನ್ಯಾಸಿಯಾಗುವದೇತಕ್ಕೆ ? ಮೃಷ್ಟಾನ್ನ ಭುಂಜಿಸಿ ಹಸ್ತೋದಕ ಧನ ತೆಗೆದುಕೊಳ್ಳಲಿಕ್ಕಲ್ಲ. ಸಕಲ ಇಂದ್ರಿಯಗಳನ್ನೂ ವಶದಲ್ಲಿಡದೆ ಗ್ರಾಮೈಕರಾತ್ರಿ ಸಂಚರಿಸಿ, ವಿಷಯ ಭೋಗಗಳಮೇಲೆ ಅಭಿಮಾನವಿಟ್ಟು, ಕಾಷಾಯವಸನ ಧರಿಸಿ ತಿರುಗಿದರೆ ಏನು ಫಲ ? ದಂಡಕಮಂಡಲಕಾ ಪಿಡಿದರೇನು ? ಎಲ್ಲಿಯ ವರೆಗೆ ಯತಿ ಪ್ರಣವ ಕಲ್ಪದಲ್ಲಿ ಶ್ರೀಮದಾಚಾರ್ಯರು ಆಜ್ಞೆಯಿತ್ತಂತೆ ಪ್ರಾಣ ರಕ್ಷಣೆಗಾಗಿ ೭ ಏಳೇ ತುತ್ತು ಸಾತ್ವೀಕ ಗ್ರಾಸ ಕೊಂಡು ಸಂತತ ಪ್ರಣವ ಜಪವಾಚರಿಸುತ್ತ ಇಂದ್ರಿಯ ನಿಗ್ರಹಮಾಡಿ ಓಂಕಾರ ಪ್ರತಿಪಾದ್ಯ ಹರಿಯನ್ನು ಭಜಿಸದೇ, ಮೇಲೆ ತೋರುವ ಸನ್ನ್ಯಾಸಿಯಾದರೆ ಯತ್ಯಾಶ್ರಮದ ಫಲವೇ ಇಲ್ಲ ! ಅರ್ಜುನನು ಕಾಷಾಯ ವೇಷದ ತ್ರಿದಂಡಿಯಾದರೂ ಶ್ರೀಕೃಷ್ಣನನ್ನು ಸ್ಮರಿಸುತ್ತ ಕೃಷ್ಣಾಜ್ಞೆ ಪರಿಪಾಲಿಸಿದನು. ಅರ್ಜುನನಿಗೆ ಸುಭದ್ರಾದೇವಿ ಲಭಿಸಿದ್ದೇ ಮಹಾ ಫಲವಲ್ಲ. ಅರ್ಜುನ ಸಖನೆಂದು ಬಿರು ದುಳ್ಳ ಹರಿಯು, ಇಂದ್ರಾಂಶನಾದ ಅರ್ಜುನನ ಹೃದಯದಲ್ಲಿ ಕಾಣಿಸಿಕೊಂಡಿ ದ್ದನು. ಅರ್ಜುನನ ಕೇಶಗಳೂ ಕೂಡ ವಾಸುದೇವ ಎಂದು ಧ್ಯಾನಿಸುತ್ತಿದ್ದವು. ಹೀಗೆ ಅರ್ಜುನನಂತೆ ಯತಿಯಾದರೆ ಮಹಾಫಲ. ಇದೇ ಸ್ಥೂಲದೇಹ ದಿಂದಲೇ ಈ ವಾಸುದೇವೋಪಾಸಕನಿಗೆ ಶ್ವೇಪಗತನಾದ ತನ್ನ ರೂಪವನ್ನು ಸಂದರ್ಶನ ಮಾಡಿಸಿದ-ವಿಶ್ವ ರೂಪ ತೋರಿಸಿದನು. ಇಂಥವನು ಡಂಭಾ ಚಾರದ ಯತಿಯಾದರೂ ಹರಿ ವಿಸ್ಮರಣೆ ಇದ್ದಿಲ್ಲ. ಆದರೆ ಇಂತಹ ಅಹಂಮತಿ ವಿಶಿಷ್ಟನು, ವೇದಗಳನ್ನು ಶಾಸ್ತ್ರಗಳನ್ನು ಓದಿದರೂ ಏನು ಫಲ ? ಪುರಾಣದ ಕಥೆಗಳನ್ನು ತಾನು ಕೇಳಿ ಜನರಿಗೆ ಹೇಳಿದರೂ ಫಲವಿಲ್ಲ. ಸಕಲ ನಿಷಿದ್ಧ ಕರ್ಮಗಳನ್ನು ಬಿಟ್ಟು ಸಂತತವಾಗಿ ಸತ್ಕರ್ಮಗಳನ್ನು ಮಾಡಿದರೂ ಏನೂ ಫಲ ವಿಲ್ಲ. ಕಾಮಲೋಭಮದ ಮಾತ್ಸರ್ಯಗಳನ್ನು ತೊರೆಯದೇ ಮಾನಸಸ್ಮೃತಿ ಯಲ್ಲಿ ಪೇಳಿದಂತೆ "ವಾಕ್ ಪ್ರಾಣದೃಕ್‌ಶ್ರೋತ್ರ ಮನೋ ಹೃದಯಸ್ಥಾನ ಗೇಷು ಚ । ಆಕಾಶಾಖ್ಯ ರಮಾರೂಪೇ ಷ್ವೇವಂ ರೂಪಾಣಿ· ಚಿಂತಯೇತ್ ೧. ವಿಷ್ಣೋ, ೨. ಪ್ರಜ್ಞಾ, ೩. ಪ್ರಿಯಾ, ೪. ಸತ್ಯಾ, ೫. ಅನಂತೋ, ೬. ನಂದಾಸ್ಥಿತಿ ॥ ಕ್ರಮಾ ಏತತ್ ರೂಪ ವಿಜ್ಞಾನೀ ಷಡರೀನ್ ಸಂಜಯು

ಸ್ಮೃತಿ || ಎಂಬ ವಚನದಂತೆ, ಈ ಆರು ರೂಪಗಳನ್ನು ನಿತ್ಯ ಧೇನಿಸುತ್ತಾ ಕಾಮಾದಿ ಆರು ವೈರಿಗಳನ್ನು ಗೆಲ್ಲದ ಮಾನವನು ಏನು ಮಾಡಿದರೂ ಫಲ ವಿಲ್ಲ. ಮತ್ತು ಇಂತಹ ಅಹಂಮತಿಯುಳ್ಳವನು ಎಷ್ಟು ಶಾಸ್ತ್ರ ಶ್ರವಣ ಮಾಡಿದರೂ ಅದರಲ್ಲಿಪ್ಪ ಭಗವನ್ ಮಾಹಾತ್ಮೆ ತಿಳಿಯದೇ ಏನು ಓದಿದರೂ, ಪುರಾಣಾದಿಗಳನ್ನು ಹೇಳಿದರೂ, ಶಾಸ್ತ್ರ ಪ್ರವಚನ ಮಾಡಿಸಿದರೂ, ಸ್ತೋತ್ರ ಮಂತ್ರಗಳನ್ನು ಪಠಿಸಿ ಸಂಗೀತದಿಂದ ಗೀತಗಾನ ದಿನದಿನದಿ ಬಿಡದಲೇ ಭಜನೆ ಮಾಡಿದರೂ ಒಲಿಯನು. "ಕೇಳನು ಹರಿಗಾನವ" ಶ್ರೀ ಲಕ್ಷ್ಮಿಯಿಂದೊಡ ಗೂಡಿದ ಶ್ರೀನಿವಾಸನ ಜನ್ಮಕರ್ಮ ಅವತಾರಾದಿ ಕಥಾನುಸಾರವನ್ನು ಸದ್ಭಕ್ತಿ ಯಿಂದ ದೀನೆದಿನೇ ನೆನೆದು, ದೇಹಗಳಲ್ಲಿ ಆಯಾ ಸ್ಥಾನಗಳಲ್ಲಿ ಬಹಿರಂಗ ಆಯಾ ಸ್ಥಳಗಳಲ್ಲಿ ಇರುವ ಭಗವದ್ರೂಪ, ಭಗವನ್ನಾಮ ಮಾಹಾತ್ಮೆಯನ್ನು ಸ್ಮರಿಸಿದೆ ಇರುವವನು, ನಾನೇ, ನಾನು, ನನ್ನದೇ ದೇಹವೆಂಬುವನಿಗೆ ಏನು ಸಾಧನ ಮಾಡಿದರೂ ಲೇಶ ಫಲವಿಲ್ಲ. ಹೌದಪ್ಪಾ ಹೌದು, ಶ್ರೀಹರಿಯನ್ನು ಮರೆತರೆ ಇಷ್ಟು ಪ್ರಯಾಸ. ನೀವೆಲ್ಲ ಇಷ್ಟು ಪುಂಖಾನುಪುಂಖ ಪ್ರಮೇಯ ಬಿಚ್ಚಿಟ್ಟರಿ. ಬರಿ ಬಾಯಿಲೆ ಒಣಾ ಡಂಭಾಚಾರ ಹೇಳಿದರೆ ನಿಮ್ಮ ಮಾತಿನಲ್ಲಿ ಭರವಸೆ ಹೇಗೆ ಇಡಬೇಕೆಂದು ಕೆಲ ಕುಹಕರು ಆಗಿನ ಕಾಲದಲ್ಲಿ ದೂಷಿಸುವ ರಿದ್ದರೂ ಮುಂದೆಯೂ ಇಂಥವರಾಗುವರು ಎಂದು ಜ್ಞಾನಿಗಳಾದ ದಾಸಾ ರ್ಯರು ; ನಾನು ಅಹಂಮತಿಯವನಲ್ಲ, ಅಹಂಕಾರಿಯಲ್ಲ-ಓದಿ ಕೇಳಿದವ ನಲ್ಲವೆಂದು ತಮ್ಮ ಅಹಂಕಾರವನ್ನು ತಾವೇ ಖಂಡಿಸಿಕೊಳ್ಳುವಂಥ ಉತ್ತಮರ ಲಕ್ಷಣ ತೋರಿಸಿದ್ದಾರೆ. ಹೌದು ನಾನೇನು ಬುದ್ಧಿವಂತನಲ್ಲ, ವಿದ್ಯಾವಂತ ನಲ್ಲ, ಬುದ್ಧಿ ಮತ್ತು ವಿದ್ಯಾಬಲದಿಂದ ಪೇಳಿದ ಶುದ್ಧವಾದ ಒಳ್ಳೇ ಛಂದಸ್ಸು ಅಲಂಕಾರಯುಕ್ತ ಕಾವ್ಯವು ಇದಲ್ಲ-ತತ್ವಗಳು ಸಮೀಚೀನವಾದ ಸಂಪ್ರದಾಯ ಯುಕ್ತ ಪದ್ಧತಿಗಳನ್ನು ರೀತಿಗಳನ್ನು ಜ್ಞಾನಿಗಳಿಂದ ತಿಳಿದ ಮಾನವನೂ ಅಲ್ಲ. ನಾನು ಏನು ಬಲ್ಲವನಲ್ಲವಾದರೂ ಮಧ್ವ ವಲ್ಲಭನಾದ ಶ್ರೀಹರಿಯು "ಮಧ್ವ ಇತ್ಯಾನಂದ ಉದ್ದಿಷ್ಟವೇತಿ ತೀರ್ಥಮುದಾ ಹೃದಾಹೃತಾ" ಎನ್ನುವಂತೆ ಆನಂದ ಶಾಸ್ತ್ರವನ್ನು ರಚಿಸಿದ ಆನಂದತೀರ್ಥರ ಒಡೆಯನಾದ ಹರಿಯು, ಮಧ್ವಾಂತ ರ್ಯಾಮಿಯಾದ ಬಿಂಬರೂಪೀ ಹರಿಯು, ತಾನೇ ಸ್ವಯಮೇವ ಹೃದಯ ದಲ್ಲಿದ್ದು, ಎನ್ನ ಅಂತರ್ಯಾಮಿಯಾಗಿ ಪ್ರೇರಿಸಿ ನುಡಿಸಿದಂತೆ ನುಡಿದೆನು.

ಜ್ಞಾನಿಗಳಾದ ತಾವು ನಾನು ಏನು ನುಡಿದಿರುವೆನೆಂಬ ಅಪದ್ಧಗಳನ್ನು ಮನಕೆ ತಾರದೇ ಕ್ಷಮಿಸಿರಿ, ಕಿವಿಗೊಟ್ಟು ಈ ಪ್ರಾರ್ಥನೆಯನ್ನು ಕೇಳಿ ಮನ್ನಿಸಿರಿ. ಹರಿ ನುಡಿಸಿದಂತೆ ನುಡಿದೆನು. ನಾನು ಸ್ವತಂತ್ರನಲ್ಲ, ಅಹಂಮತಿಯಲ್ಲವೆಂದು ಜ್ಞಾನಿಗಳಲ್ಲಿ ಪ್ರಾರ್ಥಿಸಿದ್ದು, ಇದರ ಅಭಿಪ್ರಾಯ ಎಷ್ಟು ಗಹನವಾಗಿರುವದೆಂಬ ವಿಚಾರವೂ, ಮಾಡುವದಾಗಿದೆ.

ಅಪರೋಕ್ಷ ಜ್ಞಾನಿಗಳಾದ ಶ್ರೀ ಜಗನ್ನಾಥದಾಸರಿಗೆ ಬುದ್ಧಿ ಇದ್ದಿಲ್ಲ, ವಿದ್ಯಾ ಇದ್ದಿಲ್ಲವೆಂದು ಸರ್ವಥಾ ಸಜ್ಜನರು ಭಾವಿಸಬಾರದು. ಶ್ರೀ ಶ್ರೀ ವರದೇಂದ್ರ ಶ್ರೀಪಾದಂಗಳವರಲ್ಲಿ, ಸುಧಾದಿ ಗ್ರಂಥಗಳ ವ್ಯಾಸಂಗಮಾಡಿ ಒಳ್ಳೇ ಬುದ್ಧಿವಂತರಾಗಿದ್ದರೂ, ಬುದ್ಧಿ ವಿದ್ಯಾ ಇಲ್ಲವೆಂತ ಹೇಳುವದರಲ್ಲಿ ಏನರ್ಥ? ಇದು ಬಹು-ಅತಿ ಆಶ್ಚರ್ಯ! ಇಂತಹ ದೊಡ್ಡ ಪಂಡಿತೋತ್ತಮರಾದ ಶ್ರೀನಿವಾಸಾಚಾರ್ಯರಿಗೆ ಪ್ರಾರಬ್ಧ ಕರ್ಮವಶಾತ್, ಕಲಿತ ವಿದ್ಯೆ ಬುದ್ಧಿ ಮಲಿನವಾಗಿ ಹಿಂದಿನ ಮಾನವ ಜನ್ಮದಲ್ಲಿ ದುಷ್ಟನಾದ ದುರ್ಯೋಧನನ ಅನ್ನ ಉಂಡದ್ದರಿಂದ, ಈ ಜನ್ಮದಲ್ಲಿಯೂ, ಬುದ್ಧಿ ವಿದ್ಯಾ ಕಲಕಿ ಜ್ಞಾನಿಗಳಾದ ಶ್ರೀ ವಿಜಯದಾಸರ ನಿಂದ್ಯೆ ಗೋಪಾಲದಾಸರ ಎದುರಿಗೆ ಮಾಡಿದರು. ಬುದ್ಧಿ ವಿದ್ಯಾ ಎಲ್ಲ ಹೋಗಿ ಆಯಸ್ಸು ಹಾನಿಯಾಗಿ ಕ್ಷಯರೋಗ ಪ್ರಾಪ್ತವಾಯಿತು. ತತ್ವ ಪದ್ಧತಿಗಳೆಲ್ಲ ಮರೆತು ಹೋದಮೇಲೆ, ಶ್ರೀ ವಿಜಯದಾಸರು ಶ್ರೀ ವೆಂಕಟೇಶನ ಆಜ್ಞೆಯಿಂದ ಶ್ರೀ ಗೋಪಾಲದಾಸರ ದ್ವಾರಾ ಶ್ರೀನಿವಾಸಾಚಾರ್ಯರನ್ನು ಉದ್ಧರಿಸಿ ಆಯುರ್ದಾನ ಮಾಡಿಸಿ, ರೋಗ ಉಪಶಮನ ಮಾಡಿಸಿ, ತತ್ವ ಬೋಧಿಸಿದರು. ಸಲ್ಹಾದಾಂಶ ಸಂಭೂತರಾದ ವಾಯು ಆವಿಷ್ಟರಾದ ಕರ್ಮಜ ದೇವತೆಗಳ ಬುದ್ಧಿ ಕೆಲವು ಕಾಲ ಮಸಗಿದರೂ, ಪುನಃ ಸಜ್ಜನರಾದ ಸ್ವೋತ್ತಮರ ದ್ವಾರಾ ಜ್ಞಾನವನ್ನು ತಂದೀವನು. ಹೀಗೆ ಪ್ರಾರಬ್ಧ ಕರ್ಮವನ್ನು ನೀಗಿ ದೇವಾಂಶರಾದ ಗೋಪಾಲದಾಸರಿಂದ ತತ್ವ ಪದ್ಧತಿ ತಿಳಿದ ದೇವತೆಗಳೇ ಹೊರತಾಗಿ, ನಿಜವಾಗಿಯೂ ಜಗನ್ನಾಥದಾಸರು ಮಾನವ ಜ್ಞಾನದವರು ಅಲ್ಲವೇ ಅಲ್ಲ; ದೇವತೆಗಳೇ ನಿಜ! ಇಂಥ ದೇವತೆಗಳೇ ಲೋಕೋದ್ಧಾರಕರೆಂದು ತಿಳಿದ ಮಧ್ವ ವಲ್ಲಭನಾದ ಶ್ರೀಹರಿಯು, ಶ್ರೀ ಸ್ವಾದಿರಾಜರು, ಪುರಂದರದಾಸರ ದ್ವಾರಾ ಸ್ವಪ್ನದಲ್ಲಿ ಪ್ರೇರಿಸಿ ಈ ಮಹಾ ಕಾವ್ಯರಚನೆ ಮಾಡಲು ಪ್ರೇರಿಸಲು, ಸಮಸ್ತ ವರ್ಣಾಭಿಮಾನಿ ದೇವತೆಗಳು ಒಲಿದು ನಿಂದು

ನುಡಿಸಿದಂತೆ ನುಡಿದಿರುವ ಹರಿಯ ಸ್ತೋತ್ರ ರೂಪವಾದ ಮಹಾ ಕಾವ್ಯವಿದಲ್ಲವೇ ? ಈ ಸುಸಮಿಾಚಿನ ಕಾವ್ಯದಲ್ಲಿ ಯಾವ ದೋಷವಿಲ್ಲವೆಂದು ಕರ್ಜಗಿ ದಾಸಪ್ಪದಾಸರು ಫಲಶ್ರುತಿಯಲ್ಲಿ ಬಣ್ಣಿಸಿರುವರು. ಇಲ್ಲಿ ಇನ್ನು ಮಹತ್ವವಾದ ಗೂಢ ವಿಚಾರವಿದೆ. ಸರ್ವಜ್ಞ ಕಲ್ಪರಾದ ಶ್ರೀ ಟೀಕಾ ಕೃತ್ಪಾದರು, ಸುಧಾ ಪ್ರಾರಂಭವಲ್ಲಿ "ನಶಬ್ದಾಬ್ಧೌಗಾಢಾ, ನಚನಿಗಮ ಚರ್ಚಾಸುಚತುರಾ| ನಚನ್ಯಾಯೇನ ಪ್ರೌಢಾ || – ನಚವಿದಿತ ವೇದ್ಯಾ ಅಪಿವಯಂಪರಂ ಶ್ರೀಮತ್ಪೂರ್ಣಪ್ರಮತಿ ಗುರು ಕಾರುಣ್ಯ ಸರಣೀ" ಎಂಬ ವಾಕ್ಯಗಳನ್ನು ನೆನಪಿಗೆ ತರುತ್ತಾರೆ. ಇದಕ್ಕೆ ಯಾದುಪತ್ಯರು ನಯ್ಯರ್ಥವನ್ನು, ಈ ಜ್ಞಾನಿಗಳಾದ ಜಗನ್ನಾಥದಾಸರು ಬುದ್ಧಿ ವಿದ್ಯಾಬಲದಿ ಪೇಳ್ದ ಶುದ್ಧ ಕಾವ್ಯವಿದಲ್ಲೆ ? ಹೌದು ತತ್ವ ಸುಪದ್ಧತಿಗಳನ್ನು ತಿಳಿದವನಲ್ಲೆ ? ಹೌದು, ತಿಳಿದ ಮಾನವನಲ್ಲ, ಅಲ್ಲ–ನ ಎಂಬ ನಯ್ಯರ್ಥಕ್ಕೆ ಪದಕ ಹೀಗೆ ಅರ್ಥ ಸರಿಯಾಗಿ ವಿವರಿಸಿರುವರು. ಮೊದಲಿಗೆ ಮಂಗಲಾಚರಣ ಸಂಧಿಯಲ್ಲಿ "ಗುರುಗಳ ಕರುಣದಿಂದಾಪನಿತು ಪೇಳುವೆ" ಮತ್ತು ಎರಡನೇ ಸಂಧಿ ಎರಡನೇ ಪದ್ಯದಲ್ಲಿ "ಕಲುಷವಚನಗಳಾದಡೆಯು ಬಾಂಬೊಳೆಯಪಿತ್ರನ ಪಾದಮಹಿಮಾ ಜಲಧಿ ಪೊಕ್ಕದರಿಂದ ಮಾಣ್ದಪರೇ ಮಹೀಸುರರು" "ಗಂಗಾ ಸಂಗೇನ ನೈರ್ಮಲ್ಯಂ ಸಂಗವ್ಯಂತೆ ಗುರೋರ್ಗಿರಃ ||" ಎಂಬಂತೆ ಗಂಗಾ ಜನಕನ ಪಾದಮಹಿಮಾ ಜಲಧಿ ಪೊಕ್ಕಮೇಲೆ ಶುದ್ಧ ಕಾವ್ಯವಿದಲ್ಲೆ? ಶುದ್ಧ ಕಾವ್ಯ ಹೌದೇ ಹೌದು ! ಉತ್ತಮರು ಕರ್ಮಜ ದೇವತೆಗಳಾದವರ ನಿಶ್ಚಲ ಜ್ಞಾನವೆಂಥದೆಂದರೆ, ಬುದ್ಧ್ಯಭಿಮಾನಿ ಸರಸ್ವತೀದೇವಿ ವಿದ್ಯಾ ಜ್ಞಾನಾಭಿಮಾನಿಗಳಾದ ವಾಯು ದೇವರು ಇವರುಗಳು ಅನುಗ್ರಹಿಸಿದ್ದು ಉತ್ತಮ ಜ್ಞಾನವು. 'ಏನಂ ಮೋಚಯಾಮಿ, ಎಂಬ ಶ್ರೀಹರಿಯ ಉತ್ತಮ ಪ್ರಸಾದ ದ್ವಾರಾ ಶ್ರೀಬಿಂಬ ಸಾಕ್ಷಾತ್ಕಾರ ಸದಾ ಹರಿಯ ಕರ್ತೃತ್ವ ವಿನಾ ಸ್ವಬುದ್ಧಿಯಿಂದ ಚರಿಸತಕ್ಕವರಲ್ಲ,–"ಹರಿಯಿಂದ ನಡೆವರು, ಹರಿಯಿಂದ ನುಡಿವರು" ಎಂಬ ದಾಸರ ವಚನಕ್ಕೆ ಶ್ರೀ ಸರ್ವಜ್ಞರ ಭಾಷ್ಯವೇ ಪ್ರೋದ್ಬಲವಾಗಿದೆ, ಕಾರಣ ಎನ್ನ ಸ್ವಬುದ್ಧಿಯಲ್ಲಿ ಮಧ್ವ ವಲ್ಲಭನು ತಾನು ನುಡಿದಂದದಲಿ ನುಡಿದೆ. ಇದರಲ್ಲಿ ಅಪದ್ಧಗಳೆಲ್ಲಿಂದ ಬಂದವು? ಇಲ್ಲೇ ಇಲ್ಲ. ಅಜ್ಞಾನಿಗಳು ಬೇಕಾದಂತೆ ತಿಳಿಯಲಿ, ಆದರೆ

ಜ್ಞಾನಿಗಳು ಮಾತ್ರ ಇದನ್ನು ಅಲ್ಲಗಳೆಯದೇ ಕಿವಿಗೊಟ್ಟು ಕೇಳಿರಿ-ಕೇಳಿರೆಂದು ಪೇಳಿದ್ದು ಬಹ್ವರ್ಥಪೂರಿತ ರಹಸ್ಯವಾಗಿದೆ.

**ಇನ್ನು ರಹಸ್ಯಪೂರಿತವಾದ ಈ ಸದ್ಗ್ರಂಥಕ್ಕೆ ಅನಧಿಕಾರಿಗಳಾರು ಅಧಿಕಾರಿಗಳು** ಯಾರೆಂಬುದನ್ನು ವೇದೋಪನಿಷತ್ ಆಧಾರಗಳ ಮೇಲಿಂದ ತಿಳಿಸುತ್ತಾರೆ.

ಕಬ್ಬಿನಲ್ಲಿರುವ ರಸಸ್ವಾದವನ್ನು ವಿದಂತ-ಹಲ್ಲು ಇಲ್ಲದವನು ರಸ ಆಸ್ವಾದವನ್ನು ಸವಿಯಬಲ್ಲನೇ ? ಭಾಗ್ಯ ಯೌವನದ ಸೊಕ್ಕಿನಿಂದ-ತನ್ನ ಎಚ್ಚರವೇ ತನಗೆ ಇರದೇ ಮನುಜತ್ವವನ್ನು ಮರೆತ ಮನುಜನಿಗೆ, ಈ ಹರಿ ಕಥಾಮೃತವು ಎಂದಿಗೂ ದೊರಕದು. ಭಾಗ್ಯಾದಿಗಳು ಬರಲು ಗರ್ವ ಅಹಂ ಕಾರದಿಂದ ಸೊಕ್ಕು ಬರುವುದು ಅಲ್ಪರಾದ ರಜ ತಮೋಜೀವಿಗಳ ಲಕ್ಷಣ. ಈ ಅಧಮಜೀವಿಗಳಿಗೆ ಎಂದಿಗೂ ಹರಿಕಥಾಮೃತ ಪಾನಮಾಡಲು ಸಿಕ್ಕುವದಿಲ್ಲ. ಇವರು **ಅನಧಿಕಾರಿಗಳು**. ಇನ್ನು ಹರಿ ಪಾದಾಬ್ಜದಲ್ಲಿ ವ್ಯಾಪಿಸಿದ ಸದ್ಭಕ್ತಿ ರಸವನ್ನು ಉಂಡು ಉಬ್ಬಿ ಕೊಬ್ಬಿದ ಇಂಥ ಭಾಗ್ಯ ಯೌವ್ವನನಿಗಾದರೂ, ಈ ಹರಿಕಥಾಮೃತಸಾರವು ಲಭ್ಯವಾಗುವದು, ಇನ್ನು ವಿ+ದಂತ=ವಿ ಹೋಗ ಲ್ಪಟ್ಟ, ದಂತ=ಹಲ್ಲಿನಿಂದ, ಕಬ್ಬು ಅಗಿದು ನಾಲಿಗ್ಗೆ ರುಚಿಕೊಡುವ, ವಿಷಯಾ ಸಕ್ತಿ ಹೋಗಲ್ಪಟ್ಟ ರಸ ವಿಷಯ ವಿದೂರ, "ರಸವರ್ಜ್ಯಂ ರಸೋಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ" ಎಂಬ ಗೀತೋಕ್ತಿಯಂತೆ ಜಿಹ್ವೋಪಸ್ಥ ವಿಷಯಗಳು ಶ್ರೀಹರಿಯ ಸಾಕ್ಷಾತ್ಕಾರ ನಂತರವೇ ಹೋಗುವವು. ಅಥವಾ ವಿದ್+ಅಂತ ಪರಮಾತ್ಮನು ಆದಿಮಧ್ಯಾಂತರಹಿತನೆಂದು ತಿಳಿದವನಿಗೆ, ಹರಿಕಥಾಮೃತಸಾರ ಲಭ್ಯವಾಗಿ, ಇದರ ರಸ ಸ್ವೀಕರಿಸಿ ಉಂಡು ಉಬ್ಬಿ ಕೊಬ್ಬಿ ಸುಖಾಬ್ಧಿಯೊಳ ಗಾಡುವ ಹರಿಭಕ್ತರೇ, ಶ್ರೀಪಾದರಾಜ, ಪುರಂದರ, ವಿಜಯಗೋಪಾಲದಾಸರೇ ಇದಕ್ಕೆ ಸಾಕ್ಷಿ. ಸದ್ಭಕ್ತರಾಗಿ ವಿಷಯಾಸಕ್ತಿ ದೂರರಾದ-ಮುಕ್ತಿಯೋಗ್ಯರಿಗೆ ಲಭ್ಯವಾಗುವುದು. **ಇವರೇ ಇದಕ್ಕೆ ಅಧಿಕಾರಿಗಳು.**

ಇನ್ನು ಖಗವರ ಧ್ವಜನಂಘ್ರಿ ಗರುಡಾರೂಢನಾದ ಶ್ರೀಕೃಷ್ಣನ ಪಾದಾ ಬ್ಜದಲ್ಲಿ ಭಕ್ತಿ ಯಾವ ಪ್ರಕಾರ ಮಾಡುವದು; ಆ ಭಕ್ತಿಯ ಲಕ್ಷಣವೇ ನೆಂಬುದು ತಿಳಿಯದ ಮನುಜರಾದ ಅಜ್ಞಾನಿಗಳಿಗೆ, ಈ ಹರಿಕಥಾಮೃತವು ಒಗಟು, ಗುಟ್ಟುಗಳಂತೆ ಅರ್ಥವಾಗದೇ ಇರುವುದು; ಅನಧಿಕಾರಿಗಳಾದ ಜೀವಿ

ಗಳಿಗೆ ಗುರುಗಳು ಪೇಳಿದರೂ ಯಾವ ಕಾಲಕ್ಕೂ ಅರ್ಥವಾಗುವದಿಲ್ಲ. ಇವರೆ **ಅನಧಿಕಾರಿಗಳು.** ಇನ್ನು ಖಗಗಮನನಾದ ಶ್ರೀಕೃಷ್ಣನ ಪಾದಾರವಿಂದದಲ್ಲಿ ಮನಸ್ಸು ಹೋಗಬೇಕಾಗಿ, ಸಚ್ಚಿತ್ತಾಭಿಮಾನಿಗಳಾದ ಗರುಡದೇವರ ಅನು ಗ್ರಹವು ಧ್ಯಾನೋಪಾಸನಕ್ಕೆ ಬೇಕು. ಗರುಡ ವಾಯು ರಮಾವಲ್ಲಭ ಶ್ರೀಹರಿಯ ನವವಿಧ ಭಕುತಿ ಮಾಡುವದೇ ಮುಖ್ಯವೆಂದು ಭಕುತಿಯ ಬಗೆ ಯನ್ನು ತಿಳಿದು, ಶ್ರೀಹರಿಯು ಪ್ರಾಕೃತ ತ್ರಿಗುಣಗಳಿಂದ ದೂರ, ನಿರ್ದುಷ್ಟ ಜ್ಞಾನಾನಂದಾದಿಗಳುಳ್ಳವನೆಂದು, ಪೊಗಳಿ ಆನಂದಪಡುತ್ತ ನಲಿದಾಡಿ ಹಿಗ್ಗುವ ಭಾಗವತರಿಗೆ ಹೆಚ್ಚಿನ ಭಕುತಿ ವಿಶೇಷ ಸುಖ ಆನಂದಗಳನ್ನು ಕೊಟ್ಟು ಹರಿಕಥಾ ಮೃತ ಸವಿರುಚಿ ತೋರಿಸಿ ರಕ್ಷಿಪನು. ಇವರೇ ಈ ಗ್ರಂಥಕ್ಕೆ **ಅಧಿಕಾರಿಗಳು.**

ಮತ್ತು ಇದು ಒಗಟು ಗುಟ್ಟು ಉಪದೇಶ ಅನಧಿಕಾರಿಗಳಿಗೆ ಉಪದೇಶ ಮಾಡಕೂಡದು. ಉಪದೇಶ ಮಾಡಿದರೂ, ಅಯೋಗ್ಯರಾದ ಅನಧಿಕಾರಿ ಗಳಿಗೆ ತಿಳಿಯದು. "ಪೇಳದಿರೆಲೋ ತತ್ವಸಾರ ಸುಂದರ ಗುಟ್ಟು" ಎಂಬ ಶ್ರೀ ವಿಜಯದಾಸರ ವಚನದಂತೆ, ಈ ಹರಿಕಥಾಮೃತಸಾರವನ್ನು, ಉತ್ತಮ ವಾದ ತತ್ವ ರಹಸ್ಯ ಜ್ಞಾನಿಗಳಾದ ಬ್ರಾಹ್ಮಣರೇ ಆದರದಿಂದ ಕೇಳಿರಿ-ಅಲ್ಲಗಳೆಯ ಬೇಡಿರಿ. **ನಿಷ್ಠುರಿಗಳಿಗೆ**–ಸತ್ಯವಾದರೂ ನಿಷ್ಠುರ ಮಾತನಾಡಿ ಮನಸ್ಸು ನೋಯಿಸಬಾರದೆಂಬ ಬಗೆಯನ್ನು ತಿಳಿಯದ ಅಜ್ಞಾನಿಗೆ, ಮೂಢರು=ಏನೂ ತಿಳಿಯದವರು ಅಜ್ಞಾನಿಗಳಿಗೆ, ನಾನೇ ಪಂಡಿತನೆಂಬ ದುರಾಭಿಮಾನ ಉಳ್ಳವ ನಿಗೆ, ದುರ್ಜನ=ನೀಚ, ಚಾಡಿಕೋರ, ಕ್ರೂರರಾದವರಿಗೆ ಪಿಶುನರಿಗೆ ಮತ್ತು ಹರಿಭಕ್ತರಲ್ಲಿ–ಹರಿಯಲ್ಲಿ ಭಕ್ತಿ ಇಲ್ಲದೆ ರಸಿಕನಲ್ಲದವ (ಕಾವ್ಯರಸವನ್ನು ಅರಿಯ ದವ) ಪಂಡಿತನಲ್ಲದವ, ಜ್ಞಾನವಿಲ್ಲದ ಮೂಢ, ಬೆಳ್ವಕ್ಕರಿಗರಾದವರೆಲ್ಲರೂ ಅರಸಿಕರು. ಇವರೆಲ್ಲ **ಅನಧಿಕಾರಿಗಳು.** ಇವರಿಗೆ ಈ ಹರಿಕಥಾಮೃತ ತತ್ವರಹಸ್ಯ ಪೇಳಿ ಉಪದೇಶ ಮಾಡಕೂಡದು.

ಎಂಥವರಿಗೆ ಉಪದೇಶ ಮಾಡಬೇಕೆಂದರೆ, ನಿರಂತರದಲ್ಲಿ ಸಕಲ ಷಡ್ಗು ಣೈಶ್ವರ್ಯ ಸಂಪನ್ನ ದೋಷದೂರನಾದ ಭಗವಂತನ ಪಾದಕಮಲಗಳಲ್ಲಿನ ರಸವನ್ನು ತುಂಬಿಯಂತೆ ಸವಿದು ಮಧುಕರರೆನಿಸುವ ಭಾಗವತರಿಗೆ ಮಾತ್ರ ಹೇಳಿದರೆ, ಇದು ಸಫಲವಾಗುವುದು. ಈ ಭಾಗವತರೇ **ಅಧಿಕಾರಿಗಳು.**

ಇದೇ ವಿಷಯವನ್ನೇ ಶ್ರೀ ಸರ್ವಜ್ಞರು ಐತರೇಯ ಭಾಷ್ಯದಲ್ಲಿ ಅಪ್ಪಣೆ

ಕೊಡಿಸಿರುವದೇನಂದರೆ **ಅನಧಿಕಾರಿಗಳಿಗೆ ಉಪದೇಶ ಮಾಡಕೂಡದು.** "ಸಂಹಿತಾಖ್ಯಾನಿ ವಿಷ್ಣೋಸ್ತು ರೂಪಾಣ್ಯೇತಾನಿ ಸರ್ವಶಃ || ಅನ್ಯವಿದ್ಯಾ ಸ್ವಶಿಷ್ಯಸ್ಯ ನಬ್ರೂಯಾತ್ ಪ್ರಥಮಂ ಕ್ವಚಿತ್ || ವ್ಯಾಖ್ಯಾನ ಶಕ್ತಿ ಹೀನಾಯ ನೈವಬ್ರೂಯಾತ್ ಕಥಂಚನ ||" **ಎಂಥವರಿಗೆ ಉಪದೇಶ ಮಾಡುವ ದೆಂದರೆ** "ವೈಷ್ಣವಾಯ ಸುವೃತ್ತಾಯ ಮೇಧೋ-ಶ್ರದ್ಧಾಯುತಾಯ ಚ || ಗುರೌಃ ಶುಶ್ರೂಷಕಾಯೈವ ಬ್ರೂಯಾದಿತ್ಯನುಶಾಸನಮಿತಿ" ಎಂದು ಸರ್ವಜ್ಞರ ಕಟ್ಟಾಜ್ಞೆ.

ಮತ್ತೂ ಈ ಹರಿಕಥಾಮೃತಸಾರವು ಲೋಕದ ವಾರ್ತೆ, ರಾಜ್ಯಾಡಳಿತ ವಿಷಯಸ್ರೂರಿತ ಸಂಸಾರವಾರ್ತೆ ಇದಲ್ಲವೈಯ್ಯಾ ; ಇದು ಪರಲೋಕೈಕನಾಥನ ಉತ್ತಮವಾದ ಊರ್ಧ್ವ ಲೋಕಗಳಿಗೆ ನಾಥನೊಬ್ಬನೇ ಆದ ಶ್ರೀಹರಿಯ ಸೃಷ್ಟಿ ಸ್ಥಿತ್ಯಾದಿ ಅಷ್ಟಕರ್ತೃತ್ವ ವಿಚಾರದ ವಾರ್ತೆ, ಬಂಧ ಮೋಕ್ಷಪ್ರದ ವಾರ್ತೆ; ಇದು ಕಾಕು-ಕೆಟ್ಟ ಮನುಜರಿಗೆ ಸಮರ್ಪಕವಾಗಿ-ಯುಕ್ತವಾಗಿ, ಯೋಗ್ಯವಾಗಿ, ಉಚಿತವಾಗಿ ತೋರದು. ಇವರೆಲ್ಲ ಈ ಗ್ರಂಥಕ್ಕೆ **ಅನಧಿ ಕಾರಿಗಳು.** ಹೇಗೆಂದರೆ ಸರೋವರದಲ್ಲಿಯ ಕಮಲ ಪುಷ್ಪದಲ್ಲಿರುವ, ಸುವಾಸನೆ ಪರಿಮಳ ಸುಗಂಧ ನೀರೊಳಗಿದ್ದು ಕೆಟ್ಟ ಧ್ವನಿಯನ್ನು ಮಾಡುವ ಕಪ್ಪೆಗಳು ಕಮಲದ ರಸ ಸುವಾಸನೆಯನ್ನು ಸ್ವೀಕರಿಸುವವೆ? ಕಪ್ಪೆಯಂತೆ ಕೆಟ್ಟ ಧ್ವನಿಯನ್ನೂ ಗುಡ್ರು ಗುಡ್ರು ಎಂದೊದರುವ ಇತರ ವಾದಿಗಳಿಗೆ ಸರ್ವಥಾ ಈ ವಾರ್ತೆ ತಿಳಿಯುವದೇ ಇಲ್ಲ. ಇವರೇ **ಅನಧಿಕಾರಿಗಳು.**

ಭೃಂಗದಂತೆ ಕಮಲರಸ ಸುಗಂಧವನ್ನು ಆಸ್ವಾದನ ಮಾಡುವ, ಹರಿ ಪಾದ ಕಮಲರಸ ಈಂಟುವ ಹರಿಭಕ್ತರೇ ಈ ಹರಿಕಥಾಮೃತ ಪಾನಮಾಡು ವರು. ಅವರೇ**ಅಧಿಕಾರಿಗಳೆಂದು** ಉಪದೇಶಗೈದಿರುವರು.

"ತದಲಂ ಬಹುಲೋಕ ವಿಚಂತನಯಾ ಪ್ರವಣಂಕುರು ಮಾನ ಸಮಿಾಶಪದೇ" ಎಂಬ ಸರ್ವಜ್ಞರ ಆಜ್ಞೆಯೇ ತಾರಕವೆಂದು ತಿಳಿದು, ಸಂತತ ಲೋಕವಾರ್ತೆಯಲ್ಲಿ ಹಾಳ ಹರಟೆ ಹೊಡಿಯದೇ ಹರಿಕಥೆಯಲ್ಲಿ ನಿರತರಾಗಿ "ಹರಿವಾರ್ತೆ ಕೇಳು, ಕೇಳಿದ್ದೇ ಕೇಳು". ಎಂದು ದಾಸರ ವಚನವು ಶ್ರುತಿ ಸೂತ್ರಗಳಿಗೆ ಸಮ್ಮತವಾದುದು ಎಂದು ಸೂತ್ರಕಾರರಾದ ಶ್ರೀ ಬಾದರಾಯಣ ದೇವರ "ಓಂ ಅಸಕೃದುಪದೇಶಾತ್ ಓಂ" ಎಂಬ ಸೂತ್ರಾರ್ಥವನ್ನೆ ಮನ

ದಲ್ಲಿಟ್ಟು ಶ್ರೀಹರಿಯ ಮಹಿಮಾ ಕೇಳಿದ್ದೇ ಕೇಳುತ್ತಲಿರಬೇಕೆಂದು ಉಪದೇಶಿಸಿದ್ದಾರೆ.

ಶ್ರೀಹರಿಯು ಇಷ್ಟು ಸೃಷ್ಟಿ ಸ್ಥಿತಿ ಲಯಾದಿ ವ್ಯಾಪಾರವನ್ನು ಏಕೆ ಮಾಡುತ್ತಾನೆ. ಪೂರ್ಣ ಕಾಮನಾದ ಹರಿಗೆ ಪ್ರಯೋಜನವೇನಾದರೂ ಉಂಟೆಂದು ಶಂಕಿಸಿದರೆ, ಶ್ರೀಹರಿಯು ತಾನು ಸ್ವಪ್ರಯೋಜನ ಇಲ್ಲದವನೆಂದು ಸಮಸ್ತ ವೇದಗಳು ಪೊಗಳುತ್ತವೆ. ಆದರೆ ಶ್ರೀ ರಮಾದೇವಿಯರಿಗೆ ಈ ವ್ಯಾಪಾರದಿಂದ ಅವರ ಭೂತಿ ಐಶ್ವರ್ಯವನ್ನು ಹೆಚ್ಚಿಸುವನಾಗಿಯೂ, ಅನಾದಿಯಿಂದ ಅಸೃಜ್ಯಾವಸ್ಥೆಯಲ್ಲಿ ಇರುವ ಜೀವರಮೇಲೆ ಕರುಣಿಸಿ, ಸೃಷ್ಟಿಗೆ ತಂದು ಸಾಧನಮಾಡಿಸಿ ಅವರಿಗೆ ಯೋಗ್ಯವಾದ ಮುಕ್ತಿ ಕೊಡುತ್ತಾನೆ. ಮಹಾ ಕರುಣಾ ಸಮುದ್ರ. ತಾನು ಪೂರ್ಣ ಕಾಮನಾಗಿ ಸರ್ವರ ಸಕಲ ಇಷ್ಟಪ್ರದವಾದ ಮುಕ್ತಿಯನ್ನು ಕೊಡುವ, ಇದರಿಂದ ಹರಿಗೆ ತನ್ನ ಪ್ರಯೋಜನವಿಲ್ಲ. ಏಕೆಂದರೆ ತಾನು ಜ್ಞಾನಾನಂದಾದಿ ಗುಣಪೂರ್ಣನು, ರಮಾಬ್ರಹ್ಮಾದಿಗಳಿಂದ ತಿಳಿಯಲಿಕ್ಕೆ ಶಕ್ಯನಾಗದ ಮಹಾಮಹಿಮ. ಅಪ್ರಮೇಯನು, ಜರಾ ಮರಣಾದಿಗಳಿಂದ ವರ್ಜಿತನು. ಸನಾತನನು, ಶಾಶ್ವತನು, ಅನಾದಿ ನಿತ್ಯನು. ಸರ್ವದಾ ಶಶ್ವದೇಕ ಪ್ರಕಾರವಾಗಿರುವವನಿಗೆ ಮುಪ್ಪ ಮರಣಾದಿಗಳೆಲ್ಲಿ? ಶೋಕ ಮೋಹಾದಿ ದೋಷದೂರನು. ವಿಪ್ರತಮ=ಪ್ರಕೃಷ್ಟ ಶ್ರೇಷ್ಠತಮ, ರಮಾ ಬ್ರಹ್ಮಾದಿಗಳಿಂದ ಶ್ರೇಷ್ಠ ವಿಶ್ವಾತ್ಮನು. ಸಕಲ ಜಗತ್ತಿನಲ್ಲಿ ವ್ಯಾಪಿಸಿದವನು. ಪ್ರಳಯದಲ್ಲಿ ಸಮಸ್ತ ಜಗತ್ತನ್ನೂ ತನ್ನ ಉದರದಲ್ಲಿಟ್ಟುಕೊಂಡವನು, "ಜಗದಾಗೂಹಕ ಪಲ್ಲವ ಸಮಕುಕ್ಷೇ ಶರಣಾವೆ" ಎಂದು ಸರ್ವಜ್ಞರ ವಚನ. "ಘೃಣಿ-ಸೂರ್ಯ್ ಆದಿತ್ಯಾ" ಇತ್ಯಾದಿ ಶ್ರುತಿ ಪ್ರತಿಪಾದ್ಯನು. ಮಹಾ ಕರುಣಾಳು. ಸೂರಿಗಳಾದ ಜ್ಞಾನಿಗಳ ಹೃದಯದಲ್ಲಿ ಪ್ರಕಾಶಮಾನನಾದವನು, "ಸೂರ್ಯಕೋಟಿ ಪ್ರತೀಕಾಶಂ ಚಂದ್ರಕೋಟಿ ಸುಶೀತಲಂ" ಹೀಗೆ ಕೋಟಿ ಸೂರ್ಯ-ಕೋಟಿ ಚಂದ್ರ ಪ್ರಕಾಶನು. ಬ್ರಹ್ಮಾದಿಗಳಲ್ಲಿ ತೋರ್ಪನು. "ಘೃತಪ್ರತೀಕಾ" ಎಂಬ ಶ್ರುತಿಪಾದ್ಯನು. ನಿತ್ಯ ಘೃತಪೂರ್ಣವಾದ ಅನ್ನವನ್ನು ಯಥೇಷ್ಟವಾಗಿ ಕೊಡುವಳಾದ ರಮೆಯಿಂದ ಪೂಜಾ ಮಾಡಿಸಿಕೊಳ್ಳುವ ಪಾದಪದ್ಮಗಳುಳ್ಳವನೂ, ದೇವತೆಗಳಿಗೆಲ್ಲ ಶ್ರೇಷ್ಠನಾದವನೂ ಮುಕ್ತಿಪ್ರದಾತನೂ ಎಂದು ಅನಂತ ವೇದ ಋಚಗಳಿಂದಲೇ ಶ್ರೀಹರಿಯನ್ನು

ಸ್ತೋತ್ರಗೈಯ್ಯುತ್ತ ಹರಿಕಥಾಮೃತಸಾರ-ಹರಿ ಲೀಲಾಸೃಷ್ಟಿ ಸ್ಥಿತ್ಯಾದಿ ವ್ಯಾಪಾರಗಳನ್ನು ಹತ್ತನೇ ಸಂಧಿಯವರೆಗೆ ಮುಗಿಸಿ ಕೊನೆಗೆ ಶ್ರೀಹರಿಯ ಮಂಗಳರೂಪಗಳನ್ನು ಕೊಂಡಾಡುತ್ತಾರೆ.

ಹೇ ಸುರರಾಜ ಭೋಜನಾದ ಹರಿಯೇ ಜೀವರುದ್ಧಾರಗೋಸುಗ ಇಂತು ಜಗತ್ತನ್ನು ಸೃಜಿಸಿ ಪಾಲಿಸಿ ನಿಜಗತಿ ಕೊಡುವ ನಿನ್ನ ಲೀಲೆಗಳು ನಿತ್ಯ ಜಯ ಪ್ರದವಾದುವು. ನಿನ್ನ ರೂಪಗಳಾನಂತ, ಲೀಲೆಗಳಾನಂತವಾದರೂ ಜೀವರ ಚಿಛ್ಛರೀರ ಸ್ವರೂಪೇಂದ್ರಿಯಗಳಲ್ಲಿ ನಿಂತು ಪ್ರೇರಿಸಿ ಅನೇಕ ಲೀಲಾಗಳನ್ನು ದಶಾವತಾರದಲ್ಲಿ ತೋರಿ ಭಕ್ತರಿಗೆ ಆನಂದವಿತ್ತವನೆ=ಜಲಚರನಾದ ಮತ್ಸ್ಯ ರೂಪಿಯೆ, ಅದ್ರಿಧರನಾದ ಕೂರ್ಮರೂಪಿಯೇ, ಧರಾಧರನಾದ ವರಾಹ ರೂಪಿಯೇ, ನರಮೃಗಾಕಾರನಾದ ನರಸಿಂಹನೇ, ವಟುರೂಪಿಯಾದ ವಾಮನನೇ, ಬ್ರಹ್ಮಾಂಡ ವ್ಯಾಪಿಯಾದ ತ್ರಿವಿಕ್ರಮ ರೂಪಿಯೇ,ಭೃಗು ಕುಲದಲ್ಲಿ ಅವತರಿಸಿದ ಪರಶುರಾಮನೇ, ನಿನಗೆ ಸದಾ ಜಯಜಯವಿರಲಿ. ಜನಕ ಪುತ್ರಿಯಾದ ಸೀತಾವಲ್ಲಭನೆ, ನಿನಗೆ ಜಯವಿರಲಿ, ಶ್ರೀ ರುಕ್ಮಿಣಿದೇವಿಯರ ಮನೋರಥವನ್ನು ಸಿದ್ಧ ಮಾಡಲು, ನಿತ್ಯಾವಿಯೋಗಿನಿಯಾದ ಶ್ರೀಲಕ್ಷ್ಮಿರೂಪಳಿಗೊಲಿದು, ಪಾಣಿಗ್ರಹಣ ಮಾಡಿದ ಕೃಷ್ಣನೇ ತಮೋಯೋಗ್ಯರಾದ ಜಿನಾದಿ ದೈತ್ಯರನ್ನು ಮೋಹಗೊಳಿಸಿದ ಬುದ್ಧನೇ ನೀನು ಋತನಾದರೂ, ದೈತ್ಯರಿಗೆ ಅನೃತನೆನಿಸಿದೆ ಏನು ಲೀಲೆಯೋ? ಕಲಿ ವಿದಾರಣನಾದ ಕಲ್ಕಿರೂಪಿ ಹರಿಯೇ ನಿನಗೆ ಸಕಲ ಕಾಲದಲ್ಲಿ ಜಯ. ಹೇ ಜಯಾರಮಣ-ಸಮಸ್ತ ಕಾರ್ಯವನ್ನೂ ರಮೆ ಪ್ರಾಣರ ದ್ವಾರಾ ಮಾಳ್ಪುದಕಾಗಿ ಜಯಾದೇವಿ ದೆಶೆಯಿಂದ ಆದಿ ಸೃಷ್ಟಿಯಲ್ಲಿ ಪ್ರಾಣನನ್ನು ಪಡೆದ ಜಯಾಪತಿಯಾದ ಸಂಕರ್ಷಣನೇ,ನಿನಗೂ ನಿನ್ನ ರೂಪಗಳಿಗೂ ನಿನ್ನಗುಣಗಳಿಗೆ ನಿನ್ನ ಲೀಲೆಗೆ ಸರ್ವದಾ ಜಯಜಯವೇ ಎಂದು ಶ್ರೀಹರಿಯನ್ನು ಪ್ರಾರ್ಥಿಸಿದ್ದಾರೆ. ಮತ್ತು ಹರಿಯು ನಿತ್ಯನು, ಚಿದಾನಂದನು,ಜೀವಾಂತರ್ಯಾಮಿಯಾದ ನೀನು ಸಚ್ಚಿದಾನಂದನು. ಇಂಥ ಋಜು ಪುಂಗವರಾದ ಬ್ರಹ್ಮ ಜೀವರ ಕರಕಮಲದಿಂದ ಪೂಜಾಗೊಳ್ಳುವ ಹರಿಯೇ ಎಂದು ಒಳ್ಳೇ ಅರ್ಥ ಗರ್ಭಿತ ಪದಪ್ರಯೋಗ, ಬಹಿರಂಗ ಪೂಜಾ, ಅಂತರಂಗ ಮಾನಸಧ್ಯಾನ ಪೂಜಾದಿಗಳು ಸಕಲ ಜೀವರಲ್ಲಿ ನಿಂತು, ಮತ್ತು ಜಡವಾದ ಸ್ವಯಂವ್ಯಕ್ತ ಸಾಲಿಗ್ರಾಮಾದಿಗಳಲ್ಲಿ ಶ್ರೀ ಬ್ರಹ್ಮದೇವರೇ ನಿತ್ಯ ಪೂಜಾ ಮಾಡುವರೆಂಬ ನಿಶ್ಚಯ

ಜ್ಞಾನವಿರಬೇಕು. ದೇವದೇವೇಶ ಪ್ರೋಚ್ಚ ಶ್ರೇಷ್ಠನೇ ಸಕಲ ಜೀವರಲ್ಲಿ ಮಧ್ವಾಂತಃಕರಣ ರೂಢನಾಗಿ ಮಧ್ವಾಂತರ್ಯಾಮಿಯಾದ ಚ್ಯುತನಾಗದೇ ಇರುವ ಬಿಂಬರೂಪಿ ಹರಿಯೇ ಜಗತ್ತಿನಲ್ಲಿ ವ್ಯಾಪಿಸಿ, ಜಗತ್ತಿಗೆ ಜೀವರಿಗೆ ಸ್ವಾಮಿಯಾದ ಹರಿಯೇ, ಅಜ್ಞಾನಿಗಳಿಗೆ ಜ್ಞಾನವನ್ನಿತ್ತು ಮುಕ್ತಿದಾಯಕ, ಗೋವಿಂದ ವಾಸುದೇವಾಖ್ಯ ವಿಠ್ಠಲನೇ ನೀನೆಂಥ ಕರುಣಾಳು. ಸ್ವಾಮಿ ನಿನ್ನ ನೆಚ್ಚಿದ ಭಕ್ತರನ್ನು ಬಿಡದೇ ಕಾಡ್ಗಿಚ್ಚು ಹತ್ತಿದ ಅರಣ್ಯದಲ್ಲಿ ಗೋವುಗಳನ್ನು ಗೋಪಾಲಕರನ್ನು ಕಾಯ್ದ ಕೃಷ್ಣನೇ, ಅಚ್ಯುತನೆನಿಸಿ ಸಚ್ಚಿದಾನಂದ ರೂಪ ದಿಂದಲೇ ಭವಗ್ರಸ್ತರಾದ ಜೀವರನ್ನು ಪೊರೆದು ಮುಕ್ತಿಯನ್ನೀವೆ ಎಂದು ಈ ಹತ್ತನೆಯ ಸಂಧಿಯವರೆಗೆ, ಬಿಂಬ ರೂಪಿಯಾದ ಶ್ರೀಹರಿಯ ಲೀಲೆ ಕೊಂಡಾ ಡಿರುವರು. ಈ ಹತ್ತನೇ ಸಂಧಿಗೆ ಹರಿಕಥಾಮೃತಸಾರ ಹೇಗೆ ಮುಗಿಯಿತು ? ಇನ್ನು ಮುಂದೆ ೨೨ ಸಂಧಿಗಳಿವೆ ಎಂದು ಕೇಳಬಹುದು.

ಶ್ರೀ ಅಪರೋಕ್ಷಿ ಜ್ಞಾನಿಗಳಾದ ದಾಸಾರ್ಯರು ಈ ಹತ್ತನೇ ಸಂಧಿ ಪದ್ಯ ೨೪ರಲ್ಲಿ ಮಂಗಳ ಸೂಚಕವಾದ ಜಯಜಯಕಾರವನ್ನು ೩ ಸಲ ಧರಾಧರನೆ ಜಯ, ಭೃಗುರಾಮ ಭೂಮ ಜಯ, ಕಲಿ ವಿದಾರಣ ಜಯಜಯಾ ರಮಣನೆಂದು ಹರಿಗೆ ಮಾಡುವಂತೆ ಪೂರ್ಣ ವರ್ಣಿಸಿ ಮಂಗಳ ಮಾಡಿರುವ ರಲ್ಲದೆ ಕೊನೆಗೆ ೩೨ನೇ ಸಂಧಿ ಕಡೆ ಪದ್ಯದಲ್ಲಿಯೂ, "ಜಯಜಯತು ತ್ರಿಜಗ ದ್ವಿಲಕ್ಷಣ" ಎಂತ ಐದು ಸಲ ಜಯಪ್ರದವಾದ ಮಂಗಳ ಮಾಡಿರುವರು. ಇದಕ್ಕೆ ಅಪರೋಕ್ಷ ಜ್ಞಾನಿಗಳಾದ ಮನೋಹರ ವಿಠ್ಠಲರು ಫಲಶ್ರುತಿ ಸಂಧಿಯಲ್ಲಿ ಇದೇ ಸೂಚಿಸಿದ್ದಾರೆ.

ದಶ ಸುಸಂಧಿಯೊಳಿಪ್ಪ ಶ್ಲೋಕಗ |
ಳೆಸೆವ ನವರತ್ನಾದಿ ಮಣಿಸಳ |
ಪ್ರಸರ ಮಾಣಿಕ ಜ್ಞಾನ ಭಕ್ತಿಗಳೆಂಬ ಕರದಿಂದ ||
ಎಸಗಿ ನವರತ್ನಗಳ ಮೂಟೆಗ |
ಳಸಮ ಶ್ರೀ ಜಗನ್ನಾಥ ವಿಠಲನ |
ಬಿಸಜ ಪಾದಕ್ಕಿಡಲು ಸೇವೆಯನೊಡನೆ ಕೈಕೊಂಬ || ೧೪ ||

ಎಂದು ಹತ್ತು ಸಂಧಿಯ ಲ್ಲಿರುವ ನವರತ್ನ ಮಣಿಗಳೆಂದು ಹಿಂದೆ ೧೩ದಲ್ಲಿ ಎಲ್ಲ ಹರಿಕಥಾಮೃತ ವರ್ಣಿಸಿ, ಅದರಲ್ಲಿ ಹತ್ತು ಸಂಧಿಯಲ್ಲಿಪ್ಪ ಹರಿಕಥಾಮೃತ

ವನ್ನು ಕೊಂಡಾಡಿ ಸನ್ಮಾರ್ಗಗಾಮಿಗಳಾಗಿರುವರು. ಇಂತು ಶ್ರೀ ಬಿಂಬ ರೂಪನಾದ ಹರಿಯು ಮಹಾ ಕರುಣಾಳು, ಸರ್ವತ್ರ ಕಾಲರೂಪದಿಂದ ಬಹಿ ರ್ವ್ಯಾಪ್ತನು. ಜೀವರನ್ನು ಸೃಷ್ಟಿಗೆ ತಂದು ಲಿಂಗ ಉಪಚಯದ್ವಾರಾ ಅನಾದಿ ಕರ್ಮ ನಿಮಿತ್ತಮಾಡಿ, ಜೀವರಿಗೆ ಕರ್ಮಾನುಭೋಗಗೈಸುವ ಭೋಜನಸಂಧಿ. ನಂತರ ತನ್ನ ವಿಭೂತಿ ರೂಪಗಳನ್ನಿಟ್ಟು ನಾಲ್ಕು ವರ್ಣದವರನ್ನೂ ಸೃಜಿಸಿ ಅವರ ಶುಭಾಶುಭ ಕರ್ಮ ಚತುರ್ವರ್ಣಧರ್ಮ ಪ್ರವರ್ತಕನಾಗಿ ಮುಂದೆ ಜೀವರಿಗೆ, ಸ್ಥೂಲದೇಹವನ್ನು ಕೊಟ್ಟು, ೨೪ ತತ್ವ ತತ್ವಾಧಿಪತಿಗಳಿಂದ ಕಾರ್ಯ ವಿವರ, ಜೀವಗಳ ಬಂಧಕವಾದ ತನ್ಮಾತ್ರಾ ವಿವರ, ತತ್ ಮೋಚಕ ಭಗವದ್ರೂಪಗಳು ದೇಹದಲ್ಲಿರುವಿಕೆ, ಅವುಗಳನ್ನರಿತು, ಧ್ಯಾನಗೈಯ್ಯುವ ಬಗೆ ಅಜಾದಿ ಪಂಚಾಶತ್ ಮಾತೃಕಾ ಪ್ರತಿಪಾದ್ಯ ಹರಿಯು ದೇಹದಲ್ಲಿಪ್ಪ ವಿಚಾರ, ಲಿಂಗ-ಅನಿರುದ್ಧ ಸ್ಥೂಲ ವಿವರ ಪೇಳಿ ಮುಂದೆ ಜೀವನ ಸ್ವರೂಪ ವಿಚಾರ, ವಾಯುದೇವರಿಗೆ ಜೀವನ ಸ್ವರೂಪ ದೇಹದಲ್ಲಿ ವ್ಯಾಪ್ತತೆ ಮುಂತಾದ ಅತಿರಹಸ್ಯ ಭಗವದು ಪಾಸನೆ ೯ ಸಂಧಿಗಳಲ್ಲಿ ಪೇಳಿ ಲಿಂಗಬಂಧನೆ ಬಿಡುಗಡೆಯಾಗಿ ಮುಕ್ತಿ ಪೊಂದಲು ಸರ್ವ ಜೀವ ನಿಯಾಮಕ, ಸರ್ವತ್ರ ವ್ಯಾಪಕ, ಸರ್ವ ಪ್ರೇರಕ, ಸರ್ವಾಧಾರಕ ರೂಪಗಳಿಗೆ ಅತ್ಯಂತ ಅಭೇದವೆಂದು ಚಿಂತಿಸಿ, ಪೂಜಾ ಮಾಡುತ್ತ ಸರ್ವ ಪ್ರತೀಕಗಳಲ್ಲಿಪ್ಪ ಭಗವಂತನ ತಿಳಿದು ಬಿಂಬೈಕ್ಯ ಚಿಂತಿಸಿ, ಬಿಂಬನ ಆಧೀನನೆಂದು ಸರ್ವ ಕರ್ಮಫಲ ತ್ಯಜಿಸಿ, ಮಧ್ವಾಂತಃಕರುಣೆಗೆ ಸಮರ್ಪಣೆ ಮಾಡಿದರೆ, ಮುಕ್ತಿ ಕರತಲಾಮಲಕವೆಂದು ಪೇಳಿ, ಈ ಹತ್ತನೇ ಸಂಧಿ ಮಂಗಳ ಮಾಡಿ ಹರಿಗರ್ಪಿಸಿದ ದಾಸಾರ್ಯರ ಅಡಿಗಳಲ್ಲಿ ಸದಾ ಶಿರಬಾಗಿದೆ.

ಇನ್ನು ಮುಂದೆ ಸಂಕ್ಷಿಪ್ತವಾಗಿ ಜೀವನು ಸಾಧನ ಹೇಗೆ ಮಾಡುವದೆಂದು ನಿರೂಪಿಸಲು, ಜೀವ ಪ್ರಕೃತಿ ವೇದ ದೇಶ ಕಾಲ ಕರ್ಮ ಇವು ಆರು ವಸ್ತು ಅನಾದಿಯಾದವು. ಚೇತನ ಜೀವ. ಸಾಧಕನಾದ ಜೀವನನ್ನು ಶ್ರೀಹರಿಯು ತನ್ನ ಇಚ್ಛೆಯಿಂದ ಅನಾದಿಮೂಲ ಪ್ರಕೃತಿಯಿಂದ ದೇಶ ಕಾಲ ಕರ್ಮಾದಿ ಗಳನ್ನನುಸರಿಸಿ ಈ ನಾಲ್ಕು ಅನಾದಿ ಜಡಗಳಿಂದ ಬಂಧನ ಮಾಡಿರುವನು. ಈ ಬಂಧ ಮೋಚಕನು ತನ್ನ ಜ್ಞಾನವನ್ನು ಜೀವನಿಗೆ ಈಯಲೋಸುಗ ತನ್ನ ಸ್ವರೂಪಭೂತ ವೇದ ಉಪಚಯದ್ವಾರಾ ತನ್ನಸ್ವರೂಪ ತಿಳುವಳಿಕೆ ಇತ್ತು ಹೀಗೆ ಮೋಚನ ಮಾಡುವನು.

ಪ್ರಕೃತಿಗಳೆಷ್ಟು, ಅದರ ವಿವರ, ದೇಶ ಕಾಲ ವಿವರ ಹೇಗೆ–ದೇಶಕಾಲ ರೂಪವೇನು ಮತ್ತು ಜೀವ ಜೀವರು ಭೇದವಾದಾಗ್ಯೂ ದಾರಾ ಪುತ್ರಾದಿಗಳೆಂಬ ಮಮತೆ ಬದ್ಧವಾದದು. ಬಿಡುಗಡೆ ಹೇಗೆ? ಕರ್ಮ ಸ್ವರೂಪವೇನು ಬಂಧದಿಂದ ಜೀವನಿಗೆ ಕರ್ತೃತ್ವ ಅಹಂಭಾವ. ಅದರ ಬಿಡುಗಡೆಯಾಗಲು ೧೧, ೧೨, ೧೩, ೧೪, ೧೫, ೧೬, ೧೭ ಈ ಏಳು ಸಂಧಿಯಲ್ಲಿ ವಿಶಿಷ್ಟವಾಗಿ ಧ್ಯಾನ ವಿಚಾರ ಹೇಗೆ ಮಾಡಬೇಕೆಂಬುದನ್ನು ಹೇಳಿ ಮುಂದೆ ೩ನೇ ಪಾವಟಿಗೆಯಲ್ಲಿ ಬಿಂಬೋಪಾಸನ ಕ್ರಮ ಹೇಗೆಂಬುದನ್ನು ೩೨ ಸಂಧಿಯವರೆಗೆ ಪೇಳಿದ್ದಾರೆ. ಶ್ರೀ ವಿಜಯದಾಸರ ತಾರತಮ್ಯ ಸೃಷ್ಟಿ ಸಾಧನ ಪ್ರಮೇಯ ಉಪಾಸನಾ ಭಾಗಗಳಿಗನುಸರಿಸಿ ಒಂದೆಡೆ ಸೇರಿಸಿ ಬಿಂಬೋಪಾಸನಾ ವಿಧಿ ಕ್ರಮಬದ್ಧವಾಗಿ ಪೇಳ್ದು ಮುಕ್ತಿಮಾರ್ಗ ತೋರಿಸಿದ್ದಾರೆಂದು ಸೂಚಿಸಲಾಗಿದೆ. ದಾಸಾರ್ಯರ ಅಂತರ್ಗತನಾದ ಮಧ್ವೇಶನು ಈ ಸಂಧಿಸಾರ ವಿವರವನ್ನು ಸ್ವೀಕರಿಸಿ ಉದ್ಧರಿಸಲೆಂದು ಶ್ರೀಕೃಷ್ಣನ ಅಡಿಗಳಿಗೆ ಅರ್ಪಿಸುವೆನು.

॥ ಶ್ರೀ ರಾಘವೇಂದ್ರಗುರು - ಶ್ರೀ ವರದೇಂದ್ರ ಗುರು ॥

# ೧೧ನೇ ಸರ್ವಪ್ರತೀಕ ಸಂಧಿ

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥

**ಅವತರಣಿಕಾ:** ಹಿಂದಿನ ಸಂಧಿಗಳಲ್ಲಿ ವಿವರಿಸಿದಂತೆ, ತನ್ನ ದೇಹಗತ ಸ್ವಬಿಂಬನೇ ಅನಂತ ರೂಪದಿಂದ ಸ್ವದೇಹದಲ್ಲೂ ಮತ್ತು ಇತರ ಎಲ್ಲ ಜೀವ ಜಡಚೇತನರಲ್ಲೂ ಇಪ್ಪನು. ಎನ್ನ ಬಿಂಬನೆ ಸರ್ವರ ಬಿಂಬನು ಎಂದು ಅರಿತು, ಸರ್ವತ್ರ, ಸರ್ವಗತ ಶ್ರೀಹರಿಯ ಪೂಜಾವನ್ನು ಮುಖ್ಯ ಧ್ಯಾನೋಪಾಸಕನು ಅತ್ಯಾವಶ್ಯ ಆಚರಿಸತಕ್ಕದ್ದು. ಸರ್ವಪ್ರತೀಕಗಳಲ್ಲಿ ಭಗವಂತನ ಇರವನ್ನು ಚನ್ನಾಗಿ ತಿಳಿದು ಅರ್ಚನೆ ಮಾಳ್ಪ ವಿಜ್ಞಾನಿಗೆ, ಸಕಲ ತತ್ವೇಶರು ಅನುಕೂಲರಾಗಿರುವರು. ಯಾವ ಕಾಲಕ್ಕೂ ಎಲ್ಲಿಯೂ ಅಪಜಯಾದಿಗಳಿಲ್ಲವೆಂಬುದನ್ನು ತಿಳುಹಲು, ಸರ್ವಪ್ರತೀಕ ಸಂಧಿಯನ್ನು ಪ್ರಾರಂಭಿಸುತ್ತಾರೆ.

ಮೂಲ :

**ಆವ ಪರಬೊಮ್ಮನತಿ ವಿಮಲಾಂ ।**
**ಗಾವ ಬದ್ಧರು ಎಂದೆನಿಪ ರಾ ।**
**ಜೀವ ಭವ ಮೊದಲಾದಮರರನುದಿನದಿ ಹರಿಪದವ ॥**
**ಸೇವಿಪರಿಗನುಕೂಲರಲ್ಲದೆ ।**
**ತಾವು ಇವರನು ಕೆಡಿಸಬಲ್ಲರೆ ।**
**ಶ್ರೀ ವಿಲಾಸಾಸ್ಪದನ ದಾಸರಿಗುಂಟೆ ಅಪಜಯವು ॥ ೧ ॥**

**ಪದ್ಯಾರ್ಥ :** ಆವ=ಯಾವ, ಶ್ವೇತ ದ್ವೀಪ ಅನಂತಾಸನ ವೈಕುಂಠಾದಿ ಧಾಮತ್ರಯದಲ್ಲಿಪ್ಪ ಸರ್ವತ್ರ ವ್ಯಾಪ್ತನಾದ, ಪರಬೊಮ್ಮನ=ಉತ್ತಮನಾದ ಬ್ರಹ್ಮ=ರಮಾ ಬ್ರಹ್ಮಾದಿ ಸಕಲ ಜಗತ್ತನ್ನು ಸೃಷ್ಟಿಮಾಡುವ ಎಲ್ಲರಿಗೂ ಉತ್ತಮನಾದ ಬೊಮ್ಮ=ಬ್ರಹ್ಮ ಗುಣ ಪೂರ್ಣನಾದುದರಿಂದ ಪರಬೊಮ್ಮನಾದ ವಾಸುದೇವ ಮೂರ್ತಿಯ, ವಿಮಲಾಂಗಾವ ಬದ್ಧರು=ನಿರ್ದಿಷ್ಟವಾದ ಜ್ಞಾನಾನಂದಾತ್ಮಕ ಸಚ್ಚಿದಾನಂದ ಶರೀರಾಂಗಗಳಲ್ಲಿ,-ಬದ್ಧ=ವಾಸವಾಗಿ, ಸಾಯುಜ್ಯ ಮುಕ್ತಿಯನ್ನು ಪಡೆಯುವರು, ಸಕಲ ತತ್ವಾಭಿಮಾನಿ ದೇವತೆಗಳಾದ=ರಾಜೀವಭವ ಮೊದಲಾದ ಅಮರರು, ಕಮಲ ಸಂಭವನಾದ ಬ್ರಹ್ಮದೇವರೆ ಮೊದಲಾದ ದೇವತೆಗಳು, ಅನುದಿನದಿ ಹರಿಪದ ಸೇವಿಪರಿಗೆ=ನಿತ್ಯದಲ್ಲಿ

ಸರ್ವತ್ರಗತನಾದ ಬಿಂಬನೆಂದು ತಿಳಿದು ಬಿಂಬೋಪಾಸನೆ ದ್ವಾರಾ, ಹರಿಪಾದ ನೆನೆವವರಿಗೆ ಹರಿ ಎಂದರೆ ಬಿಂಬನ ಪಾದ ಧ್ಯಾನರತರಿಗೆ, ಬಿಂಬನೆ ಸರ್ವವ್ಯಾಪಾರ ಮಾಡಿಸುವ, ನಾನು ಬಿಂಬನ ಅಧೀನನು ಎಂದು ಸೇವಿಸುವ=ನಿತ್ಯದಲ್ಲಿ ಧ್ಯಾನರೂಪ ಭಜನೆ ಚಿಂತನೆಮಾಡಿ ಪೂಜಿಸುವ ಭಕ್ತರಿಗೆ, ಎಲ್ಲರೂ ಎಲ್ಲ ತಾತ್ವಕ ದೇವತೆಗಳೂ ಅನುಕೂಲ=ಸಹಾಯಕರಾಗಿ, ಬದ್ಧಕಂಕಣರಾಗಿರುವರು. ಅಲ್ಲದೆ ಸಹಾಯಕರೆಂಬುದೇ ನಿಜ. ಅಲ್ಲದೆ ತಾವು ಇವರನ್ನು ಕೆಡಿಸಬಲ್ಲರೆ=ಬ್ರಹ್ಮಾದಿ ತಾತ್ವಿಕ ದೇವತೆಗಳು ತಾವು ಇವರನು=ಈ ಪ್ರಕಾರ ಹರಿಪದಾಬ್ಜಧ್ಯಾನರತರಾದವನ್ನು ಕೆಡಿಸಬಲ್ಲರೆ ? ಎಂದಿಗೂ ಕೆಡಿಸುವದಿಲ್ಲ-ಹಾನಿ ಮಾಡುವದಿಲ್ಲ. ಆದರೆ ಪೂರ್ವದಲ್ಲಿ ಸಾಧಕನಿಗೆ ದೃಢ ನಿಶ್ಚಯಗೊಳಿಸಲು ಅನೇಕ ವಿಧವಾದ ವಿಘ್ನಗಳಿಂದ ಭಯ ತೋರಿಸಿ ಧ್ಯಾನದಲ್ಲಿ ನಿಶ್ಚಯಾತ್ಮಕ ಮನ ಧಾರಣಯೋಗಗೈಸಿ-ಹರಿಯ ಪದ ಧ್ಯಾನರತನನ್ನಾಗಿ ಮಾಡುವರು. ಅಲ್ಲದೆ ನಿಜ ಭಕ್ತರಿಗೆ ಅನುಕೂಲರೇ ಹೊರ್ತಾಗಿ ಪ್ರತಿಕೂಲರಾಗುವದಿಲ್ಲ. ಶ್ರೀ ವಿಲಾಸಾಸ್ಪದನ ದಾಸರಿಗುಂಟೆ ಅಪಜಯವು=ಶ್ರೀ ಜ್ಞಾನಾನಂದ ಸಂಪತ್ತು ಕೊಡುವ ರಮಾವಿಹಾರನಾದ ಶ್ರೀ ಹರಿಯ ದಾಸರಿಗೆ ಎಂದಿಗೂ, ಯಾವ ಕಾಲಕ್ಕೂ ಅಪಜಯ, ಸೋಲು, ಅಮಂಗಳ, ಅನಿಷ್ಟವು ಇಲ್ಲ. ಸಂತತವೂ ಮಂಗಳವೇ-ಮಂಗಳ.

**ದ್ರೌಪದೀಶಪತಿ ವಿಠಲರು :** ಆವ ಪರಬೊಮ್ಮನ ತತ್ವನ್ಯಾಸ ಪ್ರಕಾರ ಪರಮಾತ್ಮನ ಅಂಗಬದ್ಧರು.

**ಭಾವಸೂಚನ:** ಅನಾದ್ಯನಂತ ಕಾಲೇಪಿ ಮುಕ್ತ್ರೋ ಸಂಸಾರ ಏವಚ ॥ ಮಯಿರಪ್ಯಶ್ಚೋದಯತ್ಯೇವ ವಿಷ್ಣುರ್ಮಾಂ ಸರ್ವ ದೈವತು । ಇತಿ ಸಾಂಪ್ರೇತಿಕಂ ಜ್ಞಾನಮಿತಿ ತಾತ್ಪರ್ಯಾನುಸಾರೇಣ ವಿನಾ ಯದರ್ಪಣಂ ಸಮ್ಯಕ್ ಫಲಂ ನಾಪ್ನೋತ್ಯ ಸಂಶಯಃ ॥ ವಿಷ್ಣೋ ರರ್ಥೇ ಕರಿಷ್ಯಾಮಿ ಚಾಹರಾಮಿದದಾಮಿ ಚ ॥ ನಾತ್ಮಾರ್ಥಂ ಮಿತಿವೈಕ್ವಾಪಿ ವದೇತ್ಕರ್ಮ ಕರೋನರಃ । ಇತಿ ವಾಯುಪುರಾಣೋಕ್ತ ಭಂಗ್ಯಾಪಿ ಸರ್ವ ಕರ್ಮಣಾಂ ಭವಾವ ದರ್ಪಣಸ್ಯೈವ ಫಲಾನಂತ್ಯ ಪ್ರಯೋಜಕತ್ತಥಾಲ್ಪ ಬೋಧನಾರ್ಥಂ ಸರ್ವ ಸಮರ್ಪಣ ಸಂಧಿ ಮುಪಕ್ರಿಯತೇ ದಾಸವರ್ಯಃ ॥ ತದರ್ಥ ಸೂಚಯತಿ ॥ **ಹರೀತಿ** ॥ ಉಕ್ತಂ ಚ ॥ **(ಭಾಮಿನಿ)** ಜೀವಕೃತ ಕರ್ಮಾಳಿಗಳು

ರಾ । ಜೀವ ನೇತ್ರಗೆ ಕಾಲಕಾಲಕು । ಸಾವಧಾನದಲರ್ಪಿಸುವ ವಿಧವರಿಪು ಗೋಸುಗದಿ ॥ ಭಾವದಲಿ ವಿಸ್ತರಿಸಿ ಸಂಸೃತಿ । ನೋವು ಕಳೆದು ಸುಮುಕ್ತಿ ಪಥದಾ । ಪಾವಟಿಯನೇರ್ವಂತೆ ತೋರ್ದ ಕರ್ಮ ಸುದಾನ ಸಂಧಿಯಲೀ ॥ ಇತಿ ॥ ೧೦ ॥ ಆವೇತಿ ॥ ಅಂಗಾವಬದ್ಧೇತಿ ಯಥೋಕ್ತ ಮಂಗಾವಬದ್ಧಾಸ್ತು ನಶಾಖಾಸ್ವಿತಿ ॥ ೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಓಂ ಸರ್ವಪ್ರತೀಕ ಸಂಧಿಃ ಪ್ರಾರಭ್ಯತೇ ॥ ಓಂ ॥ "ಯತ ಆತ್ಮಾ ಗುಹಾಶ್ರಯಃ ॥ ತಸ್ಮಾನ್ನ ಕಸ್ಯಚಿತ್ ದ್ರೋಹಂ ಆಚರೇತ್ ॥" "ತಾಡಿತೀಃ ಸನ್ನಿರುದ್ಧಾವಾ ವೃತ್ಯಾವಾ ಪರಿಹಾಪಿತಃ ॥ ವಿಷ್ಠಿತಃ ಮೂತ್ರಿತಾ ವಾಪಿ ಪರೈಃ ದ್ವಂದ್ವೇಷು ಯೋಜಿತಾಃ ॥ ನ ವ್ಯಥಂತಿ ನಹೃಷ್ಯಂತಿ ॥ "ಭೂತೈಃ ಆಕ್ರಮ್ಯಮಾಣೋಪಿ ಧೀರಃ ದೈವ ವಶಾನುಗಃ ॥" ತದ್ವಿದ್ವಾನ್ನ ಚಲೇ ನ್ಮಾರ್ಗಾತ್" "ಲೋಕಾರ್ಥಂ ಶಾಸ್ತ್ರಹಾ ಯಾತಿ ನಿರಯಮ್" ಏತತ್ಸಂದೋಹಾನು ಸಂಧಾನಾರ್ಥಂ ಸರ್ವೇಪಿ ವಿಠ್ಠಲ ಪ್ರತೀಕತಾಂ ಆಪನ್ನಾಃ ॥ ಅತಃ ಶಿಲಾತ್ಮ ಪ್ರತೀಕೋಪಾಸ್ತೌ ಅಂತಸ್ಥಮೂರ್ತೇಃ ಫಲಲಾಭವತ್ ಸರ್ವೇ ಲೋಕಾಃ ಹರಿಪ್ರತೀಕಬುದ್ಧ್ಯಾ ಯಥೋಚಿತಂ ಸಂಭಾವ್ಯಾಶ್ಚೇತ್ ತೇನ ಈಶಪ್ರೀತಿಮಂತಃ ಭವೇಯುಃ" ಇತ್ಯಾಲೋಚ್ಯ ಅಶೇಷ ಪ್ರತೀಕ ಸಂಧಿಂ ವಿರಚಯಂತಿ "ಆವ" ಇತಿ ॥

"ಆವ"=ಯಾವ । ಬೊಮ್ಮ-ಬ್ರಹ್ಮ । ಮಂಗಲಸೂತ್ರಂ ಬಬಂಧ ಅನೇಕ ಪುರಾಣ ಶ್ರುತಿ ಸೂಕ್ತಾಭರಣಾ ಶ್ರೀರಮಣ ಕೀರ್ತಿಸಾರಸುಧಾ ರಾಮಾ ಇತಿ ವ್ಯಂಜಯನ್ ತತ್ಪದಂ ವ್ಯರಚಿ ॥ "ಅಂಗಾವಬದ್ಧಾಸ್ತು" ಇತಿ ಸೂತ್ರಂ॥ "ಹರ್ಯಂಗಾಶ್ರಿತೋಪಾಸ್ತಯೇ" ಇತಿ ಟೀಕಾ ॥ ರಾಜೀವ-ಪದ್ಮಂ ॥ ೧ ॥

## ಕನ್ನಡಾರ್ಥ

ಸರ್ವಪ್ರತೀಕ ಸಂಧಿಯು ಪ್ರಾರಂಭವಾಗುತ್ತದೆ. "ನಾರಾಯಣನು ಸರ್ವರ ಹೃದಯ ಗುಹಾವಾಸಿಯಾಗಿರುವದರಿಂದ ಯಾರಿಗೂ ದ್ರೋಹವನ್ನು ಬಗೆಯಬಾರದು." "ಪರರು ತನ್ನನ್ನು ಹೊಡೆದರೂ, ತಡೆಹಿಡಿದರೂ ತನ್ನ ಜೀವನೋಪಾಯವೆನಿಸಿರುವ ವೃತ್ತಿಗಳನ್ನು ಕಸಿದುಕೊಂಡು ತಪ್ಪಿಸಿದರೂ, ಮೈಮೇಲೆ ಮಲಮೂತ್ರಗಳನ್ನು ವಿಸರ್ಜಿಸಿದರೂ ಸಹ, ಎಷ್ಟೇ ಸುಖ-ದುಃಖ

ಗಳನ್ನೂ, ಲಾಭಾಲಾಭಗಳನ್ನೂ ಮಾನಾಪಮಾನಗಳನ್ನೂ ಒಡ್ಡಿದರೂ ಸಹ ವ್ಯಥೆ ಪಡುವದಿಲ್ಲ ಮತ್ತು ಹರ್ಷೋನ್ಮಾದಗಳನ್ನೂ ಹೊಂದುವದಿಲ್ಲ." "ಪ್ರಾಣಿಗಳು ತನ್ನನ್ನು ಆಕ್ರಮಿಸಿ ತೊಂದರೆಪಡಿಸುತ್ತಿದ್ದರೂ, ಜ್ಞಾನಿಯೂ ಧೈರ್ಯಶಾಲಿಯೂ ಆದ ವಿವೇಕಿಯು "ದೈವವಶವೆಲ್ಲ"ವೆಂದು ಅರಿತು, ತಾನು ಅನುಸರಿಸುತ್ತಿರುವ ಮಾರ್ಗವನ್ನು ಕದಲಿ ಬಿಡುವದಿಲ್ಲ." "ಇದು ಶಾಸ್ತ್ರದ ಸಂದೇಶ; ಇದನ್ನು ಮೀರುವವನು ಅನರ್ಥವನ್ನು ಹೊಂದಬೇಕಾಗುತ್ತದೆ" ಇತ್ಯಾದಿ ಪ್ರಮೇಯಗಳನ್ನು ಅನುಸಂಧಾನ ಮಾಡುವದು ಅತ್ಯಗತ್ಯವಿರುತ್ತದೆ. ಅದಕ್ಕಾಗಿ–"ಎಲ್ಲರಲ್ಲಿಯೂ ಪರಮಾತ್ಮನ ಸನ್ನಿಧಾನವಿರುತ್ತದೆ. ಎಲ್ಲರಿಗೂ ಪರಮಾತ್ಮನೇ ಬಿಂಬನು" ಎಂದು ತಿಳಿಯಬೇಕು. ಶಿಲಾಮಯ ಮುಂತಾದ ಪ್ರತಿಮೆಗಳಲ್ಲಿ ಭಗವಂತನ ಉಪಾಸನೆಯನ್ನು ಮಾಡಲು ಅಲ್ಲಿರುವ ಭಗವಂತನಿಂದ ಫಲವು ಹೇಗೆ ದೊರೆಯುತ್ತದೆಯೋ ಹಾಗೆಯೇ ಎಲ್ಲರಲ್ಲಿಯೂ ಭಗವಂತನು ಬಿಂಬನಾಗಿರುತ್ತಾನೆ ಎಂದು ತರತಮ ಭಾವಾನುಸಾರವಾಗಿ ಸರ್ವವಸ್ತುಗಳನ್ನೂ ಸಂಭಾವಿಸಿದರೆ ಅದರಿಂದ ಈಶ ಪ್ರೀತಿಯು ದೊರೆಯುತ್ತದೆ." ಹೀಗೆ ವಿಚಾರಿಸಿ ಸರ್ವಪ್ರತೀಕ ಸಂಧಿಯನ್ನು ದಾಸವರ್ಯರು ವಿರಚಿಸಿರುತ್ತಾರೆ "ಆವ" ಎಂಬ ಪದ್ಯದಿಂದಾರಂಭಿಸುತ್ತಾ.

**ಅವತರಣಿಕಾ:** ಭಗವಧ್ಯಾನರತನಾಗಿ ಭಗವದುಪಾಸನೆ ಮಾಳ್ಪನಿಗೆ ತತ್ವಾಭಿಮಾನಿ ದೇವತೆಗಳು ಹೇಗೆ ಅನುಕೂಲರೋ, ಸಕಲ ನವಗ್ರಹ ದೇವತಾದಿಗಳು ಭಗವಂತನಂಘ್ರಿಗಳನ್ನು ಮನಸ್ಸಿನಲ್ಲಿಟ್ಟು ಧ್ಯಾನಗೈವರಿಗೆ ಸಹ ಆಧಿ ವ್ಯಾಧಿಗಳನ್ನು ಕೊಡದೆ,ಭಗವಂತನ ಅಜ್ಞೆಯಿಂದ ಭಕ್ತನನ್ನು ಕಾದುಕೊಂಡಿಹರೆಂದು ಪೇಳುತ್ತಾರೆ.

**ಮೂಲ :**

**ಶ್ರೀದನಂಘ್ರಿ ಸರೋಜಯುಗಳೇ |**
**ಕಾದಶಸ್ಥಾನಾತ್ಮದೊಳಗಿ |**
**ಟ್ಟಾದರದಿ ಸಂತುತಿಸಿ ಹಿಗ್ಗುವಗೀ ನವಗ್ರಹವು ||**
**ಆದಿತೇಯರು ಸಂತತಾಧಿ |**
**ವ್ಯಾಧಿಗಳ ಪರಿಹರಿಸುತವರನ |**
**ಕಾದುಕೊಂಡಿಹರೆಲ್ಲರೊಂದಾಗೀಶನಾಜ್ಞೆಯಲಿ || ೧ ||**

**ಪದ್ಯಾರ್ಥ :** ಶ್ರೀದನಂಘ್ರಿ ಸರೋಜಯುಗಳ=ಶ್ರೀದ–ಶ್ರೀ ಎಂದರೆ ವಿಷ. ಇದರಿಂದ ಯುಕ್ತರಾದ ದ್ವೇಷಿ ದೈತ್ಯರನ್ನು ದಃ=ಖಂಡಿಸುವನು, ದೈತ್ಯರ ನಾಶವನ್ನು ಮಾಡಿ, ಅಜ್ಞಾನ ಕಳೆದು, ಶ್ರೀದ=ಶ್ರೀಯಂದದಾತೀತಿ ಶ್ರೀದ=ಜ್ಞಾನೈಶ್ವರ್ಯ ಸಂಪತ್ತು ಕೊಡುವನು ಶ್ರೀದನು. ಇಂತಹ ಶ್ರೀದನಂಘ್ರಿ=ಶ್ರೀಯಿಂದ ಕೂಡಿದ ಶ್ರೀಹರಿಯ ಬಿಂಬನ ಪಾದ ಸರೋಜ ಯುಗಳ=ಪಾದ ಪದ್ಮದ್ವಂದ್ವಗಳನ್ನು ಏಕಾದಶ ಸ್ಥಾನದಲ್ಲಿಟ್ಟು–ಮನದಲ್ಲಿಟ್ಟು, ಆದರದಿ=ಭಕ್ತಿಪೂರ್ವಕ, ಉಕ್ತ ಧ್ಯಾನೋಪಾಸನಾಪೂರ್ವಕ ಸಂತತ ಹಿಗ್ಗುವ ರಿಗೀ ನವಗ್ರಹವು=ನಿರಂತರವಾಗಿ ಶ್ರೀಪದ ಕಮಲ ಭಜಿಸಿ ಸಂತೋಷದಿಂದ ನಲಿದಾಡುತ್ತಿರುವವರಿಗೆ ಈ ನವಗ್ರಹ, ಆದಿತೇಯರು, ಸೂರ್ಯ ಚಂದ್ರಾದಿ ದೇವತೆಗಳೇ ಶ್ರೀಹರಿಯ ಆಜ್ಞೆಯಿಂದ ಬ್ರಹ್ಮಾಂಡದಲ್ಲಿ ಭಗವತ್‌ಸೇವಾಕಾರ್ಯ ಮಾಡುವರು. (ಈ ನವಗ್ರಹ ದೇವತೆಗಳ ಉತ್ಪತ್ತಿ, ಇವರ ಅಂಶ ಇವರ ಕಾರ್ಯವು ಬೇರೆ ಮತ್ತು ಯಜ್ಞಯಾಗಾದಿ ಕರ್ಮ ಯಾಗಾಭಿಮಾನಿಗಳ ಅಂಶ ಉತ್ಪತ್ತಿ ಬೇರೆ) ಸಂತತ=ನಿರಂತರ, ಆಧಿ=ಮನಸ್ಸಿನ ತಾಪ ಮನೋ ವಿಕಾರ, ವ್ಯಾಧಿ ದೇಹಕ್ಕೆ ಒದಗುವ ರೋಗಾದಿಗಳನ್ನು ಪರಿಹರಿಸುತ=ದೂರ ಮಾಡುತ್ತ, ಅವರನ=ಧ್ಯಾನಮಾಳ್ಪ ಭಕ್ತರನ್ನು ಈಶನಾಜ್ಞೆಯಲಿ=ಸರ್ವೇಶ ನಾದ ಹರಿಯ ಆಜ್ಞೆಯಿಂದ ಎಲ್ಲರೂ ಒಂದಾಗಿ ಕಾದುಕೊಂಡಿಹರು, ರಕ್ಷಿಸು ತ್ತಿರುವರು. ಇಂಥ ಭಕ್ತರಿಗೆ ನವಗ್ರಹಾದಿಗಳು ಕಾಡಿಸುವದಿಲ್ಲವೆಂತ ಭಾವ.

**ದ್ರೌಪದೀಶಪತಿ ವಿಠಲರು :** "ಶ್ರೀದನಂಘ್ರಿ ಸರೋಜ" ಏಕಾದಶ ಸ್ಥಾನವೆಂದರೆ ಮನಸ್ಸು.

**ಭಾವಸೂಚನ:** ಶ್ರೀದೇತಿ ಶ್ರೀದಶ್ರೀಶ ಇತ್ಯುಕ್ತೇಃ ॥ ಏಕಾದಶ ಸಮಾನಸೇಂದ್ರಿಯ ದಶಕ ॥ ೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀದ" ಇತಿ ॥ "ಶ್ರೀದಃ ಶ್ರೀಶಃ ॥" ಓಂ* ಯೋ ಅರ್ವಾವತೀಂದವಃ ವಿಶ್ವಾ ದ್ವೇಷಾಂಸಿ ಜಹಿ ಚಾವ ಚಾಕೃಧಿ॥ ವಿಶ್ವೇ ಸನ್ವಂತ್ವಾ ವಸು ಶೀಷ್ವೇಷು ಚಿತ್ತೇ ಮದಿರಾಸೋ ಅಂಶವಃ ॥* ಓಂ ॥ ಶ್ರೀಃ ವಿಷಂ । ತದ್ವಂತಃ ದ್ವೇಷಿಜನಾಃ । ತಾನ್ ದ್ಯತಿ ಖಂಡಯತಿ ಇತಿ ಶ್ರೀದಮೂರ್ತಿ. ಅತ್ರ ಉಕ್ತೇಃ ॥ ಏಕಾದಶ ಮನಸಾ ಸಹ ॥ ಆದಿತೇಯರು=ದೇವಾಃ ॥

## ಕನ್ನಡಾರ್ಥ

ಹರಿಯ ಉಪಾಸಕರನ್ನು ನವಗ್ರಹ ದೇವತೆಗಳು ಬಾಧಿಸದೇ ಸಂರಕ್ಷಿಸುತ್ತಾರೆ ಎಂದು ಈ ಪದ್ಯದಿಂದ ಹೇಳುತ್ತಾರೆ. "ಶ್ರೀದ" ಎಂಬುದು ವಿಷ್ಣು ಸಹಸ್ರನಾಮಾಂತರ್ಗತನಾಮವು. "ಶ್ರೀಃ ಅಂದರೆ ವಿಷ. ಇದರಿಂದ ಯುಕ್ತರಾದವರು ದ್ವೇಷಿಗಳು ಎಂದು ಅರ್ಥ. ದ್ವೇಷಿಗಳನ್ನು ಖಂಡಿಸುವವನು "ಶ್ರೀದ" ಎಂದು ಬೃಹತೀ ಮಂತ್ರಾರ್ಥದ ಸಾರ. ಕರ್ಮೇಂದ್ರಿಯ ೫, ಜ್ಞಾನೇಂದ್ರಿಯ ೫. ಅದರಲ್ಲಿ ಮನಸ್ಸನ್ನು ಸೇರಿಸಿದರೆ ೧೧ ಸ್ಥಾನಗಳಾಗುವವು. ಆದಿತೇಯರು=ದೇವತೆಗಳು ॥ ೨ ॥

**ಅವತರಣಿಕಾ:** ಭಗವದ್ಧ್ಯಾನರತರಾಗಿರುವ ಮಹಾತ್ಮರ ಮತ್ತು ಯೋಗಿಗಳ ಜ್ಞಾನವೆಂಥದೆಂಬುದನ್ನು ಈ ಪದ್ಯದಿಂದ ನಿರೂಪಿಸುತ್ತಾರೆ ಈ ಯೋಗಿಗಳು ಸರ್ವತ್ರ ಬಿಂಬನನ್ನೇ ಕಾಂಬುವರಾದ ಕಾರಣ ವ್ಯಾಪ್ತ್ಯೋಪಾಸಕರ ಲಕ್ಷಣ. ಈ ಪದ್ಯದಿಂದ ನಿರೂಪಿಸುತ್ತಾರೆ.




ಮೂಲ :

**ಮೇದಿನಿಯ ಮೇಲುಳ್ಳ ಗೋಷ್ಪಾ ।**
**ದೋದಕಗಳೆಲ್ಲಮಲ ತೀರ್ಥವು ।**
**ಪಾದಪಾದ್ರಿ ಧರಾತಳವೆ ಸುಕ್ಷೇತ್ರ ಜೀವಗಣ ॥**
**ಶ್ರೀದನ ಪ್ರತಿಮೆಗಳು ಅವರುಂ ।**
**ಬೋದನವೆ ನೈವೇದ್ಯ ನಿತ್ಯದಿ ।**
**ಹಾದಿ ನಡೆವುದೆ ನರ್ತನಗಳೆಂದರಿತವನೆ ಯೋಗಿ ॥ ೩ ॥**

**ಪದ್ಯಾರ್ಥ:** ಮೇದಿನಿಯ ಮೇಲುಳ್ಳ=ಭೂಮಿಯ ಮೇಲೆ ಭೂಮಂಡಲದಲ್ಲಿದ್ದ,(ಗೋಷ್ಪಾದೋದಕ=ಗೋವುಗಳು ಹೆಜ್ಜೆ ಮೂಡಿದ ಸ್ಥಳದಲ್ಲಿ ನಿಂತ ನೀರುಗಳೇ, ಗೋವು ಪವಿತ್ರವಾದುದು, ಪಾದದ ಹೆಜ್ಜೆ ಮತ್ತು ಪವಿತ್ರ, ಅದರಲ್ಲಿಪ್ಪ ಜಲವೂ ಪವಿತ್ರವೆಂದು ತಿಳಿದು ಉದಕಗಳಲ್ಲಿ ಹರಿವ್ಯಾಪ್ತಿಯಿದೆ ಎಂಬ ಜ್ಞಾನಿಗಳಿಗೆ) ಅಮಲ ತೀರ್ಥಗಳು=ನಿರ್ಮಲವಾದ ತೀರ್ಥಗಳು ಎಂದು ತಿಳಿಯುವದು. ಪಾದಪ=ವೃಕ್ಷಗಳು, ಭೂಮಿಯಲ್ಲಿದ್ದ ಮರಗಳು, ಅದ್ರಿ=ಪರ್ವತಗಳು, ಧರಾತಳ=ಭೂಮಂಡಲದಲ್ಲೆಲ್ಲ ಭಗವಂತನ ವ್ಯಾಪ್ತಿ ವ್ಯಕ್ತತಯಾ ಕಾಣುವದರಿಂದ,ಇವೆಲ್ಲವೂ ಸುಕ್ಷೇತ್ರಗಳು=ಸಮೀಚೀನವಾದ ಪುಣ್ಯ

ಕರವಾದ ಕ್ಷೇತ್ರಗಳು, ಸಮಸ್ತ ಜೀವಗಣ=ಶ್ರೀಹರಿ ಪ್ರತಿಬಿಂಬರಾದ ಸಕಲ ಜೀವರುಗಳು, ಶ್ರೀ ಹರಿಗೆ ಚಲ ಪ್ರತಿಮಾಗಳು, ಅವರುಂಬೋದನವೆ ನೈವೇದ್ಯ=ಅವರು ಊಟಮಾಡುವ ಅನ್ನವೇ ಹರಿಗೆ ನೈವೇದ್ಯ, ಏಕೆಂದರೆ ಅವರು ಪ್ರಾಣಾಗ್ನಿ ಹೋತ್ರದ್ವಾರಾ ಮುಖಾದಿ ಪಂಚಾಹುತಿಗಳಲ್ಲಿ ಪಂಚ ಪ್ರಾಣರ ದ್ವಾರಾ ಹರಿಗೆ ಆಹುತಿಕೊಡುವರು, ಕಾರಣ ಇದು ಹರಿಗೆ ನೈವೇದ್ಯ. "ಜ್ಞಾನಿಗಳೊದನದಿ ಕವಳೊಂದೀಯಲು ನಾನಾ ಗೋತ್ರಗಳುದ್ಧರಿಸವುವು ॥ ಪಾನೀಯಧರುದಕವನು ಶುಕ್ತಿಗೆ। ತಾನೆರದಂತೆ ನೋಡ್ ಫಲವು ॥ ಎಂದು ಶ್ರೀ ಪ್ರಾಣೇಶದಾಸರ ಉಕ್ತಿ. "ಹರಿಭಕ್ತರಿಗೆ ಉಣಿಸಿದ ಅನ್ನವೇ ಹರಿಗೆ ಸಮ ರ್ಪಣವಾಗಿ ಅನಂತವಾಗುವುದು. ಶ್ರೀ ವೆಂಕಟನಿಗೆ ಶುಕ ಮಹಾಮುನಿಗಳು ಆದರದಿಂದ ಕೊಟ್ಟ ಪವಿತ್ರವಾದ ಉತ್ತರಾಣಿ ಆಕ್ಕಿಯನ್ನು ಮೂಸಿನೋಡಿ, ಫೂತ್ಕಾರಮಾಡಿದರೆ ಶ್ರೀ ಹರಿಯ ಶ್ವಾಸದಿಂದ ತನ್ನ ವಿವಾಹ ಸಂಭ್ರಮಕ್ಕೆ ಒಡನೆ ಬಂದ ಕೋಟ್ಯಾವಧಿ ದೇವತೆಗಳನ್ನೂ ಇತರರನ್ನೂ ತೃಪ್ತಿಮಾಡಿದ ಹರಿ ಮಹಿಮೆಯು, ಶುಕಾಚಾರ್ಯರ ಅರ್ಪಿಸಿದ ಬಗೆ ತೋರಿದದು. ಕಾರಣ ಹರಿ ಭಕ್ತರುಂಬುವದೇ ಹರಿಗೆ ನೈವೇದ್ಯ. ಹಾದಿ ನಡೆವುದೆ ನರ್ತನಗಳೆಂದರಿತವನೆ ಯೋಗಿ=ತಿರುಗಾಡುವುದು, ಮಾರ್ಗಕ್ರಮಣ ಮಾಡುವುದು. ಇವೆಲ್ಲ ಕಾರ್ಯವು ಪಾದದಿಂದಾಗುವವು. ಇವೆಲ್ಲವೂ ಶ್ರೀ ಹರಿಯ ನರ್ತನಸೇವಾ ಎಂಬುದುದೆಂದು, ಯಾವ ಸಜ್ಜೀವಿಗಳ ಜ್ಞಾನವಿರುವದೋ ಆತನೇ ಯೋಗಿ= ತಪಸ್ವಿ, ಧ್ಯಾನಯೋಗಿ ಎಂತಾರ್ಥ.

**ದ್ರೌಪದೀಶ ಪತಿವಿಠಲರು:** ಮೇದಿನಿಯ ಮ್ಯಾಲುಳ್ಳ ॥

**ಭಾವಸೂಚನ :** ಮೇದಿನೀತಿ ॥ ಧರ್ಮಸ್ವರೂಪ ಚಿತ್ರತ್ವಾದ್ಯೋಯೋ ದೇವಮನೋಗತಃ ॥ ಸಏವ ಧರ್ಮೋ ವಿಜ್ಞೇಯಾ, ಇತಿ ಪಾದ್ಮವಚನೆ ; ಯದ್ಯ ಧರ್ಮಃಕೃತಃ ಸದ್ಭಿರ್ನಸವಾಚ್ಯಃ ಕಥಂಚನೇತಿ ಪ್ರಥಮ ತಾತ್ಪರ್ಯೆ ಪ್ರತಿಪಾದಿತ ವಿಷಯೇ ಮುಮುಕ್ಷುಭಿಃ ರವಹಿತೈರ್ಭವಿತವ್ಯ ಮಿತ್ಯುಕ್ತಂ ಭವತಿ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪ್ರತೀಕಾನಿ ಆಹ—"ಮೇದಿನೀ" ಇತಿ ॥ ಮೇದಿನೀ ಪೃಥ್ವೀ ॥ "ಅಮಲ" ಇತಿ ॥ ಕ್ಷುದ್ರ ಕ್ಷಾರಮುಖೋದಸ್ಯ ನತ್ವಮೃತವಾಸಂ (ಸತ್ವಂ)

ತತ್ತುಂಗಾ.ಗಂಗಾ ಸರಿತ್ಪ್ರವರಾಚ್ಛನೀರಾಭೇದಃ । ಕಿಂತು ಧರಿತ್ರೀ ಸುವರ್ಗ ಪವಿತ್ರೀ ಕುರ್ವತ್ ಪವಿತ್ರೀಚ್ಛಾವಿದ್ಧ್ಯಾತುರ್ನಾದೇಯವಾರಿ ಸಮೀಪಗಸ್ಯ ಅತಿ ನೈದಾಘ (ಘಿಕ) ತಾಪನಿಷ್ಟಪ್ತಸ್ಯ ಸ್ನಾನಭೂರೇವ ಅಮಲಾಂಬುದೇವತಾ ಶ್ರಿತಾ ನಾಜ್ಞಾ ಸ್ನಾತಂಗಾಂಗಮಪಿ ತತ್ಪರಃ॥ ಇತ್ಯಸ್ಯ "ತೇ ಪುನಂತ್ಯುರು ಕಾಲೇನ॥" "ಯತ್ತೀರ್ತ ಬುದ್ಧಿಃ" "ಸುಜ್ಞೇನ ತೀರ್ಥಮಾನಿನಃ" ಇತ್ಯಪಿ ಯದ್ಬುದ್ಧಿಃ, "ಸ್ನಾನ ಮಸ್ತ್ವಭಿಷೇಚನಮ್" "ತಾನಿ ಕರ್ಮಾಣಿ" "ತೀರ್ಯತೇ ಯೇನ ತತ್ ತೀರ್ಥಮ್" "ಸರ್ವ ಶೋಧಕತ್ವಾತ್ ತು ತೀರ್ಥಾಖ್ಯಃ ವಿಷ್ಣುಃ" ಇತಿ ದೀಪಿಕೋದಾಹೃತ ವಿಷ್ಣುತೀರ್ಥೀಯ ಪ್ರಭೃತಿ ಅನುಸಂಧಾತ್ರಾ ಅವಲೋಕಿತಜ್ಞಾನಿನಾ ಭಾವ್ಯಮ್ ಇತಿ ಪ್ರಕೃತಿ ಪದಾರ್ಥಃ॥ "ಅವರ" ಇತಿ ॥ ಅಪರೋಕ್ಷಿಣಃ ಕ್ಷುತ್ಪ್ರಹಾಣಂ ಅಪ್ರಾಪ್ತಾಃ ಕರ್ಮಭಿಃ॥ ವಿಸ್ಮೃತಸಮರ್ಪಣಾಂ ಅಪಿ ಸುಧಿಯೋಂಬುಧಯಃ ಗುಣೈಃ ನಾವಜ್ಞಾಹರ್ಾಃ। ತೈಃ ಅದತ್ತಮಪಿ ತದ್ಬಿಂಬಃ ಸ್ವಸದೃಕ್ಷ ಪ್ರತಿಬಿಂಬ ಭೋಗ್ಯವಿಷಯಾನ್ ರಸಮಾನಿಗಃ ರಸಾಖ್ಯಃ ಕೃಪಯಾ ಪ್ರಾಕೃತಾನಪಿ ಭುನಕ್ತ್ಯೇವ ನ ಉದಾಸ್ತೇ ಅಜ್ಞೈಃ ಏತನ್ನಿಂದಕೈಃ ದತ್ತಮಪಿ ನ ಕಟಾಕ್ಷೀ ಕರೋತಿ ॥ (ಕಟಾಕ್ಷ ವಿಷಯೀ ಕರೋತಿ) ॥ "ಅಶ್ನಾತ್ಯನಂತಃ ಖಲು ತತ್ವಕೋವಿದೈಃ" "ಯಥಾ ಬ್ರಹ್ಮ ಮುಖಾತ್ ತೃಪ್ತಃ ನ ಭಜತಿ ಕುಮುನಿಷಿಣಾಂ ಸ ಇಜ್ಯಾಮ್" ಇತ್ಯಾದಿ ಪ್ರಮಿತೋಽರ್ಥಃ ॥ "ಧರ್ಮೋ ಭವತ್ಯಧರ್ಮೋಽಪಿ" "ಪಾಪಂ ಭವತಿ" "ಯದಾಗಚ್ಛತಿ" ॥ ಇತ್ಯಾದ್ಯನುಸಂದಧತಃ ಇತಿ ಸಮನುಶಾಸ್ತಿ ॥ ೩ ॥

## ಕನ್ನಡಾರ್ಥ

ಭಗವತ್ಪ್ರತೀಕಗಳನ್ನು ಹೇಳುತ್ತಾರೆ "ಮೇದಿಸಿಯ" ಎಂಬ ಪದ್ಯದಿಂದ. "ಮೇದಿನಿ"ಯೆಂದರೆ "ಭೂಮಿ" ಎಂದು ಅರ್ಥ. "ಭೂಮಿಯಲ್ಲಿರುವ ಗೋಷ್ಪಾದ ಜಲವೂ ಸಹ ಅಮಲತೀರ್ಥ" ಎಂದು ದಾಸವರೇಣ್ಯರು ನಿರೂಪಿಸಿರುತ್ತಾರೆ. ಮಂಗಲತರಂಗಗಳಿಂದ ಕಂಗೊಳಿಸುವ ಸರಿತ್ ಶ್ರೇಷ್ಠವಾದ ಗಂಗಾ ನದಿಯ ಸ್ವಚ್ಛ ಸುಮಧುರ ನೀರಿಗೂ, ಉಪ್ಪು ಒಗರಾಗಿರುವ ಕ್ಷುದ್ರ ನೀರಿಗೂ ಅಭೇದವನ್ನು ಈ ಪದದಿಂದ ಹೇಳುವದಿಲ್ಲ. ಗಂಗಾದಿ ತೀರ್ಥಗಳ ಜಲವೂ ಈ ಜಲವೂ ಒಂದೇ ಎಂಬ ಅಭಿಪ್ರಾಯವಿಲ್ಲ, ಭೂಮಿಯಲ್ಲಿರುವ ಸುಜನ

ವರ್ಗವನ್ನೆಲ್ಲ ಪವಿತ್ರೀಕರಿಸುವ ತೀರ್ಥಾಭಿಮಾನಿಗಳಲ್ಲಿ ಸನ್ನಿಹಿತವಾಗಿರುವ ಭಗವದ್ರೂಪವನ್ನು "ಪವಿತ್ರೀಕರಿಸಲಿ" ಎಂಬ ಇಚ್ಛೆಯಿಂದ ಧ್ಯಾನಮಾಡುತ್ತ ಜಲಸಮೀಪದಲ್ಲಿದ್ದು ಭವಬೇಸಿಗೆಯಿಂದ ಬಳಲಿ ಸ್ನಾನಮಾಡುವವರಿಗೆ ಆ ಜಲಗತವಾದ ದೇವತೆಯು ಅವರು ಸ್ನಾನಮಾಡುವ ಜಲದಲ್ಲಿ ಸನ್ನಿಹಿತವಾಗಿ ಪಾವನಗೊಳಿಸುತ್ತದೆ. ಆದರೆ ಗಂಗಾ ನದಿಯಲ್ಲಿಯೇ ಅಜ್ಞರು ಸ್ನಾನಮಾಡಿದರೂ ಇಂತಹ ಪಾವಿತ್ರ್ಯವನ್ನು ಪಡೆಯಲಾರರು." ಈ ಸಂಗತಿಯನ್ನು ಅನೇಕ ಪುರಾಣ ವಾಕ್ಯಗಳು ಸಮರ್ಥಿಸುತ್ತವೆ. ಆ ತೀರ್ಥಗಳು ಕೇವಲ ಜಲಮಯವಾದುದರಿಂದ ಬಹುಕಾಲದ ನಂತರ ಪವಿತ್ರೀಕರಿಸುವವು. ಸಾಧುಗಳು ದರ್ಶನ ಮಾತ್ರದಿಂದ ಶಾಸ್ತ್ರೋಪದೇಶವಿತ್ತು ಶೀಘ್ರದಿಂದ ಪವಿತ್ರೀಕರಿಸುತ್ತಾರೆ. ತೀರ್ಥಗಳಲ್ಲಿ ಸನ್ನಿಹಿತವಾಗಿರುವ ಭಗವತ್ಸನ್ನಿಧಾನ ವಿಶೇಷವು ತೀರ್ಥವೆನಿಸಿಕೊಳ್ಳುತ್ತದೆ. ಕೇವಲ ಜಲವು ತೀರ್ಥವೆನಿಸದು. ತೀರ್ಥಗಳಲ್ಲಿರುವ ಭಗವತ್ಸನ್ನಿಧಾನವನ್ನರಿತು ಮಾಡುವ ಸ್ನಾನವು-ಸ್ನಾನವು; ಅದನ್ನರಿಯದೆ ಮಾಡುವ ಸ್ನಾನವು ಕೇವಲ ಮೈತೊಳೆಯುವಿಕೆಯೆನಿಸುತ್ತದೆ. "ಯಾವುದರಿಂದ ಪಾಪದಿಂದ ದಾಟುತ್ತಾನೆಯೋ ಅದು ತೀರ್ಥ" ಎಂದು ವ್ಯುತ್ಪತ್ತಿಯನ್ನು ತಿಳಿದರೆ, ಸರ್ವಪಾಪ ಪರಿಹಾರಕನಾದ ಶ್ರೀ ವಿಷ್ಣುವು ಮುಖ್ಯವಾಗಿ "ತೀರ್ಥ"ವೆಂದು ಕರೆಯಲ್ಪಡುವವನು. ಅಂಥ ಭಗವತ್ಸನ್ನಿಧಾನವಿರುವದರಿಂದ "ತೀರ್ಥ"ಗಳೆಂದು ನದೀ ಮುಂತಾದವುಗಳಿಗೂ ಕರೆಯುತ್ತಾರೆ. ತೀರ್ಥಾಭಿಮಾನಿಗಳೊಡನೆ ಅಲ್ಲಿ ಸನ್ನಿಹಿತವಾಗಿರುವ ಭಗವದ್ರೂಪವನ್ನು ಸಜ್ಜನರು ಯಾವ ಜಲದಲ್ಲಿ ಸ್ನಾನಕಾಲದಲ್ಲಿ ಧ್ಯಾನಿಸುತ್ತಾರೋ ಅಲ್ಲಿ ಆ ಭಗವದ್ರೂಪವು ಸನ್ನಿಹಿತವಾಗಿ ಪಾವಿತ್ರ್ಯವೀಯುವದರಿಂದ ಆ ಜಲವು ತೀರ್ಥವೆನಿಸುತ್ತದೆ." ಎಂಬುದು ಇಲ್ಲಿ ಹೇಳಬೇಕಾದ ವಿಶೇಷ ವಿಷಯ. ದೀಪಿಕಾ ಮುಂತಾದವುಗಳಲ್ಲಿ ಉದಾಹರಿಸಿರುವ ವಿಷ್ಣು ತೀರ್ಥೀಯದಲ್ಲಿ (ಸಾರೋದ್ಧಾರ) ಹೇಳಲಾಗಿರುವ ಈ ಸಂಗತಿಗಳನ್ನು ಅನುಸಂಧಾನ ಮಾಡುತ್ತ-ಜ್ಞಾನಿಗಳನ್ನು ಕಂಡು ಅವರಿಂದ ಈ ಸ್ನಾನವಿಧಾನವನ್ನು ತಿಳಿಯಬೇಕು" ಎಂಬ ಅಭಿಪ್ರಾಯದಿಂದ ಈ ಪದವನ್ನು ಹೇಳಲಾಯಿತು. "ಅವರುಂಬೋದನವೆ ನೈವೇದ್ಯ" ಎಂಬಲ್ಲಿ ಈ ವಿಶೇಷವನ್ನು ಗಮನಿಸಬೇಕು.

ಹಸಿವೆಯನ್ನು (ಪೂರ್ಣವಾಗಿ) ಹಿಂಗಿಸಿಕೊಳ್ಳದ ಅಂದರೆ ಹಸಿವೆ

ನೀರಡಿಕೆಗಳ ಭರದಲ್ಲಿರುವದರಿಂದ ಅಪರೋಕ್ಷ ಜ್ಞಾನಿಗಳು ಬೇರೆ ಕರ್ಮಗಳಲ್ಲಿ ತೊಡಗಿ ಈ ಸಮರ್ಪಣವನ್ನು (ಭಗವಂತನಲ್ಲಿ ಸಮರ್ಪಿಸುವದನ್ನು) ಮರೆತು ಹಾಗೆಯೇ ಭೋಜನ ಮುಂತಾದವುಗಳನ್ನು ಮಾಡುತ್ತಿದ್ದರೂ ಆ ಅಪರೋಕ್ಷ ಜ್ಞಾನಿಗಳನ್ನು ಅವಹೇಳಿಸಕೂಡದು. ಅವರನ್ನು ದೂಷಿಸಬಾರದು. ಗುಣ ಗಳಿಂದ ಸಮುದ್ರದಂತೆ ಇರುವ ಆ ಅಪರೋಕ್ಷ ಜ್ಞಾನಿಗಳು ವಿಸ್ಮರಣದಿಂದ ತನ್ನಲ್ಲಿ ಸಮರ್ಪಿಸದಿದ್ದರೂ ಅವರ ಬಿಂಬರೂಪಿಯು ತನ್ನ ಪ್ರತಿಬಿಂಬರಾದ ಆ ಅಪರೋಕ್ಷ ಜ್ಞಾನಿಗಳು ಭೋಗಿಸುವ, ಉಣ್ಣು ತಿನ್ನುವ ವಿಷಯಗಳಲ್ಲಿ ರಸ ಹಾಗೂ ತದಭಿಮಾನಿಗಳಲ್ಲಿ ರಸರೂಪ ನಾಮಕವಾಗಿ ಇದ್ದು ಕೃಪೆಯಿಂದ ಅಲ್ಲಿರುವ (ಪ್ರಾಕೃತ ರಸದಲ್ಲಿದ್ದ) ಶುಭಸಾರವನ್ನು ಸ್ವೀಕರಿಸಿ ಅನುಗ್ರಹಿಸು ವನೇ ವಿನಃ ತನ್ನ ಅಪರೋಕ್ಷ ಜ್ಞಾನಿಗಳನ್ನು ಉದಾಸೀನತೆಯಿಂದ ನೋಡು ವದಿಲ್ಲ. ಈ ಅಪರೋಕ್ಷಿಗಳನ್ನು ನಿಂದಿಸುವವರು ಕೊಡುವದನ್ನು ಶ್ರೀ ಹರಿಯು ಕಣ್ಣೆತ್ತಿ ಕಟಾಕ್ಷದಿಂದಲಾದರೂ ನೋಡುವದಿಲ್ಲ. "ತತ್ವಜ್ಞಾನಿಗಳ ಮುಖದಿಂದ ಪರಮಾತ್ಮನು ಭುಂಜಿಸಿ ಪ್ರೀತನಾಗುತ್ತಾನೆ. ಹೇಗೆ ಬ್ರಹ್ಮ ಜ್ಞಾನಿಗಳ ಮುಖದಲ್ಲಿ ಹಾಕಿದ ಭೋಜನದಿಂದ ಹರಿಯು ಎಷ್ಟು ತೃಪ್ತಿಪಡು ವನೋ ಅಷ್ಟು ಇನ್ನಾರಿಂದಲೂ ತೃಪ್ತಿಪಡಲಾರನು. ಆ ಹರಿಯು ಕುಮತಿ ಗಳು-ಅಜ್ಞಾನಿಗಳು ಮಾಡುವ ಪೂಜೆಯನ್ನು ಸ್ವೀಕರಿಸುವದಿಲ್ಲ" ಎಂದು ಮುಂತಾಗಿ ಇರುವ ವಚನಗಳು ಈ ವಿಷಯವನ್ನು ಸಮರ್ಥಿಸುತ್ತವೆ. "ಪರ ಮಾತ್ಮನಿಗೆ ಪ್ರಿಯನಾದ ಭಗವದ್ಭಕ್ತನು ಮಾಡಿದುದು ಧರ್ಮವೇ ಆಗುತ್ತದೆ. ಭಗವದ್ಭಕ್ತಿಯಿಲ್ಲದವನು ಯಾವುದನ್ನು ಮಾಡಿದರೂ ಪಾಪವೇ ಆಗುತ್ತದೆ" ಎಂದು ಮುಂತಾದ ವಿಷಯಗಳನ್ನು ಇಲ್ಲಿ ಹೆಚ್ಚಿಗೆ ತಿಳಿದುಕೊಳ್ಳಬೇಕು. ||೩||

**ಅವತರಣಿಕಾ:** ಶರ್ವ ವಂದ್ಯನಾದ ಶ್ರೀ ಹರಿಯ ಧ್ಯಾನವನ್ನು ಸಂತತಮಾ ಡುವ ಯೋಗಿಗಳಿಗೆ ಎಲ್ಲ ದೇಶ-ಕಾಲ-ಜೀವರು ಅವರ ನಡೆ ನುಡಿ ಸರ್ವ ಕೆಲಸ ಈ ಎಲ್ಲವೂ ಭಗವಂತನ ಸೇವೆ, ಎಲ್ಲವೂ ಪುಣ್ಯಕರ - ಪವಿತ್ರವಾದುವು ಎಂದು ಈ ಪದ್ಯದಿಂದ ಹೇಳುತ್ತಾರೆ.

ಮೂಲ :

**ಸರ್ವ ದೇಶವು ಪುಣ್ಯದೇಶವು ।**
**ಸರ್ವ ಕಾಲವು ಪರ್ವ ಕಾಲವು ।**
**ಸರ್ವ ಜೀವರು ದಾನಪಾತ್ರರು ಮೂರು ಲೋಕದೊಳು ॥**

**ಸರ್ವ ಮಾತುಗಳೆಲ್ಲ ಮಂತ್ರವು ।**
**ಸರ್ವ ಕೆಲಸಗಳೆಲ್ಲ ಪೂಜೆಯು ।**
**ಶರ್ವ ವಂದ್ಯನ ವಿಮಲಮೂರ್ತಿ ಧ್ಯಾನವುಳ್ಳವಗೆ ॥ ೪ ॥**

**ಪದ್ಯಾರ್ಥ :** ಸರ್ವ ದೇಶವು ಪುಣ್ಯ ದೇಶವು=ಎಲ್ಲ ಠಾವಿನಲ್ಲಿ, ದೇಶದಲ್ಲಿ ಬಿಡದೇ ವ್ಯಾಪ್ತನಾಗಿರುವನೆಂಬ ನಿಶ್ಚಯ ಜ್ಞಾನ ಉಳ್ಳವರಿಗೆ ಎಲ್ಲ ದೇಶವು ಪುಣ್ಯ ದೇಶಗಳು, ಸರ್ವ ಕಾಲವು ಪರ್ವ ಕಾಲವು-ಸರ್ವ ಕಾಲಗಳಲ್ಲಿ ಹರಿ ಕಾಲ ನಿಯಾಮಕನಾಗಿ ಕಾಲ ಪ್ರವರ್ತಕನಾಗಿರುವನೆಂಬ ಜ್ಞಾನಿಗೆ ಎಲ್ಲ ಕಾಲವೂ, ಪರ್ವ=ಸೂರ್ಯ ಚಂದ್ರೋಪರಾಗಾದಿ ಕಾಲಗಳಂತೆ ಪರ್ವ ಕಾಲಗಳು, ಸರ್ವ ಜೀವರು ದಾನಪಾತ್ರರು=ತ್ರಿವಿಧರಾದ ಸಕಲ ಜೀವಿಗಳಲ್ಲಿ, ಶ್ರೀಹರಿಯು ಬಿಂಬನಾಗಿ ಸಮನಾಗಿರುವದರಿಂದ, ಸತ್ವ-ರಜ-ತಮೋಜೀವರಿಗೆ ಏನೇನು ಹೇಗೆ ಕೊಡುವದೆಂಬುದನ್ನರಿತು ಕೊಡುವುದೇ ದಾನ. ಸರ್ವಜೀವರ ಅಂತರ್ಯಾಮಿಯಾದ ಹರಿಯೇ ಮುಖ್ಯ ದಾನಪಾತ್ರನು. (ಈ ವಿಷಯ ಸಂಧಿಯ ಸಾರದಲ್ಲಿ ಸವಿಸ್ತರ ವಿವರಿಸಿದೆ. ಅಲ್ಲದೇ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಬಹು ಪ್ರಮೇಯ ವಿಸ್ತರಿಸಿ ಸಮಂಜಸ ಶಾಸ್ತ್ರಾರ್ಥವಿಚಾರ ಪೂರಿತವಾಗಿ ಹೇಳಿದ್ದಾರೆ. ಮುಂದೆ ನೋಡಿರಿ) ಇದರಂತೆ ಮೂರು ಲೋಕ=ಸ್ವರ್ಗ-ಮರ್ತ್ಯ-ಪಾತಾಳಾದಿ ಜೀವರಗಳು ಆಡುವ ಮಾತುಗಳೆಲ್ಲ ಆಡುವ ಮಂತ್ರವು=ಅಜಾದಿ ೫೧ ವರ್ಣಗಳ ಮೂರ್ತಿಗಳೇ ವ್ಯಕ್ತತಯಾ ಆದ ನುಡಿ, ಮಾತು=ಮ+ಆ ತ+ಉ (ಮನು ಅಭಿನ್ನ ಆನಂದತಾರಾ ಭಿನ್ನ ಊರ್ಜಾ— ಈ ನಾಲ್ಕು ಅಜಾದಿ ರೂಪಗಳೆಂದು ಯಾವ ಯೋಗಿ ತಿಳಿಯುವನೊ, ಅವನ ನುಡಿಗಳೇ ಮಂತ್ರಗಳು. ಸಮಸ್ತ ಜೀವರ ಸರ್ವ ಕೆಲಸ=ಕೂಡುವದು, ನಿಲ್ಲುವದು, ಊಟಮಾಡುವದು ಕೈಯಿಂದ ಅನೇಕ ಕೆಲಸಗಳನ್ನು ಮಾಡುವುದು ಇವೆಲ್ಲ ಶ್ರೀ ಹರಿಯುಪೂಜಾ ಇದು ಯಾರಿಗೆ ಎಂದರೆ ಶರ್ವ=ರುದ್ರನಿಂದ ವಂದ್ಯನಾದ ಶ್ರೀ ಹರಿಯ ವಿಮಲಮೂರ್ತಿ ಧ್ಯಾನವುಳ್ಳವಗೆ; ಸರ್ವದೇಶವು ಪುಣ್ಯದೇಶ ಇತ್ಯಾದಿ.

**ದ್ರೌಪದೀಶ ಪತಿವಿಠಲರು :** ಸರ್ವ ದೇಶವು, ಮೂರ್ತಿ ಧ್ಯಾನ ಉಳ್ಳವಗೆ.

**ಭಾವಸೂಚಸ :** ಇಮ ಮೇವಾರ್ಥಂ ದೃಢಯತಿ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸರ್ವ ದೇಶ" ಇತಿ ॥ "ಯತ್ರೈಕಾಗ್ರತಾ" ಇತ್ಯಸ್ಯ "ತಮೇವ" ಇತಿ ಭಾಷ್ಯಮ್, "ಮನಃ ಪ್ರಸಾದನಾರ್ಥಂ" ಇತಿ ವ್ಯಾವರ್ತ್ಯ ಚೋದ್ಯಟೀಕಾ "ಪರ್ವತಾಗ್ರೇ ನದೀತೀರೇ" "ಬ್ರಾಹ್ಮೇ ಮುಹೂರ್ತೇ ಚೋತ್ಥಾಯ" ಇತಿ "ಅತ್ಯುತ್ತಮಾ ನಾಂ ಕೇಷಾಂ ಚಿತ್ ನ ವಿಶೇಷೋಸ್ತಿ ಕಾಲತಃ" ಇತ್ಯುಕ್ತೇಃ॥ "ಸರ್ವಂ ಸಮಾಪ್ನೋಷಿ ತತೋಸಿ ಸರ್ವಃ" ॥ ಜ್ಞಾನದಾನಾತ್ ದೇಶಃ । ಪುಣ್ಯಕೃತ್ವಾತ್ ಪುಣ್ಯನಾಮಾ ॥ ಇಷ್ಟದತ್ವಾತ್ ಕಾಲನಾಮಾ ॥ ಪರ ಜ್ಞಾನಾತ್ತು ॥ ಏವಂ ಯತ್ರಕುತ್ರಾಪಿ ಶ್ರೀ ಪ್ರಣಯಿನೀ ಚಕೋರೀಂದುಂ ಅನುಚಿಂತಮತಾಂ ಮಹಾತ್ಮನಾಂ ಸರ್ವದೇಶಾಃ ಕಾಲಾಶ್ಚ ಪುಣ್ಯಪ್ರದಾಃ ಏವ ॥ ಸ ವೈ ಪುಣ್ಯತಮಃ ದೇಶಃ ಸತ್ಪಾತ್ರಂ ಯತ್ರ ಲಭ್ಯತೇ ॥ "ಸರ್ವ ಜೀವ" ಇತಿ ॥ ನನು ಶ್ರೀದಪ್ರತೀಕತ್ವಾ ವಿಶೇಷೇಪಿ ಪರಮನೈಚ್ಯಂ ಶ್ರೀ ವಲ್ಲಭಾರೀಣಾಂ ಮಾಯಿನಾಂ ಘೋಷಯಂತಿ ಶ್ರುತಯಃ ಸ್ಮೃತಯಃ ಅನಂತಾಃ ಮಾಯಿನಾಂ ದೂಷಕಾಃ ಖಲು ॥ "ತತೋಧಿಕಮಿವ ವ್ಯಕ್ತಂ ಯಾಂತಿ ತೇಷಾಂ ಅನಿಂದಕಾಃ ॥" "ತತೋ ಭೂಯ ಇವತೇ ತಮೋ ಯ ಉ ವಿದ್ಯಾಯಾಂ ರತಾಃ ॥ ಅನ್ಯದೇವಾ ಹುರ್ವಿದ್ಯಯಾ ಅನ್ಯದಾಹು ರವಿ ದ್ಯಯಾ" ॥ "ಕಶಾವೇದ್ರಾದಿಕಂ ತಸ್ಯ ತಸ್ಕರಸ್ಯೋತ್ತರಂ ವದೇತ್" "ಅನಂತ ದೋಷ ದುಷ್ಟಂ ಚ ಹೇಯಂ ಮಾಯಾಮತಂ ಚ ಶುಭೈಃ ॥" "ಆನಂದಾ ನಾಮ ತೇ ಲೋಕಾಃ ಅಂಧೇನ ತಮಸಾ ವೃತಾಃ ॥ ತಾ ಸ್ತೇ ಪ್ರೇತ್ಯಾಭಿ ಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥" "ಅಲಂಕೃತಃ ದುರ್ಘಟೈರೇವ ಭೂಷಣೈಃ ॥" ಅಲಂಕೃತಸ್ಯ ವಸನಾಭ್ಯಾಂ ಭಾವ್ಯಮ್ ॥ "ಅಂಧಂತಮಃ ನಿತ್ಯದುಃಖಂ ತಸ್ಯ ಸ್ಯಾತ್ ವಸನದ್ವಯಮ್॥" ಈಶ ಶಕ್ತೇಃ ಅಚಿಂತ್ಯತ್ವಾತ್ ಮಹೋನ್ಮತ್ತೈಃ ಪ್ರವರ್ತಿತಮ್ ॥" "ಕಥಂ ನ ಜಾಯತೇ ಲಜ್ಜಾ ।" ಮೂಕೋ ಹಮಿತಿ ವತ್ ।" "ಅತ ಉನ್ಮತ್ತ ವಾಕ್ಯತ್ವಾತ್ ಮಾಯಾವಾದಃ ಹ್ಯುಪೇಕ್ಷಿತಃ ॥" "ಯದಂಗಂ ಮಾಯಿ ಸಂಸ್ಪೃಷ್ಟಂ ತದಂಗಂ ದಾಹಯೇತ್"॥ "ತೇ ಮುಹ್ಯಂತಿ ಶುಚಾರ್ಪಿತಾಃ ॥" "ಮಾಯಾವಾದ್ಯಾಖ್ಯ ಗರ್ದಭಮ್" ॥ ಅತಃ ವೈಷ್ಣವಾನಾಂ ಪರಮ ವೈಷ್ಣವೋತ್ತಂಸಕೃತ ಗಾಲೀದಾನಾಭಿಜ್ಞಾನಾಂ "ಯೋ ನಿಂದ್ಯಾಂಸ್ತು ನನಿಂದಯೇತ್॥" "ಅವೈಷ್ಣವಾಯ ದಾತವ್ಯಃ ನೋದ

ಬಿಂದುಃ ನ ತಂಡುಲಮ್ ||" "ಕಾಲಡಿ ಗ್ರಾಮ ಜಾತಸ್ಯ ಸಂಕರಸ್ಯ ದುರಾತ್ಮನಃ ||" ಚುಬುಕೇ ಪಾದಮಾಧಾಯ ವಿಣ್ಮೂತ್ರೇ ವಿಸೃಜಾಮ್ಯಹಮ್ ||" "ಮಾಯಾವಾದಿ ತಾಯಿಗಂಡಾ ಬೇಕಾಯಿತೇನೋ ಮಾತೃಗಾಮಿ ಎಂಬೋ ಈ ಕಷ್ಟದಾ ಬೈಯುಗಳು ||" "ಅಂಥಂತವರುಸ್ಸು ಮತ್ತಿನ್ನಾರಿಗೆ" "ಪುರಂದರ ವಿಠಲನ ದ್ವೇಷಿ ಮಾಯಾವಾದಿಗಳಿಗೊಂದು ಕೆರವು||" "ಕೊಡೋದಿಲ್ಲ ಶೈವರಿಗೆ ದಾನವನ್ನು" || ಹಿಡೋದಿಲ್ಲ ಅವರದೊಂದು" ಇತ್ಯಾದ್ಯನು ಸಂಧಾತೃಣಾಂ ದಾಸರಾಜಾನಾಂ ಪ್ರಕರಣಾತ್ ಅಸಂಕುಚಿತಾರ್ಥ ಸರ್ವ ಪ್ರವಿಷ್ಟ ಮಾಯಿಭ್ಯಃ ಅನ್ನಮುಖ ದಾನಾವೇದಕ್ಕೈ ತತ್ಪದರಚನಾ ಇತಿ ಚೇತ್ ? ಅತ್ರ ಬ್ರೂಮಃ—"ಇದಂ ಅಪರೋಕ್ಷಿ ಪರಮ್" ತಥಾ ಚ ನಾತ್ರ ಸರ್ವತ್ವಾವಚ್ಛೇದೇನ ದಾನಪಾತ್ರತಾ ವಿಧೀಯತೇ || ಯೇನ ಪೂರ್ವಾಸ್ತ್ರಾಣಿ ಕುರ್ಯುಃ ವ್ಯಥಾಮ್ || ಕಿಂತು ಯೇ ಪರೋಕ್ಷಿಭಿಃ "ಶ್ರೀ ವಿಷ್ಣು ತದ್ಭಕ್ತ ಪ್ರೀತಿಃ ಸ್ಯಾತ್" ಇತ್ಯಭಿ ಸಂಧಿಪೂರ್ವಕಂ ದಾನ ಗೃಹೀತೃತ್ವೇನ ಸ್ವೀಕೃತಾಃ ತೇ ಸರ್ವೇ ಬಾಹ್ಯ ರುದ್ರಾಕ್ಷ ಭಸ್ಮಾದಿಭಿಃ ಅದ್ವೈತೀತ ತಯಾ ಭಾಸಮಾಸಾಃ ಅಪಿ ಅಂತಃ ಭಕ್ತಾಃ ಹರೌ ಖಲು || ಅತ ಏವ ಪೂರ್ವ ದಾಸವರ್ಯೋದ್ಧೃತಾಃ ಷಷ್ಠಿಪರೇಽಪಿ ದೃಶ್ಯಂತೇ || ಯಥಾ "ಬಿಲ್ವಮಂಗಲಃ ಸಾಧುಃ" || ಅತಃ ಜ್ಞಾನಿದಾನ ಗೃಹೀತಾರಃ ಸರ್ವೇ ದಾನಪಾತ್ರಂ ಇತ್ಯರ್ಥಃ || ಯದ್ವಾ ಪರ ಪ್ರಾಣಪ್ರಯಾಣೇ ಧೃತಪ್ರಾಣಃ ಸೋಽಹಮುಪಾಸ್ತಿಂ ಚರೀ ಕರೋತಿ ಇತಿ ದೇಯ ಮನ್ನಂ ಮಾಯಿ ಗೋಮಾಯುವಃ ಇತಿ ಹರಿಹಾರ್ದಂ ಜ್ಞಾತ್ವಾ ದೀಯತೇ ಕ್ವಚಿತ್ || ತತ್ರ ಸ್ವತ್ವತ್ಯಾಗ ಏವದಾನಂ ವಿಧ್ಯಾತ್ಮನಾ ಯದಿ ವಾ ತನ್ಮತಂ ಪರಿಷದಿ ನ್ಯಕ್ಕೃತ್ಯ ಉಕ್ತ ಪ್ರಣಾಡಿತಯಾ ಗಾಲೀದಾನಂ"=ವಿಜಯ ರಾಜಾಶ್ಚ "ನಿಂದಕರರ ನಿತ್ಯಾನಿಂದಾ ಮಾಳ್ಪದೇ ಹಬ್ಬ" ಇತಿ ಪ್ರೋಚುಃ || ಗುರವಸ್ತು:—"ಯೋ ನಿಂದ್ಯಾಂಸ್ತು ನ ನಿಂದಯೇತ್ ||" ಇತಿ || ವಿಜಯ ಧ್ವಜ ಶ್ರೀ ಮಚ್ಚರಣಾಸ್ತು—"ದಾನಂ ಭಕ್ತಾಧಮ ಮಧ್ಯಮೇಷು ಸುಖ ದುಃಖ ಮಿಶ್ರ ಫಲ ವಿತರಣಮ್ || ಯದ್ವಾ ವಿಷಾದೇಃ ದಾನಂ" ಅತಏವ ಕಿಂ ವದಂತ ಪೀಡಿತಾಃ" ಪೂರ್ವಂ ದಾಸಮೌಲಿ ರತ್ನ ಭೂತಾಃ ನಿರುದತೇ ಉದನ್ಯಯಾಂತರ್ಲೀನ ಜಿಹ್ವಾನಾಂ ನವಾನಾಂ ಮುಖೇದ್ವತ್ವಾ ನೀತೋದಧಾರಾ ಮೇಕಾಂ ಏಕಸ್ಯಾ ಸುರತಾಮುವ ಧಾಯಾ(ರ್ಯಾ) ರ್ಪಯಾಂ

ಚಕ್ರುಃ ಮುಖೇ ತಪ್ತವಾಲುಕಾಂ ಮಮಾರ ಚ ಅಯುಮ್ ॥" ಇತಿ ॥ ಸರ್ವೇತಿ ॥ ಯದ್ಯಪ್ಯೇವಮೇವ ಅತ್ರಾಪಿ ವಿಚಾರ್ಯಂ ಬಹು ॥ ಪರಂ ತು ವಿಸ್ತೃತ್ಯಾ ಅನಾದೇಯಂ ಸ್ಯಾತ್ ಇತ್ಯಾಲೋಚ್ಯ ವಿದುಷಾಂ ದಿಙ್ಮಾತ್ರ ಪ್ರದರ್ಶನೇನೈವಾಲಂ ಇತಿ ನಾತ್ರಾಧಿಕಂ ಪ್ರಯತ್ಯತೇ ॥ ಅಧಿಕ ವಿಚಾರಸ್ತು-ರಸರಂಜನ್ಯಾಂ ಧ್ಯಾನಪ್ರಕ್ರಿಯಾಯಾಂ ದ್ರಷ್ಟವ್ಯಃ ॥ ೪ ॥

**ಕನ್ನಡಾರ್ಥ**

"ಪರ್ವತಾಗ್ರೇ ನದೀತೀರೇ" ೧. ಬ್ರಾಹ್ಮೇ ಮುಹೂರ್ತೇ ಚೋತ್ಥಾಯ" ಎಂದು ಮುಂತಾದ ವಚನಗಳು. "ಪರ್ವತಾಗ್ರ ನದೀತೀರ" ಮುಂತಾದ ದೇಶಗಳೂ ಬ್ರಾಹ್ಮ ಮುಹೂರ್ತ ಮುಂತಾದ ಕಾಲವಿಶೇಷ ಗಳೂ ಧ್ಯಾನೋಪಾಸನೆಗೆ ನಿಯತವಾಗಿ ಬೇಕಾಗಿರುವವು" ಎಂದು ಹೇಳುತ್ತವೆ. ಆದುದರಿಂದ "ಆಸನ ನಿಯಮಗಳಂತೆ ದೇಶಕಾಲಗಳ ನಿಯಮಗಳೂ ಇರುತ್ತವೆ." ಆದುದರಿಂದ "ಸರ್ವ ದೇಶವು ಪುಣ್ಯದೇಶವು"; "ಸರ್ವಕಾಲವು ಪುಣ್ಯ ಕಾಲವು" ಎಂದು ದಾಸವರ್ಯರು ಹೇಗೆ ನಿರೂಪಿಸಿದರು? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ. "ಈ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು." ಬ್ರಹ್ಮಸೂತ್ರ ನಾಲ್ಕನೆಯ ಅಧ್ಯಾಯ ಒಂದನೆಯ ಪಾದದ ೧೧ನೆಯ ಸೂತ್ರ ಓಂ "ಯತ್ರೈಕಾಗ್ರತಾ ತತ್ರಾ ವಿಶೇಷಾತ್" ಓಂ॥ "ಯಾವ ದೇಶ ಕಾಲಗಳಲ್ಲಿ ಮನಸ್ಸು ಏಕಾಗ್ರತೆಯನ್ನು ಪಡೆಯುವದೋ ಆ ದೇಶ ಕಾಲಗಳಲ್ಲಿ ಆಸನಾರೂಢನಾಗಿ ಧ್ಯಾನ ಮಾಡಬೇಕು; ದೇಶ ಕಾಲ ಗಳಿಂದ ಧ್ಯಾನಜ್ಞಾನಗಳಲ್ಲಿ ಒಂದು ಅತಿಶಯವು ಬಾರದು. ಚಿತ್ತೈಕಾಗ್ರತೆ ಯುಂಟಾಗುವ ದೇಶ ಕಾಲಗಳಲ್ಲೆಲ್ಲವೂ ಮನಸ್ಸು ಪ್ರಸನ್ನವಾಗಿ ಏಕಾಂತತೆ ಯನ್ನು ಪಡೆಯುವದು; ಹೊರತಾಗಿ ಧ್ಯಾನಜ್ಞಾನಗಳಲ್ಲಿ ಆಧಿಕ್ಯವು ಉಂಟಾಗ ಲಾರದು" ಎಂದು ಹೇಳಿ; "ನದೀತೀರ-ಪರ್ವತಾಗ್ರ ಬ್ರಾಹ್ಮಕಾಲ" ಮುಂತಾದ ದೇಶಕಾಲಗಳೇ ಬೇಕೆಂಬ ನಿಯಮವನ್ನು ಸೂತ್ರಭಾಷ್ಯದಲ್ಲಿ ನಿರಾಕರಿಸಿರು ತ್ತಾರೆ. ಆದುದರಿಂದ ಪರಮಾತ್ಮನಲ್ಲಿ ಚಿತ್ತವು ಪ್ರಸನ್ನತೆಯನ್ನು ಪಡೆಯುವ ದೇಶ ಕಾಲಗಳೆಲ್ಲವೂ ಪುಣ್ಯ" ಎಂಬ ಅಭಿಪ್ರಾಯವನ್ನು ಹೃದಯದಲ್ಲಿಟ್ಟು ಕೊಂಡು "ಸರ್ವ ದೇಶವು ಪುಣ್ಯ" ಎಂದು ನಿರೂಪಿಸಿರುತ್ತಾರೆ. ಉತ್ತಮ ಅಧಿಕಾರಿಗಳಿಗೆ ದೇಶ ಕಾಲಗಳಿಂದ ಯಾವ ವಿಶೇಷವೂ ದೊರೆಯುವುದಿಲ್ಲ;

ಎಲ್ಲ ದೇಶ ಕಾಲಗಳಿಂದ ಧ್ಯಾನಗಳಲ್ಲಿ ಸಮಾನ ಫಲ"ವೆಂಬುದಾಗಿ ಪ್ರಮಾಣಗಳೂ ಇರುತ್ತವೆ. ಮತ್ತು ಸರ್ವವನ್ನೂ ವ್ಯಾಪಿಸಿರುವದರಿಂದ ಅಂತರ್ಯಾಮಿಯಾಗಿರುವದರಿಂದ "ಸರ್ವ" ಎಂದು ಪರಮಾತ್ಮನಿಗೆ ಕರೆಯುತ್ತಾರೆ. ಜ್ಞಾನವನ್ನು ದಿಶ–ಕೊಡುವದರಿಂದ ದೇಶವೆಂದು ಪರಮಾತ್ಮನಿಗೆ ಹೆಸರು. ಪುಣ್ಯವನ್ನೊದಗಿಸಿ ಕೊಡುವದರಿಂದ ಪುಣ್ಯವೆಂದು ಹೆಸರು. ಇಷ್ಟವನ್ನು ಒದಗಿಸಿ ಕೊಡುವದರಿಂದ ಕಾಲವೆಂದು ಹೆಸರು. ಹೀಗೆ ಎಲ್ಲ ದೇಶ ಕಾಲಗಳಲ್ಲಿ ಶ್ರೀರಮಣ–ಹರಿಯನ್ನು ಅನುಸಂಧಾನದಿಂದ ಉಪಾಸಿಸುವವರಿಗೆ ಎಲ್ಲ ದೇಶ ಕಾಲಗಳು ಪುಣ್ಯಕಾರಕಗಳೇ ಆಗಿರುತ್ತವೆ. ಮತ್ತು "ಯಾವ ದೇಶದಲ್ಲಿ ಸತ್ಪಾತ್ರವು.—ಪಾತ್ರರಾದ ಯೋಗ್ಯ ಅಧಿಕಾರಿಗಳು ಸಜ್ಜನರು ಇರುವರೋ ಸಿಗುವರೋ ಆ ದೇಶವೇ ಪುಣ್ಯತಮ ದೇಶವು" ಎಂದೂ ಪ್ರಮಾಣಗಳಿರುತ್ತವೆ.

"ಸರ್ವ ಜೀವರು ದಾನಪಾತ್ರರು" ಎಂಬಲ್ಲಿ ವಿಶೇಷ. ಜೀವರೆಲ್ಲರೂ ಪರಮಾತ್ಮನ ಪ್ರತಿಬಿಂಬರು. ಆದರೂ "ಪರಮಾತ್ಮನಿಗೆ ನಿತ್ಯದ್ವೇಷಮಾಡುವ ಮಾಯಾವಾದಿಗಳು. ಅತಿ ಅಧಮರು. ತಾಮಸರು" ಎಂದು ಅನೇಕ ಶ್ರುತಿ ಸ್ಮೃತಿಗಳು ಮಾಯಿಗಳನ್ನು (ಮಾಯಾವಾದಿಗಳನ್ನು) ದೂಷಿಸುವದುಂಟು. ಪರಮಾತ್ಮನ ನಿಂದಕರನ್ನು ನಿಂದಿಸದವರಿಗೆ ಪರಮಾತ್ಮ ನಿಂದಕರಿಗಾಗುವ ದುಃಖದಕಿಂತಲೂ ಅಧಿಕವಾದ ದುಃಖವಾಗುತ್ತದೆ." "ಕೇವಲ ವಿದ್ಯೆಯಲ್ಲಿಯೇ ನಿರತರಾಗಿ ಅನ್ಯಥಾ ಜ್ಞಾನವನ್ನೂ ಆ ಅನ್ಯಥಾ ಜ್ಞಾನಿಗಳನ್ನೂ ನಿಂದಿಸವೇ ಇರುವವರಿಗೆ ಅನ್ಯಥಾ ಜ್ಞಾನಿಗಳಿಗಿಂತಲೂ ಅಧಿಕವಾದ ತಮಸ್ಸು ಆಗುತ್ತದೆ." "ವಿದ್ಯೆ–ಯಥಾರ್ಥ ಜ್ಞಾನದಿಂದ ಬೇರೆ ಫಲವುಂಟು. ಅನ್ಯಥಾ ಜ್ಞಾನ–ಅನ್ಯಥಾ ಜ್ಞಾನಿಗಳನ್ನು ನಿಂದಿಸುವದರಿಂದ ಬೇರೆ ಬೇರೆ ಪ್ರಯೋಜನಗಳಿರುತ್ತವೆ." ಪರಮಾತ್ಮನ ಗುಣಗಳನ್ನೂ ಇನ್ನೊಬ್ಬರ ಗುಣ-ಸ್ವತ್ವವನ್ನೂ ನನ್ನದೆಂದು ಆರೋಪಿಸಿಕೊಳ್ಳುವ ಮಾಯಾವಾದಿ ಚೋರನಿಗೆ ಕದ್ದದ್ದು ಸುಳ್ಳು ಎಂದು ಹೇಳುವಾಗ, "ಎಲ್ಲವೂ ಸುಳ್ಳು" ಎಂದು ಹೇಳುವಾಗ ಕಶಾವೇತ್ರ–ಬೆತ್ತ–ಚಾಟಿಗಳಿಂದ ಪ್ರಹಾರವು ಅವನಿಗೆ ಉತ್ತರವನ್ನೀಯುತ್ತವೆ." "ಅನಂತ ದೋಷಗಳಿಂದ ದುಷ್ಟವಾದುದರಿಂದ ಮಾಯಾವಾದಿ ಮತವು ತ್ಯಾಜ್ಯ-ತಿರಸ್ಕರಣೀಯವಾಗಿದೆ." ಈ ಮಾಯಾವಾದಿ ಮತಾವಲಂಬಿಗಳಾದ ಆತ್ಮಘಾತಿಗಳು ದುಃಖದಿಂದ ದಳ್ಳುರಿಯುತ್ತಿರುವ ಅಂಧಂತಮಸ್ಸಿ

ನಿಂದ ತುಂಬ ಆವೃತವಾಗಿರುವ ತಾಮಸ ಸ್ಥಾನಗಳನ್ನು ಹೊಂದುತ್ತಾರೆ." "ಮಾಯಾವಾದಿಯು ಯಾವಾಗಲೂ ದುರ್ಘಟವಾದ ಆಭರಣಗಳಿಂದ ಅಲಂಕಾರವನ್ನು ಹೊಂದುತ್ತಾನೆ. ಅಂದರೆ ಯಾರಿಗೂ ಯಾವಾಗಲೂ ಘಟಿಸಲಶಕ್ಯವಾದುದೇ ಅವನಿಗೆ ಆಭರಣವಾಗಿರುತ್ತದೆ. ದುರ್ಘಟವಾದ ಅವಿದ್ಯಾ ಆಭರಣಾಲಂಕೃತನಾದ ಮಾಯಾವಾದಿಗೆ ಎರಡು ವಸ್ತ್ರಗಳು ಬೇಕು. ಅವು ಯಾವವೆಂದರೆ "ಒಂದು-ಅಂಧಂತಮಸ್ಸು; ಎರಡು-ಅದರಿಂದಾಗುವ ನಿತ್ಯ ದುಃಖ. ಹೀಗೆ ಎರಡು ವಸ್ತ್ರಗಳಿರುತ್ತವೆ." ಈಶ ಶಕ್ತಿಯು ಅಚಿಂತ್ಯವಾದುದರಿಂದ ಮಹೋನ್ಮತ್ತರಾದ ಕುವಾದಿಗಳಿಂದ ಈ ಮಾಯಾವಾದ ಮತವು ಪ್ರವರ್ತಿತವಾಗಿರುತ್ತದೆ." "ಪರಮಾತ್ಮನು ಸರ್ವಥಾ ಯಾವ ಶಬ್ದದಿಂದಲೂ ವಾಚ್ಯನಲ್ಲ; ಅವಾಚ್ಯನು" ಎಂದು ಹೇಳಿ ; "ವೇದಗಳಿಂದ ಪರಮಾತ್ಮನಿಗೆ ಸರ್ವಶಬ್ದ ಸಮನ್ವಯವುಂಟು ; ಅದರಲ್ಲಿಯೂ ಲಕ್ಷಣಾವೃತ್ತಿಯಿಂದ ವೇದಗಳು ಪರಮಾತ್ಮನನ್ನು ಹೇಳುವವು" ಎಂದು ಮುಂತಾಗಿ ತನ್ನ ಮಾತಿಗೆ ವಿರುದ್ಧವಾದ ನುಡಿಯನ್ನು ನುಡಿಯಲು ಹೇಗೆ ನಾಚಿಕೆಯು ತನಗೆ ಬರುವದಿಲ್ಲವೋ !" "ನಾನು ಮೂಕನು" ಎಂದು ತನ್ನ ಕ್ರಿಯಾ ವಚನಗಳಿಗೆ ಪರಸ್ಪರ ವಿರುದ್ಧವಾಗುವಂತೆ ನುಡಿಯಲು ಹೇಗೆ ನಾಚಿಕೆಯಿಲ್ಲವೋ !" "ಮಾಯಾವಾದವು ಉನ್ಮತ್ತ ವಾಕ್ಯವಾಗಿರುವದರಿಂದ ಬುಧರಿಂದ ಆದರಣೀಯವಲ್ಲ." "ಮಾಯಾವಾದಿಯ ಶರೀರ ಸ್ಪರ್ಶವನ್ನು ಪಡೆದ ಶರೀರದ ಭಾಗವನ್ನು ಪಾಪ ಪ್ರಾಯಶ್ಚಿತ್ತ ರೂಪವಾಗಿ ದಹಿಸಿ (ಸುಟ್ಟು) ಬಿಡಬೇಕು." ಅವರು ಅಂಧಂತಮಸ್ಸಿನಲ್ಲಿ ದುಃಖದಿಂದ ಮೂರ್ಛಿತರಾಗುತ್ತಾರೆ. "ಮಾಯಾವಾದಿಯು ಸಿಕ್ಕಂತೆ ಕೂಗುವ ಗರ್ದಭನು." "ವಿಷ್ಣು-ವೈಷ್ಣವ ದ್ವೇಷಿಯಾದ ಮಾಯಾವಾದಿಗೆ ಒಂದು ಬಿಂದು ಜಲವನ್ನೂ ಸಹ ಕೊಡಕೂಡದು; ಅವನಿಗೆ ಅನ್ನವನ್ನೇಕೆ ? ಅಕ್ಕಿಯನ್ನೂ ಕೊಡಕೂಡದು." "ಕಾಲಡಿ ಗ್ರಾಮದಲ್ಲಿ ಹುಟ್ಟಿದ ಸಂಕರನ ಕಪೋಲಗಳಲ್ಲಿ ಪಾದವನ್ನಿಟ್ಟು ಮುಖದಲ್ಲಿ ಮಲಮೂತ್ರವನ್ನು ವಿಸರ್ಜಿಸುವೆ." "ಮಾಯಾವಾದಿಯು ತಾಯಿಗಂಡ ! ಅವನಿಗೆ "ಮಾತೃಗಾಮಿ" ಎಂಬ ದೋಷದ ಬೈಗಳೇ ಬೇಕೇನೊ ?" "ಅಂಧಂತಮಸ್ಸಿನ್ನಾರಿಗೆ" ಎಂದು ಮುಂತಾಗಿರುವ ಅನಂತಾನಂತ ಶ್ರುತಿ ಸ್ಮೃತಿ ಪುರಾಣ ವಚನಗಳಂತೆ ಅನೇಕ ದಾಸವರ್ಯರ ಪ್ರಾಕೃತ ಸ್ಮೃತಿ ವಚನಗಳಿರು

ವದರಿಂದ ಮಾಯಾವಾದಿ ಮಿಥ್ಯಾವಾದಿಗಳಂತಹ ಅಪಾತ್ರರೂ ಅಯೋಗ್ಯರೂ ಬೇರೆ ಯಾರೂ ಈ ಜಗತ್ತಿನಲ್ಲಿ ಸಿಗಲಾರರು. ಇನ್ನು ಸರ್ವಜೀವರು ದಾನ ಪಾತ್ರರೆಂದು ಹೇಳಿದರೆ ಜೀವರಲ್ಲಿ ಸೇರಿರುವ ಮಾಯಾವಾದಿ ಜೀವರೂ ಸಹ ದಾನಪಾತ್ರರೆಂದು ದಾಸರಾಯರ ಅಭಿಪ್ರಾಯವು ಆಪಾತತಃ ತೋರುತ್ತದೆ. ಹೀಗೆಯೇ ಅಭಿಪ್ರಾಯವೆಂದು ಒಪ್ಪಿದರೆ ಮೇಲೆ ಹೇಳಿದ ಶ್ರುತಿ ಸ್ಮೃತಿ ಪುರಾಣ ವಚನಗಳಿಂದಲೂ, ಪ್ರಾಚೀನ-ಸ್ವೋತ್ತಮ-ಪುರಂದರ-ವಿಜಯ ಮುಂತಾದ ದಾಸವರೇಣ್ಯ ವಚನಗಳಿಂದಲೂ ಅದರಂತೆ ಉಪಾಸಿಸುವ ಅವರ ಆಚಾರದಿಂದಲೂ ವಿರೋಧವು ಉಂಟಾಗುತ್ತದೆ. ಆದುದರಿಂದ ಮಾಯಾ ವಾದಿಗಳಿಗೆ ಅನ್ನವನ್ನು ದಾನಮಾಡಬಹುದೇ ? ಅವರು ಆ ದಾನಕ್ಕೆ ಪಾತ್ರರೇ! ಎಂಬ ದೊಡ್ಡ ಆಕ್ಷೇಪವು ಬರುತ್ತದೆ.

ಈ ಆಕ್ಷೇಪಕ್ಕೆ ಹೀಗೆ ಸಮಾಧಾನವನ್ನು ಹೇಳುತ್ತೇವೆ:—

"ಸರ್ವರೂ ದಾನಪಾತ್ರರು" ಎಂಬ ವಚನವು ಅಪರೋಕ್ಷಿಗಳಿಗೆ (ಅಪರೋಕ್ಷ ಜ್ಞಾನಿಗಳು) ಸಂಬಂಧಿಸಿರುವದೇ ಹೊರತಾಗಿ ಮಿಕ್ಕವರಿಗಿಲ್ಲ. ಸರ್ವರಿಗೂ ದಾನಪಾತ್ರತೆ ಇರುವದೆಂದು ಈ ವಚನದ ನಿಜಾಭಿಪ್ರಾಯವೂ ಅಲ್ಲ. ಹಾಗೆ ಈ ವಾಕ್ಯದಿಂದ ಸರ್ವರಿಗೂ ದಾನಪಾತ್ರತೆಯಿದೆ ಎಂದು ಒಪ್ಪಿ ಹೇಳಿದರೆ ಹಿಂದಿನ ವಚನಗಳಿಂದ ವಿರೋಧವು ಬರಬಹುದು. ಆದುದರಿಂದ ಹೀಗೆ ಅಭಿಪ್ರಾಯವನ್ನು ಕಲ್ಪಿಸಕೂಡದು. ಬಹಿರಂಗದಲ್ಲಿ ಭಸ್ಮರುದ್ರಾಕ್ಷತಾ ಗಳಿಂದ ಯುಕ್ತರಾಗಿ ಅದ್ವೈತಿಗಳಂತೆ ಕೆಲವು ಸಜ್ಜನರು ಆಪಾತತಃ ತೋರು ತ್ತಿದ್ದರೂ ಅಪರೋಕ್ಷಿಗಳಾದ ಮಹಾತ್ಮರುಗಳನ್ನು "ವಿಷ್ಣು ಹಾಗೂ ವೈಷ್ಣವರ ಪ್ರೀತಿಯಾಗಲೆಂದು ದಾನದಿಂದ ಸಂತೋಷಪಡಿಸಿರುವದರಿಂದ ಅಂಥವರು ಅಂತರಂಗದಲ್ಲಿ ಶ್ರೀ ಹರಿಯ ಭಕ್ತರೆಂದೇ ಹೇಳಬೇಕು. "ಜೀವನೇ ಪರಮಾತ್ಮಾ" ಇತ್ಯಾದಿ ವಿಷಯದಲ್ಲಿ ದೀರ್ಘ-ದೃಢವಾದ ಆಗ್ರಹ ಮುಂತಾ ದವುಗಳು ಅಂತರಂಗದಲ್ಲಿ ಅವರಿಗೆ ಇರುವದಿಲ್ಲ. ಆದುದರಿಂದಲೇ "ಬಿಲ್ವ ಮಂಗಲಃ ಸಾಧುಃ" ಎಂದು ಮುಂತಾಗಿ ಹೇಳಿದಂತೆ ೬೦ ಸಾಧು ಜನರು ಗಳೆಂದು ಪ್ರಸಿದ್ಧರಾಗಿರುತ್ತಾರೆ. ಆದುದರಿಂದ ಜ್ಞಾನಿಗಳನ್ನು ದಾನಪಾತ್ರ ರೆಂದು ತಿಳಿದು ಆದರಿಸುವವರೆಲ್ಲರೂ ಯೋಗ್ಯರು-ಅವರು ಅನ್ನದಾನ ಮುಂತಾ ದವುಗಳಿಗೆ ಪಾತ್ರರು. ಪರರ ಪ್ರಾಣವಿಯೋಗ ಸಮಯದಲ್ಲಿ ಅವರಿಗೆ

ಸಹಾಯಮಾಡಿ ಬದುಕಿಸಿ, “ ‘ಸೋಹಂ’ ಎಂದು ಉಪಾಸಿಸುತ್ತಾನೆ” ಎಂದು ತಿಳಿದರೂ ಸಹ “ಮಾಯಿಗಳು-ಗೋ ಮಾಯುಗಳು” ಎಂದು ಶ್ರೀ ಹರಿಯ ಹಾರ್ದಿಕ ರಹಸ್ಯವನ್ನು ತಿಳಿದು ಒಮ್ಮೊಮ್ಮೆ ಅವರಿಗೆ ಅನ್ನವನ್ನೂ ಕೊಡ ಬಹುದು. ಆದರೆ ಅಲ್ಲಿರುವ ಅನ್ನವಿತರಣವು ವಿಧಿಪುರಃಸರವಾದ ಅನ್ನದಾನ ವೆನಿಸವೇ ಕೇವಲ “ಅವನಿಗೆ ತನ್ನ ಕೈಯಿಂದ ಅನ್ನವನ್ನು ಮಾತ್ರ ಹಾಕು ವದು” ಎಂದು ಎನಿಸಿಕೊಳ್ಳುತ್ತದೆ. ಅವರಿಗೆ ನಿಜವಾದ ವಿಧಿಪೂರ್ವಕವಾದ ದಾನವೆಂದರೆ ಪರಮಾತ್ಮನಿಗೆ ಅವರು ಐಕ್ಯೋಪಾಸನೆಯಿಂದ ದ್ವೇಷಿಸುವದ ರಿಂದ ಅವರ ಮತವನ್ನು ಸಭೆಗಳಲ್ಲಿ ಖಂಡ್ರಿಸಿ ಹಿಂದೆ ಹೇಳಿದಂತೆ ತಿರಸ್ಕಾರ ತೋರಿಸುವದೇ ದಾನವೆನಿಸಿಕೊಳ್ಳುತ್ತದೆ. ವಿಜಯರಾಯರು ನಿಂದಕರನ್ನು ನಿಂದಿಸುವದೇ ಹಬ್ಬ” ಎಂದು ಸುಳಾದಿಯಲ್ಲಿ ಹೇಳಿರುತ್ತಾರೆ. ವಿಜಯಧ್ವಜ ತೀರ್ಥ ಶ್ರೀಮಚ್ಚರಣರು—“ಭಕ್ತ ಅಧಮ-ವರಿಧಮರುಗಳಿಗೆ ದಾನವೆಂದರೆ ಸುಖದುಃಖ ಮಿಶ್ರಫಲಗಳನ್ನು ವಿತರಿಸುವದು.” ಎಂದು ಹೇಳಿರುತ್ತಾರೆ. ಜಗನ್ನಾಥದಾಸರು ಹೇಳಿದ ವಾಕ್ಯವು ಮೇಲೆ ಹೀಗೆ ತೋರುವದಾದರೂ ಬಹಳ ಅರ್ಥಗರ್ಭಿತವಾಗಿರುತ್ತದೆ. ಹೀಗೆ ಅನೇಕ ವಿಷಯಗಳ ಸಂಬಂಧಿ ಯಾದ ಬಹು ವಿಚಾರಗಳು ಅಲ್ಲಲ್ಲಿ ಇರುತ್ತವೆ. ಅವುಗಳನ್ನೆಲ್ಲ ಬರೆಯುತ್ತ ಹೋದರೆ ಗ್ರಂಥ ವಿಸ್ತಾರವಾಗುವದು. ಇದರಿಂದ ಒಮ್ಮೊಮ್ಮೆ ಜನರ ರುಚಿಯು ತಪ್ಪಬಹುದೆಂದು ಹೆಚ್ಚಿನ ವಿಚಾರಗಳನ್ನು ಇಲ್ಲಿ ಬರೆಯ ಬಯಸು ವದಿಲ್ಲ. ಹೆಚ್ಚಿನ ವಿಚಾರವನ್ನು “ರಸರಂಜಿನೀ”ಯಲ್ಲಿ ಧ್ಯಾನಪ್ರಕ್ರಿಯಾದಲ್ಲಿ ನೋಡಬಹುದು. ॥ ೪ ॥

**ಅವತರಣಿಕಾ:** ಮತ್ತು ಇಂತಹ ಸುಜ್ಞಾನಿಗಳ ದೇಹಗಳಲ್ಲಿ ಸಮಸ್ತ ನವ ಕೋಟ್ಯಾಭಿಮಾನಿ ದೇವತೆಗಳು ತುಂಬಿಹರೆಂದೂ ಜ್ಞಾನಿಗಳಾದವರ ದೇಹವೇ ಸುಕ್ಷೇತ್ರವೆಂಬುದನ್ನು ಪದ್ಯ ೬ರಲ್ಲಿ ನಿರೂಪಿಸುತ್ತಾರೆ.

ಮೂಲ :

**ದೇವಖಾತ ತಟಾಕ ವಾಪಿ ಸ ।**
**ರೋವರಗಳಭಿಮಾನಿ ಸುರರು ಕ ।**
**ಳೇವರದೊಳಗಿಹ ರೋಮಕೂಪಗಳೊಳಗೆ ತುಂಬಿಹರು ॥**

**ಆವಿಯದ್ಗಂಗಾದಿ ನದಿಗಳು ।**
**ಭಾವಿಸುವದೆಪ್ಪತ್ತೆರಡೆನಿಪ ।**
**ಸಾವಿರ ಸುನಾಡಿಗಳೊಳಗೆ ಪ್ರವಹಿಸುತಲಿಹವೆಂದು ॥ ೫ ॥**

**ಪದ್ಯಾರ್ಥ:** ದೇವಖಾತ=ದೇವತೆಗಳು ವಿಹರಿಪ ಕೆರೆಗಳು, ದಂಡಿ ಇಲ್ಲದ ತಟಾಕಗಳು, ವಾಪಿ=ಬಾವಿಗಳು, ಸರೋವರಗಳು=ಸರಸ್ಸು ಕೊಳಗಳು, ಇವುಗಳಿಗೆಲ್ಲ ಅಭಿಮಾನಿ ಸುರರು ದೇವತೆಗಳು, ರೋಮಕೂಪಗಳೊಳಗೆ ತುಂಬಿಹರು, ತ್ರಿಕೋಟಿ ರೋಮಕೂಪಗಳಲ್ಲಿ ಮಾರುತಾಂತರ್ಯಾಮಿಯಾದ ಹರಿರೂಪ ಯುಕ್ತವಾಗಿಹರು, ಆವಿಯದ್ಗಂಗಾದಿ ನದಿಗಳು=ಆಕಾಶ ಹೊಳೆಯಾದ ಭಾಗೀರಥಿ ಗಂಗಾದಿ ನದಿಗಳು, ಎಪ್ಪತ್ತೆರಡು ಸಾವಿರದ ನಾಡಿಗಳೊಳಗೆ, ಪ್ರವಹಿಸುತ್ತಲಿರುವವೆಂದು, ಭಾವಿಸುವದು=ತಿಳಿಯುವದು.

**ದ್ರೌಪದೀಶ ಪತಿವಿಠಲರು:** ದೇವಖಾತ ತಟಾಕವಾಪಿ ॥ ರೋಮಕೂಪದಲ್ಲಿದ್ದಂಥಾ ತೀರ್ಥಾಭಿಮಾನಿ ದೇವತೆಗಳು ೭೨೦೦೦ ನಾಡಿಗಳಲ್ಲಿ ಗಂಗಾದಿ ನದಿಗಳು ನದ್ಯಾಭಿಮಾನಿಗಳು ಪ್ರವಹಿಸುತಲಿಪ್ಪರು.

**ಭಾವಸೂಚನ:** ದೇವೇತಿ ॥ ನಿರ್ಜನಾರಣ್ಯಗತಃ ವಿಯದ್ಗಂಗಾ=ಭಾಗೀರಥೀ ॥ ॥

**ವಿಶೇಷ ಸೂಚನೆ :** ತಟಾಕ-ಸರೋವರ-ವಾಪಿಕೂಪ-ನದ್ಯಾದಿಗಳ ಅಭಿಮಾನಿ ದೇವತೆಗಳು ಆರಾರು ಇರುವರೆಂದು ಶ್ರೀ ವಿಜಯದಾಸರು ಸುಳಾದಿಯಲ್ಲಿ ಯಾವ ರೂಪಗಳು ಹೇಳಿದ್ದಾರೆ.—ಸರೋವರದಲ್ಲಿ ದತ್ತಾತ್ರಯ, ದೇವಖಾತದಲ್ಲಿ ಗದಾಧರ, ತಟಾಕದಲ್ಲಿ ಉರುಗಶಾಯಿ ಅಚ್ಯುತಾತ್ಮಕದೇವ, ವಾಪಿಯಲ್ಲಿ ಸಾಸಿರ ಅರಿಧರ, ಕೂಪದಲ್ಲಿ ನಾರಾಯಣ ಹೀಗೆ ಹರಿಯ ರೂಪ ಚಿಂತಿಸಬೇಕು. ತಾರತಮ್ಯ ಸುಳಾದಿ ೨೭, ಪುಟ ೧೫೫.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**



"ದೇವ" ಇತಿ ॥ "ಅಂಶದ್ವಯೇನ ದೇವಾಶ್ಚ ಗಂಗಾದ್ಯಾಃ ಸರಿತಃ ತಥಾ ॥ ರೋಮಕೂಪಂ ಗತಾಸ್ತ್ವಾದ್ಯಾಃ ದ್ವಾಸಪ್ತತಿ ಸುನಾಡಿಗಾಃ ॥" ಇತಿ ನಾಡೀ ಕಲ್ಪಲತಾಯಾಮ್ ॥ ೫ ॥

**ಕನ್ನಡಾರ್ಥ**

ಸಕಲ ತೀರ್ಥಾಭಿಮಾನಿ ದೇವತೆಗಳು ಈ ಶರೀರದ ರೋಮಕೂಪಗಳ

ಲ್ಲಿಯೂ, ೭೨೦೦೦ ನಾಡಿಗಳಲ್ಲಿಯೂ ಇರುತ್ತಾರೆಂದು ಈ ಪದ್ಯದಿಂದ ಹೇಳುತ್ತಾರೆ. "ಗಂಗಾದಿ ನದೀದೇವತೆಗಳೂ ತೀರ್ಥಾಭಿಮಾನಿ ದೇವತೆಗಳೂ ಎರಡು ಅಂಶಗಳಿಂದ ರೋಮಕೂಪಗಳಲ್ಲಿಯೂ ೭೨೦೦೦ ನಾಡಿಗಳಲ್ಲಿಯೂ ಇರುತ್ತಾರೆ" ಎಂದು ಹೇಳುವ "ನಾಡೀ ಕಲ್ಪಲತಾ" ಎಂಬ ಗ್ರಂಥದ ವಚನವು ವಿವೃತವಾಗಿರುತ್ತದೆ. ‖ ೫ ‖

**ಅವತರಣಿಕಾ:** ರೋಮಕೂಪದಲ್ಲಿರುವ, ಮಾರುತಾಂತರ್ಯಾಮಿ ಮಾಧವನ ರೂಪಗಳನ್ನೂ, ಮತ್ತು ಎಪ್ಪತ್ತೆರಡು ಸಾವಿರ ನಾಡಿಗತ ಭಗವದ್ರೂಪಗಳನ್ನೂ ತಿಳಿದವರೆ ಸುರರು. ಇಂತಹ ಜ್ಞಾನಿಗಳ ದೇಹವೇ ಕ್ಷೇತ್ರವೆಂದು ನಿರೂಪಿಸುತ್ತಾರೆ.

ಮೂಲ :

**ಮೂರು ಕೋಟಿಯು ಮೇಲೆ ಶೋಭಿಪ ।**
**ಈರಧಿಕ ಎಪ್ಪತ್ತುಸಾವಿರ ।**
**ಮಾರುತಾಂತರ್ಯಾಮಿ ಮಾಧವ ಪ್ರತಿದಿವಸದಲ್ಲಿ ‖**
**ತಾ ರಮಿಸುತಿಹನೆಂದು ತಿಳಿದಿಹ ।**
**ಸೂರಿಗಳು ದೇವತೆಗಳವರ ಶ ।**
**ರೀರವೇ ಸುಕ್ಷೇತ್ರ ಅವರರ್ಚನೆಯೆ ಹರಿಪೂಜೆ ‖ ೬ ‖**

**ಪದ್ಯಾರ್ಥ:** ಮೂರು ಕೋಟಿಯು ಮೇಲೆ ಶೋಭಿಪ, ಈರಧಿಕ ಎಪ್ಪತ್ತುಸಾವಿರ=ಮೂರು ಕೋಟಿ ರೋಮಕೂಪಗಳು ಮತ್ತು ೭೨ ಸಾವಿರ ನಾಡಿಗಳಲ್ಲಿಯೂ, ಇಂತು ೩ ಕೋಟಿ + ೭೨ ಸಾವಿರ, ಮಾರುತಾಂತರ್ಯಾಮಿ=ಕಪಿಲನಾಮಕ ಭಗವಂತನಿಂದ ಜನಿಸಿದ ವಾಯುದೇವರ ಮೂರು ಕೋಟಿ ರೂಪಗಳಲ್ಲಿ ಅಂತರ್ಯಾಮಿಯಾದ ಮಾಧವನು, ಎಪ್ಪತ್ತೆರಡುಸಾವಿರ ನಾಡಿಗಳಲ್ಲಿಯೂ ಇರುತ್ತಾನೆ. "ದೇಹೆ ತ್ರಿಕೋಟ್ಯರ್ಧರೂಪಾ ರೋಮಕೂಪಾ, ಭವಂತಿಹಿ । ಹಿಂಕಾರ ನಾಮಕಸ್ತೇಷು ವ್ಯಾಪ್ತ ಪ್ರದ್ಯುಮ್ನಕೋಹರಿ, ಸಾರ್ಧ ತ್ರಿಕೋಟಿ ತೀರ್ಥಾನಿ ರೋಮಕೂಪಾಸ್ಥಿತಾನಿಚ ತನ್ನಿಯಾಮಕರೂಪಾಣಿ ಚಿಂತನೀಯಾನಿ ಚಕ್ರಿಣಃ ‖ (ಮಾನಸ ಸ್ಮೃತಿ) ಹೀಗೆ ಮಾರುತಾಂತರ್ಯಾಮಿ ಚಕ್ರಧಾರಿಯಾದ ಪ್ರದ್ಯುಮ್ನ ರೂಪಗಳನ್ನು ಚಿಂತಿಸಬೇಕೆಂದು ಛಾಂದೋಗ್ಯದಲ್ಲಿ ಹೇಳಿದೆ. ಹೀಗೆ ಪ್ರದ್ಯುಮ್ನಾಭಿನ್ನಮಾಧವ

ರಮಾವಲ್ಲಭನು, ತಾ ರಮಿಸುತಿಹನೆಂದು=ತಾನು ಇಷ್ಟು ರೂಪಗಳಿಂದ ವಿಹಾರ ಮಾಡುತ್ತಿರುವನೆಂದು ತಿಳಿದಿಹ ಸೂರಿಗಳು=ಹೀಗೆ ತಿಳಿದ ಜ್ಞಾನಿಗಳು, ದೇವತೆಗಳು, ಮಾನವರಲ್ಲ, ಅವರ ಶರೀರವೇ ಸುಕ್ಷೇತ್ರವು=ಹೀಗೆ ನಿತ್ಯ ಚಿಂತಿಸುವ ಜ್ಞಾನಿಗಳ ಶರೀರವು ಪುಣ್ಯಕ್ಷೇತ್ರವಾದುದು. ಅವರರ್ಚನೆಯೆ ಹರಿಪೂಜೆ. ಇಂಥ ಜ್ಞಾನಿಗಳ ಪೂಜಾ ಮಾಡುವದೇ ಶ್ರೀ ಹರಿಯ ಪೂಜೆಯು.

**ವಿಶೇಷ ಸೂಚನೆ:** ಹರಿಭಕ್ತರ ಶರೀರವೇ–ಕುರುಕ್ಷೇತ್ರ. ಹೃದಯವೇ–ಕಾಶಿ, ಸನ್ನಿಧಾನಮನಃ–ಮಣಿಕರ್ಣಿಕಾ, ತುತಿಸುವ ಮನವೇ–ಅಯೋಧ್ಯಾ, ವದನ–ವೈಕುಂಠ, ನಯನ–ದ್ವಾರಾವತಿ, ಮೂಗು–ಮಥುರಾ, ಕಿವಿ–ಕೇದಾರ, ಶಿರ–ಬದರಿ, ಚರಣ–ಮಾಯಾವತಿ, ಕರಗಳು–ಕಂಚಿ, ಹರಿಭಕ್ತರ ಅಂಗಸಂಗವೇ ಅಂಗಸಾಯುಜ್ಯವೆಂದು "ಹರಿಭಕ್ತರ ಶರೀರವೇ ಸುಕ್ಷೇತ್ರ" ಗಳೆಂದು ದಾಸರ ವಚನ ನಂಬಿರಿ.

**ದ್ರೌಪದೀಶ ಪತಿವಿಠಲರು :** ಮೂರು ಕೋಟಿಯ ಮೇಲೆ ಶೋಭಿಪ ||

**ಭಾವಸೂಚನ :** ಮೂರೇತಿ || ನಾದ್ಯಂತರ್ಗತೈಃ ಸಹ ದ್ವಾಸಪ್ತತ್ಯುತ್ತರ ತ್ರಿಕೋಟ್ಯಃ ರೂಪಾಣಾಂ ಸಮೀರದೇವಸ್ಯೈತ್ಯುಕ್ತಂ ಭವತಿ || ತದುಕ್ತಂ **ಭಾರತ ತಾತ್ಪರ್ಯೆ ||** ಮಹಾವಲೋಲಂ ಕಪಿಲಾಖ್ಯ ರೂಪ ತ್ರಿಕೋಟಿ ರೂಪಃ ಪವನಶ್ಚ ಮೇಸತ್ ಇತಿ|| ಯಥೋಕ್ತಂ ಶ್ರೀಮನ್ ಮಧ್ವಮಂತ್ರಾರ್ಥ ಮಂಜರ್ಯಾಮ್ || ರೂಪ ಲಕ್ಷಣಾನಿ || ಅಥವಾತ್ರ ಮರುತ ಇತಿ ಬಹು ವಚನಂ ತ್ರಿಕೋಟಿ ಸಂಖ್ಯಾಕ ಮುಖ್ಯ ಪ್ರಾಣರೂಪ ವಿಷಯಕಂ || ಮುಖ್ಯ ಪ್ರಾಣ ಏವ ತ್ರಿಕೋಟಿ ಸಂಖ್ಯಾಕೈ ರೂಪೈಃ ಕಪಿಲಾಖ್ಯಸ್ಯ ಹರೇಃ ಸೇವಾರ್ಥಂ ತತ್ಪುತ್ರತ್ವೇನಾವತೀರ್ಣಃ || ತಾನಿಚ ಸರ್ವಾಣಿ ರೂಪಾಣಿ ಚತುರ್ಭುಜಾನಿ, ಶಂಖಚಕ್ರಾದ್ಯಾಯುಧೋಪೇತಾನಿ | ಪಿತುಃ ಸ ರೂಪಾಣಿ ತೇಷು ಸರ್ವೇಷ್ವಪಿ || "ಓಂ ನೈತಾವದನ್ಯೇ ಮರುತೋ ಯಥೇಮೇ ಭ್ರಾಜಂತರುಕ್ಮೈರಾಯುಧೈಸ್ತನೂಭಿಃ || ಆರೋಧಸೀ ವಿಶ್ವಪಿಶಃ ಪಿಶಾನಾಃ ಸಮಾನ ಮಜ್ಜಂಜ ತೇ ಶುಭೇಕಮಿತಿ" ಮಂತ್ರಾರ್ಥ ಸ್ಫುಟ ಮುಪಪನ್ನಃ || ವಿಶ್ವಂ ಪೂರ್ಣಂ ಬ್ರಹ್ಮ ತದ್ವಪ್ತಿ ಶಂತೀತೀಪ್ಯಂತೇ ತಥಾ || ಪಿಶಾದೀಪ್ತಾ ವಿತಿಧಾತೋಃ || ಪಿಶಾನಾ ಜಗದ್ಭಾಸಕಾಃ | ಏವಂ ಪರಸ್ಪರಂ ಸರ್ವೇಪಿ ತುಲ್ಯ ರೂಪಾ ಇತಿ

ಸಮಾನಮಂಜಿ ಅನಂತೇ ಇತ್ಯನೇನೋಚ್ಯತೇ ‖ ಸಮಾನಂ ಸದೃಶಂ ಯಥಾ ಭವತಿ ತಥಾ । ಅಂಜಿಕಾಂತಿಂ । ಅಂಜಂತೆ ಪ್ರಾಪ್ನುವಂತಿ ‖ "ಅಂಜುಕಾಂತಾ ವಿತಿಧಾತೋ:" ‖ ಇದಂ ಮಹಾತ್ಮ್ಯಂ ಯದನುಗ್ರಹೇಣಿತ್ಯತ ಉಕ್ತಂ ಕಮಿತೀ । ಕಂ=ಕಪಿಲಾಖ್ಯಂ ಬ್ರಹ್ಮ ತದುದ್ಧಿಶ್ಯ ಶುಭೇ ಶೋಭನೇ ತತ್ಪ್ರರತೋ ನೃತ್ಯಗಾನಾದೌ ತದ್ಭುಜನೇ ಕೃತೇ ಸತೀತಿಶೇಷಃ ‖ ಇದಂಚ ಪ್ರಸಿದ್ಧೆಷ್ವೇಕೋನ ಪಂಚಾಸನ್ಮರುತಃ ಸಂಭಾವಿತಂ ‖ **ತದೇತದ್ರಾಮಾಯಣೇ** ಉತ್ತರಕಾಂಡೇ ಸ್ಪಷ್ಟಂ ‖ ರಾವಣ ದಿಗ್ವಿಜಯೇ ಕಥನ ಪ್ರಸಂಗೇ ಶ್ರೀರಾಮಂ ಪ್ರತ್ಯಗಸ್ತ್ಯೇನೋಕ್ತಂ ‖ ಪೂರ್ವಂ ಕೈಶ್ಚನ ಶ್ಲೋಕೇರಿದ ಮುಕ್ತಂ ‖ ಪೌಲಸ್ತ್ಯೋ ರಾವಣಃ ಪಶ್ಚಿಮ ದಿಗ್ವಿಜಯಾರ್ಥಂ ಗತಸ್ತತ್ರ ಸಾಗರ ದ್ವೀಪೇ ಕಂಚಿನ್ ಮಹಾಪುರುಷಂ ಮವಲೋಕ್ಯತಂ ಪ್ರತಿಸ್ಪರ್ಧಃ ಮಾನಃ (ಸನ್) ಸನ್ಮಯಾಯುಧ್ಯಸ್ವೇತ್ಯಭಾಣೀತ್ತ್ತೂ ‖ ತತಸ್ತೇ ನಗ್ನರೂಪೇಣ ಪುರುಷೇಣ ಸ್ವಶರೀರೆ ವಿಶ್ವರೂಪಂ ದರ್ಶಯಿತ್ವೈಕ ಮುಷ್ಠಿನಾ ಪಿಷ್ಟೀಕೃತೋ ನಿಪಪಾತ ‖ ಸ ಪುರುಷೋತ್ಥಾ ತತ್ರ ಕಾಂಚನ ಗುಹಾಂ ಪ್ರವಿವೇಶ । ತತೋರಾವಣೋ ದೈವಾದಪಗತಂ ಮೂರ್ಛಾಃ ಸ್ತಮನ್ವೇವತ್ತಾಂ ಗುಹಾಂ ಪ್ರವಿಷ್ಟೋ ಗೃಹೀತ ನಿಶಿತಾ ತಾಶಿ । ಪನ್ನಗಂ ಪಕ್ಷಿರಾಡಿವ ದುರ್ಮತಿಃ ‖ ಸಃ ಪ್ರವಿಶನ್ ಬಿಳದ್ವಾರಿ ಸ್ಥಿತಾನ್ ನರಾನ್ ನೀಲಾಂಜನಾಭಾನ್ ಕೇಯೂರ ರಕ್ತಮಾಲ್ಲ್ಯಾನುಲೇಪನಾಂಗುಲೀಯಕ ವಜ್ರಾದಿ ರಚಿತಾನೇಕ ಭೂಷಣಯುತಾನ್ ವಿಮಲ ಸೂರ್ಯವರ್ಚೋಪೇತ ನಿತ್ಯೋತ್ಸವಂ । ತ್ರಿಕೋಟಿ ಸಂಖ್ಯಾಂತಾನ್ ಮಹಾ ಬಲಾನ್ ದೃಷ್ಟ್ವಾ ಅಹೋಕಿಮೇತೆ ಮಯಾದೃಷ್ಟ ಪೂರ್ವಾಃ ಕೇ ಸರ್ವೇ ಸಮಾನ ರೂಪಾಃ ಸಮಬಲಾಃ ಶ್ಚತುರ್ಭುಜಾಃ ಮಹೋತ್ಸಾಹಾಃ ಇತಿ ಪರಮಾಶ್ಚರ್ಯೇಣೋರ್ಧ್ವ ರೋಮನಿಕರಂ ಧಧ್ರೇ ‖ ತತೋ ಗುಹಾಯಾಂಶ ಮಾನೋ ಲಕ್ಷ್ಮ್ಯಾಕೃತ ಚರಣ ಸಂವಾಹನಃ ಕೌಸ್ತುಭ ಕಿರೀಟಾದ್ಯಲಂಕೃತ ಚತುರ್ಭುಜಾಃ ಪೀತಾಂಬರೋ-ರಾವಣೇನ ದೃಷ್ಟಾಃ ತತಃಸ್ತತ್ರ ಮೂರ್ಖ ಕಾಮಾತುರಃ ಸನ್ ಲಕ್ಷ್ಮೀದೇವೀಂ ಪ್ರಹರ್ತುಮುಪಚಕ್ರಮೆ ‖ ತತಃ ಶಯಾನಃ ಪುರುಷೋ ಜಹಾಸ‖ ತದೀಯ ಶ್ವಾಸ ವಾಯುನಾ ರಾವಣಃ ಮೂರ್ಛಿತಾನಿಪಪಾತ ‖ ವ್ಯಪಗತ ಮೂರ್ಛೋ ವ್ರೀಡಿತಃ ತಚ್ಛರೀರೇ ಪುನಃ ಪೂರ್ವವದ್ ವಿಶ್ವರೂಪಂ ನಿರೀಕ್ಷ್ಯ ವಿಸ್ಮಿತೋ ದಶಾನನಃ ಕೋ ಭವಾನೀತಿ ತಂ

ಪ್ರಪಚ್ಛ ॥ ತೇನ ಚ ಯಃಕೋಽಪ್ಯಸ್ಮಿ ಕಿಮನೇನ ತವ ವಿಚಾರಿತೇನ ಯಥಾಗತಃ ಸ್ತಥಾಗಚ್ಛ ಮಂದಮತೇ ಸರ್ವಥಾ ಮದ್ಧಸ್ತೇನ ನೂಚಿರಾಧ್ವಧಮವಾಪ್ಸ್ಯಸೀ ತ್ಯುಕ್ತೇ ಭೀತಃ ಸನ್ ಪಲಾಯ್ಯ ನಿರ್ಗತೋಽಬಿಲಯಾದಿತಿ ಸವಿಸ್ತರಂ ಮಿದಮುಕ್ತಮಂ ॥

ತತೋಽರಾಮಃ ಸರ್ವಜ್ಞೋಽಪಿ ಸ್ವಸ್ಯ ವಿಷ್ಣುರೂಪತ್ವಂ ಮುನಿಮುಖೇ ನೈವ ಸಭಾಯಾಂ ಬೋಧನೀಯ ಮಿತ್ಯಾ ಶಯೇನಾಗಸ್ತ್ಯಂ ಪ್ರಪೇಚ್ಛ ತ್ಯುಕ್ತಂ । ಅಥಾಹ ರಾಮೋ ಧರ್ಮಾತ್ಮಾ ಅಗಸ್ತ್ಯ ಮುನಿಪುಂಗವಂ ॥ ದ್ವೀಪಸ್ಥ ಪುರುಷಃ ಕೋಽಸೌ ತಿಸ್ರ ಕೋಟ್ಯಶ್ಚತಾಸ್ತಥಾ ॥ ಶಮಾನ ಪುರುಷಃ ಕಶ್ಚ ದೈತ್ಯ ದಾನವದರ್ಪಹಾ॥ ರಾಮುಸ್ಯ ವಚನಂ ಶ್ರುತ್ವಾ ಅಗಸ್ತ್ಯೋ ೄವಾಕ್ಯ ಮಬ್ರವೀತ್ ॥ ಶ್ರೂಯತಾಮಭಿದಾಸ್ಯಾಮಿ ದೇವದೇವ ಸನಾತನಂ ॥ ಭವಾನ್ ಹಿ ಕಪಿಲೋ ರಾಮ ದ್ವೀಪಸ್ಥೋ ನರ ಉಚ್ಯತೇ ॥ ಸವೈ ನಾರಾಯಣೋ ದೇವಃ ಶಂಖಚಕ್ರ ಗದಾಧರಃ ॥ ವಿಧಿತಾಚ್ಚೈವ ವಿಭೂತ್ಮಾಂನಾಂ ಸಂಹರ್ತಾಚ ತಥ್ಯೈವಚಃ ॥ ಅನಾದಿ ರಚ್ಯುತೋ ವಿಷ್ಣು ಪ್ರಭವಃ ಶಾಶ್ವತೋ ಭವಃ ॥ ಯೇತು ನೃತ್ಯಂತಿ ವೈತತ್ರ ಸುತಾಸ್ತೇ ತವಧೀಮತಃ ॥ ತುಲ್ಯೈ ತೇಜಃ ಪ್ರಭಾವಾಶ್ಚ ಕಪಿಲಸ್ಯವೈ ಇತ್ಯಾದಿಕ ಸೂಕ್ತಮಿತಿ ॥ ೬ ॥

### ಇದರ ಸಾರಾಂಶ

ಮಧ್ವ ಮಂತ್ರಾರ್ಥ ಮಂಜರಿಯಲ್ಲಿ ಶ್ರೀ ವಾಯುದೇವರು ಕಪಿಲ ದೇವರ ಸೇವಾರ್ಥವಾಗಿ ಕಪಿಲವೇವರ ದೆಶೆಯಿಂದ ಮೂರು ಕೋಟಿ ರೂಪಗಳನ್ನು ಧರಿಸಿ ಅವತರಿಸಿದರು. ಎಲ್ಲ ರೂಪಗಳು ಮಹಾ ಕಾಂತಿಯುತವಾಗಿಹವು. ಚತುರ್ಭುಜ-ಚಕ್ರ-ಶಂಖ-ಗದಾ ಪದ್ಮಗಳಿಂದ ಶೋಭಿತವಾದವು. ಕಿರೀಟ ಕರ್ಣಕುಂಡಲ ಹಾರನೂಪುರ ಕೇಯೂರಾದಿಗಳಿಂದ ಯುಕ್ತವಾದವು. ಶ್ರೀವತ್ಸಚಿನ್ಹ ಒಂದು ಇಲ್ಲದೇ ಶ್ರೀ ಹರಿರೂಪದಂತೆ ಯುಕ್ತವಾದವುಗಳು. ಶ್ರೀ ಕಪಿಲದೇವರ ಮುಂದೆ, ಸದಾ ಸರ್ವಕಾಲ ನೃತ್ಯಗಾಯನದಿಂದ ಸೇವಾ ಮಾಡುತ್ತಿರುವರು. ಜ್ಞಾನಾರ್ಜನೆ ಮಾಡುತ್ತ ಅನಂತ ಬಗೆ ಸಾಧನಮಾಡುವರು. ಈ ವಾಯು ಮೂರು ಕೋಟಿ ರೂಪಗಳೇವೆ ಒಂದಂಶದಿಂದ ಶ್ರೀ ತ್ರಿವಿಕ್ರಮ ಪಾದನಖದಿಂದ ಭಿನ್ನವಾದ ಬ್ರಹ್ಮಾಂಡ ಕಟಾಹಕ್ಕೆ ಮೇರುವೆ ಹಾಕುತ್ತ ಬಹಿರಾವರಣ ಉದಕ ಹೆಚ್ಚಿಗೆ ಬಾರದಂತೆ ಬ್ರಹ್ಮಾಂಡವನ್ನು ಕಾದು

ಕೊಂಡಿಹರು. ಇವರು ಎಲ್ಲಿ ಅವತರಿಸಿ ಯಾರಿಗೆ ತೋರಿದರೆಂಬ ಇತಿಹಾಸ ಉತ್ತರಕಾಂಡ ರಾಮಾಯಣ-ರಾವಣನ ಪಶ್ಚಿಮ ಸಾಗರ ದಿಗ್ವಿಜಯ ಕಾಲ, ಪಶ್ಚಿಮ ಸಾಗರ ಗುಹಾದಲ್ಲಿ ಕಾಣಿಸಿದರು. ರಾವಣನು ನೋಡಿ ಆಶ್ಚರ್ಯ, ದಿಂದ ನೀವ್ಯಾರೆಂದು ಕೇಳಲು,-ಎಲೋ ಮೂರ್ಖನೆ ನಿನಗೇಕೆ ಬೇಕು. ನಡಿ ಸುಮ್ಮಗೆ ಎಂದು ಮುಷ್ಟಿಯಿಂದ ಪೇಷ್ಟಿತನಾಗಿ ಮಾಡಲು ಮೂರ್ಛಾಗತ ನಾದನು. ಹುಂಕಾರ ಶ್ವಾಸದಿಂದ ಮೂರ್ಛಿತನಾಗಿ ಬಿದ್ದ ರಾವಣನು ಎಚ್ಚತ್ತು ಪಲಾಯನಮಾಡಿದನು. ಶ್ರೀ ರಾಮದೇವರು ಸರ್ವಜ್ಞರಾದರೂ ಅಗಸ್ತ್ಯ ಋಷಿಯಿಂದ ಈ ವಿಸ್ತಾರ ಕಥೆಯನ್ನು ಸಭಾದಲ್ಲಿ ಕಪಿಲದೇವರ ಮಹಾತ್ಮೆ ಹಾಗೂ ವಾಯು ತ್ರಿಕೋಟಿ ರೂಪ ಮಹಾತ್ಮೆ ಇವುಗಳೊಂದಿಗೆ ಕೇಳಿದರೆಂದು ತಿಳಿಸಿದ್ದಾರೆ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೂರು" ಇತಿ ॥ "ಶಂಬಾರಿ ಮುಖ ಸಂಚ್ಛನ್ನ ಮರುತ್ಕೋಟಿ ತ್ರಯಂ ತಥಾ ॥ ಚತುರ್ಭುಜಂ ಶ್ರೀ ಕಪಿಲ ತನೂಜಂ ವೈ ಗುಹಾಗತಮ್॥" "ಮಧ್ವ ಮಂತ್ರಾರ್ಥ ಮಂಜರ್ಯಾಂ ಏತನ್ನಾರಾಯಣೋದಿತಮ್ ॥" "ಅವರ" ಇತಿ ॥ "ಧಿಕ್ಕರೋತಿ ತುಧೀಃ ಪೂಜಾಂ ಆತ್ಮನಃ ಶ್ರೀ ಸುದರ್ಪತಃ ॥ ರಿಕ್ತಾಂ ಪ್ರಾಜ್ಞಸ್ಯ ತಾಂ ತ್ಯಕ್ತ್ವಾ ಭಜತೇಽನ್ಯಾಂ ದಯಾಪರಃ ॥ ಸುದಾಮ ಚರಿತೇ ಚ "ಕಿಂಚಿತ್ ಕರೋತ್ಯುರ್ವಪಿ ಯತ್ ಸ್ವದತ್ತಂ ಸುಹೃತ್ಕೃತಂ ಫಲ್ಗ್ವಪಿ ಭೂರಿಕಾರೀ" ॥ ಇತಿ ॥ ೬ ॥

### ಕನ್ನಡಾರ್ಥ

"ಶ್ರೀ ಮಧ್ವ ಮಂತ್ರಾರ್ಥ ಮಂಜರೀ" ಎಂಬ ಗ್ರಂಥದಲ್ಲಿ ಶ್ರೀ ನಾರಾಯಣ ಪಂಡಿತಾಚಾರ್ಯರು "ಶಂಖ" ಮುಂತಾದ ಮೂರು ಕೋಟಿ ಮರುತ್ತರುಗಳನ್ನು ನಿರೂಪಿಸಿರುತ್ತಾರೆ. ಹೀಗೆ ೩೦೦೭೨೦೦೦ ಮರುತಾಂತರ್ಗತ ಹರಿಯನ್ನು ದೇಹದಲ್ಲಿ ತಿಳಿದು ಭಜಿಸುವವರಲ್ಲಿ ಪೂಜೆಯೇ ಹರಿಪೂಜೆಯೆನಿಸುವುದು. "ಕುಮತಿಯು ತನ್ನ ದ್ರವ್ಯದರ್ಪದಿಂದ ಮಾಡುವ ಪೂಜೆಯನ್ನು ತಿರಸ್ಕರಿಸುತ್ತಾನೆ. ಕುಜನರ ಪೂಜೆಯನ್ನು ಧಿಕ್ಕರಿಸಿ, ಪ್ರಾಜ್ಞರು ಮಾಡುವ ಪೂಜೆಯು ಅತ್ಯಲ್ಪವಾಗಿದ್ದರೂ ದಯಾಪರನಾದ ಶ್ರೀ ಹರಿಯು ಭಕ್ತಿಭರಿತ ವಾದ ಅಲ್ಪಪೂಜೆಯನ್ನೇ ಸ್ವೀಕರಿಸುತ್ತಾನೆ." "ಭಗವದ್ಭಕ್ತರು ಭಕ್ತಿ ಪುರಃಸರ

ವಾಗಿ ಭಗವಂತನಲ್ಲಿ ಅರ್ಪಿಸಿ ಪೂಜಿಸಿದವರ ಪೂಜೆಯನ್ನು ಅತ್ಯಲ್ಪವಾಗಿದ್ದರೂ ಅನಂತಮಡಿ ಮಾಡಿ ಸ್ವೀಕರಿಸುತ್ತಾನೆ. ಹೀಗಿರುವ ಶ್ರದ್ಧಾಭಕ್ತಿಗಳಿಲ್ಲದ ಮಹಾಪೂಜೆಯನ್ನು ಸಹ ಅತ್ಯಲ್ಪವೆಂದು ಉದಾಸೀನಮಾಡುತ್ತಾನೆ" ಎಂದು ಸುದಾಮ ಚರಿತ್ರದಲ್ಲಿ ಹೇಳಿರುತ್ತಾರೆ. ॥ ೬ ॥

**ಅವತರಣಿಕಾ:** ಜಲ-ತೀರ್ಥಾಭಿಮಾನಿ ದೇವತೆಗಳ ಅಂತರಂಗದಿಪ್ಪ ಹರಿಯ ರೂಪಗಳಿಗೂ, ಸ್ವನಾಡ್ಯಾಂತರ್ಗತ ರೂಪಗಳಿಗೂ, ಬಿಂಬರೂಪದಲ್ಲಿ ಏಕೀಭಾವ ಚಿಂತಿಸಿ, ಶ್ರೀವರನಾದ ಬಿಂಬಗೆ ಅಭಿಷೇಕವೆಂದು ಸ್ನಾನಮಾಡಿದರೆ ಮಹಾಫಲವೆಂದು ನಿರೂಪಿಸುತ್ತಾರೆ.

**ಶ್ರೀವರನಿಗಭಿಷೇಕವೆಂದರಿ ।**
**ದೀ ವಸುಂಧರೆಯೊಳಗೆ ಬಲ್ಲವ ।**
**ರಾವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ॥**
**ತಾ ವೊಲಿದು ಬಂದಲ್ಲಿ ನೆಲೆಗೊಂ ।**
**ಡೀವರಖಿಳಾರ್ಥಗಳನರಿಯದ ।**
**ಜೀವರಮರ ತರಂಗಿಣಿಯ ನೈದಿದರು ಫಲವೇನು ॥ ೭ ॥**

**ಪದ್ಯಾರ್ಥ:** ಶ್ರೀವರನಿಗಭಿಷೇಕವೆಂದರಿದು = ತನ್ನ ಸ್ವಬಿಂಬನಾದ ಶ್ರೀ ಲಕ್ಷ್ಮೀವರನಿಗೆ, ಈ ಅಭಿಷೇಕ, ಗಂಗಾದಿ ಪವಿತ್ರ ತೀರ್ಥದಿಂದ ಸ್ನಾನ ಮಾಡಿಸಿ ಪೂಜೆಮಾಡುವೆವೆಂದು ತಿಳಿದವರಿಗೆ, ಆವ ಜಲದಲಿ ಮಿಂದರೆಯು= ಯಾವ ಜಲದಲ್ಲಿ, ಸ್ನಾನ ಮಾಡಿದರೂ, ಗಂಗಾದಿ ತೀರ್ಥಗಳು–ಹರಿ ಪಾದೋದ್ಭವಳಾದ ಪವಿತ್ರ ಜಾನ್ಹವೀ ಭಾಗೀರಥ್ಯಾದಿ ತೀರ್ಥಾಭಿಮಾನಿ ದೇವತೆಗಳು, ತಾವೊಲಿದು ಬಂದಲ್ಲಿ= ಇಂತಹ ಸುಜ್ಞಾನದಿಂದ ಯುಕ್ತನಾಗಿ ಸ್ನಾನ ಮಾಡುವರು ಯಾವಲ್ಲಿ ಸ್ನಾನಮಾಡುವರೋ–ತೀರ್ಥಾಭಿಮಾನಿಗಳು ತಾವು ಪ್ರಸನ್ನರಾಗಿ ವೊಲಿದು, ನೆಲೆಗೊಂಡು=ನಿಂತು ಸ್ಥಿರವಾಗಿದ್ದು, ಅಖಿಳಾರ್ಥಗಳ ಈವರು=ಸಮಸ್ತ ಪುರುಷಾರ್ಥಗಳನ್ನು ಕೊಡುವರು. ಈ ಮರ್ಮ ಗುಟ್ಟನ್ನರಿಯದ ಜೀವರು, ಅಮರ ತರಂಗಿಣಿಯನ್ನೈದಿದರು ಫಲವೇನು=ದೇವಗಂಗೆಯನ್ನು ಹೊಂದಿ ಕಾಶಿ-ಗಯಾ-ಪ್ರಯಾಗ-ಬದರಿಯಾತ್ರೆಗೆ ಹೋಗಿ ನಾವು ತೀರ್ಥಯಾತ್ರೆ ಮಾಡಿದೆವು ಎಂಬ ಹೆಮ್ಮೆಯಿಂದ ಗಂಗಾದಿ ಪುಣ್ಯ ನದಿಗಳಲ್ಲಿ ಸ್ನಾನಮಾಡಿದರೂ ಏನೂ ಫಲ ಬರುವದಿಲ್ಲ.

"ಸ್ನಾನ ಒಂದೇ ಸಾಲದೇ ಜಲದ ಲಭಿ| ಮಾನಿ ದೇವರನರಿತು|| ಮೇಲಂತರ್ಗತ ಸಿರಿಲೋ| ಲನ ಚಿಂತಿಸಿ|| ಮೂಲ ಕಾರಣ ಬಿಂಬನಭಿಷೇಕವೆಂದರೆ ||೧|| ಕರ್ಮವೇ ತಾರಕವು" ಎಂದು ಶ್ರೀ **ಗುರುಗೋಪಾಲದಾಸರ ವಚನ.** ।

**ಶ್ರೀ ವಿಜಯದಾಸಾರ್ಯರು**— "ನದಿ ತಾರತಮ್ಯ ಸುಳಾದಿ ೨೭ ತಾ. ಭಾಗ ಆದಿತಾಳದಲ್ಲಿ ವಿವರಿಸಿದ ತಾತ್ಪರ್ಯವೇನಂದರೆ, ಮಂತ್ರ ತಂತ್ರಗಳಲ್ಲಿ ಅನುಸಂಧಾನ ಪೂರ್ವಕವಾಗಿ ಪದುಮಜಾಂಡ, ಆವರಣ ಬಹಿರದಲ್ಲಿಯೂ, ಅಲ್ಲಲ್ಲಿಪ್ಪ ಭಗವದ್ರೂಪಗಳರಿತು ಸ್ನಾನಮಾಡುವುದು. ಇಂಥ ಕಾಲನಾಮಕ ಭಗವಂತನಿಂದ ವ್ಯಾಪ್ತವಾದ ಸಕಲ ಗಂಗಾದಿ ನದಿಗಳು ನಿಂತಲ್ಲಿ ಕುಳಿತಲ್ಲಿ ಎಲ್ಲ ದೇಶದಲ್ಲಿ ಅಂತರಿಕ್ಷ ಮೇಲು ಕೆಳಗೆ ಆದ್ಯಂತ ಕಾಲ ಬಿಡದಲೇ ಅತಿ ಸೂಕ್ಷ್ಮ ಪ್ರವಾಹದಿಂದ ತುಂಬಿವೆ ಎಂದು, ದರ್ಶನ ಗ್ರಂಥಗಳಲ್ಲಿ ಸಿದ್ಧವಾಗಿ ಹೇಳಿದೆ. ಹಿಂದೆ ಶ್ರೀ ಸರ್ವಜ್ಞರು, ಅಚ್ಯುತ ಪ್ರೇಕ್ಷರು ಶ್ರೀ ಪುರಂದರದಾಸರಾಯದಿ ಜ್ಞಾನಿಗಳಿಗೆ, ಗಂಗಾ ಇದ್ದಲ್ಲಿ ಪ್ರತ್ಯಕ್ಷವಾಗಿದ್ದಾಳೆಂಬುದೇ ಸಿದ್ಧ. "ಮುಂತೆ ಪ್ರಮೇಯ ಕೇಳಿ ಮಲಕಳೆವ ನೀರಿನಲಿ | ಚಿಂತೆ ಮಾಡುವದು ಕಲ್ಲಾದ್ಯದಿಗಳ ವ್ಯಾಪ್ತಿ ಇದೆ. ಆದರೆ ಶ್ರೀಕಾಂತನ ಆಜ್ಞೆಯಿಂದ ಎಲ್ಲ ತಾತ್ವಿಕರು ಶ್ರೀಕಾಂತನಿದ್ದರಾಗೆ ದೋಷ ನಿರ್ಲಿಪ್ತರು" ಎಂದು ಇತ್ಯಾದಿ ಪ್ರಮೇಯ ಹೇಳಿದ್ದಾರೆ. ಇಂತು ಅನುಸಂಧಾನ ಮಾಡದೇ ಬರಿ ಜಲದಲ್ಲಿ ಮುಳುಗಿದರೆ, ಜಡಗಳಲ್ಲಿ ವ್ಯಾಪ್ತರಾದ ದೈತ್ಯರು ಇವರಿಗೆ ಪಾಪ ತಂದೀವರು. ಕಾರಣ ಸ್ನಾನಮಾಡುವಾಗ್ಯೂ ಭಗವಂತನ ಸ್ಮೃತಿ ಬೇಕು.

**ದ್ರೌಪದೀಶಪತಿ ವಿಠಲರು :** ಶ್ರೀವರನಿಗಭಿಷೇಕವೆಂದರಿದಾವ |
**ಭಾವಸೂಚನೆ:** ಶ್ರೀವರೇತಿ | ಮಿಂದರೆ ಸ್ನಾನಮಾಡಿದರೆ || ೭ ||

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀವರನಿಗೆ" ಇತಿ || ಮಿಂದರೆಯೂ = ಮಜ್ಜನ ಮಾಡಿದರೂ || ನೆಲೆಗೊಂಡು = ನಿಂತುಗೊಂಡು || ೭ ||

### ಕನ್ನಡಾರ್ಥ

ಸ್ವದೇಹದಲ್ಲಿರುವ ಪುರುಷರೂಪಿ ಬಿಂಬ ಹರಿಗೆ ಸ್ನಾನವೆಂದು ತಿಳಿದು ಅನುಸಂಧಾನದಿಂದ ಪುರುಷ ಸೂಕ್ತದಿಂದ ಯಾವದೇ ಜಲದಲ್ಲಿ ಸ್ನಾನಮಾಡಿದರೂ ಅಲ್ಲಿಗೆ ಗಂಗಾದಿ ಸಕಲ ತೀರ್ಥ-ತದಭಿಮಾನಿಗಳು ತಾವೇ ಒಲಿದು ಬರು

ತ್ತಾರೆ. ಮತ್ತು ಈ ದೇಹದಲ್ಲಿದ್ದುಕೊಂಡು ಅವರಿಗೆ ಅಖಿಲೇಷ್ಟಾರ್ಥಗಳನ್ನು ಕೊಡುತ್ತಾರೆ. ಇದನ್ನರಿಯದ ಜೀವರು ಯಾವ ನದಿಯಲ್ಲಿ ಸ್ನಾನಮಾಡಿದರೆ ಏನು ಫಲ ?" ಎಂಬುದು ಈ ಪದ್ಯದ ಭಾವ. ॥ ೭೫ ॥

**ಅವತರಣಿಕಾ:** ಜ್ಞಾನಿಗಳು ಸಂತತ ಭಗವಂತನ ಸ್ಮರಣದಿಂದ ಕರ್ಮ ಮಾಡುತ್ತಾ ಭಗವಂತನಿಗೆ ಅರ್ಪಿಸುತ್ತಾ ಬಹಿರ್ ಕರ್ಮ ಫಲರಾಹಿತ್ಯರಾಗಿ ಎಲ್ಲಿಯ ವರೆಗೆ ಮಾಡುತ್ತಾರೆಂದರೆ ದೃಷ್ಟಾಂತಪೂರ್ವಕವಾಗಿ ಉದಾಹರಿಸುತ್ತಾರೆ. ಭಗವಂತನ ಕಾಣುವವರೆಗೆ ವಿಧಿಬದ್ಧರು.

ಮೂಲ :

**ನದನದಿಗಳಿಳೆಯೊಳಗೆ ಪರಿವವು ।**
**ಉದಧಿ ಪರಿಯಂತರದಿ ತರುವಾ ।**
**ಯುದಲಿ ರಮಿಸುವವಲ್ಲಿ ತನ್ಮಯವಾಗಿ ತೋರದಲೆ ॥**
**ವಿಧಿ ನಿಷೇಧಗಳಾಚರಿಸುವರು ।**
**ಬುಧರು ಭಗವದ್ರೂಪ ಸರ್ವ ।**
**ತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳ ಕರ್ಮಗಳ ॥ ೮ ॥**

**ಪದ್ಯಾರ್ಥ:** ನದ=ವರುಣಾದಿ ಪುರುಷಾಭಿಮಾನಿ ನದಿಗಳು ಶೋಣ ಭದ್ರಾ ಮುಂತಾದ, ಪಶ್ಚಿಮಕ್ಕೆ ಹರಿಯುತ್ತ ಸದ್ದುಮಾಡದೆ ಉದಧಿಗೆ ಸೇರು ವವು ನದಗಳೆಂತಲೂ, ನದಿ=(ಸ್ತ್ರೀ ವಾಚಕ) ಗಂಗಾ ಗೋದಾವರಿ ಯಮುನಾ ಕೃಷ್ಣ ವೇಣ್ಯಾದಿಗಳು, ಪೂರ್ವಕ್ಕೆ ಹರಿದು, ಸಪ್ಪಳಮಾಡದೇ ಪೂರ್ವ ಸಮುದ್ರಕ್ಕೆ ಸೇರುವವು ನದಿಗಳು. ಹೀಗೆ ಪಶ್ಚಿಮ ಪೂರ್ವಕ್ಕೆ ಹರಿಯುತ್ತ ಆಯಾ ಸಮುದ್ರಕ್ಕೆ ಸೇರುವ ಪರಿಯಂತ ಬೇರೆ ಪ್ರವಾಹ ರೂಪವಾಗಿ ಹರಿ ಯುತ್ತವೆ. ತರುವಾಯ=ಸಮುದ್ರದಲ್ಲಿ ಸೇರಿದ ತರುವಾಯ, ತನ್ಮಯವಾಗಿ ಅಲ್ಲಿ ರಮಿಸುವವು=ಸಮುದ್ರ ಉದಕದಲ್ಲಿ ಕೂಡದಿದ್ದರೂ, ಅರಿಯದವರಿಗೆ ಸಮುದ್ರದೊಳಗೆ ಏಕಾಕಾರವಾಗಿವೆ ಬೇರೆ ಇಲ್ಲವೆಂದು ತೋರುವದು ಹೇಗೋ ಹಾಗೆ ವಿಧಿ ನಿಷೇಧ ಕರ್ಮಗಳು=ವಿಧಿ=ತಪ್ಪದಲೆ ಮಾಡತಕ್ಕ ಸ್ನಾನಾದಿ ಪುಣ್ಯ ಕರ್ಮಗಳು, ನಿಷೇಧ=ಪಲಾಂಡುಲಶುನಾದಿಗಳನ್ನೂ ಸುರಾಪಾನಾದಿ ಗಳನ್ನೂ ಬಿಡುವದೆಂದು ಕಟ್ಟಾಜ್ಞೆ ಇರಲು ಕೆಲವು ಕಾಲ ನಿಷಿದ್ಧಗಳನ್ನು ಆಚರಿ ಸುವರು ಸಾಮಾನ್ಯ ಜನರು. ಆದರೆ ಜ್ಞಾನಿಗಳಾದವರು ಸರ್ವಥಾ ನಿಷೇಧ

ಕರ್ಮವನ್ನು ಎಂದೂ ಆಚರಿಸುವದಿಲ್ಲ. ಇಂಥಜ್ಞಾನಿಗಳೆಂದರೆ ಬುಧರು ಭಗವದ್ರೂಪ ಚಿಂತನೆ ಬರಲು=ಜ್ಞಾನಿಗಳಾದವರು ಸರ್ವಕರ್ಮಗಳು ಆಯಾ ಕರ್ಮಗಳು ಆಚರಿಸುವ ಕಾಲ, ಆಯಾ ಭಗವದ್ರೂಪಗಳನ್ನು ದಾರಢ್ಯವಾಗಿ ನೆನೆದು, ಚಿಂತಿಸಿ ಶ್ರೀಹರಿರೂಪ ಸ್ಥಿರಗೊಳ್ಳಲು, ತ್ಯಜಿಸುವರಖಿಳ ಕರ್ಮಗಳ=ಸಮಸ್ತವಾದ ಕರ್ಮಫಲರಾಹಿತ್ಯರಾಗಿ ಹರಿಗರ್ಪಿಸುವರು. ಅಖಿಳ ಕರ್ಮಗಳ ತ್ಯಜಿಸುವರೆಂದರೆ, ಸಮಸ್ತ ಕರ್ಮಗಳನ್ನೂ ತಮ್ಮ ಅಧಿಕಾರಾನುಸಾರ ಮಾಡಿದರೂ, ಕರ್ಮಫಲ ತ್ಯಾಗಮಾಡುವರು ಕರ್ಮನಿರ್ಮುಕ್ತರು. ಯಾವ ಯಾವ ಕಾಲ, ಯಾವ ಕರ್ಮಗಳಲ್ಲಿ ಭಗವಂತನ ಯಾವ ಸ್ಮರಣೆ ಮಾಡುವದೆಂಬುದು ಬ್ರಹ್ಮಕಾಂಡ ಅಧ್ಯಾಯ ೪೧ರಲ್ಲಿ ಪೇಳಿದಂತೆ ಶ್ರೀ ವಿಜಯದಾಸರ ನಾಮಸ್ಮರಣ ಪ್ರಕರಣ ಸುಳಾದಿ ನೋಡಿರಿ ಮತ್ತು ಅಧ್ಯಾತ್ಮಮಾಲಾ ಭಾಗ ೨ ಪುಟ ೧೭೪-೧೭೫.

**ದ್ರೌಪದೀಶಪತಿ ವಿಠಲರು :** ನದನದಿಗಳಿಳೆಯೊಳಗೆ ॥ ನದ-ಪುರುಷ ನದಿ, ನದಿ-ಸ್ತ್ರೀ ಉದಧಿ ಸಮುದ್ರ ಕೂಡುವವರೆಗೆ ಬೇರೆ ಬೇರೆ ನಾಮ. ಕಲೆತ ಮೇಲೆ ತನ್ಮಯವಾಗಿ ಸಮುದ್ರಯಂತ ಕರೆಸುತ್ತವೆ. ಹೀಗೆ ವಿಧಿನಿಷೇಥ ಎಂಬುವಂಥಾವು ಪರಮಾತ್ಮನ ಕಾಂಬೋ ಪರಿಯಂತರ ಇರುತ್ತವೆ. ಕಾಮ್ಯ ಕರ್ಮ ಬಿಡುತ್ತಾರೆಂದರೆ, ವಿಧಿತಾ ವಿಧಿನೀತಾ ಶ್ವೇಚ್ಛಾನೀತಾ=ಬ್ರಹ್ಮವಾಯು ಋಜುಗಳು. ವಿಧಿನೀತಾ=ರುದ್ರಾದಿಗಳು, ವಿಧಿತರು=ಮಾನವಾದಿಗಳು, ಫಲತ್ಯಾಗ ಮಾಡೋಣವೇ ಅಖಿಳ ಕರ್ಮ ತ್ಯಜಿಸುವದು. ॥ ೮ ॥

**ಭಾವಸೂಚನ:** ನದೇತಿ ॥ ಶೋಣಭದ್ರಾದಿಗಳು ॥ ೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನದ" ಇತಿ ॥ ಶೋಣ ಭದ್ರ ಮುಖಾಃ ಪುಂನದಾಃ ॥ ಪರಿವವು-ಹರೋವು-ಹರಿಯುವುವು. ತ್ಯಜಿಸುವರು-ಪ್ರವೃತ್ತ ಕರ್ಮ ಸಂಘಮ್ ॥ "ತಸ್ಮಾತ್ ನ ಕರ್ಮ ಕುರ್ವೀತ" ಇತ್ಯುಕ್ತೇಃ ॥ "ಪ್ರವೃತ್ತಂ ಮತ್ಪರಃ ತ್ಯಜೇತ್" ಇತಿ ಚ ॥ "ಕರ್ಮಭಿಃ ಶುದ್ಧ ಸತ್ವಾನಾಂ ಕರ್ಮ ತ್ಯಾಗೋಪಿ ನಾನ್ಯಥಾ" ಇತಿ ಚ ಐತರೇಯೇ ॥ ಯದ್ವಾ ಕ್ರಿಯಾದ್ವೈತಮ್ ॥ ೮ ॥

## ಕನ್ನಡಾರ್ಥ

"ಶೋಣ ಭದ್ರ" ಮುಂತಾದವುಗಳು ಪುರುಷ ನದಗಳೆನಿಸಿಕೊಂಡಿರು

ತ್ರವೆ. "ಸರ್ವತ್ರದಲಿ ಚಿಂತನೆ ಬರಲು ಅಖಿಲ ಕರ್ಮಗಳ ತ್ಯಜಿಸುವರು" ಎಂದು ಹೇಳಿರುತ್ತಾರೆ. ಆದರೆ ಎಲ್ಲ ಕರ್ಮಗಳನ್ನೂ ಬಿಡದೆ ಪ್ರವೃತ್ತಕರ್ಮ (ಸಕಾಮ)ಗಳನ್ನು ಮಾತ್ರ ಬಿಡುವುದಾಗಿ ತಿಳಿಯಬೇಕು. "ಸಕಾಮ ಕರ್ಮಗಳನ್ನು ಬಂಧಕವಾದುದರಿಂದ ಆಚರಿಸಕೂಡದು." "ನನ್ನನ್ನೇ ಪರಮಾತ್ಮನೆಂದು (ಶ್ರೀ ಕೃಷ್ಣನನ್ನೇ) ಆಶ್ರಯಿಸಿದವನು ಸಕಾಮ ಕರ್ಮಗಳನ್ನು ಪರಿತ್ಯಜಿಸಬೇಕು." "ವಿಹಿತ ಕರ್ಮಾನುಷ್ಠಾನದಿಂದ ಶುದ್ಧಾಂತಃಕರಣವುಳ್ಳವರಿಗೆ ಸಕಾಮ ಕರ್ಮತ್ಯಾಗವು ಉಕ್ತವಾಗಿರುತ್ತದೆ." ಎಂದು ಐತರೇಯದಲ್ಲಿ ಹೇಳಲಾಗಿರುತ್ತದೆ. "ಅಥವಾ ಕ್ರಿಯಾದ್ವೈತವು ಇಲ್ಲಿ ಹೇಳಲ್ಪಡುತ್ತದೆ" ಎಂದೂ ತಿಳಿಯಬಹುದು. ॥ ೮ ॥

**ಅವತರಣಿಕಾ:** ಇನ್ನು ಧ್ಯಾನೋಪಾಸನೆ ಮಾಳ್ಪ ಯೋಗಿಗಳ ಜ್ಞಾನವೆಂಥದು, ತತ್ವಾಭಿಮಾನಿ ದೇವತೆಗಳೇ ಹರಿಯಾಜ್ಞೆಯಿಂದ ಪ್ರೇರಕರಾಗಿರುವರು. ಅವರು ಪಾಪರಹಿತರು ಎಂಬ ದಾರ್ಢ್ಯ ಜ್ಞಾನವು ಧ್ಯಾನೋಪಾಸಕರಿಗೆ ಅವಶ್ಯ ಇರುವದಾಗಿ ಉಪದೇಶಿಸುತ್ತಾರೆ.

ಮೂಲ :

**ಕಲಿಯೆ ಮೊದಲಾದಖಿಳ ದಾನವ ।**
**ರೊಳಗೆ ಬ್ರಹ್ಮ ಭವಾದಿ ದೇವ ।**
**ರ್ಕಳು ನಿಯಾಮಕರಾಗಿ ಹರಿಯಾಜ್ಞೆಯಲಿ ಅವರವರ ॥**
**ಕಲುಷ ಕರ್ಮವ ಮಾಡಿ ಮಾಡಿಸಿ ।**
**ಜಲರುಹೇಕ್ಷಣಗರ್ಪಿಸುತ ನಿ ।**
**ಶ್ಚಲ ಸುಭಕ್ತಿ ಜ್ಞಾನಪೂರ್ಣರು ಸುಖಿಪರವರೊಳಗೆ ॥ ೯ ॥**

**ಪದ್ಯಾರ್ಥ :** ಕಲಿಯೆ ಮೊದಲಾದಖಿಳ ದಾನವರೊಳಗೆ=ಕಲಿಯೇ ಮುಂತಾದ ಸಮಸ್ತ ಕುತತ್ವಾಭಿಮಾನಿ ದೈತ್ಯರೊಳಗೆ, ಶ್ರೀ ಹರಿಯಾಜ್ಞೆಯಿಂದ ಸಕಲ ಬ್ರಹ್ಮ ಭವಾದಿ ದೇವರ್ಕಳು=ಬ್ರಹ್ಮ ರುದ್ರರೇ ಮೊದಲಾಗಿ ಸಮಸ್ತ ತತ್ವಾಭಿಮಾನಿ ದೇವತೆಗಳು, ನಿಯಾಮಕರಾಗಿ=ಆಜ್ಞೆ ಮಾಡುವವರಾಗಿ. ಸಂಚಾಲಕ ಸಂಪ್ರೇರಕರಾಗಿ, ಅವರವರ=ಆಯಾ ತತ್ವಗಳ ಅಹಂಕಾರ ತತ್ವ ಮೊದಲುಗೊಂಡು ಪೃಥ್ವೀ ತತ್ವದವರೆಗೆ ಕಲಿವ್ಯಾಪ್ತಿ ಅವರು ಏನೇನು ಕೆಟ್ಟ ಕರ್ಮ ಮಾಡಬೇಕೋ ಆ ಕಲುಷ ಕರ್ಮವ=ದೋಷಯುಕ್ತ

ವಾದ ಪಾಪಕರ್ಮಗಳನ್ನು, ತಾವು ಭಗವಂತನಿಂದ ಪ್ರೇರಿತರಾಗಿ ಮಾಡಿ, ಆ ದೈತ್ಯಾದಿಗಳಿಗೆ ಪ್ರೇರಿಸಿ ಮಾಡಿಸುತ್ತ, ಜಲರುಹೇಕ್ಷಣಗರ್ಪಿಸುತ್ತ=ಕಮಲ ಪತ್ರ ನೇತ್ರನಾದ ಕರುಣಾದೃಷ್ಟಿಯುಳ್ಳ ಹರಿಗೆ ಅರ್ಪಿಸುತ್ತಾ, ನಿಶ್ಚಲ=ದೃಢ ವಾದ, ಭಕ್ತಿ ಜ್ಞಾನಾದಿಗಳಿಂದ ಪೂರ್ಣರು, ಸುಖಿಪರವರೊಳಗೆ=ತಾವು ದೈತ್ಯಾದಿಗಳಲ್ಲಿ ನಿಂತು, ಕುಕರ್ಮಮಾಡಿಸಿದರೂ, ಹರಿಯಾಜ್ಞೆಯಿಂದ ದುಃಖ ಲೇಪವಾಗದೆ ಇದ್ದು ಸುಖಿಪರು, ಆನಂದಪಡುವರು, ಪುಣ್ಯಭಾಗಿಗಳಾಗುವರು ಎಂದರಿತವರು ಯೋಗಿಗಳು.

**ದ್ರೌಪದೀಶ ಪತಿವಿಠಲರು:** ಕಲಿಯೆ ಮೊದಲಾದ.

**ಭಾವಸೂಚನ:** ಕಲೀತಿ ॥ ೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಲಿ" ಇತಿ ॥ ವಿಚಾರಿತಂ ಚೈತತ್ ॥ ೯ ॥

## ಕನ್ನಡಾರ್ಥ

"ದಾನವರಲ್ಲಿ ತತ್ವೇಶ ದೇವತೆಗಳು ಪ್ರೇರಿಸಿದರೂ ಆ ದೇವತೆಗಳಿಗೆ ಹರಿಯ ಆಜ್ಞಾಪಾಲಕರಾದುದರಿಂದ ಪಾಪಲೇಪವಿಲ್ಲ; ಮತ್ತೂ ಅಧಿಕ ಪುಣ್ಯವೇ ಇರುತ್ತದೆ" ಎಂದು ಈ ಪದ್ಯದಿಂದ ತಿಳಿಸುತ್ತಾರೆ. ಇಲ್ಲಿ ವಿಚಾರಿಸ ಬೇಕಾಗಿರುವ ವಿಷಯಗಳನ್ನು ಹಿಂದಿನ ಪದ್ಯಗಳ ವ್ಯಾಖ್ಯಾನ ಕಾಲದಲ್ಲಿ ವಿಚಾರಿಸಲಾಗಿರುತ್ತದೆ. ॥ ೯ ॥

**ಅವತರಣಿಕಾ:** ಮತ್ತು ತತ್ವಾಭಿಮಾನಿ ದೇವತೆಗಳು ಪಾಪಕರ್ಮ ನಿರ್ಲಿಪ್ತರು ಎಂದು ದೃಢೀಕರಿಸುತ್ತಾರೆ. ಏಕೆಂದರೆ ಹರಿಯಾಜ್ಞೆಯಲ್ಲಿ ರತರು. ಹರಿಗೆ ಸರ್ವಾರ್ಪಿತರು. ಶ್ರೀ ಹರಿಯ ಪೂರ್ಣಾನುಗ್ರಹ ಪಾತ್ರರು.

ಮೂಲ :

**ಆವ ಜೀವರೊಳಿದ್ದರೇನಿ ।<br>
ನ್ನಾವ ಕರ್ಮನ ಮಾಡಲೇನಿ ।<br>
ನ್ನಾವ ಗುಣರೂಪಗಳುಪಾಸನೆ ಮಾಡಲೇನವರು ॥<br>
ಕಾವನಯ್ಯನ ಪರಮ ಕಾರು ।<br>
ಣ್ಯಾವಲೋಕನ ಬಲದಿ ಚರಿಸುವ ।<br>
ದೇವತೆಗಳನು ಮುಟ್ಟಲಾಪವೆ ಪಾಪಕರ್ಮಗಳು ॥ ೧೦ ॥**

**ಪದ್ಯಾರ್ಥ:** ಎಲ್ಲ ತತ್ವಾಭಿಮಾನಿ ದೇವತೆಗಳು, ಆವ ಜೀವರಲ್ಲಿದ್ದರೇನು, ತ್ರಿವಿಧ ಜೀವಿಗಳಾದ ಎಲ್ಲ ಜೀವರಲ್ಲಿ ಪ್ರೇರಕರಾಗಿರುವರು, ತ್ರಿವಿಧರಲ್ಲಿ ಇದ್ದು, ಇನ್ನು ಆವ ಕರ್ಮವ ಮಾಡಿದರೇನು=ತ್ರಿವಿಧ ಯೋಗ್ಯ ಸಾತ್ವಿಕ-ಮಿಶ್ರ-ತಮೋಗುಣ ಕಾರ್ಯ ಕರ್ಮ ಮಾಡಿಸಿದರೇನೂ ಅವರಿಗೆ ಭಯವಿಲ್ಲ. ಏಕೆಂದರೆ, ಆವ ಗುಣರೂಪೋಪಾಸನೆ ಮಾಡಲಿನ್ನೇನು=ಭಗವಂತನ ಅನಂತ ಗುಣಗಳಲ್ಲಿ, ಅನಂತ ರೂಪಗಳಲ್ಲಿ ಅಭೇದವನ್ನು ತಿಳಿದು ಯಾವ ರೂಪವನ್ನು ಉಪಾಸನೆ ಮಾಡಿದರೂ ಕಿಂಚಿತ್ತಾದರೂ ಪಾಪಲೇಪವಿಲ್ಲ. ಕಾವನಯ್ಯನ=ಕಾಮಪಿತನಾದ ಸುಂದರ ಪ್ರದ್ಯುಮ್ನನಾದ (ಇಲ್ಲಿ ಕಾಮನೈಯ್ಯ-ಕಾಮ ಶ್ರೀ ಹರಿಯಾಜ್ಞೆಯಿಂದ ಜೀವರನ್ನು ಕಾಮಬಾಣದಿಂದ ಮೋಹಿತರನ್ನಾಗಿ ಪಾಪಕೃತ್ಯಗಳನ್ನು ಮಾಡಿಸಿದರೂ ಆ ಕಾಮದೇವರು ನಿರ್ಲಿಪ್ತರು. ಹರಿಸೇವೆನಿರತರು). ಹರಿಯ ಪರಮ=ಉತ್ತಮವಾದ, ಕಾರುಣ್ಯಾವಲೋಕನ ಬಲದಿ=ಕರುಣಾದೃಷ್ಟಿ ನೋಟದ ಬಲದಿಂದ, ಆಚರಿಪ ತತ್ವೇಶರಾದ ದೇವತೆಗಳನ್ನು, ಪಾಪಕರ್ಮಗಳು ಮುಟ್ಟಲಾಪವೆ ? ಪಾಪಕರ್ಮ ಸ್ವಲ್ಪವಾದರೂ ಲೇಪವಿಲ್ಲ.

**ದ್ರೌಪದೀಶ ಪತಿವಿಠಲರು:** ವ್ಯಾಖ್ಯಾನ ೧೭ನೇ ಪದ್ಯದವರೆಗೆ ಇಲ್ಲ.

**ಭಾವಸೂಚನ:** ಸ್ವೈರಂ ಚೇತರಮುನಯೋ ಯದನುಗ್ರಹೇ ಚತ್ಯುಕ್ತ್ವಾ ತಸ್ಯೇಚ್ಛಯಾತವಪುಷೀ ಕುತಏವ ಬಂಧ ಇತಿ ಭಾಗವತೇ ॥ ೧೦ ॥

"ಆವ" ಇತಿ ॥ "ಸ್ವಾತಂತ್ರ್ಯಾತ್ ಪ್ರೀತಿತಃ ಹರೇಃ ॥" "ಆಜ್ಞಯಾ ಚಾನ್ಯಗಂ ನೈವ ಭೋಗಾಯ ಭವತಿ ಕ್ವಚಿತ್ ॥" "ಪುಣ್ಯೇನೈವ" ಇತಿ ಚ ಉಕ್ತೇಃ ॥ ಆಪವೇ=ಆದಾವೇ ! ಕಾಕುಃ ॥ ೧೦ ॥

"ಸರ್ವತಂತ್ರ ಸ್ವತಂತ್ರನಾದುದರಿಂದ ಹರಿಯ ಪ್ರೀತಿಯನ್ನು ಪಡೆಯುವದಕ್ಕಾಗಿ ಅವನಿಂದ ಕರುಣಾವಲೋಕನದಿಂದ ಪ್ರೇರಿತರಾಗಿ ದೈತ್ಯಶರೀರದಲ್ಲಿ ಪಾಪಕರ್ಮ ಮಾಡಿಸಿದರೂ (ಮಾಡಿದರೂ) ದೇವತೆಗಳಿಗೆ ಆ ಪಾಪಕರ್ಮಗಳು ದುಃಖಭೋಗಕ್ಕೆ ಕಾರಣವಾಗಲಾರವು. ಅವರು ಇನ್ನೂ ಅಧಿಕವಾದ ಪುಣ್ಯದಿಂದಲೇ ಮುಕ್ತರಾಗಿ ಸುಖಭೋಗವನ್ನೇ ಅನುಭವಿಸುತ್ತಾರೆ" ಎಂದು ಪ್ರಮಾಣಗಳಲ್ಲಿ ಹೇಳಲಾಗಿರುತ್ತದೆ. "ಆಪವೇ=ಆದಾವೇ ! ಇಲ್ಲಿ ಕಾಕು

ಸ್ವರವಿರುತ್ತದೆ. ಅಂದರೆ "ಮುಟ್ಟಲಾಪವೇ ?'' ಎಂದಿಗೂ ಇಲ್ಲ ; ಎಂಬ ಅರ್ಥವು ಇಲ್ಲಿ ಅಡಕವಾಗಿರುತ್ತದೆ. ‖ ೧೦ ‖

**ಅವತರಣಿಕಾ:** ಇಂತು ತತ್ವಾಭಿಮಾನಿ ದೇವತೆಗಳು ಭಗವಂತನ ಆಜ್ಞೆ ಭಗವಂತನ ಸ್ಮರಣೆಯಿಂದ ಕಲ್ಯಾದಿಗಳಲ್ಲಿ ಪ್ರೇರಿಸಿ ಪಾಪಕೃತ್ಯಗಳನ್ನು ಮಾಡಿಸಿದರೂ, ಪಾಪ ನಿರ್ಲೇಪರು ಎಂಬುದನ್ನು ದೃಢೀಕರಿಸಲು ದೃಷ್ಟಾಂತದಿಂದ ಹೇಳುತ್ತಾರೆ.

ಮೂಲ :

**ಪತಿಯೊಡನೆ ಮನಬಂದ ತೆರದಲಿ ।**
**ಪ್ರತಿದಿವಸದಲಿ ರಮಿಸಿ ಮೋದಿಸಿ ।**
**ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು ‖**
**ಕೃತಿಪತಿ ಕಥಾಮೃತ ಸುಭೋಜನ ।**
**ರತ ಮಹತ್ಮರಿಗಿತರ ದೋಷ ।**
**ಪ್ರತತಿಗಳು ಸಂಬಂಧಿಸುವವೇನಚ್ಯುತನ ದಾಸರಿಗೆ ‖ ೧೧ ‖**

**ಪದ್ಯಾರ್ಥ:** ಪತಿವ್ರತೆಯಾದ ಸತಿಯು, ಪತ್ನಿಯು, ಪತಿಯೊಡನೆ=ತನ್ನ ಸ್ವಪತಿಯಾದ ಪುರುಷನ ಸಂಗಡ, ಮನಬಂದ ತೆರದಲಿ=ಮನಸ್ಸಿಗೆ ಬಂದಂತೆ ಸತಿಪತಿಯರು ಕಾಮಾತುರರಾಗಿ ಯಾವ ಕಾಲ, ಧರ್ಮವನ್ನು ಅನುಸರಿಸದೇ, ಪ್ರತಿದಿವಸದಲಿ ರಮಿಸಿ ಮೋದಿಸಿ = ಗೃಹಸ್ಥಾಶ್ರಮಿಗಳಿಗೆ ಋತುಕಾಲದಲ್ಲಿ ಪತ್ನಿಯ ಭೋಗಿಸಬೇಕೆಂಬ ನಿಯಮವನ್ನು ಬಿಟ್ಟು, ಪ್ರತಿಕಾಲ ಪ್ರತಿನಿತ್ಯ, ಪತಿ ಇಚ್ಛಾ ಪೂರೈಸಲು, ರಮಿಸಿ ಮೋದಿಸಿ=ರಮಣಮಾಡಿ ಆನಂದಪಡುತ್ತಾ ಹರ್ಷದಿಂದ ಸಂಸಾರದಲ್ಲಿ ಮಕ್ಕಳ ಪಡೆದಿದ್ದರೂ, ಆ ಪತಿವ್ರತಾ ಶಿರೋಮಣಿಯು ಜಿತೇಂದ್ರಿಯಳೆಂದು ಕರೆಸುವಳು=ಇಂದ್ರಿಯಗಳನ್ನು ಜೈಸಿದವಳೆಂದು ಇಂದ್ರಿಯ ಸಂಯಮಿ ಎಂದು ಕರೆಸುತ್ತಾಳೆ. ಅದರಂತೆ ಕೃತಿಪತಿ ಕಥಾಮೃತ ಸುಭೋಜನರತ ಮಹಾತ್ಮರಿಗೆ=ಕಾಮಜನನಿ ಕೃತಿದೇವಿಯ ಪತಿಯಾದ ಪ್ರದ್ಯುಮ್ನದೇವನ, ಕಥೆಯು=ಲೀಲಾ ಅಮೃತ. ಹರಿ ವ್ಯಾಪಾರವೆಂಬುವದೇ ವಿಮಲ ಪುಣ್ಯತಮವಾದ ಅಮೃತ. ಈ ಕಥೆಯ ರಸಪಾನ ಮಾಡುವವರಿಗೆ ಮೃತಿಯೇ ಇಲ್ಲ. ಅಥವಾ ಅಮೃತ ಮೋಕ್ಷಕ್ಕೆ ನಾಮ= ಹರಿಕಥಾಮೃತ ಪಾನಮಾಡುವ ಮಹಾತ್ಮರಿಗೆ ಇತರ=ಕ್ಷುದ್ರವಾದ, ಮತ್ತು ಪಂಚ ಮಹಾಪಾತಕ, ದೋಷಪ್ರತತಿಗಳು=ಪಾಪ ಸಮೂಹಗಳು, ಅಚ್ಯುತನ

ದಾಸರಿಗೆ ಸಂಬಂಧಿಸುವವೆ ?=ಸಂತತ ಅಗಲದೇ ಚ್ಯುತನಾಗದೇ ಇದ್ದ ಬಿಂಬ ರೂಪಿ ಹರಿಯ ಅಧೀನರಾಗಿರುವ ದಾಸರಿಗೆ, ಯಾವ ಪಾಪ ಸಂಬಂಧವಿಲ್ಲ.

**ಭಾವಸೂಚನ:** ಪತೀತಿ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಯದಿ ಕುರ್ಯಾತ್ ಪ್ರಮಾದೇನ" ಇತ್ಯತ್ರ "ಯೋಗೇನೈವ ದಹೇತ್ ದೇಹಮ್" ಇತಿ | ಅಶುಚಿತ್ವಾದಿಕಂ ಚಾಸ್ಯ | "ಯದ್ಯ ಧರ್ಮಃ ಕೃತಃ ಸದ್ಭಿಃ ನ ಸವಾಚ್ಯಃ ||" ಇತ್ಯಾದಿ ಆತ್ಮಕೃತ್ಯಾರೂಢಂ ನಿದರ್ಶನ ಪೂರ್ವಕಂ ಕರೋತಿ "ಪತಿಯೊಡನೆ" ಇತಿ || ಕೃತಿಃ ಪ್ರದ್ಯುಮ್ನಶಾಲಿನೀ || ೧೧ ||

## ಕನ್ನಡಾರ್ಥ

"ಯದಿ ಕುರ್ಯಾತ್ ಪ್ರಮಾದೇನ'' ಎಂಬಲ್ಲಿ "ಯೋಗದಿಂದಲೇ ದೇಹವನ್ನು ದಹಿಸತಕ್ಕದ್ದು'' ಎಂದು ಅಶುಚಿತ್ವ ಮುಂತಾದವುಗಳನ್ನು ಹೇಳಲಾಗಿರುತ್ತದೆ. "ಸಜ್ಜನರು ಅಧರ್ಮವನ್ನೆಸಗಿದರೆ ಅದನ್ನು ಎಣಿಸಕೂಡದು'' ಎಂದು ಹೇಳಿರುವ ವಿಷಯಗಳನ್ನು ದೃಷ್ಟಾಂತಪೂರ್ವಕವಾಗಿ ತಿಳಿಸುತ್ತಾರೆ. "ಪತಿಯೊಡನೆ'' ಎಂಬ ಪದ್ಯದಿಂದ ಕೃತಿಯು ಪ್ರದ್ಯುಮ್ನರೂಪೀ ಪರಮಾತ್ಮನ ಸತೀಯಾದ ಲಕ್ಷ್ಮೀ ರೂಪ. || ೧೧ ||

**ಅವತರಣಿಕಾ:** ಇಲ್ಲಿ ಪರಿಯಂತವಾಗಿ ಬಿಂಬೋಪಾಸನೆ ದ್ವಾರಾ ಸರ್ವಕರ್ಮ ಸಮರ್ಪಣ ಮಾಡುವ ತತ್ವಾಭಿಮಾನಿ ದೇವತೆಗಳ ಲಕ್ಷಣವನ್ನು ತಿಳಿದ ಯೋಗಿಗಳ ಲಕ್ಷಣ ಹೇಳಿ, ಈ ೧೨ನೇ ಪದ್ಯಾರಂಭಿಸಿ ೬ ಪದ್ಯಗಳಿಂದ ಭಗವಂತನ ಸರ್ವಕರ್ತೃತ್ವ ತಿಳಿಯದೆ ಅಹಂ ಕರ್ತೃವೆಂದು ಭಾವಿಸುವ ಕಲ್ಲ್ಯಾದಿ ತಮೋಯೋಗ್ಯರು ಕುಯೋಗಿಗಳ ಲಕ್ಷಣ ಅವರಿಗಾಗುವ ಗತಿ ಇವುಗಳನ್ನು ದೃಷ್ಟಾಂತದಿಂದ ವರ್ಣಿಸುತ್ತಾರೆ.

ಮೂಲ :

**ಸೂಸಿ ಬಹ ನದಿಯೊಳಗೆ ತನ್ನ ಸ |**
**ಹಾಸ ತೋರುವೆನೆನುತ ಜಲಕ್ಕೈದಿ |**
**ರೀಸಿದರೆ ಕೈಸೋತು ಮುಳುಗುವ ಹರಿಯ ಬಿಟ್ಟವನು ||**
**ಕ್ಲೇಶ ವೈದುವ ನಾದಿಯಲಿ ಸ |**
**ರ್ವೇಶ ಕ್ಲುಪ್ತಿಯ ಮಾಡಿದುದ ಬಿ |**
**ಟ್ಟಾಸೆಯಿಂದಲಿ ಅನ್ಯರಾರಾಧಿಸುವ ಮಾನವನು || ೧೨ ||**

**ಪದ್ಯಾರ್ಥ:** ಹೇಗೆ ಸೂಸಿಬಹ ನದಿಯೊಳಗೆ=ನದಿಯು ವರ್ಷಾಕಾಲ ದಲ್ಲಿ ಎರಡೂ ತಟ=ದಡ ತುಂಬಿ ಹರಿಯುತ್ತಲಿದೆ, ನೌಕೆ ಹರಿಗೋಲು ಇದ್ದರೂ (ಭವಾಂಬುಧಿಯ ದಾಟಿಸುವ ಅಂಬಿಗನಾದ ಬಿಂಬರೂಪಿ ಹರಿಯಿದ್ದರೂ ಮರೆತು) ಇದೋ ಇಷ್ಟೇ ಪ್ರವಾಹವೋ ಇದನ್ನು ದಾಟುವದು ಏನಾಶ್ಚರ್ಯ. ನನ್ನ ದೇಹ ಬಲ ನೋಡಿ, ಸಾಹಸ ನೋಡಿ. ನಾವೆ ಯಾತಕ್ಕೆಂದು, ನದಿಯು ಹರಿಯುವ ಪ್ರವಾಹಮಾರ್ಗವನ್ನು ಬಿಟ್ಟು ತುಂಬಿಬರುವ ನದಿಯ ಪ್ರವಾ ಹಕ್ಕೆ, ಜಲಕ್ಕೆ ಎದುರು ಈಸಿದರೆ=ಎದುರಾಗಿ ಈಸಿದರೆ ಸ್ವಲ್ಪೇ ಕಾಲದಲ್ಲೇ ಅಹಂಮತಿ ವಿಶಿಷ್ಟನು ಈಜುತ್ತ ಈಜುತ್ತ ಕೈಸೋತು ಜಲದಿ ಮುಳುಗಿಯೇ ಬಿಡುವನು, ಹೇಗೋ ಹಾಗೆಯೇ=ಹರಿಯಬಿಟ್ಟವನು ಬಿಂಬನಾದ ಶ್ರೀ ಹರಿ ಯನ್ನು ಮರೆತು, ಧ್ಯಾನೋಪಾಸನೆಯನ್ನರಿಯದೇ ಸದ್ಗುರುಗಳ ಸಂಗವಾ ಗದೇ–ನೀರ ಹರಿಯನ್ನು ಬಿಟ್ಟವನಂತೆ ಕ್ಲೇಶವೈದುವ=ನಾನಾ ತರಹ ಯೋನಿ ಗಳಲ್ಲಿ ಜನಿಸಿ ದುಃಖಪಡುತ್ತಾನೆ. ಹೀಗೆ ಬಿಂಬನಾದ ಹರಿಯನ್ನು ಭಜಿಸದೇ ಸರ್ವೇಶನಾದ ಹರಿಯು, ಜೀವರ ಯೋಗ್ಯತೆಯನ್ನನುಸರಿಸಿ, ಏನೇನು ಕರ್ಮ ಯಾವಾವ ಜನ್ಮದಲ್ಲಿ ಅನುಭವಿಸಬೇಕೋ ಇದರ ಕ್ಲುಪ್ತಿ=ಗೊತ್ತುಮಾಡಿದ ನಿಶ್ಚಲವಾದ ನಿಯಮುವನ್ನರಿಯದೇ, ಆಸೆ=ದುರಾಶೆ ಕೆಟ್ಟ ಆಶೆಯಿಂದಲಿ, ಅನ್ಯರಾರಾಧಿಸುವ ಮಾನವನು=ಯಲ್ಲಮ್ಮ ಯಕನಾತಿ ಮುಂತಾದ ಕ್ಷುದ್ರ ದೇವತೆಗಳನ್ನು ಪೂಜಿಸುವ ಮಾನವನು ದುಃಖಪಡುತ್ತಾನೆ. ಕಾರಣ ಅಹಂ ಮತಿ ಸಲ್ಲದು.

**ಭಾವಸೂಚನ:** ಸೂಸಿತಿ ||

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸೂಸಿ'' ಇತಿ || ಸಹಾಸ–ಸಾಹಸ | "ಹರಿ'' ಇತಿ ದ್ವ್ಯರ್ಥಃ || ೧೨ ||

### ಕನ್ನಡಾರ್ಥ

"ಹರಿಯ ಬಿಟ್ಟವರು. ತುಂಬಿ ಹರಿಯುವ ನದಿಯಿದುರು ಈಜುವನು ಮುಳುಗುವಂತೆ ಕ್ಲೇಶವನೈದುವರು'' ಎಂದು ಹೇಳಿರುತ್ತಾರೆ. ಇಲ್ಲಿ "ಹರಿಯು'' ಎಂಬ ಪದವು ಎರಡು ಅರ್ಥಗಳನ್ನು ಹೇಳುತ್ತದೆ. ಪರಮಾತ್ಮನನ್ನು ಬಿಟ್ಟ ವರು ಎಂದು ಹೇಳುವಾಗ "ಹರಿ ನಾರಾಯಣ'' ಎಂದು ಒಂದು ಅರ್ಥ. "ಪ್ರವಾಹದ ಹರಿವನ್ನು ಬಿಟ್ಟವರು'' ಎಂದು ದೃಷ್ಟಾಂತದಲ್ಲಿ ಹೊಂದಿಸು

ವಾಗ "ಪ್ರವಾಹದ ಹರಿ'' ಎಂದು ಎರಡನೇಯ ಅರ್ಥ. ಅಂದರೆ ಹರಿಯು ಬಿಟ್ಟವನು. ಪ್ರವಾಹದ ಹರಿಯು ಬಿಟ್ಟವನೂ ನಾರಾಯಣನನ್ನು ಬಿಟ್ಟವನೂ ಇಬ್ಬರೂ ಹರಿಯನ್ನು ಬಿಟ್ಟವರು'' ಎಂದು ಇಬ್ಬರಲ್ಲಿಯೂ ಹರಿಯು ಬಿಟ್ಟವರು ಎಂಬುದರ ಸಮನ್ವಯವಿದರಿಂದ ಆಗುತ್ತದೆ. ॥ ೧೨ ॥

**ಅವತರಣಿಕಾ:** ಮತ್ತು ಅಹಂಕಾರ ಯುಕ್ತರಾದ ಜಡಮತಿಗಳ ಲಕ್ಷಣ ಹೇಳುತ್ತಾರೆ ದೃಷ್ಟಾಂತಪೂರ್ವಕವಾಗಿ.

ಮೂಲ :

**ನಾನು ನನ್ನನು ಎಂಬ ಜಡಮತಿ ।**
**ಮಾನವನು ದಿನದಿನದಿ ಮಾಡುವ ।**
**ಸ್ನಾನ ಜಪದೇವಾರ್ಚನೆಯೆ ಮೊದಲಾದ ಕರ್ಮಗಳ ॥**
**ದಾನವರು ಶಳದೊಯ್ವರಲ್ಲದೆ ।**
**ಶ್ರೀನಿವಾಸನು ಸ್ವೀಕರಿಸ ಮು ।**
**ದ್ದಾನೆ ಪಕ್ವ ಕಪಿತ್ಥಫಲ ಭಕ್ಷಿಸಿದ ವೋಲಹದು ॥ ೧೩ ॥**

**ಪದ್ಯಾರ್ಥ:** ನಾನು = ಈ ದೇಹವೇ ನಾನು, ದೇಹ ಜಡ, ಜೀವ ಚೇತನನು=ಇದರಲ್ಲಿ ಭೇದವನ್ನು ತಿಳಿಯದೇ ನಾನೆಂಬುವ ಅಹಂಕಾರ ಯುಕ್ತನೂ, ನನ್ನದು=ಈ ದೇಹ ನನ್ನದು ಮನೆಮಾರು ನನ್ನದು, ಧನಕನಕಾದಿಗಳು ನನ್ನವು ಎಂಬ ಜಡಭೇದವನ್ನರಿಯದ ದುರ್ಮತಿ, ಮತ್ತು ನನ್ನದು, ದಾರಾ ಪುತ್ರಮಿತ್ರ ಬಾಂಧವರು ನನ್ನವರು, ಎಂಬೋ ದುರಾಭಿಮಾನವು ಜೀವಜೀವರಿಗೆ ಬೇಧ ತಿಳಿಯದ ಮತಿ; ಮಾನವನು=ಮರ್ತ್ಯಾಧಮನು, ದಿನದಿನದಿ=ಪ್ರತಿಕಾಲ ಪ್ರತಿನಿತ್ಯ ಅಹಂಭಾವದಿಂದ ನಾನೇ ಮಾಡುವನೆಂದು, ಮಾಡುವ, ಸ್ನಾನ ಜಪ ದೇವವಾರ್ಚನೆ ಮೊದಲಾದ ಕರ್ಮಗಳು, ಇವೆಲ್ಲವೂ ಪುಣ್ಯ ಕರ್ಮಗಳಾದರೂ ಇವನ ಈ ಪುಣ್ಯ ಕರ್ಮಗಳನ್ನು ದೇವಾದಿಗಳ ಪ್ರೇರಣೆಯಿಂದ, ದಾನವರು ಶಳದೊಯ್ವರಲ್ಲದೇ=ದೈತ್ಯಾದಿಗಳು ಅಪಹರಿಸಿ ಕದಿಯುವರು. ಶ್ರೀನಿವಾಸನು ಸ್ವೀಕರಿಸ=ಶ್ರೀ ಲಕ್ಷ್ಮೀಪತಿಯಾದ ಹರಿಯು ಅಪ್ರೀತನಾಗಿ ಸ್ವೀಕರಿಸುವದಿಲ್ಲ. ಹೇಗಂದರೆ, ಮುದ್ದಾನೆ ಪಕ್ವ ಕಪಿಥ್ಥ ಫಲ ಭಕ್ಷಿಸಿದ ವೋಲಹದು=ಬೇಲದ (ಬೆಳವಿನ) ಕಾಯಿ ಪಕ್ವವಾಗಲು, ಅದರಲ್ಲಿ ಒಂದು ತರದ ಹುಳವಾಗುವವು. ಒಳಗಿಂದೊಳಗೆ ಆ ಪಕ್ವ ಕಪಿಥ್ಥವ ಎಲ್ಲ

ಹಣ್ಣನ್ನು ತಿನ್ನುವದು. ಇದಕ್ಕೆ ಮದ್ದಾನೆ ಎಂದು ಹುಳದ ಹೆಸರು. ಅದು ಮೇಲೆ ನೋಡಲು ಚನ್ನಾಗಿ ಇದ್ದರೂ ಒಳಗೆ ಹಣ್ಣಿನ ಸಾರವೇ ಇಲ್ಲದಾಗಿ ಹೇಗೆ ಭಕ್ಷಿಸಲಿಕ್ಕೆ ಉಪಯೋಗವಿಲ್ಲವೋ ಅದರಂತೆ ನಾನು ನನ್ನದೆಂಬ ದುರಭಿಮಾನದಿಂದ ಮಾಡಿದ ಪುಣ್ಯ ಕರ್ಮವಾದರೂ ವ್ಯರ್ಥ.

**ಭಾವಸೂಚನ:** ಕಪಿಥ್ಥೇತಿ || ಗಜಭುಕ್ತ ಕಪಿಥ್ಥವದಿತಿ ಭಾಗವತೇ|| ಓಲ್=ಅದರಂತೆ. || ೧೩ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಾನು" ಇತಿ || "ಅವೈಷ್ಣವ ಕೃತಃ ಯಜ್ಞೋ ದೀನೈಃ ದೇವೈಃ ತು ಭುಜ್ಯತೇ || ದೇವಸಂಜ್ಞಾಃ ಚ ದೀನತ್ವಾತ್ ಬ್ರಹ್ಮೇಂದ್ರಾದಿ ಸನಾಮಕಾಃ||" ಇತಿ ವಚನಾತ್ || "ಅಹಂತೇತಿ ನೃಣಾಂ ಕರ್ಮ ಗಜಭುಕ್ತ ಕಪಿತ್ಥವತ್ ||" ಅಹುದು=ಆಗೋದು.

## ಕನ್ನಡಾರ್ಥ

ವಿಷ್ಣುಭಕ್ತಿಯಿಲ್ಲದವರು ಅವೈಷ್ಣವರು ಮಾಡುವ ಯಜ್ಞ ಫಲವನ್ನು ದೀನರಾದ ದೇವತೆಗಳ ಹೆಸರಿನಿಂದ ಇರುವ ದೈತ್ಯರುಗಳು ಸ್ವೀಕರಿಸುತ್ತಾರೆ. ದೈತ್ಯರಿಗೆ ದೀನರಾದುದರಿಂದ "ದೇವ" ಎಂದು ಸಂಜ್ಞೆಯಾಗಿರುತ್ತದೆ. ಆಯಾ ದೇವತೆಗಳ ಹೆಸರೂ ಅವರಿಗೆ ಬಂದಿರುತ್ತದೆ" ಎಂದು ಪ್ರಮಾಣಗಳಿರುವದರಿಂದ ಅವೈಷ್ಣವರು ಆ ಆ ದೇವತೆಗಳ ಹೆಸರಿನಿಂದ ಆಹುತಿಯನ್ನಿತ್ತರೂ ಆ ಹೆಸರಿನ ದೈತ್ಯರು ಅವುಗಳನ್ನು ಸ್ವೀಕರಿಸಿ ವಿಫಲಗೊಳಿಸುತ್ತಾರೆ. "ನಾನು; ನನ್ನದು ಎಂದು ಅಹಂಕಾರದಿಂದ ಮಾಡಿದ ಮನುಷ್ಯರ ಕರ್ಮವು ಆನೆಯಿಂದ ತಿನ್ನಲ್ಪಟ್ಟ ಕಪಿತ್ಥದಂತೆ ವ್ಯರ್ಥ. ಗಜಸ್ನಾನವು ಹೇಗೆ ವ್ಯರ್ಥವೋ ಹಾಗೆ ಅಹಂಕಾರ ಯುಕ್ತವಾಗಿ ಮಾಡಲ್ಪಟ್ಟ ಕರ್ಮವು ವ್ಯರ್ಥವಾಗುತ್ತದೆ" ಎಂದು ತಿಳಿಯಬೇಕು.

**ಅವತರಣಿಕಾ:** ಹರಿಸರ್ವತ್ರ ವ್ಯಾಪ್ತನೆಂದರಿಯದ ಅಹಂಮತಿಯುಳ್ಳ ಮಾನವನು, ತೀರ್ಥಕ್ಷೇತ್ರ ಯಾತ್ರೆ ಮಾಡಿದರೂ, ಅನ್ನದಾನಾದಿ ಮಾಡಿದರೂ, ಮಂತ್ರಾದಿ ಜಪಮಾಡಿದರೂ ಏನೂ ಫಲವಿಲ್ಲವೆಂದು ಉಪದೇಶಿಸುತ್ತಾರೆ.

ಮೂಲ :

**ಧಾತ್ರಿಯೊಳಗುಳ್ಳಖಿಳ ತೀರ್ಥ ।**
**ಕ್ಷೇತ್ರ ಚರಿಸಿದರೇನು ಪಾತ್ರಾ ।**
**ಪಾತ್ರವರಿತನ್ನಾದಿ ದಾನವ ಮಾಡಿ ಫಲವೇನು ॥**
**ಗಾತ್ರ ನಿರ್ಮಲನಾಗಿ ಮಂತ್ರ ।**
**ಸ್ತೋತ್ರ ಪಠಿಸಿದರೇನು ಹರಿ ಸ ।**
**ರ್ವತ್ರ ಗತನೆಂದರಿಯದೇ ತಾ ಕರ್ತೃಯೆಂಬುವನು ॥ ೧೪ ॥**

**ಪದ್ಯಾರ್ಥ :** ಹರಿಸರ್ವತ್ರಗತನೆಂದರಿಯದೇ=ಶ್ರೀ ಹರಿಯು, ತನ್ನ ಬಿಂಬನೇ ಸರ್ವರಲ್ಲಿ, ಸರ್ವ ಸ್ಥಳದಲ್ಲಿ ವ್ಯಾಪ್ತ, ಸರ್ವ ಕರ್ತಾಕಾರಯಿತಾ ಎಂದು ತಿಳಿಯದೇ ಪರಮಾತ್ಮನ ವಿಸ್ಮರಣೆಯಿಂದ, ತಾ ಕರ್ತೃಯೆಂಬ ಮಾನವನು=ತಾನೇ ಸ್ವತಂತ್ರ, ತಾನೇ ಕರ್ತಾ ಎಂಬ ಹೆಮ್ಮೆಯುಳ್ಳ ಮಾನವನು, ಏನು ಮಾಡಿದರೂ ಫಲವಿಲ್ಲ. ಧಾತ್ರಿಯೊಳಗುಳ್ಳಖಿಳ ತೀರ್ಥಕ್ಷೇತ್ರ ಚರಿಸಿದರೇನು=ಗರ್ವಿಕೆಯಿಂದ ಭೂಮಿಯೊಳಗುಳ್ಳ ಸಮಸ್ತ ಪುಣ್ಯ ಕ್ಷೇತ್ರಗಳನ್ನೂ ಚರಿಸಿ ಯಾತ್ರೆ ಮಾಡಿದರೂ ಲೇಶ ಫಲವಿಲ್ಲ. ಪಾತ್ರಾಪಾತ್ರವರಿತು, ಅನ್ನಾದಿ ದಾನವ ಮಾಡಿ ಫಲವೇನು=ಇವರು ಯೋಗ್ಯರು ಇವರು ಅಯೋಗ್ಯರೆಂದು ತಿಳಿದು, ಅನ್ನ-ದ್ರವ್ಯ ದಾನಗಳನ್ನು ಮಾಡಿದರೂ ಫಲವಿಲ್ಲ. ಗಾತ್ರ ನಿರ್ಮಲನಾಗಿ ಮಂತ್ರ ಸ್ತೋತ್ರ ಪಠಿಸಿದರೇನು ? "ಉದಯ ಕಾಲದಲ್ಲಿ ಗದಗದ ನಡುಗುತ ನದಿಯೊಳು ಮಿಂದೆನು" ನಾನು ಪವಿತ್ರನಾದೆ ಮಹಾ ಪುಣ್ಯವಂತನೆಂದರಿದು, ಅನೇಕ ಮಂತ್ರ ಜಪಾದಿಗಳನ್ನು ಮಾಡಿದರೂ ಮತ್ತು ಹರಿಯ ಸ್ತೋತ್ರ ರೂಪವಾದ ಗ್ರಂಥಪಠಣೆ ಮಾಡಿದರೂ ಏನೇನೂ ಫಲವಿಲ್ಲ. ಹರಿ ವ್ಯಾಪ್ತ-ವ್ಯಕ್ತಕರ್ತೃ ಎಂಬುದು ಮರೆತರೆ ಪುಣ್ಯ ಕರ್ಮಗಳೆಲ್ಲ ಪಾಪಕರ್ಮಗಳೇ ಆಗುವವು.

**ಭಾವಸೂಚನ:** ಧಾತ್ರೀತಿ ॥ ೧೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಧಾತ್ರಿ" ಇತಿ ॥ "ಕುರುಕ್ಷೇತ್ರೇಣ ಕಿಂ ತಸ್ಯ ಕಿಂ ಕಾಶ್ಯಾ ಪುಷ್ಕರೇಣ ವಾ ॥" ಬ್ರಹ್ಮಕಾಂಡೇ ವಿಂಶಾಧ್ಯಾಯೇ ಭದ್ರೋಕ್ತಿಃ ॥ "ಕಾಶೀನಿವಾಸೇನ ಚ ಕಿಂ ಪ್ರಯೋಜನಂ ಕಿಂ ವಾ ಪ್ರಯಾಗೇ ಮರಣೇನ ತಾತ ಕಿಂ ವಾ ಮಖೈಃ

ಸಾಂಗ ಮನುಷ್ಠಿತೇನ ||೨|| ಸಮಸ್ತ ತೀರ್ಥಾಟ ನ ತಶ್ಚ ಕಿಂ ವಾ ಅಧೀತ ಶಾಸ್ತ್ರೇಣ ಸುತೀಕ್ಷ್ಣ ಬುಧ್ಯಾ|| ಯೇಷಾಂ ಜಿಹ್ವಾಗ್ರೇ ಹರಿನಾವೈ್ಯವ ನಾಸ್ತಿ"|| ಇತ್ಯುಕ್ತೇಃ || ೧೪ ||

**ಕನ್ನಡಾರ್ಥ**

"ಧಾತ್ರಿಯೊಳಗುಳ್ಳಖಿಳ ತೀರ್ಥಕ್ಷೇತ್ರ ಚರಿಸಿದರೇನು" ಎಂಬ ದಾಸರಾಯರ ವಚನವು "ಕುರುಕ್ಷೇತ್ರದಿಂದ ಅವನಿಗೆ ಏನು ಪ್ರಯೋಜನ? ಕಾಶಿಯಿಂದಲೋ ಪುಷ್ಕರದಿಂದಲೋ ಯಾವ ಪ್ರಯೋಜನ?" ಎಂದು ಹೇಳುವ ಪುರಾಣ ವಚನವನ್ನು ಅನುಸರಿಸಿರುತ್ತದೆ. "ಕಾಶೀ ನಿವಾಸ, ಪ್ರಯಾಗ ಮರಣ, ರಣದಲ್ಲಿ ಶತ್ರುಸಮ್ಮುಖ ಮರಣ, ಸಾಂಗಯಜ್ಞಾನುಷ್ಠಾನ, ಸಮಸ್ತ ತೀರ್ಥ ಕ್ಷೇತ್ರ ಸಂಚಾರ, ಸುತೀಕ್ಷ್ಣ ಬುದ್ಧಿಯಿಂದ ಶಾಸ್ತ್ರಾಧ್ಯಯನ ಇವುಗಳೆಲ್ಲವೂ ಅಹಂಕಾರವನ್ನು ಬಿಡದೆ ಹರಿಯ ನಾಮವನ್ನು ನಾಲಗೆಯಿಂದ ನುಡಿಯದೆ ಇದ್ದರೆ ಯಾವ ಪ್ರಯೋಜನವನ್ನೂ ಮಾಡಲಾರವು; ಅಲ್ಲದೇ ವಿಪರೀತ ಫಲ ವನ್ನು ಕೊಡುವವು" ಎಂದು ಗಾರುಡ ಬ್ರಹ್ಮಕಾಂಡದ ೨೦ನೇ ಅಧ್ಯಾಯದಲ್ಲಿ ನಿರೂಪಿತವಾಗಿರುತ್ತದೆ. || ೧೪ ||

**ಅವತರಣಿಕಾ:** ಶ್ರೀ ಹರಿಯ ಪದಹೃತ್ ಪುಂಡರೀಕದಲ್ಲಿ ಮನವನ್ನಿಡದೆ ಶ್ರೀ ಹರಿಯ ಧ್ಯಾನವ ಮರೆತು, ಏನು ಕರ್ಮ ಮಾಡಿದರೂ, ಯಾವ ಆಶ್ರಮದಲ್ಲಿದ್ದರೂ ಏನೂ ಫಲವಿಲ್ಲವೆಂದು ಉಪದೇಶಿಸುತ್ತಾರೆ.

ಮೂಲ :

**ಕಂಡ ನೀರೊಳು ಮುಳುಗಿ (ಮುಣುಗಿ) ದೇಹವ |**
**ದಂಡಿಸಿದ ಫಲವೇನು ದಂಡ ಕ |**
**ಮಂಡಲಂಗಳ ಧರಿಸಿ ಯತಿಯೆಂದೆನಿಸಿ ಫಲವೇನು ||**
**ಅಂಡಜಾಧಿಪನಂಸಗನ ಪದ |**
**ಪುಂಡರೀಕದಿ ಮನವಹರ್ನಿಶಿ |**
**ಬಂಡುಣಿಯ ವೋಲಿರಿಸಿ ಸುಖಬಡದಿಪ್ಪ ಮಾನವನು || ೧೫ ||**

**ಪದ್ಯಾರ್ಥ:** ಕಂಡ ನೀರೊಳು ಮುಳುಗಿ ದೇಹವ ದಂಡಿಸಿದ ಫಲ ವೇನು=ಹರಿಸ್ಮರಣೆ ರಹಿತರಾಗಿ ಇಂದು ಕಾಶಿ, ನಾಳೆ ಪ್ರಯಾಗ, ನಾಡದು ಬದರಿ ಹೀಗೆ ಯಾತ್ರಾದಿಗಳ ಮಾಡುವೆನೆಂಬ ಗರ್ವಿಷ್ಠನು, ಭೂಮಿಯಲ್ಲಿ

ಕಂಡ ಕಂಡಲ್ಲೆಲ್ಲ ಇದ್ದ, ವಾಪಿ-ಕೂಪ-ತಟಾಕ ನದ್ಯಾದಿಗಳಲ್ಲಿ ಮುಳುಗಿ= ಸ್ನಾನದ ಮರ್ಮವನ್ನು ಅರಿಯದೇ ನೀರಲ್ಲಿ ಮುಳುಗಿದರೂ ಏನು ಫಲವಿಲ್ಲ. ದಂಡ ಕಮಂಡಲಂಗಳ ಧರಿಸಿ ಯತಿ ಎಂದೆನಿಸಿ ಫಲವೇನು=ಹರಿಯ ಕರ್ತೃ ಹರಿಯ ವ್ಯಾಪ್ತತೆಯ ಅನುಸಂಧಾನವಿಲ್ಲದೇ ಯಾವ ಆಶ್ರಮ ಶ್ರೇಷ್ಠವಾದ ಯತ್ಯಾಶ್ರಮದ ಚಿನ್ಹಗಳಾದ, ದಂಡ=ಬಡಿಗೆ, ಕಮಂಡಲುಗಳ ನೀರು ತುಂಬುವ ಕುಂಬಳ ಸೋಟೆ, ಕಾವಿಶಾಠಿ ಕೈಲಿ ಜಪಮಾಲೆಗಳನ್ನು ಧರಿಸಿ ಮೇಲೆ ನೋಡುವರಿಗೆ ಯತಿಗಳಿವರು (ಅಂತರಂಗದಲ್ಲಿ ಹೊಟ್ಟೆ ಸಲುವಾಗಿ ವೇಷಹಾಕಿದ ದುರ್ಮತಿ ಎಂದು ಜ್ಞಾನಿ ದೃಷ್ಟಿ) ಎಂದು ತೋರುತ್ತ ಏನು ಯತ್ಯಾಶ್ರಮೋಚಿತ ಕರ್ಮಮಾಡಿದರೂ ಫಲವಿಲ್ಲ. ಏಕೆಂದರೆ, ಅಂಡಜಾಧಿಪ ನಂಸಗನ=ಪಕ್ಷಿಶ್ರೇಷ್ಠನಾದ ಗರುಡಾರೂಢನಾದ ಹರಿಯ, ಪದಪುಂಡರೀಕದಿ= ಪಾದ ಕಮಲದಲ್ಲಿ ಮನವಹರ್ನಿಶಿ=ಮನಸ್ಸನ್ನು ಪ್ರತಿನಿತ್ಯದಲ್ಲಿ ಹರಿಯ ಪದ ಕಮಲಪಲ್ಲಿ, ಬಂಡುಣಿಯವೋಲಿರಿಸಿ=ಭ್ರಮರ (ಗುಂಗೆ ಹುಳುವು) ಕಮಲ ರಸವನ್ನು ಸವಿಯುವಂತೆ, ಹರಿಪಾದಗಳನ್ನು ಮನದಲ್ಲಿಟ್ಟು ನೋಡಿ ನಲಿದಾಡಿ, ಸುಖ ಬಡದಿಪ್ಪ ಮಾನವನು=ಸಂತೋಷ ಹೊಂದದಿಪ್ಪ ಮಾನವನು ಏನು ಮಾಡಿದರೂ ಲೇಶ ಫಲವಿಲ್ಲ.

**ಭಾವಸೂಚನ:** ಕಂಡೇತಿ || ೧೫ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಂಡ" ಇತಿ || "ಕಿಂ ಸ್ಯಾತ್ ವರ್ಣಾಶ್ರಮಾಚಾರ್ಯೈಃ ||" ಇತ್ಯುಕ್ತೇಃ|| "ವೇಣುಭಿಃ ನ ಭವೇತ್ ಯತಿಃ" || ಅಂಡಜಾಧಿಪಃ ಗರುಡಃ || ಪುಷ್ಪರಸ ಗಂಧಃ || ಬಂಡುಣಿ=ಭ್ರಮರ || ೧೫ ||

## ಕನ್ನಡಾರ್ಥ

"ಕಂಡ ನೀರೊಳು ಮುಳುಗಿ" ಎಂಬ ದಾಸರಾಯರ ಪದ್ಯವು "ವರ್ಣಾಶ್ರಮ ಧರ್ಮಾಚರಣೆಯಿಂದ ಏನು ಆಗುತ್ತದೆ? ಹರಿಭಕ್ತಿ ವಿಹೀನನಿಗೆ ಇದೆಲ್ಲವೂ ವ್ಯರ್ಥ. ಹರಿಭಕ್ತಿಯಿಲ್ಲದವನು ಪರಮಾತ್ಮನನ್ನು ಶ್ರವಣ ಮನನ ಧ್ಯಾನಗಳಿಂದ ಉಪಾಸನೆ ಮಾಡದ ಯತಿಯು ಬಿದುರಿನ ದಂಡವನ್ನು ಹಿಡಿದ ಮಾತ್ರದಿಂದ 'ಸನ್ಯಾಸಿ-ಯತಿ'ಯೆನಿಸಲಾರ" ಎಂದು ಮುಂತಾಗಿ ಹೇಳುವ ಪುರಾಣ ವಚನಗಳ ಆಧಾರದಿಂದ ಹೊರಟಿರುತ್ತದೆ. **ಅಂಡಜ**=ಅಂಡ-ತತ್ತಿ

ಇದರಿಂದ ಹುಟ್ಟುವವು; ಪಕ್ಷಿಗಳು. ಇವುಗಳಿಗೆ **ಅಧಿಪ**–ನಾಯಕ ಒಡೆಯ ಗರುಡ. ಪುಷ್ಪರಸ–ಸೌಗಂಧ್ಯ, ಬಂಡುಣಿ–ಭ್ರಮರ. ಗುಂಗೇ ಹುಳ–ತುಂಬಿ. ॥ ೧೫ ॥

**ಅವತರಣಿಕಾ:** ಕಾಮಕ್ರೋಧಾದಿಗಳನ್ನು ಗೆಲ್ಲದೇ ಹೆಜ್ಜೆಹೆಜ್ಜೆಗೆ ಈ ದೇಹ ನಾನು; ಇವೆಲ್ಲ ಜಡವಸ್ತುಗಳು ನನ್ನವು; ಎಂಬ ಮನುಜಾಧಮನು। ಯಾವ ವ್ರತ ನಿಯಮ ಉಪವಾಸಮಾಡಿ, ವೇದ ಓದಿ ಶಾಸ್ತ್ರ ಹೇಳುತ್ತಾ ಪುರಾಣಾದಿಗಳನ್ನು ಹೇಳಿದರೂ ಏನೂ ಫಲವಿಲ್ಲವೆಂದು ಉಪದೇಶಿಸುತ್ತಾರೆ.

ಮೂಲ:

**ವೇದಶಾಸ್ತ್ರ ಪುರಾಣ ಕಥೆಗಳ ।**
**ಓದಿ ಪೇಳಿದರೇನು ಸಕಲ ನಿ ।**
**ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು ॥**
**ಓದನಗಳನು ಜರಿದು ಶ್ವಾಸ ನಿ ।**
**ರೋಧ ಗೈಸಿದರೇನು ಕಾಮ ।**
**ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ॥ ೧೬ ॥**

**ಪದ್ಯಾರ್ಥ:** ವೇದ-ಶಾಸ್ತ್ರ-ಪುರಾಣ-ಕಥೆಗಳು ಓದಿ ಪೇಳಿದರೇನು ?= ಆಮೂಲಾಗ್ರ ಸಕಲ ವೇದಗಳು ಅರ್ಥ ಅನುಸಂಧಾನವಿಲ್ಲದೇ ಓದಿದರೂ, ಶಾಸ್ತ್ರ=ಆರು ಶಾಸ್ತ್ರಗಳ ಮರ್ಮವರಿಯದೇ ಓದಿ ಘಟಪಟಾದಿ ಶಬ್ದಗಳಾಡಂಬರ ಬೆಳಸಿದರೇನು, ಪುರಾಣ ಕಥೆಗಳನ್ನು ಪೇಳಿದರೇನು=ಹದಿನೆಂಟು ಪುರಾಣ ಉಪ ಪುರಾಣ ಕಥಾ ಹರಿಯ ಕಥಾ ಲೀಲಾ ಮಾಹಾತ್ಮ್ಯೆಯನ್ನರಿಯದೇ ಪುರಾಣಗಳು ಕಥೆಗಳು ಏನು ಹೇಳಿದರೂ ಲೇಶ ಫಲವಿಲ್ಲ. ನಿಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು=ಶಾಸ್ತ್ರದಲ್ಲಿ ಹೇಳಿದಂತೆ ಎಲ್ಲ ನಿಷಿದ್ಧವಾದ ಕರ್ಮಗಳನ್ನೂ ಬಿಟ್ಟು, ಸತ್ಕರ್ಮ ರೂಪವಾದ ಪುಣ್ಯ ಕರ್ಮಗಳನ್ನು ಮಾಡಿದರೂ ಏನೂ ಫಲವಿಲ್ಲ. ಓದನಗಳನು ಜರಿದು ಶ್ವಾಸನಿರೋಧ ಗೈಸಿದರೇನು= ಅನ್ನವನ್ನು ಬಿಟ್ಟು, ಉಪವಾಸದಿಂದ್ದರೂ, ಉಸುರು ಬಂಧಿಸಿ ಪ್ರಾಣಾಯಾಮ ಮರ್ಮವನ್ನರಿಯದೇ ಶ್ವಾಸ ಬಂಧಿಸಿದರೂ ಏನೂ ಫಲವಿಲ್ಲ. ಏಕೆಂದರೆ, ಕಾಮ ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು=ಮನೋ ಬಯಕೆ, ಧನ ಹೆಂಡಿರ ಮಕ್ಕಳ ಮೇಲಿನ ಆಶೆ, ಕ್ರೋಧ=ಹೊಲೆ ಸಿಟ್ಟು,

ಮದ ಮೋಹ ಮತ್ಸರಾದಿ ಆರು ವೈರಿಗಳನ್ನು ನಾಶಗೈಸದೆ, ಪ್ರತಿ ಕ್ಷಣಕ್ಕೆ, ನಾನು ನನ್ನದು ಎಂಬ ಮಾನವನು, ಏನು ಪುಣ್ಯಕರ್ಮ ಮಾಡಿದರೂ ಫಲವಿಲ್ಲ.

**ಭಾವಸೂಚನ:** 'ವೇದೇತಿ' ॥ ಉಕ್ತಂ ಚ ಪುರೂರವ ಸಾ ॥ "ಕಿಂ ವಿದ್ಯಯಾ ಕಿಂ ತಪಸಾ, ಕಿಂ ತ್ಯಾಗೇನ ಶ್ರುತೇನವಾ ॥ ಕಿಂ ವಿವಿಕ್ತೇನ ಮೌನೇನ ಸ್ತ್ರೀಭಿರ್ಯಸ್ಯ ಮನೋಹೃತಮಿತಿ ॥ ೧೬ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವೇದ" ಇತಿ ॥ ಐಲಗೀತಾಯಾಂ ಚ "ಕಿಂ ವಿದ್ಯಯಾ ಕಿಂ ತಪಸಾ ಕಿಂ ದಾನೇನ ಶ್ರುತೇನ ವಾ ॥ ಕಿಂ ವಿವಿಕ್ತೇನ ಮೌನೇನ ಸ್ತ್ರೀಭಿಃ ಯಸ್ಯ ಮನಃ ಹೃತಮ್ ॥" ಇತಿ ॥ "ಭವತ್ಯಭಿಭವಃ ಕ್ವಾಪಿ ಪುನಃ ಕಾಲೇ ಫಲತ್ಯಪಿ॥ ಏವಂ ಪ್ರಾಯೇಣ ಲೋಕೇಸ್ಮಿನ್ ಜಹ್ಯೋಪಸ್ಥಂ ಚ ದುರ್ಜಯಮ್ ॥ ರಹಸ್ಥಾ ಕಾಮುಕೀ ನಾರೀ ಯಾ ವಾ ಕಾವಾಪಿ ಲಭ್ಯತೇ ॥ ನ ಶಕ್ಯಾ ಲಂಘಿತುಂ ಪ್ರಾಯಃ ತತೋ ವೈ ವರ್ಜಯೇದ್ರಹಃ॥ ವಿರಲಾಃ ಸಂತಿ ಧೀರಾಃ ತೇ ಕಾಶ್ಚಿತ್ ಧೀರಾಶ್ಚ ಯೋಷಿತಃ ॥ ಅತಃ ಸರ್ವತ್ರ ನೋ ಶಂಕಾಕಾರ್ಯಾ ಪುಂಸಿ ಚ ಯೋಷಿತಿ ॥ ವೃಥಾ ಶಂಕಾಂ ಪ್ರಕುರ್ವಾಣಃ ತಾವತ್ ಪಾಪಂ ಲಭೇತ ಸಃ ॥ ವಿದ್ವಾನ್ ಪರಿಹರೇತ್ ಸಂಗಂ ತಥಾ ನಾರ್ಯಪಿ ಭೂರಿಶಃ ॥ ದೈವಾತ್ ಉಪಗತೇ ಸಂಗೇ ನ ಪ್ರಮಾದ್ಯೇತ್ ವಿವಿಕ್ತ ದೃಕ್ ॥ ಕ್ಷಣಿಕಸ್ಯ ಸುಖಸ್ಯಾರ್ಥೇ ಮಹಾನರ್ಥಂ ಕಥಂ ಸಹೇತ್ ॥ ವೀರಃ ಸ ಏವ ಲೋಕೇ ಸ್ಮಿನ್ ಧನ್ಯೋ ವಿದ್ವಾನ್ ಸ ಏವ ಹಿ ॥ ಪ್ರಹಾರೈಃ ಕಾಮಬಾಣಾನಾಂ ನೈವ ಮೋಹಂ ವ್ರಜೇತ ಯಃ ॥ ಶ್ವಾನತ್ವಂ ಊರ್ವಶೀ ಸಂಗಾತ್ ವಿಶ್ವಾಮಿತ್ರೋಽ ಭಜನ್ ಮುನಿಃ ॥ ಸಹಸ್ರ ಭಗತಾಂ ಪ್ರಾಪ್ತಃ ಶಕ್ರಃ ಚಂದ್ರಶ್ಚ ಸಂಕ್ಷಯಮ್॥ ತಪಸಃ ಚ್ಯಾಪಿತಃ ಮತ್ಸ್ಯ ಸಂಗಾತ್ ಯೋಗೀ ಸ ಸೌಭರಿಃ ॥ ಅಹಲ್ಯಾ ತು ಶಿಲಾದೇಹಂ ಅನ್ಯೇನಾನಾ ಮುನೀಶ್ವರಾಃ ॥ ರಾಜರ್ಷಯಃ ದೇವರ್ಷಯಶ್ಚ ಮಹಾಯೋಗೇಶ್ವರಾಃ ಅಪಿ ॥ ಆರೂಢ ಯೋಗಾಃ ಪ್ರಾಯೇಣ ಸ್ತ್ರೀ ಸಂಗಾತ್ ಚ್ಯಾವಿತಾಃ ಧ್ರುವಮ್ ॥ ಸುಶೀಲಾ ಬ್ರಾಹ್ಮಣೀ ಪೂರ್ವಂ ವ್ಯಜ್ಞಾ ಪುಂ ಸಂಗಾತ್ ಈ ದೃಶಂ ಸುಖಮ್ ॥ ನಾನುಭೂತಂ ಮಯಾಪೂರ್ವಂ ಭೂಯಾತ್ ಇತಿ ತದೈವ ಹಿ ॥ ವೃತೇ ವಿದೇಹ ನಗರೇ ವೇಶ್ಯಾಽಭೂತ್

ಪಿಂಗಲಾಭಿಧಾ ॥ ನಾನಾ ಸತ್ಕರ್ಮ ನಿಚಯೈಃ ಸಾಽಂತೇ ಲೇಭೇ ಪರಾಂ ಗತಿಮ್ ॥ ಸದಸದ್ವಾಪಿ ಯತ್ ಕರ್ಮ ನ ವೃಥಾ ಜಾಯತೇ ಧ್ರುವಮ್ ॥" ಇತಿ ವಿಷ್ಣುರಹಸ್ಯೇ ॥ ೧೬ ॥

**ಕನ್ನಡಾರ್ಥ**

ಕಾಮಕ್ರೋಧಗಳನ್ನು ಜಯಿಸದವನಿಗೆ ವೇದಶಾಸ್ತ್ರಗಳು ಏನೂ ಉದ್ಧರಿಸಲಾರವು. ಈ ವಿಷಯುದಲ್ಲಿ ಕಾಮನಿಗ್ರಹದ ಬಗ್ಗೆ ಹೊರಟಿರುವ ಐಲಗೀತೆಯ ವಾಕ್ಯವನ್ನು ಉದಾಹರಿಸುತ್ತಾರೆ. ದಾಸವರ್ಯರು "ಸ್ತ್ರೀಯರ ಮೋಹಪಾಶದಲ್ಲಿ ಶಿಲುಕಿ ಪರಾಧೀನವಾದ ಮನಸ್ಸುಳ್ಳವನಿಗೆ ಏಕಾಂತದಲ್ಲಿದ್ದು ಮೌನವನ್ನಾಚರಿಸುವದು, ಬಹಳ ವಿದ್ಯೆ-ತಪಸ್ಸು-ದಾನ-ಶ್ರವಣ ಮುಂತಾದವುಗಳಿಂದ ಏನು ಪ್ರಯೋಜನ ?" ಎಂಬುದು ಐಲಗೀತ ಪದ್ಯಾರ್ಥ. "ಒಮ್ಮೆ ಮನಸ್ಸಿಗೆ ಪರಾಭವವೂ ಆಗುತ್ತದೆ. ಅದು ಮತ್ತೊಂದು ಕಾಲದಲ್ಲಿ ಫಲಿಸುತ್ತದೆ. ಹೀಗೆ ಲೋಕದಲ್ಲಿ ಸಾಮಾನ್ಯವಾಗಿ ಜಿಹ್ವಾ ಮತ್ತು ಉಪಸ್ಥ (ರಹಸ್ಯ) ಈ ಎರಡು ಇಂದ್ರಿಯಗಳನ್ನು ಜಯಿಸುವದು ದುಃಸಾಧ್ಯ. ರಹಸ್ಯದಲ್ಲಿ ಕಾಮುಕಳಾಗಲೀ ಯಾವಳೇ ಒಬ್ಬಳು ಏಕಾಂತದಲ್ಲಿ ಸಿಕ್ಕರೆ—ಕಂಡರೆ ಸಾಮಾನ್ಯವಾಗಿ ಕಾಮನ ಬಲೆಗೆ ಶಿಲುಕುವವರೇ ಬಹಳ. ಅದನ್ನು ತಪ್ಪಿಸಿಕೊಳ್ಳಲು ಸಾಮಾನ್ಯರಿಗೆ ಬಹುಶಃ ಶಕ್ಯವಾಗುವದಿಲ್ಲ. ಆದುದರಿಂದ ಸ್ತ್ರೀಯರೊಂದಿಗೆ ಏಕಾಂತದಲ್ಲಿರುವದನ್ನು ಬಿಡಬೇಕು.

ಕಾಮನನ್ನು ಜಯಿಸುವ ಧೀರ ಪುರುಷರು ಅಥವಾ ನಾರಿಯರು ಬಹಳ ವಿರಲ. ಎಲ್ಲಿಯೋ ಕೆಲವರೇ ದೊರೆಯುತ್ತಾರೆ. ಆದುದರಿಂದ ಎಲ್ಲರಲ್ಲಿಯೂ ದೋಷ ಸಂಶಯವನ್ನು ತರಕೂಡದು. ಹಾಗೆ ಒಬ್ಬ ಸ್ತ್ರೀ ಅಥವಾ ಪುರುಷನಲ್ಲಿ ನಿಷ್ಕಾರಣವಾಗಿ ದೋಷಶಂಕೆಯನ್ನು ಮಾಡಿದರೆ ಅವನಿಗೆ ಪಾಪವು ತಗಲುತ್ತದೆ. ಆದರೆ ಜ್ಞಾನಿಯಾದ ಮನುಷ್ಯನು ಮಾತ್ರ ಸಂಗ (ವಿಷಯ ಸಹವಾಸ) ವನ್ನು ಬಹು ಜಾಗರೂಕತೆಯಿಂದ ತಪ್ಪಿಸಿಕೊಳ್ಳಬೇಕು. ಹಾಗೆ ಏಕಾಂತದಲ್ಲಿ ದೈವವಶವಾಗಿ ಸ್ತ್ರೀ ಸಹವಾಸವು ಸಂಭವಿಸಿದರೆ ಆಗ ಮಾತ್ರ ದುರ್ಬುದ್ಧಿ ಮೋಹವನ್ನು ಹೊಂದಬಾರದು. ಕ್ಷಣಿಕ ಸುಖದ ಸಲುವಾಗಿ ಮಹಾಅನರ್ಥಗಳನ್ನು ಅನುಭವಿಸಬೇಕಾದೀತು ; ಇದು ಹೇಗೆ ಸಾಧ್ಯ. ಕಾಮನ ಬಾಣಗಳಿಂದ ಮೋಹವನ್ನು ಹೊಂದದವನೇ ನಿಜವಾದ ವೀರನು. ಅವನೇ ಲೋಕ

ದಲ್ಲಿ ನಿಜವಾದ ವಿದ್ವಾಂಸನು. ಅವನೇ ಮಾನ್ಯನು ಮತ್ತು ಧನ್ಯನು. ಊರ್ವಶಿಯ ಸಹವಾಸದಿಂದ ವಿಶ್ವಾಮಿತ್ರನು ನಾಯಿಯಾದನು. ಸ್ತ್ರೀ ವ್ಯಾಮೋಹದಿಂದ ಇಂದ್ರನು ವೈತುಂಬ ಯೋನಿ (ಛಿದ್ರ)ಗಳನ್ನು ಹೊಂದಿದನು, ಚಂದ್ರನು ಕ್ಷಯವನ್ನು ಹೊಂದಿರುತ್ತಾನೆ. ಮೀನಿನ ಸಹವಾಸ ಫಲವಾಗಿ ಸೌಭರಿ ಋಷಿಯು ತಪಸ್ಸಿನಿಂದ ಚ್ಯುತನಾದನು. ಅಹಲ್ಯೆಯು ಶಿಲೆಯಾದಳು. ಇದಲ್ಲದೇ ಇನ್ನೂ ಅನೇಕ ರಾಜರ್ಷಿ ದೇವರ್ಷಿಗಳೂ ಮಹಾಯೋಗ ಸಂಪತ್ಸಮೃದ್ಧರೂ, ಯೋಗಾರೂಢರೂ ಎಲ್ಲರೂ ಬಹಳವಾಗಿ ಸ್ತ್ರೀಸಂಗದಿಂದ ಚ್ಯುತರಾಗಿರುತ್ತಾರೆ. ಸುಶೀಲಾ ಎಂಬ ಬ್ರಾಹ್ಮಣ ಸ್ತ್ರೀಯು ಪುರುಷಸಂಗದಿಂದ "ಇಂಥ ಸುಖವನ್ನು ಇದಕ್ಕೂ ಪೂರ್ವದಲ್ಲಿ ನಾನು ಅನುಭವಿಸಿರಲಿಲ್ಲ; ಈ ಶರೀರ ಸಂಗ ಸುಖವಾಗಲಿ" ಎಂದು ವಾಸನೆಯಿಂದ ಆಗಲೇ ಮೃತಳಾಗಿ ವಿದೇಹ ನಗರದಲ್ಲಿ ವೇಶ್ಯಾಸ್ತ್ರೀಯಾಗಿ ಜನಿಸಿದಳು. "ಪಿಂಗಳಾ" ಎಂದು ಆಕೆಯ ಹೆಸರು ಲೋಕವಾಸಿಯಾಯಿತು. ಅವಳು ನಂತರ ಅನೇಕ ಸತ್ಕರ್ಮಗಳಿಂದ ಕೊನೆಗೆ ಸದ್ಗತಿಯನ್ನು ಪಡೆದಳು. ಸತ್ಕರ್ಮ ಅಸತ್ಕರ್ಮಗಳು ವ್ಯರ್ಥವಾಗದೇ ಫಲವನ್ನೇ ಕೊಡುವವು" ಎಂದು ಶ್ರೀ ವಿಷ್ಣುರಹಸ್ಯದಲ್ಲಿ ಹೇಳಿರುತ್ತದೆ. || ೧೬ ||

ಅವತರಣಿಕಾ : ಪ್ರತಿನಿತ್ಯವಲ್ಲಿ ಶ್ರೀನಿಕೇತನನಾದ ಹರಿಯು ಅವತಾರಾದಿ ಲೀಲಾ ಸ್ಮರಿಸದೆ, ಭಕ್ತಿಯಿಂದ ಬಹಿರ್ ಮತ್ತು ಅಂತರಂಗ ದೇಹಗಳಲ್ಲಿ ಆಯಾ ಸ್ಥಾನಗಳಲ್ಲಿಪ್ಪ ಹರಿಯ ರೂಪನಾಮಗಳನ್ನು ಸ್ಮರಿಸದೆ, ಧ್ಯಾನೋಪಾಸನ ಗೈಯ್ಯದೆ ಏನು ಮಾಡಿದರೂ ಲೇಶ ಫಲವಿಲ್ಲವೆಂದು ಉಪದೇಶಿಸುತ್ತಾರೆ.

ಮೂಲ:

**ಏನು ಕೇಳಿದರೇನು ನೋಡಿದ ।**
**ರೇನು ಓದಿದರೇನು ಪೇಳಿದ ।**
**ರೇನು ಪಾಡಿದರೇನು ಮಾಡಿದರೇನು ದಿನದಿನದಿ ॥**
**ಶ್ರೀನಿವಾಸನ ಜನ್ಮಕರ್ಮ ಸ ।**
**ದಾನುರಾಗದಿ ನೆನೆದು ತತ್ತ(ತ್) ।**
**ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ ॥ ೧೭ ॥**

**ಪದ್ಯಾರ್ಥ:** ಏನು ಕೇಳಿದರೇನು=ಪುರಾಣ ಪುಣ್ಯಕಥೆ ಶಾಸ್ತ್ರಗಳನ್ನು

ಬೇಕಾದಷ್ಟು ಕೇಳಿದರೂ, ಏನು ನೋಡಿದರೇನು=ಶಿಲಾದಿ ವಿಗ್ರಹ ಹರಿಯ ಮೂರ್ತಿಗಳನ್ನು ನೋಡಿದರೂ, ಏನು ಓದಿದರೇನು=ಶಾಸ್ತ್ರಾಭ್ಯಾಸ ಗುರುಗಳಲ್ಲಿ ಓದಿದರೂ, ಏನು ಪೇಳಿದರೇನು=ಶಾಸ್ತ್ರ ಪ್ರವಚನ ಮಾಡಿ, ಪುರಾಣಾದಿಗಳನ್ನು ಏನು ಹೇಳಿದರೂ, ಪಾಡಿದರೇನು=ಸಂಗೀತ, ನೃತ್ಯವಾದ್ಯಗಳೊಡನೆ ಏನು ಬೇಕಾದಷ್ಟು ರಾಗತಾಳದೊಂದಿಗೆ ಅನುರಾಗವಿಲ್ಲದೆ, ಧಂಭಕ್ಕಾಗಿ ಹಾಡಿದರೂ, ಏನು ಮಾಡಿದರೇನು=ಭಗವತ್ಪೂಜಾದಿ ಅನೇಕ ಕೆಲಸಗಳನ್ನು ದಿನದಿನದಿ=ಪ್ರತಿಕ್ಷಣಕ್ಕೆ ಏನು ಮಾಡಿದರೂ ಫಲವಿಲ್ಲ. ಏಕಂದರೆ ಶ್ರೀನಿವಾಸನ ಜನ್ಮಕರ್ಮ=ಶ್ರೀ ಲಕ್ಷ್ಮಿಯನ್ನು ವಕ್ಷಸ್ಥಳದಲ್ಲಿರಿಸಿಕೊಂಡ ಶ್ರೀಹರಿಯ, ಅವತಾರ–ಆದೇಶ–ವಿಭೂತ್ಯಾದಿ ಗುಣಕರ್ಮ ಕ್ರಿಯಾ ವ್ಯಾಪಾರಾದಿ ಲೀಲೆಗಳನ್ನು, ಸದಾನುರಾಗದಿ ನೆನದು=ಸರ್ವ ಕಾಲದಲ್ಲಿ ಭಕ್ತಿಯಿಂದ, ಪ್ರೀತಿಯಿಂದ ನೆನೆಯುತ್ತ, ತತ್ತತ್ ಸ್ಥಾನದಲ್ಲಿ=ದೇಹದ ಆಯಾ ಸ್ಥಾನಗಳಲ್ಲಿ ಮತ್ತು ಬಹಿರಂಗ ಬ್ರಹ್ಮಾಂಡದಲ್ಲಿ ೧೪ ಲೋಕಗತ, ಸಪ್ತ ದ್ವೀಪ, ಸಪ್ತ ಸಮುದ್ರಾದಿ ನವಖಂಡದಲ್ಲಿ ಹರಿಯ ಆಯಾ ಮೂರ್ತಿಗಳ ರೂಪ ಲಕ್ಷಣಗಳನ್ನು ತನ್ನಾಮಕನ ಸ್ಮರಿಸದವ=ಆಯಾ ಶಬ್ದ ವಾಚ್ಯನಾದ ಭಗವಂತನ ನಾಮ ಸ್ಮರಿಸದೇ–ಧ್ಯಾನೋಪಾಸನೆ ಮಾಡದೇ ಇದ್ದ ಮಾನವನು, ಏನು ಮಾಡಿದರೂ ಲೇಶ ಪುಣ್ಯವಿಲ್ಲ.

**ಭಾವಸೂಚನ:** ಏನೇತಿ ॥

**ದ್ರೌಪದೀಶ ಪತಿವಿಠಲರು:** ಏನು ಕೇಳಿದರೇನು ॥ ಪ್ರವಚನ ಮಾಡಿದ್ಹಾಂಗೆ ಧ್ಯಾನ ಇರಬೇಕು. ಧ್ಯಾನ ಇಲ್ಲದೇಹೋದರೆ ಫಲವಿಲ್ಲ.

**ವಿಶೇಷ ಸೂಚನೆ:** ಶ್ರೀ ವಿಜಯ ದಾಸಾರ್ಯರು "ಬಿಡು ಬಿಡು ದೇಹದ ದಂಡಿಸಿದ ಕರ್ಮ" ಸುಳಾದಿ (೧) ಪುಟ (೨) ಮಟ್ಟ ತಾಳದಲ್ಲಿ "ಧ್ಯಾನದೊಳಗೆ ಸ್ನಾನವಡಕಾ । ಧ್ಯಾನದೊಳಗೆ ಮೌನವಡಕಾ । ಧ್ಯಾನದೊಳಗೆ ದಾನವಡಕಾ । ಧ್ಯಾನದಿಂದ ಜ್ಞಾನವುಂಟು । ಧ್ಯಾನದೊಳಗೆ ದೇವರಡಕಾ । ಧ್ಯಾನದೊಳಗೆ ಸರ್ವವಡಕಾ । ಧ್ಯಾನವನ್ನು ಫಳಿಸಿಕೊಂಡು । ಧನ್ಯ ವಿಜಯವಿಠ್ಠಲನ್ನ । ಧ್ಯಾನವನ್ನು ಮಾಡು ನೀ ನಿಧಾನದಿಂದ ಭಕುತಿಯಲ್ಲಿ । ಧ್ಯಾನವನ್ನು ಬಿಟ್ಟ ನರಗೆ । ಏನು ಇರಲಿ ಎಲ್ಲ **ವಡಕಾ** ॥ ಎಲ್ಲವೂ ವಡಕ ಗಡಿಗೆಯಲ್ಲಿ ನೀರು ತುಂಬಿದಂತೆ ॥

ಮುಂದೆ **ರೂಪಕ ತಾಳದಲ್ಲಿ**

ಧ್ಯಾನರಹಿತನಾದ ಮನುಜ । ರೇನು ಕರ್ಮವ ಮಾಡಲೇನು । **ಆನೆ ಕಪಿತ್ಥ ನುಂಗಿದಂತೆ** । ಹೇನು ಬಿಡದೇ ವಾಸನಿಯು । ತಾನು ನಿರುತಾಶ್ರೈಸಿದಂತೆ । ಜಾಣನೊಬ್ಬ ಕಿನ್ನರಿ ಧರಿಸಿ ಕೋಣನಲ್ಲಿ ಮೀಟದಂತೆ । ಗಾಣದೊಳಗೆ ಮಳಲು ತುಂಬಿ, ಭಾನು ಮುಳುಗಿ ಸುತ್ತಿದಂತೆ ಕಾಣಿರೋ । ಧ್ಯಾನ ಜ್ಞಾನ ಸಂಗತಿಯಿಂದ ವಾನರನ್ನಮುಷ್ಟಿಯಂತೆ। ದೀನನಾಗಿ ಒಂದು ನಿಮಿಷಾ ಧ್ಯಾನವನ್ನು ಮಾಡಲು । ಶ್ರೀನಿವಾಸ ವಿಜಯವಿಠ್ಠಲ ಆನಂದವಾಗಿ ಒಲಿವನು । ಧ್ಯಾನದಿಂದ ಗತಿಗೆ ಸೋಪಾನವಾಗಲಿ ವಿರಚಿಸು ॥ ೩ ॥

ಎಂದು ದಾಸಾರ್ಯರ ಸುಳಾದಿ ಅರ್ಥವೇ ಪದ್ಯ ೧೩ ರಿಂದ ಪದ್ಯ ೧೭ರ ವರೆಗೆ ವಿಚಾರಿಸತಕ್ಕದು ಎಂದು ಪ್ರಾರ್ಥನೆ. ಕೊನೆಗೆ

**ಜತೆಯಲ್ಲಿ,**

ಧ್ಯಾನದಿಂದಲಿ ಮನಸು ನಿಲಿಸಿ ಜ್ಞಾನವ ಪಡೆದು । ಆನಂದ **ವಿಜಯ ವಿಠಲನ** ಲೋಕವ ಸೇರೊ ॥ ೮ ॥ ಎಂದು ಅಪ್ಪಣೆ ಕೊಡಿಸಿರುವದನ್ನು ಮರೆಯಬಾರದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಏನು" ಇತಿ ॥ ಅಭ್ಯಾಸಃ ತಾತ್ಪರ್ಯಾರ್ಥಃ ॥

### ಕನ್ನಡಾರ್ಥ

"ಏನು ಕೇಳಿದರೇನು" ಎಂಬ ಪದ್ಯದಲ್ಲಿ "ಏನು" ಎಂಬ ಪದವು ಅನೇಕ ಹೇಳಲ್ಪಟ್ಟಿರುತ್ತದೆ. ಈ ಒಂದೇ ಸಲ ಈ ಪದವನ್ನು ಉಪಯೋಗಿಸಿದರೆ ಕೇಳಿದರೇನು ? ಓದಿದರೆ ಏನು ? ಎಂಬ ವಿಶಿಷ್ಟ ಪ್ರಶ್ನಾಕ್ಷೇಪಗಳ ಅರ್ಥಗಳು ಆಗಬಹುದಾಗಿತ್ತು. ಆದರೂ ಹೀಗೆ ಅನೇಕಸಲ ಇದೇ ಪದವನ್ನು ಪ್ರಯೋಗ ಮಾಡುವದು. ದಾರ್ಢ್ಯ ಆದರ ತಾತ್ಪರ್ಯಗಳನ್ನು ಸೂಚಿಸುತ್ತದೆ ಎಂದು ಸಮಾಧಾನವನ್ನು ತಿಳಿಯಬೇಕು. ॥ ೧೭ ॥

**ಅವತರಣಿಕಾ:** ಶ್ರೀ ದಾಸಾರ್ಯರು ಅಪರೋಕ್ಷ ಜ್ಞಾನಿಗಳಾದರೂ, ಸ್ವಾಹಂಕಾರ ಖಂಡನಪೂರ್ವಕ, ಭಗವಂತನ ಧ್ಯಾನರತ ಧ್ಯಾನೋಪಾಸನೆ ಬಲದಿಂದ ಭಗವಂತ ಪ್ರೇರಿಸಿದಂತೆ ಈ ಮಹಾಕಾವ್ಯ ಪೇಳಿದೆನು, ಬುಧರು ಕೇಳುವದೆಂದು ಉಪದೇಶಿಸುತ್ತಾರೆ.

ಮೂಲ:

**ಬುದ್ಧಿ ವಿದ್ಯಾಬಲದಿ ಪೇಳಿದ ।**
**ಶುದ್ಧ ಕಾವ್ಯವಿದಲ್ಲ ತತ್ವ ಸು ।**
**ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ॥**
**ಮಧ್ವ ವಲ್ಲಭ ತಾನೆ ಹೃದಯದೊ ।**
**ಳಿದ್ದು ನುಡಿದಂದದಲಿ ನುಡಿದೆ ನ ।**
**ಪದ್ಧಗಳ ನೋಡದಲೆ ಕಿವಿಗೊಟ್ಟಾಲಿಪುದು ಬುಧರು ॥ ೧೮ ॥**

**ಪದ್ಯಾರ್ಥ:** ಜನರು ಶಂಕಿಸದಿರಿ, ನಾನೆ ನನ್ನ ಬುದ್ಧಿ ವಿದ್ಯಾಬಲದಿಂದ ಪೇಳ್ದೆನೆಂಬ ಶುದ್ಧ ಕಾವ್ಯವಿದಲ್ಲ=ನನ್ನ ಸ್ವಬುದ್ಧಿ ವಿದ್ಯಾಕ್ಕೆ ಪ್ರೇರಕಚೋದಕ ಹರಿಯು. ಹರಿಯು ನುಡಿದು ನುಡಿಸಿದಂತೆ ತಾನು ಪೇಳಿದ್ದೆ ನಿಜವಾದ ಮೇಲೆ ಇದು ಶುದ್ಧ ಕಾವ್ಯವೇಕಲ್ಲ ? ಸ್ವಬುದ್ಧಿ ವಿದ್ಯಾಬಲದಿಂದ ಹೇಳಿದ್ದಾದರೆ, ಕಾವ್ಯದಲ್ಲಿ ದೋಷವಿರುವವು! ತತ್ವ ಸುಪದ್ಧತಿಗಳನು ಬುಧರಿಂದ ತಿಳಿದ ಮಾನವನಲ್ಲ=ಮನುಜರಂತೆ ಜ್ಞಾನಿಗಳಾದ ಗುರುಗಳಿಂದ ಹರಿಯ ತತ್ವವಿಚಾರ ವನ್ನೂ, ಪದ್ಧತಿ=ಪೂರ್ವ ಸಂಪ್ರದಾಯವನ್ನು ತಿಳಿದವನಲ್ಲ, ದೇವತೆಗಳಾದ ದಾಸರು ಪೂರ್ವ ಸಂಸ್ಕಾರದಿಂದ ಇವೆಲ್ಲ ಅರಿತವರೇ ನಿಜ. ಆದರೆ, ಮಧ್ವ ವಲ್ಲಭ=ಮಧ್ವಾಂತರ್ಯಾಮಿ ಶ್ರೀ ಹರಿಯು ಎನ್ನ ಬಿಂಬನು, ಹೃದಯ ದೊಳಿದ್ದು=ಎನ್ನ ಸ್ವರೂಪ ದೇಹಾತ್ಮ ಹೃದಯ ಅಷ್ಟಕಮಲದಿ ಬಿಂಬನಾಗಿರುವ ಹರಿಯು ನುಡಿದಂದದಲಿ ನುಡಿದೆ (ಇಂಥ ದಾರಢ್ಯವಾದ ಹರಿಯಿಂದ ನುಡಿ ವರು, ಹರಿಯಿಂದ ನಡೆವರು ಇತ್ಯಾದಿಗಳು ದೇವತೆಗಳ ನಿಶ್ಚಯ ಜ್ಞಾನ) ಇದರಲ್ಲಿ ಏನಾದರೂ ತಪ್ಪುಗಳಿದ್ದರೆ, ನೋಡದಲೆ, ಕಿವಿಗೊಟ್ಟಾಲಿಪುದು ಬುಧರು=ಜ್ಞಾನಿಗಳಾದವರು ಕಿವಿಮುಟ್ಟೆ, ಏಕಾಗ್ರ ಚಿತ್ತದಿಂದ ಕೇಳುವದೆಂದು ತಮ್ಮ ಸ್ವಾಹಂಕಾರ ಖಂಡನದಿಂದ ವಿನಯಪೂರ್ವಕ ಹೇಳಿದ್ದಾರೆ. ವಿಸ್ತರ ಸಂಧಿಯ ಸಾರದಲ್ಲಿ ನೋಡಿರಿ.

**ದ್ರೌಪದೀಶ ಪತಿವಿಠಲರು:** ಬುದ್ಧಿ ವಿದ್ಯಾಬಲದಿ ಹೇಳಿದ್ದಲ್ಲ;– ಧ್ಯಾನೋಪಾಸನ ಜನ್ಯ ಜ್ಞಾನದಿಂದ ಹೇಳಿದಂಥಾದ್ದು.

**ಭಾವಸೂಚನ :** ಸ್ವಮಹಿಮತ್ವಂ ವಿನಯೇನ ಭೂಷಯತಿ ॥ ಬುದ್ಧೀತಿ ॥ ೧೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಯದಾ ವಕ್ತಿ ಚ ದೇವೇಶಃ ತದಾ ವಕ್ತಿ ಚ ಚೇತನಃ" ॥ "ಬಿಂಬ ಪೂರ್ವಾಃ ಕ್ರಿಯಾಃ ಸರ್ವಾಃ ಪ್ರತಿಬಿಂಬಸ್ಯ" ॥ ಇತ್ಯಾದ್ಯಭಿಪ್ರೇತ ಬಿಂಬ ಕ್ರಿಯಾಂ ಬ್ರುವನ್ ಏವಂ ಪ್ರಾಕ್ತನಪ್ರಮೇಯಾನುವಾದಾಗತಾತ್ಮ ಮಹಿತ್ವಂ ವಿನಯೇನ ಭೂಷಯಃ ಯತಿ—"ಮಧ್ವ" ಇತಿ ॥ "ಅಸ್ಮೃತ್ವಾ ಪ್ರಥಮಂ ಮಧ್ವಂ ಯಃ ವಿಷ್ಣುಂ ಸ್ಮರತೇಽಬುಧಃ ॥ ಕಂಠೇ ತಸ್ಯ ಶಿಲಾಂ ಬಧ್ವಾ" ಇತಿ ವಚನಾತ್ ॥ ೧೮ ॥

## ಕನ್ನಡಾರ್ಥ

"ವಿದ್ಯಾ ಬುದ್ಧಿಗಳ ಬಲದಿಂದಾಗಲೀ ಅಹಂಕಾರದಿಂದಾಗಲೀ ಈ ಗ್ರಂಥವನ್ನು ನಾನು ರಚಿಸಿಲ್ಲ; ಅಂಥ ಬುಧರಿಂದ ತಿಳಿದ ಮಾನವನೂ ನಾನಲ್ಲ" ಎಂದು ಹೇಳಿ "ಮಧ್ವ ವಲ್ಲಭನು ಹೃದಯದೊಳಿದ್ದು ನುಡಿದಂದ ದಲಿ ನುಡಿದೆ" ಎಂದು ಶ್ರೀಪತಿಯನ್ನು ಮಧ್ವವಲ್ಲಭನೆಂಬುದಾಗಿ ಸ್ತುತಿಸಿರು ತ್ತಾರೆ. "ದೇವೇಶನಾದ ಹರಿಯು (ಬಿಂಬರೂಪಿಯು) ಯಾವಾಗ ನುಡಿ ಯುವನೋ ಅವನ ಅಧೀನರಾದ ಜೀವರು ಆವಾಗಲೇ ನುಡಿಯುತ್ತಾರೆ." ಪ್ರತಿಯೊಂದರಲ್ಲಿ ಬಿಂಬರೂಪೀ ಹರಿಯ ವ್ಯಾಪಾರವು ಮೊದಲಿಗೆ ಆದ ನಂತರ ದಲ್ಲಿ ಅದನ್ನೇ ಅನುಸರಿಸಿ ಪ್ರತಿಬಿಂಬರಾದ ಜೀವರ ವ್ಯಾಪಾರ ಕ್ರಿಯೆಗಳು ನಡೆಯುವವು" ಎಂದು ಮುಂತಾಗಿ ಹೇಳಲ್ಪಟ್ಟ "ಬಿಂಬ ಕ್ರಿಯೆ"ಯನ್ನು ಹೇಳುವದು ಅವರ ಅಭಿಪ್ರಾಯವೆಂದು ತಿಳಿಯುತ್ತದೆ. ಮತ್ತು "ಇದು ವರೆಗೂ ಹೇಳಲ್ಪಟ್ಟ "ವಿಷಯ ಪ್ರಕ್ರಿಯೆಗಳೆಲ್ಲವೂ ನನ್ನ ಪಾಂಡಿತ್ಯದಿಂದ ನಿರೂಪಿತವಲ್ಲ. ಕೇವಲ ಭಗವತ್ಪ್ರೇರಣೆಯಿಂದ" ಎಂದು ತಮ್ಮ ವಿನಯವನ್ನು ತೋರಿಸಿದ್ದಾರೆ. "ಮೊದಲು ಗುರು ಮಧ್ವರಾಯರನ್ನು ಸ್ಮರಿಸದೇ ವಿಷ್ಣುಸ್ಮರಣೆ ಮಾಡುವವರನ್ನು ಕಂಠದಲ್ಲಿ ಕಲ್ಲುಕಟ್ಟಿ ಸಮುದ್ರದಲ್ಲಿ ಹಾಕಬೇಕು" ಎಂದು ಹೇಳಿರುವದರಿಂದ ತಮ್ಮ ಬಿಂಬನನ್ನು ಸ್ಮರಿಸುವಾಗ "ಮಧ್ವವಲ್ಲಭ" ಎಂದು ಗುರುಸ್ಮರಣೆಯನ್ನು ಮಾಡಿರುವರು. ॥ ೧೮ ॥

**ಅವತರಣಿಕಾ:** ಈ ಹರಿಕಥಾಮೃತಸಾರ ಗ್ರಂಥಪಠನಕ್ಕೆ ಅನಧಿಕಾರಿಗಳಾರು, ಅಧಿಕಾರಿಗಳಾರು ಎಂಬುದನ್ನು ೧೯-೨೦-೨೧-೨೨ ಈ ನಾಲ್ಕು ಪದ್ಯಗಳಿಂದ ತಿಳಿಸು ತ್ತಾರೆ. ಅನಧಿಕಾರಿಗಳ ಲಕ್ಷಣ ಹೇಳಿ ನಂತರ ಪ್ರತಿ ಪದ್ಯದಲ್ಲಿ ಅಧಿಕಾರಿಗಳ ಲಕ್ಷಣ ನಿರ್ಧರಿಸುತ್ತಾರೆ.

ಮೂಲ :

**ಕಬ್ಬಿನೊಳಗಿಹ ರಸ ವಿದಂತನಿ।**
**ಗ್ಹಬ್ಬ ಬಲ್ಲುದೆ ಭಾಗ್ಯ ಯೌವನ।**
**ಮಬ್ಬಿನಲಿ ವೈಮರೆದವಗೆ ಈ ಹರಿಕಥಾಮೃತವೂ॥**
**ಲಭ್ಯವಾಗದು ಹರಿಪದಾಬ್ಜದಿ।**
**ಹಬ್ಬಿದತಿ ಸದ್ಭಕ್ತಿರಸ ಉಂ।**
**ಡುಬ್ಬಿ ಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ ॥ ೧೯ ॥**

**ಪದ್ಯಾರ್ಥ:** ಕಬ್ಬಿನೊಳಗಿಹ ರಸ=ಕಬ್ಬು (ಖಬ್ಬು) ಕಬ್ಬಿನೊಳಗೆ ಇರುವ ಸಿಹಿರಸದ ರುಚಿ, **ವಿ-ದಂತನಿಗೆ**=ಹೋಗಲ್ಪಟ್ಟ ಹಲ್ಲು ಉಳ್ಳವನಿಗೆ, ಹಲ್ಲು ಬಿದ್ದವನಿಗೆ, ಖಬ್ಬು ತಿಂದು ಆಸ್ವಾದನೆ ಮಾಡುವುದು ಅಬ್ಬ ಬಲ್ಲದೆ= (ರುಚಿಯ ರಸಾಸ್ವಾದನೆ ಮಾಡುವದು) ಹೇಗೆ ಅಶಕ್ಯವೋ, ಭಾಗ್ಯ ಯೌವನ ಮಬ್ಬನಲಿ ವೈ ಮರೆದವಗೆ, ಅಖಂಡ ಸಂಪತ್ತು-ಯೌವನ-ತಾರುಣ್ಯಾವಸ್ಥೆ ಯಲ್ಲಿ ವಿಷಯ ಲೋಲುಪನಾದ ಮಾನವನಿಗೆ **ವಿದಂತಃ**=ದಾಮ್ಯತೀತಿ ದಂತಃ, ವಿಷಯಾದಿಗಳಿಂದ ಇಂದ್ರಿಯಗಳನ್ನು ದಮನಮಾಡಿ, ಉಪಶಮನ ವಿಶಿಷ್ಟನಾಗದೇ ಇರುವವನೂ, **ವಿದಂತನೇ**! ಇಂಥ ವಿಷಯ ಲೋಲುಪನಾದವ ನಿಗೆ ಈ ಹರಿಕಥಾಮೃತವು ಎಂದಿಗೂ ಲಭ್ಯವಾಗುವುದಿಲ್ಲ. ದೊರಕಿದರೂ, ವಿದಂತನಿಗೆ ಕಬ್ಬು ಸಿಕ್ಕರೂ ಅದರ ರುಚಿ ಹೇಗೆ ಸಿಗುವದಿಲ್ಲವೋ ಹಾಗೆ ಹರಿ ಕಥಾಮೃತದ ರುಚಿ ತೋರುವದಿಲ್ಲ. ಇವರೇ - ವಿಷಯಲೋಲುಪರಾದ **ವಿದಂತರೇ ಅನಧಿಕಾರಿಗಳು.** ಇನ್ನು ಎಂಥವರಿಗೆ ಈ ಹರಿಕಥಾಮೃತ ಲಭ್ಯವಾಗುತ್ತದೆಂದರೆ, ಹರಿಪದಾಬ್ಜದಿ ಶ್ರೀ ಹರಿಯ ಪಾದಗಳೆಂಬ ಕಮಲದಲ್ಲಿ ಹಬ್ಬಿದತಿ=ವ್ಯಾಪಿಸುವ ಪರಿಮಳ ರಸ, ಸದ್ಭಕ್ತಿಯಿಂ=ಸಮೀಚೀನ ವಿಶೇಷ ವಾದ ಜ್ಞಾನ ಭಕ್ತ್ಯಾದಿಗಳಿಂದ ರಸ ಉಂಡು, ಉಬ್ಬಿ=ಸಂತೋಷಾನಂದ ದಿಂದ, ಕೊಬ್ಬಿ=ದೇಹಪುಷ್ಟಿ ಹೊಂದಿ, ಸುಖಾಬ್ಧಿಯೊಳಗಾಡುವವಗಲ್ಲದಲೇ= ಹರಿಪದಾಬ್ಜ ಮಕರಂದವನ್ನು ಸೇವಿಸಿ, ಆನಂದ ಸಮುದ್ರದೊಳಗೆ ಸಂತೋಷ ದಿಂದ ಈಜಾಡುವವನಿಗೆ ಹರಿಕಥಾಮೃತವು ದೊರೆಯುವದು. **ಈ ಹರಿ ಭಕ್ತರೇ ಇದಕ್ಕೆ ಅಧಿಕಾರಿಗಳು.**

**ಭಾವಸೂಚನ:** ಖಬ್ಬಿನೇತಿ॥ ಅಬ್ಬಬಲ್ಲದೇ=ಹತ್ತೀತೆ, ಹತ್ತದು ॥೧೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಬ್ಬ" ಇತಿ ॥ "ಅಬ್ಬ"=ದವಡಿ. ಕೊಬ್ಬಿ=ಸೊಕ್ಕಿ.

## ಕನ್ನಡಾರ್ಥ

"ಸ್ರಕ್ ಚಂದನ ವನಿತಾ ವಿತ್ತ ಭೋಗಗಳಲ್ಲಿ ಪರಮಾಸಕ್ತರಾದವರಿಗೆ ಹರಿಚರಿತಾಮೃತದ ಸವಿಯು ರುಚಿಸುವದಿಲ್ಲ! ಈ ವಿಷಯದಲ್ಲಿ ಹಲ್ಲುಗಳಿಲ್ಲ ದವನಿಗೆ ರುಚಿಸದಿರುವ ಇಡೀ ಕಬ್ಬಿನ ದೃಷ್ಟಾಂತವನ್ನು ಈ ಪದ್ಯದಿಂದ ತಿಳಿಸಿ ರುತ್ತಾರೆ. ಇದರಿಂದ ಭಗವತ್ತತ್ವ ಜ್ಞಾನ-ಭಕ್ತಿ-ವೈರಾಗ್ಯ-ಶ್ರವಣ-ಮನನ ಮುಂತಾದವುಗಳಲ್ಲಿ ಸ್ವೋಚಿತಕರ್ಮಗಳನ್ನು ಆಚರಿಸುತ್ತ ಚಿತ್ತಶುದ್ಧಿಯನ್ನೂ ವಿಷಯ ತೃಷ್ಣೆಯನ್ನು ಕಳೆದುಕೊಂಡು ವಿರಕ್ತಿಯನ್ನು ಹೊಂದಿದವನೇ (ತತ್ವೋಪದೇಶಕ್ಕೆ) ಅರ್ಹನೆಂದು ಈಶಾವಾಸ್ಯ ಮುಂತಾದ ಉಪನಿಷದ್ರಹಸ್ಯ ವನ್ನು ತಿಳಿಸಿರುತ್ತಾರೆ ಎಂಪು ತಿಳಿಯಬೇಕು. ॥ ೧೯ ॥

**ಅವತರಣಿಕಾ:** ಶ್ರೀ ಕೃಷ್ಣನ ಪಾದಾರವಿಂದದಲ್ಲಿ ಭಕ್ತಿಯ ರೀತಿಯನ್ನು ತಿಳಿಯದ ಮಾನವರಿಗೆ ಇದು ಗುಟ್ಟು ಒಗಟು ಎಂದು ತೋರುವದು, ಭಕ್ತಿವಿಹೀನರಿಗೆ ಈ ಗ್ರಂಥದಲ್ಲಿ ಅಧಿಕಾರವಿಲ್ಲ. ಯಾರು ಸದ್ಭಕ್ತಿವಂತರೋ ಅಂಥ ಭಗವತ್ಪರರಾದ ವರಿಗೆ ಜ್ಞಾನ ಭಕ್ತ್ಯಾದಿಗಳನ್ನು ಇತ್ತು ಈ ಹರಿಕಥಾಮೃತವು ತಾರಕವಾಗುವದು. ಇದು ಗೂಢಾರ್ಥ.

ಮೂಲ :

**ಖಗವರ ಧ್ವಜನಂಘ್ರಿ ಭಕುತಿಯು ।**
**ಬಗೆಯುನರಿಯದ ಮಾನವರಿಗಿದು ।**
**ಒಗಟಿನಂದದಿ ತೋರುತಿಪ್ಪದು ಎಲ್ಲ ಕಾಲದಲಿ ॥**
**ತ್ರಿಗುಣವರ್ಜಿತ ನಮಲ ಗುಣಗಳ ।**
**ಪೊಗಳಿ ಹಿಗ್ಗುವ ಭಾಗವತರಿಗೆ ।**
**ಮಿಗೆ ಭಕುತಿ ವಿಜ್ಞಾನ ಸುಖವಿತ್ತವರ ರಕ್ಷಿಪುದು ॥ ೨೦ ॥**

**ಪದ್ಯಾರ್ಥ:** ಖಗವರನಂಘ್ರಿ=ಪಕ್ಷಿ ಶ್ರೇಷ್ಠನಾದ ಗರುಡ-ಆರೂಢನಾದ ಶ್ರೀ ಹರಿಯ ಪಾದಾರವಿಂದದಲ್ಲಿ, ಭಕುತಿಯು ಬಗೆಯುನರಿಯದ=ಭಕ್ತಿಯ ರೀತಿ ನವವಿಧ ದ್ವೇಷರಾಹಿತ್ಯ, "ಶ್ರವಣ ಮನನಾದಿ ನವಭಕ್ತಿಯ ರೀತಿಯನ್ನ ರಿಯದ, ಮಾನವರಿಗಿದು=ಮನುಷ್ಯರಿಗೆ ಒಗಟಿನಂದದಿ ತೋರುತಿಪ್ಪದು, ಎಲ್ಲ

ಕಾಲದಲಿ=ಈ ಹರಿಕಥಾಮೃತ ಸಾರವು ಒಗಟು=ಗುಟ್ಟು-ಸಮಸ್ಯೆ-ಒಡಪಿನಂತೆ ಅರ್ಥ ತಿಳಿಯದುದಾಗಿ ತೋರುವದು. ಭಕ್ತಿವಿಹೀನರಾದ ನರಪಶುಗಳಿಗೆ ಎಲ್ಲ ಕಾಲದಲ್ಲಿಯೂ ತೋರುವದಿಲ್ಲ. ಭಕ್ತಿಹೀನರಾದ ನರರೇ **ಅನಧಿಕಾರಿಗಳು.** ಆದರೆ ತ್ರಿಗುಣ ವರ್ಜಿತನಮಲಗುಣಗಳ=ಪ್ರಾಕೃತ ಸತ್ವಾದಿ ಗುಣವರ್ಜಿತನಾಗಿ ಅಮಲ=ನಿರ್ದುಷ್ಟ ದೋಷದೂರನ, ಗುಣಗಳ=ಸಚ್ಚಿದಾನಂದ ಆತ್ಮೇತಿ ಇತ್ಯಾದಿ ಗುಣಗಳನ್ನು ಯೋಗ್ಯತಾನುಸಾರ ಪೊಗಳಿ=ಹೊಗಳಿ, ಸ್ತೋತ್ರಮಾಡಿ, ಹಿಗ್ಗುವ=ಸಂತೋಷಬಡುವ, ಭಾಗವತರಿಗೆ=ಷಡ್ಗುಣೈಶ್ವರ್ಯ ಸಂಪನ್ನನಾದ ಭಗವಂತನಾದ ಹರಿಯು ದಾಸರಿಗೆ, ಮಿಗೆ=ಹೆಚ್ಚಾದ ವಿಶೇಷವಾದ ಭಕ್ತಿ=ದಾರಾ ಪುತ್ರಾದಿಗಳಿಗಿಂತಲೂ, ಶ್ರೀಹರಿಯಲ್ಲಿ ವಿಲಕ್ಷಣ ಪ್ರೇಮವೆಂಬ ವಿಜ್ಞಾನ=ವಿಶೇಷ ಜ್ಞಾನವೇ ಇದು ಅಪರೋಕ್ಷಕ್ಕೆ ಸಹಾಯವಾದುದು. ಹೀಗೆ ವಿಜ್ಞಾನ ಭಕ್ತ್ಯಾದಿಗಳನ್ನು ಸುಖವನ್ನಿತ್ತು ರಕ್ಷಿಸುವದು=ಸಂತತವಾಗಿ ಕಾಪಾಡುವದು. "ತಾರಕವಿದು ಹರಿಕಥಾಮೃತಾ ಸಾರಜನಕೆ ತಾರಕವಿದು" ಎಂದು ದಾಸರ ವಚನ.

**ಭಾವಸೂಚನ:** ಖಗೇತಿ ॥ ಉಪದೇಶ–ವಿಲಕ್ಷಣ ಬುದ್ಧಿ ಹೊರತು, ತಿಳಿಯದೇ ಇದ್ದ ವಸ್ತು ॥ ಸ್ತ್ರೀಯರು ಹೇಳತಕ್ಕದ್ದು. "ಯೇರಿ ಯಾತಗಳಲ್ಲಾ । ಯಲಿ ದೋಟಗೊಳಗಲ್ಲ । ತಿಳಿಗಲ್ಲಾ ತಂಪಿಗಲ್ಲಾ ಈ ಬೆಡಗು ಇನ್ನೂರು ವರ್ಷಕೆ ಪೇಳಯ್ಯಾ ಸರ್ವಜ್ಞ ॥ ೧ ॥ ದೇವರಕಿಂತಾ ಹಿರೇರೆ, ಕಿರೇರೇ ಪರರೋ (೨) ಇವೆ ಸರಿ ॥ (ಸರ್ವಜ್ಞನ ಒಗಟುಗಳು ದೃಷ್ಟಾಂತ. ಇವುಗಳಿಗೆಲ್ಲ ಅರ್ಥ ಬೇರೆ ಬೇರೆ ಇವೆ. ವಿಸ್ತರಿಸಲು ಗ್ರಂಥ ಬಾಹುಲ್ಯ ಭೀತಿ) ಮಿಗೆ=ಹೆಚ್ಚು. ॥ ೨೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಖಗೇತಿ" ॥ "ಬಗೆ" ಪ್ರಕಾರ । "ಒಗಟು" ಕನ್ಯಾಭ್ಯಸ್ತ ಗೂಢ ವಾಕ್ ಪ್ರಬಂಧಃ ॥ ಯಥಾ ವಕ್ತಿ ಬಾಲಾ "ಅಡ್ಡಾಗೋಡೀ ಮ್ಯಾಲೆ ದುಡ್ಡು" ॥ "ಮಿಗೆ" ಮತ್ತೂ । "ಇತ್ತು"=ಕೊಟ್ಟು । ಇದು ಎಂಥದು ? ಉಕ್ತಗ್ರಂಥಃ। "ರಕ್ಷಿಪುದು"=ರಕ್ಷಿಸುವದು. ॥ ೨೦ ॥

**ಕನ್ನಡಾರ್ಥ**

ಭಕ್ತಿಯ ರೀತಿಗಳನ್ನು ತಿಳಿಯದವನಿಗೆ ಈ ಶಾಸ್ತ್ರವು ಒಗಟಿನಂತೆ

ತೋರುತ್ತದೆ. ಪರಮ ಭಗವದ್ಭಕ್ತನಿಗೆ ಮಾತ್ರ - ಜ್ಞಾನ-ಭಕ್ತಿ ವೈರಾಗ್ಯ ಗಳನ್ನು ಬೆಳೆಯಿಸಿ ಸುಖ ಸಾಕ್ಷಾತ್ಕಾರಗಳನ್ನೂ ಮೋಕ್ಷವನ್ನೂ ಇತ್ತು ಸಲಹುವದು. ॥ ೨೦ ॥

ಇಲ್ಲಿ ಒಗಟು ಎಂದರೆ ಒಡೆದು ಅರ್ಥವನ್ನು ಕೂಡಲೇ ಹೇಳಲಿಕ್ಕೆ ಬಾರ ದಂತಹ ಗೂಢ ವಾಕ್ಯಗಳು. ಅವಿವಾಹಿತ ಬಾಲಿಕೆಯರು ಇಂಥ ವಗಟು ಗಳನ್ನು ಕಂಠಸ್ಥ ಮಾಡಿರುತ್ತಾರೆ. "ಅಡ್ಡಾಗೋಡೀ ಮ್ಯಾಲೆ" ಎಂದು ಮುಂತಾಗಿರುವ ವಗಟಗಳನ್ನು ಹೇಳುವದು ಸ್ತ್ರೀಯರಲ್ಲಿ ಈಗಲೂ ರೂಢಿ ಯಲ್ಲಿದೆ. ॥ ೨೦ ॥

**ಅವತರಣಿಕಾ:** ಪರಮ ತತ್ವರಹಸ್ಯವಾದ ಈ ಗ್ರಂಥದ ಸಾರವನ್ನು ಅನಧಿಕಾರಿ ಗಳಾದ ನಿಷ್ಠುರಿಗಳಿಗೆ ಮೂಢರಿಗೆ ಪಿಶುನ ಅರಸಿಕರಿಗೆ ಸರ್ವಥಾ ಪೇಳಕೂಡದು. ಭಗವದ್ಭಕ್ತರಾದವರಿಗೆ ಈ ರಹಸ್ಯ ಪೇಳುವುದೆಂದು ಐತರೇಯ ರಹಸ್ಯವನ್ನು ಉಪ ದೇಶಿಸುತ್ತಾರೆ.

ಮೂಲ :

**ಪರಮ ತತ್ವ ರಹಸ್ಯವಿದು ಭೂ ।**
**ಸುರರು ಕೇಳ್ವದು ಸಾದರದಿ ನಿ ।**
**ಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುಣರಿಗೆ ॥**
**ಅರಸಿಕರಿಗಿದು ಪೇಳ್ವುದಲ್ಲನ ।**
**ವರತ ಭಗವತ್ಪಾದ ಯುಗಳಾಂ ।**
**ಬುರುಹ ಮಧುಕರರೆನಿಸುವರಿ ಗರುಪುವುದು ಮೋದದಲಿ ।೨೧।**

**ಪದ್ಯಾರ್ಥ :** ಪರಮ ತತ್ವ ರಹಸ್ಯವಿದು=ಈ ಹರಿಕಥಾಮೃತಸಾರ– ಒಳ್ಳೇ ತತ್ವಗಳಿಂದ ಕೂಡಿದ, ವೇದ ಉಪನಿಷತ್‌ಗಳ ಸಾರ–ಅತಿ ಗೂಢ ವಾದುದು, ಜ್ಞಾನಕ್ಕೆ ಗಮ್ಯವಾದುದು. ಇದನ್ನು ನಿಷ್ಠುರಿಗಳಿಗೆ=ಕರ್ಕಶ- ಕಠಿಣ ಸತ್ಯವಾದರೂ ಜನರಿಗೆ ಪ್ರಿಯವಾಗದಿರುವ ಭಾಷಣ, ಮಾತಾಡುವರಿಗೆ (ಇದರಲ್ಲಿ ಶೀಘ್ರ ಕೋಪಿಗಳೂ ಬಂದರು) ಮೂಢರಿಗೆ=ಮೂರ್ಖರಿಗೆ, ಬುದ್ಧಿ ಯಿಲ್ಲದ ತಿಳಿಗೇಡಿಗಳಿಗೆ, ಪಂಡಿತ ಮಾನಿ=ನಾನೇ ತಿಳಿದವ, ನಾನೇ ಜ್ಞಾನಿ ಎಂದು ಗರ್ವಿಷ್ಠರಾದ, ಪಂಡಿತರಂತೆ ಮನ್ಯಮಾನರಾದವರಿಗೆ, ಪಿಶುನರಿಗೆ= ದುರ್ಜನರಿಗೆ ಚಾಡಿಕೋರರು-ಕ್ರೂರ ಹೃದಯರಿಗೆ, ಇವರೆಲ್ಲ ಈ ಗ್ರಂಥಕ್ಕೆ

**ಅನಧಿಕಾರಿಗಳು** ಮತ್ತು ಅರಸಿಕರಿಗೆ=ರಸಿಕನಲ್ಲದವ-ಕಾವ್ಯ ಮರ್ಮ ತಿಳಿಯದವ, ಪಂಡಿತನಲ್ಲದವಗೆ ಸರ್ವಥಾ ಹೇಳಬೇಡಿ ಎಂದು ಹೇ ಭೂಸುರರೆ ಸಾದರದಿ ಕೇಳ್ವದು. ಬ್ರಾಹ್ಮಣ ಶ್ರೇಷ್ಠರಾದ ಜ್ಞಾನಿಗಳೆ, ಸಾದರದಿ=ಆದರ ದಿಂದ ಕೇಳಿರಿ. ಅಲ್ಲಗಳೆಯಬೇಡಿರಿ. ಮೇಲೆ ವಿವರಿಸಿದ ಅಯೋಗ್ಯರಿಗೆ ಎಂದೆಂದಿಗೂ ಹೇಳಬಾರದೆಂದು ಬಿನ್ನವಿಸುತ್ತಾರೆ. ಆದರೆ **ಯಾರಿಗೆ ಪೇಳ ಬೇಕೆಂದರೆ,** ಅನವರತ=ಸಂತತ-ನಿತ್ಯ-ಯಾವಾಗಲೂ, ಒಂದರಕ್ಷಣಬಿಡದೆ, ಭಗವತ್ಪಾದ ಯುಗಳಾಂಬುರುಹ ಮಧುಕರರೆನಿಸುವರಿಗೆ = ಷಡ್ಗುಣೈಶ್ವರ್ಯ ಸಂಪನ್ನನಾದ ಭಗವಂತನ ಪಾದಕಮಲಗಳಿಗೆ ಭೃಂಗರೆನಿಸುವ, ಭಾಗವತರಿಗೆ ಅರುಪುವದು ಮೋದದಲಿ=ಸಂತೋಷದಿಂದ ಪೇಳುವದು-ಆದರದಿಂದ ಪೇಳ್ವ ದೆಂದು ಐತರೇಯ ಉಪನಿಷತ್ ಪ್ರಮೇಯವನ್ನನುಸರಿಸಿ ಬೋಧಿಸಿರುವರು. ಪ್ರಮಾಣ-ಸಂಧಿಯ ಸಾರದಲ್ಲಿ ಕೊಟ್ಟಿದೆ.

**ಭಾವಸೂಚನ:** ಓಂ ಅನಾವಿಷ್ಕುರ್ವನ್ನಿತ್ಯುಕ್ತ ಮಾಹ || ಓಂ || ಪರಮೇತಿ || ೨೧ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪರಮ" ಇತಿ || "ಅನಾವಿಷ್ಕುರ್ವನ್ ಅನ್ವಯಾತ್ ||" "ಅನಾರ್ಯ ಕಾಯಾನೃಜವೇ ಶಠಾಯ ನೈತತ್ ತ್ವಯಾ ದಾಂಭಿಕಾಯಾ" "ಅಶುಶ್ರೂ ಷೋಃ" ಅಭಕ್ತಾಯ ದುರ್ವಿನೀತಾಯ ಅನ್ಯವಿದ್ಯಾ ಸ್ವಕ್ಷ್ಯಸ್ಯ ವ್ಯಾಖ್ಯಾನ ಶಕ್ತಿಹೀನಾಯ" || ಇತಿ ನಿಷೇಧವಚನೇಭ್ಯಃ ಚ || "ಅರುಪುವದು"=ತಿಳಿಸು ವದು. || ೨೧ ||

## ಕನ್ನಡಾರ್ಥ

"ಪರಮ ರಹಸ್ಯ ತತ್ವವಿದು" ಈ ಪದ್ಯದಲ್ಲಿ ಅನಧಿಕಾರಿಗಳಿಗೆ ಈ ರಹಸ್ಯ ವಿಷಯುಗಳನ್ನು ತಿಳಿಸಕೂಡದು; ಭಗವದ್ಭಕ್ತರಿಗೆ ನಿರೂಪಿಸಬೇಕು" ಎಂದು ದಾಸವರೇಣ್ಯರ ಭಾವ. ಇದಕ್ಕೆ ಆಧಾರವಾಗಿ ಬ್ರಹ್ಮಸೂತ್ರದಲ್ಲಿ ಓಂ "ಅನಾ ವಿಷ್ಕುರ್ವನ್ ಅನ್ವಯಾತ್" ಓಂ || ಎಂದು ಮೂರನೆಯ ಅಧ್ಯಾಯದ ಕೊನೆಯ ಪಾದದಲ್ಲಿ ಹೇಳಿರುತ್ತಾರೆ. ಗುರುಗಳು ಸಾಧನಗಳನ್ನು ತತ್ವಗ ಳನ್ನು ವಿಶೇಷ ಪ್ರಸಿದ್ಧಿ ಮುಂತಾದ ಆವಿಷ್ಕಾರಗಳಿಲ್ಲದೇ ಉಪದೇಶಿಸಬೇಕು; ಇಲ್ಲದಿದ್ದರೆ ಸಭಾಚತ್ವರ ಮುಂತಾದ ಕಂಡ ಕಂಡ ಸ್ಥಳಗಳಲ್ಲಿ ತತ್ವೋಪದೇಶ

ವಿತ್ತರೆ ಅನಧಿಕಾರಿಗಳೂ ಶ್ರವಣ ಮಾಡಿಯಾರು ! ಅದರಿಂದ ವಿದ್ಯೆಯು ಫಲಿತವಾಗುವದಿಲ್ಲ ಎಂದು ಸೂತ್ರದ ಭಾವ. ವಿದ್ಯಾಭಿಮಾನಿ ದೇವತೆಯು ಬಂದು ವಾಯುದೇವರಿಗೆ ಬಿನ್ನವಿಸಿಕೊಳ್ಳುತ್ತಾಳೆ. "ನನ್ನನ್ನು ನೀನು ಸಂರಕ್ಷಿಸು. ಅನಾರ್ಯನಿಗೂ ಕುಟಿಲನಿಗೂ ಶಠನಿಗೂ ಉಪದೇಶಿಸಬೇಡ ; ಋಜುಸ್ವಭಾವದ ಸುಜನರಿಗೆ ಯಾವಾಗಲೂ ಉಪದೇಶಿಸು" ! ಎಂದು. "ಇದನ್ನು ಗುರು ಶುಶ್ರೂಷಾ ಮುಂತಾದ ಸದ್ವೃತ್ತಿಗಳಿಲ್ಲದವನಿಗೆ ಉಪದೇಶಿಸತಕ್ಕದ್ದಲ್ಲ. ದಾಂಭಿಕರಿಗೆ; ದುರ್ವಿನೀತರಿಗೆ,- ಹೇಳಿದುದನ್ನು ತಿರುಗಿ ಹೇಳಿ ಪಾಠಪ್ರವಚನ ಮಾಡಲು ಅಶಕ್ತನಾದವನಿಗೆ ನಿರೂಪಿಸತಕ್ಕ !" ಎಂದು ಮುಂತಾದ ನಿಷೇಧ ವಚನಗಳಿರುವದರಿಂದ ದಾಸರಾಯರ ವಚನವು ಪರಮ ಮಾನ್ಯವಾಗಿರುತ್ತದೆ. "ಅರುಪುವದು"—ತಿಳಿಸುವದು. ॥ ೨೧ ॥

ಅವತರಣಿಕಾ: ಈ ಹರಿಕಥಾಮೃತವು ಹಾಳ ಹರಟೆಯಲ್ಲ, ಲೋಕ ವಾರ್ತೆಯಿದಲ್ಲ ದುರ್ಜನರಿಗೆ ಸೊಗಸದು. ಹರಿಭಕ್ತರಾದವರಿಗೇ ಇದು ಸಮರ್ಪಕ ತೋರುವದು ಎಂದು ದೃಷ್ಟಾಂತಪೂರ್ವಕವಾಗಿ ವಿವರಿಸುತ್ತಾರೆ.

ಮೂಲ :

**ಲೋಕವಾರ್ತೆ ಇದಲ್ಲ ಪರಲೋ ।**
**ಕೈಕನಾಥನ ವಾರ್ತೆ ಕೇಳ್ವಡೆ ।**
**ಕಾಕು ಮನುಜರಿಗಿದು ಸಮರ್ಪಕವಾಗಿ ಸೊಗಯಿಸದು ॥**
**ಕೋಕನದ ಪರಿಮಳವು ಷಟ್ಪದ ।**
**ಸ್ವೀಕರಿಸುವಂದದಲಿ ಜಲಚರ ।**
**ಭೇಕ ಬಲ್ಲುದೆ ಇದರ ರಸ ಹರಿಭಕುತಗಲ್ಲದಲೆ ॥ ೨೨ ॥**

**ಪದ್ಯಾರ್ಥ :** ಲೋಕವಾರ್ತೆ ಇದಲ್ಲ=(ಈ ಹರಿಕಥಾಮೃತಸಾರವು) ಮರ್ತ್ಯಲೋಕದ ಮನುಜರ ಸುದ್ದಿಯಲ್ಲ, ಕೇಳ್ವಡೆ=ಕೇಳಬಹುದಾದ-ಆದರದಿಂದ ಶ್ರವಣ ಮಾಡಲರ್ಹವಾದ ಪರಲೋಕೈಕನಾಥನ ವಾರ್ತೆ=ಚತುರ್ದಶ ಬ್ರಹ್ಮಾಂಡಕ್ಕೆ ಮೇಲಿರುವ, ಶುದ್ಧವಾದ ರಮಾತ್ಮಕ-ನಾಶರಹಿತವಾದ-ಉತ್ತಮವಾದ, ವೈಕುಂಠ-ಶ್ವೇತದೀಪ-ಅನಂತಾಸನ, ಲೋಕೈಕನಾಥ=ಈ ಪರಲೋಕಗಳಿಗೆಲ್ಲ ಏಕ=ಒಬ್ಬನೇ ನಾಥ=ಒಡೆಯನಾದ, ಮುಕುತಿದಾಯಕನಾದ ಅನಂತನ ಮಹಿಮೆಯಿದು. ಕಾಕು ಮನುಜರಿಗೆ ಇದು ಸಮರ್ಪಕ

ವಾಗಿ ಸೊಗಯಿಸದು=ಕೆಟ್ಟ-ದುರ್ಬುದ್ಧಿಯುಳ್ಳ, ರಜತಮೋ ಗುಣವುಳ್ಳ ಕುಕರ್ಮಿಗಳು-ಅನ್ಯಥಾ ಜ್ಞಾನ ಮಿಥ್ಯಾ ಜ್ಞಾನವುಳ್ಳವರಿಗೆ, ಮನಕೆ ಹತ್ತುವಂತೆ ಚೆಲುವಾಗಿ ಸುಂದರವಾಗಿ ಕಾಣುವದಿಲ್ಲ, ಶೋಭಿಸುವದಿಲ್ಲ, ಸಮರ್ಪಕ ತೋರುವದಿಲ್ಲ. ಇವರು ಭೇಕ ಕಪ್ಪೆ ಸದೃಶರಾದ ಕೆಟ್ಟ ಜನರು. ಇವರೆ **ಅನಧಿಕಾರಿಗಳು.** ಹೇಗೆಂದರೆ ಕೋಕನದ ಪರಿಮಳವು=ಕೆಂಪು ಕಮಲದಲ್ಲಿರುವ ಸುವಾಸನೆಯನ್ನು ಷಟ್ಪದ=ಆರು ಕಾಲುಳ್ಳ ಗುಂಗೆ ಹುಳವು ಸ್ವೀಕರಿಸಿ, ರಸಾಸ್ವಾದನೆ ಮಾಡುವಂತೆ ಇದರ ರಸ ಹರಿಯ ಭಕುತಗಲ್ಲದಲೇ=ಈ ಹರಿ ಕಥಾ ಲೀಲಾ ಸದ್ಗುಣಗಳನ್ನು ಹರಿಭಕ್ತರೇ ಆದರದಿಂದ ಭ್ರಮರದಂತೆ ಸ್ವೀಕರಿಸುವರು, ಇದು ನಿಜ, ಆದರೆ ಜಲಚರ ಭೇಕ=ಜಲದಲ್ಲಿದ್ದು ಸಂಚಾರ ಮಾಡುವ ಕೆಟ್ಟ ಧ್ವನಿಯಿಂದ ಗುಡ್ರುಗುಟ್ಟುವ ಕಪ್ಪೆಯು ಕಮಲ ಸ್ವಾದ ಬಲ್ಲುದೆ? ತಿಳಿಯದು. ಕಾಕು ಜನರು=ಭೇಕ ಸದೃಶರು. ಭೃಂಗಸದೃಶರು= ಹರಿಭಕ್ತರು. ಇದಕ್ಕೆ ಅವರೇ ಅಧಿಕಾರಿಗಳು.

**ಭಾವಸೂಚನ:** ಲೋಕೇತಿ ॥ ಕೋಕನದ=ಪದ್ಮ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಲೋಕ" ಇತಿ ॥ "ಕೇಳ್ವರೆ" "ಕೋಕನದ"=ಪದ್ಮಮ್ ॥ ಷಟ್ಪದ= ಭ್ರಮರ. ॥ ೨೨ ॥

## ಕನ್ನಡಾರ್ಥ

"ಲೌಕಿಕ ಕಾವ್ಯ ಚಂಪೂ ನಾಟಕ ಮುಂತಾದ ಪ್ರಬಂಧಗಳಂತೆ ಇದು ಅಲ್ಲ" ಎಂದು ಮುಂತಾಗಿ ಇದರ ರಹಸ್ಯದ ಮಹತ್ವವನ್ನು ನಿರೂಪಿಸುತ್ತಾರೆ- "ಲೋಕವಾರ್ತೆಯಿದಲ್ಲ" ಎಂಬುದಾಗಿ. ॥ ೨೨ ॥

**ಅವತರಣಿಕಾ:** ಶ್ರೀ ಹರಿಯು ಇಷ್ಟೆಲ್ಲ ಸೃಷ್ಟ್ಯಾದಿ ವ್ಯಾಪಾರಮಾಡುವದು ತನ್ನ ಪ್ರಯೋಜನಕ್ಕಲ್ಲ. ಜೀವರುಗಳ ಮೇಲೆ ಕರುಣಾಮಾಡಿ, ಸ್ವಯೋಗ್ಯಗತಿಗನುಸರಿಸಿ ಫಲಕೊಡಲು, ಲೋಕವತ್ತು ಲೀಲಾಕೈವಲ್ಯಂ ಎಂದಂತೆ ಮಾಡುತ್ತಾನೆಂದು ವೇದಪ್ರತಿಪಾದ್ಯನಾದ ಶ್ರೀಹರಿಯ ಅನಂತ ಮಹಿಮೆಯನ್ನು ಶ್ರೀ ದಾಸಾರ್ಯರು ಮನವುಬ್ಬಿ ಕೊಂಡಾಡುತ್ತಾರೆ.

ಮೂಲ :

**ಸ್ವಪ್ರಯೋಜನ ರಹಿತ ಸಕಲೇ ।**
**ಷ್ಟ ಪ್ರದಾಯಕ ಸರ್ವಗುಣ ಪೂ ।**
**ರ್ಣಪ್ರಮೇಯ ಜರಾಮರಣ ವರ್ಜಿತ ವಿಗತಶೋಕ ॥**
**ವಿಪ್ರತಮ ವಿಶ್ವಾತ್ಮ ಘೃಣಿ ಸೂ ।**
**ರ್ಯ ಪ್ರಕಾಶಾನಂತ ಮಹಿಮ ಫೃ ।**
**ತಪ್ರತೀಕಾರಾಧಿತಾಂಘ್ರಿ ಸರೋಜ ಸುರರಾಜ ॥ ೨೩ ॥**

**ಪದ್ಯಾರ್ಥ :** ಸ್ವಪ್ರಯೋಜನರಹಿತ=ಶ್ರೀ ಹರಿಗೆ ಸೃಷ್ಟಿ ಸ್ಥಿತ್ಯಾದಿ ವ್ಯಾಪಾರದಲ್ಲಿ ಏನೂ ಪ್ರಯೋಜನವಿಲ್ಲ. ಪೂರ್ಣ ಕಾಮನು. ಆದರೆ ಶ್ರೀ ರಮೆಗೆ ಐಶ್ವರ್ಯ ಉಕ್ಕೇರಿಸಲು, ಸರ್ವ ಜೀವರ ಬಂಧ ಪರಿಹರಿಸಿ ಸ್ವಯೋಗ್ಯ ಮುಕ್ತಿಕೊಡಲು ಕರುಣಾಳುವಾದ ಹರಿಯ ವ್ಯಾಪಾರ. "ಓಂ ಲೋಕವತ್ತು ಲೀಲಾ ಕೈವಲ್ಯಂ ಓಂ" ಎಂಬ ಶ್ರೀ ಬಾದರಾಯಣರ ಸೂತ್ರಾನುಸರಿಸಿ ಬಹ್ವರ್ಥಗರ್ಭಿತವಾಗಿದೆ. ಸಕಲೇಷ್ಟ ಪ್ರದಾಯಕ = ತ್ರಿವಿಧವಾದ ಜೀವರಿಗೆ ಅವರವರ ಸ್ವರೂಪ ಯೋಗ್ಯತೆಯಂತೆ ಇಷ್ಟಪ್ರದವಾದ ಮುಕ್ತಿ ಕೊಡುವನು. ಸರ್ವಗುಣಪೂರ್ಣನು=ಸಕಲ ಜ್ಞಾನಾನಂದಾದಿ "ಸಚ್ಚಿದಾನಂದ ಆತ್ಮೇತಿ" ಇತ್ಯಾದಿ ಅನಂತ ಸದ್ಗುಣ ಪರಿಪೂರ್ಣನು. ಅಪ್ರಮೇಯ=ರಮಾಬ್ರಹ್ಮಾದಿ ವೇದಗಳಿಗೆ ಸ್ತುತಿಗೆ ನಿಲುಕದಿರುವವನು. ಜರಾಮರಣ ವರ್ಜಿತ=ಜರೆ= ಮುಪ್ಪು, ಮರಣ=ದೇಹಹಾನಿ ಇವುಗಳು ವರ್ಜಿತ=ಇಲ್ಲದವನು. ನಿತ್ಯನೂ, ಸನಾತನನೂ, ಸರ್ವಕಾಲ ಒಂದೇ ರೀತಿಯಾಗಿ ಷೋಡಶ ವಯಸ್ಸಿನ ಪೂರ್ಣ ಕಲಾಯುಕ್ತನಾಗಿ ಶೋಭಿಸುವನು. "ಅಸ್ವತಂತ್ರ, ದೇಹ ಹಾನಿ, ದುಃಖ ಪ್ರಾಪ್ತಿರಪೂರ್ಣತಾ" ಎನ್ನುವ ನಾಲ್ಕು ವಿಧ ನಾಶರಹಿತನು. ವಿಗತಶೋಕ = ದುಃಖ ಶೋಕಾದಿ ದೂರ, ವಿಪ್ರತಮ = ವಿಶೇಷವಾಗಿ ಪ್ರಕೃಷ್ಟ ಜ್ಞಾನಾನಂದ ವುಳ್ಳವನಾದುದರಿಂದ ಶ್ರೇಷ್ಠತಮನೆಂದೂ, ಮತ್ತು ರಮಾಬ್ರಹ್ಮಾದಿ ವಿಜ್ಞಾನಿ ಗಿಂತಲೂ ಶ್ರೇಷ್ಠನು. ವಿಶ್ವಾತ್ಮ = ಸಕಲ ಬಹಿರ್‌ಜಗತ್ತು, ಸಕಲರ ದೇಹಾ ದಿಗಳಲ್ಲಿ ವ್ಯಾಪ್ತನಾಗಿ ತನ್ನಾಮದಿಂದ ಕರೆಸುವನು. ಘೃಣಿ= ಜಿಷ (ಧ) ರ್ತೀತಿ = ಘೃಣಿ ದೀಪ್ತಿಮಾನನಾದ ಕಿರಣ ಪ್ರಕಾಶವುಳ್ಳವನಾದುದರಿಂದ ಘೃಣಿ= ಕರುಣಾಳು. ಸೂರ್ಯ= ಸೂರಿ ಜ್ಞಾನಗಮ್ಯನಾದ ಕಾರಣ

ಸೂರ್ಯನೆಂದು "ಸೂರ್ಯಕೋಟಿ ಪ್ರತೀಕಾಶಂ ಚಂದ್ರಕೋಟಿ ಸುಶೀತಲಂ" ಹೀಗೆ ಅನಂತಕೋಟಿ ಸೂರ್ಯಪ್ರಕಾಶವುಳ್ಳ ಅನಂತ ಮಹಿಮೆಯುಳ್ಳವನು. ಘೃತಪ್ರತೀಕಾರಾಧಿತಾಂಘ್ರಿ=ಇದು ಛಾಂದಸಿ ಪ್ರಯೋಗ=ತೇಜೋಯುಕ್ತ ಪ್ರಕಾಶದಿಂದ ಘೃತದಲ್ಲಿ-ಘೃತಾಭಿಮಾನಿ ಲಕ್ಷ್ಮೀದೇವಿಯು ಶ್ರೀ ಹರಿಗೆ ಉತ್ತಮವಾದ ಸಕಲ ಪೂಜಾ ಮಾಡುವಳಾದ ಕಾರಣ ಇಂತಹ ಲಕ್ಷ್ಮೀದೇವಿಯಿಂದ ಪೂಜಾ ಕೊಳ್ಳುವ ಪಾದಕಮಲಗಳುಳ್ಳವನು. ಲಕ್ಷ್ಮೀದೇವಿಯಿಂದ ಪೂಜಿತ ಸರೋಜ,-ಪಾದಕಮಲವುಳ್ಳವನು. ಸುರರಾಜ=ದೇವತೆಗಳಿಗೆ ರಾಜಾಧಿರಾಜನು. ರಾಜರಾಜೇಶ್ವರರೂಪಿ ಹರಿಯೇ ನಿನಗೆ ಜಯವಿರಲೆಂದು ಸ್ತೋತ್ರಮಾಡಿದ್ದಾರೆಂತ ಮುಂದಿನ ಪದ್ಯದಿಂದ ಅಧ್ಯಾಹಾರ ಮಾಡುವದು.

**ಭಾವಸೂಚನ:** ಸ್ವಪ್ರಯೋಜನೇತಿ| ಘೃತಪ್ರತೀಕಾ ಜ್ಞಾನಿಗಳು |೨೩|

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಸ್ವಪ್ರಯೋಜನ" ಇತಿ || ಇತಃಪರಂ ಆ ಸಮಾಪ್ತಿ ದೃಶಾಪರೋಕ್ಷ (ಕ್ಷ್ಯ) ಪ್ರದಂ ಉಪಾಸ್ಯಂ ಭಗವಂತಂ ಅನುಸ್ಮರತಿ || "ಪೂರ್ಣ" ಇತ್ಯತಃ ಪರಂ ಆಕಾರಃ ಪ್ರಶ್ಲಿಷ್ಯತೇ || "ವಿಪ್ರತಮಂ ಕವೀನಾಂ" ಇತಿ ಶ್ರುತ್ಯುಕ್ತಪದ ಪ್ರಯೋಗೇಣ ಆಮ್ನಾಯ ಮೂಲತಾಂ ಅಭಿಪ್ರೈತಿ ದಾಸರಾಜಃ || "ವಿಶೇಷೇಣ ಪ್ರಕೃಷ್ಟತಮಮ್ || ಪುನಃ ವೈದಿಕ ಪದ ಪ್ರತಿಪದಂ "ಘೃತ" ಇತಿ || "ಘೃತಪ್ರತೀಕ" ಇತಿ ಶ್ರುತಿಃ || "ಘೃತ ಪ್ರತೀಕಾಂತಾಂ" ಇತಿ ಗುರುಚರಣಾಃ|| "ರಮಾ ಶುದ್ಧಾ" ಇತಿ ಭಗವತ್ಪಾದಾಃ || "ಘೃ-ರಕ್ಷಣ-ದೀಪ್ತ್ಯೋಃ" ಇತಿ ಪಠಿತತ್ವಾತ್ ದೀಪ್ತತ್ವಂ ತದರ್ಥಃ ಇತಿ ಐತರೇಯ ಟಿಪ್ಪಣ್ಯಾಮ್ || ೨೩ ||

**ಕನ್ನಡಾರ್ಥ**

ಈ ಪದ್ಯದಿಂದ ಆರಂಭಿಸಿ ಸಂಧಿಯು ಮುಗಿಯುವವರೆಗೆ ಅಪರೋಕ್ಷ ಜ್ಞಾನವನ್ನು ಕರುಣಿಸುವ ಉಪಾಸ್ಯ ಮೂರುತಿ ಭಗವಂತನನ್ನು ಅನುಚಿಂತಿಸುತ್ತಾರೆ.—"ಸರ್ವಗುಣಪೂರ್ಣಪ್ರಮೇಯ" ಇಲ್ಲಿ—"ಪೂರ್ಣ-ಪ್ರಮೇಯ" ಪದಗಳ ನಡುವೆ ಆಕಾರವು ಅಡಕವಾಗಿದೆ. ಆದುದರಿಂದ "ಅಪ್ರಮೇಯ" ವೆಂದು ಪದ ವಿಭಾಗದಿಂದ ಓದಿ ಅರ್ಥಮಾಡಿಕೊಳ್ಳಬೇಕು.

"ವಿಪ್ರತಮ" ಎಂಬ ವೈದಿಕ ಪದವನ್ನು ಪ್ರಯೋಗಿಸಿರುವದರಿಂದ ಈ ತಮ್ಮ ಪ್ರಬಂಧವು ವೇದಮೂಲವಾಗಿದೆ"—"ವೇದವನ್ನೇ ಅನುಸರಿಸಿದೆ"

ಎಂದು ದಾಸರ ಅಭಿಪ್ರಾಯವು ವ್ಯಕ್ತವಾಗುತ್ತದೆ. "ವಿಪ್ರತಮಂ" ಎಂದರೆ "ವಿಶೇಷವಾಗಿ ಪ್ರಕೃಷ್ಟ-ಶ್ರೇಷ್ಠತಮ" ಎಂದೂ ಅರ್ಥವಾಗುತ್ತದೆ. "ಬ್ರಹ್ಮಾದಿ ವಿಜ್ಞಾನಿಗಳಿಗಿಂತಲೂ ಪರಮ ಶ್ರೇಷ್ಠತಮ" ಎಂದೂ ಅರ್ಥವಾಗುತ್ತದೆ. "ಘೃತಪ್ರತೀಕಾರಾಧಿತ" ಎಂಬ ಪದದಲ್ಲಿ ಸೇರಿರುವ "ಘೃತಪ್ರತೀಕ"ವೆಂಬ ಪದವೂ ವೈದಿಕ ಪದವೇ ಆಗಿರುತ್ತದೆ. "ಘೃತಪ್ರತೀಕಾ ವಯುನಾನಿ ವಸ್ತೇ" ಎಂದು ಶ್ರುತಿಯಲ್ಲಿ ಹೇಳಿದಂತೆ ಶ್ರೀಮದಾಚಾರ್ಯರು "ಘೃತಪ್ರತೀಕಾಂ ತಾಂ" ಎಂದು ಹೇಳಿ, ಘೃತಪ್ರತೀಕಾಸಿ ಎಂದರೆ ಅತಿಶಯ ಪರಿಶುದ್ಧ ಸ್ವಭಾವದವಳಾದ ಶ್ರೀ ರಮಾದೇವಿ" ಎಂದು ವಿವರಿಸಿರುತ್ತಾರೆ. "ಘೃ" ಎಂಬ ಧಾತುವಿಗೆ "ಸಂರಕ್ಷಣ ಹಾಗೂ ದೀಪ್ತಿ-ಹೊಳೆಯುವಿಕೆ" ಎಂದು ಎರಡು ಅರ್ಥಗಳಿರುವದರಿಂದ "ಪ್ರಕಾಶಾತ್ಮಕ"ವೆಂದು ಅರ್ಥವನ್ನು ಐತರೇಯ ಭಾಷ್ಯದಲ್ಲಿ ನಿರೂಪಿಸಿರುತ್ತಾರೆ. ಅಂದರೆ ತೇಜೋಯುಕ್ತ ಪ್ರಕಾಶಮಯವಾದ ರೂಪದಿಂದ ತುಪ್ಪದಲ್ಲಿ ಇದ್ದುದರಿಂದಲೂ, ಅದರಿಂದ ಪರಮಾತ್ಮನಿಗೆ ತಾನು ಒಳ್ಳೆಯ ಪೂಜೆಯನ್ನು ಮಾಡುವದರಿಂದಲೂ ಘೃತಪ್ರತೀಕವೆಂದು ಶ್ರೀ ರಮಾದೇವಿಯವರಿಗೆ ಕರೆಯುತ್ತಾರೆ. ಹಾಗೂ ಘೃತಪ್ರತೀಕಾರಾಧಿತ ಎಂದರೆ "ರಮಾಸಮಾರಾಧಿತ"ನೆಂದೂ ಅರ್ಥವನ್ನು ತಿಳಿಯಬೇಕು. ‖ ೨೩ ‖

**ಅವತರಣಿಕಾ:** ಅನಂತ ವೇದ ಪ್ರತಿಪಾದ್ಯನಾದ ಬಿಂಬರೂಪಿ ಹರಿಯು ಜೀವರನ್ನು ಉದ್ಧರಿಸಲೋಸುಗ ನಾನಾವತಾರಗಳನ್ನು ಮಾಡಿ, ಸ್ವರೂಪೇಂದ್ರಿಯ ರೂಪಗಳಿಗೂ, ಬಹಿರ್ದಶಾವತಾರಗಳಿಗೂ ಅತ್ಯಂತ ಅಭೇದ ಚಿಂತಿಸುವದೇ ಮಹಾಪೂಜೆ ಅದೇ ಧ್ಯಾನವೆಂದು ದಶಾವತಾರ ಸ್ತೋತ್ರವನ್ನು ಜಯಜಯ ಜಯ ಸರ್ವೋತ್ಕರ್ಷ ಮಹಿಮಾ ಸ್ತೋತ್ರಗೈಯ್ಯುತ್ತಾರೆ.

ಮೂಲ :

ವನಚರಾದ್ರಿ ಧರಾಧರನೆ ಜಯ ।
ಮನುಜ ಮೃಗವರ ವೇಷಜಯ ವಾ ।
ಮನ ತ್ರಿವಿಕ್ರಮ ದೇವ ಜಯ ಭೃಗುರಾಮಭೂಮ ಜಯಾ ‖
ಜನಕಜಾ ವಲ್ಲಭನೆ ಜಯ ರು ।
ಗ್ಮಿಣಿ ಮನೋರಥ ಸಿದ್ಧಿದಾಯಕ ।
ಜಿನ ವಿಮೋಹಕ ಕಲಿವಿದಾರಣ ಜಯ ಜಯಾರಮಣ ‖೨೪‖

**ಪದ್ಯಾರ್ಥ:** ವನಚರ=ವನ ನೀರಿನಲ್ಲಿ ಚರಿಸತಕ್ಕ ಮತ್ಸ್ಯರೂಪಿ ಹರಿಯೆ, ಅದ್ರಿಧರ=ಮಂದರಾಚಲ ಧರಿಸಿದ ಕೂರ್ಮರೂಪನೇ, ಧರಾಧರ-(ಈ ಧರ ಶಬ್ದ ಎರಡೂ ಕಡೆಗೆ ಸಮನ್ವಯ) ಭೂಮಿಯನ್ನು ಧರಿಸಿದ ಭೂ ದೇವತಾ ಅಭಿಮಾನಿ ಭೂ ದೇವತೆಯನ್ನು ಕದ್ದ ಹಿರಣ್ಯಾಕ್ಷನನ್ನು ಸಂಹರಿಸಿ, ಭೂಮಿ ಕೋರೆದಾಡಿಲಿ ಧರಿಸಿದ ವರಾಹ ರೂಪಿಯೇ ಜಯ=ನಿನಗೆ ಜಯ ವಿರಲಿ, ಮಂಗಳ ಸದಾ ಕಾಲವಿರಲಿ, ಮನುಜ ಮೃಗವರ ವೇಷ=ಮನುಷ್ಯ, ಮೃಗಶ್ರೇಷ್ಠ ಸಿಂಹರೂಪಿಯಾದ ನರಸಿಂಹನೆ ನಿನಗೆ ಜಯವಿರಲಿ, ವಾಮನ=ಸುಂದರನಾದ, ವಟುರೂಪ ಧಾರಿಯಾದ=ವಾಮನ ರೂಪಿಯೇ ತ್ರಿವಿಕ್ರಮ=ಸ್ವರ್ಗ-ಭೂಮಿ-ಪಾತಾಳ ಈ ಮೂರು ಲೋಕಗಳನ್ನೂ ಪಾದದಿಂದ ಆಕ್ರಮಿಸಿದ ಹರಿಯೇ ಜಯ=ನಿನಗೆ ಸದಾ ಮಂಗಳ, ಭೃಗುರಾಮ=ಭೃಗುಕುಲದಲ್ಲಿ ಅವತರಿಸಿದ ಪರಶುರಾಮನೇ, ಭೂಮ=ಗುಣಪೂರ್ಣನಾದವನೇ, ಭೂಮ=ಭೂಮಂಡಲ-ಪ್ರಪಂಚದಲ್ಲಿರುವ ಸಕಲ ಕ್ಷತ್ರಿಯರನ್ನೂ ಸಂಹರಿಸಿದ ಭಾರ್ಗವನೇ, ಜಯ=ನಿನಗೆ ಸದಾ ಕಲ್ಯಾಣವಿರಲಿ. ಜನಕಜಾವಲ್ಲಭನೆ ಜಯ=ಜನಕರಾಜನ ಪುತ್ರಿಯಾದ ಸೀತಾರಮಣ ರಾಮಚಂದ್ರನೆ ನಿನಗೆ ಯಾವಾಗಲೂ ಜಯ=ಗೆಲವು ಇರಲಿ. ರುಗ್ಮಿಣಿ ಮನೋರಥ ಸಿದ್ಧಿದಾಯಕ=ರಮಾ ಅವತಾರಳಾದ ನಿತ್ಯಾವಿಯೋಗಿನಿಯಾದ ರುಕ್ಮಿಣೀ ದೇವಿಯರ ಮನೋಭಿಲಾಷೆ ಪೂರೈಸಿ ಪಾಣಿಗ್ರಹಣ ಮಾಡಿದ ಶ್ರೀ ಕೃಷ್ಣನೆ ನಿನಗೆ ಜಯ, ಜಿನ ವಿಮೋಹಕ=ಜಿನನೆಂಬೋ ದೈತ್ಯನನ್ನು ಮೋಹಗೊಳಿಸಿದ ಬುದ್ಧರೂಪಿಯೇ, ಕಲಿವಿದಾರಣ=ಕಲಿಯನ್ನು ಸಂಹರಿಸಿದ ಕಲ್ಕಿ ರೂಪಿಯೇ ಜಯ. ನೀನು ಭಕ್ತರಿಗೋಸುಗ ಅವತಾರ ಮಾಡಿ, ಜಯ=ಜಯನಂಜಯತೀತಿವಾಜಯಃ, ಸೋತ್ಕರ್ಷವಾದ ಜಯ-ಭಕ್ತರಿಗೆ ಮಂಗಳವನ್ನು ಕೊಟ್ಟು, ಸರ್ವೋತ್ಕೃಷ್ಟನಾಗಿ ವರ್ತಿಸುವ ಹರಿಯೆ, ಸದಾ ನಿನಗೆ ಜಯವು ಅಪಜಯವೆಂದಿಗೂ ಇಲ್ಲ. ಜಯಾ ರಮಣ=ಜಯಾದೇವಿ ಪತಿಯಾದ ಸಂಕರ್ಷಣ ರೂಪಿ ಹರಿಯೆ ನಿನಗೆ ಜಯ=ಸದಾ ಮಂಗಳವಿರಲಿ. ಇಲ್ಲಿ ಸಂಕರ್ಷಣ ರೂಪಿ ಹರಿಯ ಸ್ತೋತ್ರ ಏಕೆ ಮಾಡಿದರೆಂಬುದು ವಿಚಾರಾಂಶವಾಗಿದೆ. ಜಯನಾಮಕಳಾದ ಲಕ್ಷ್ಮೀ ಪತಿಯೂ, ಜಯದೇವಿಯಿಂದ ಸೂತ್ರನಾಮಕ ವಾಯುವನ್ನು ಪಡೆದ—ಜಯ ಪ್ರದನಾದ ವಾಯುದೇವರಿಗೆ ಪತಿ=ರಮಣ, ಆನಂದವನ್ನು ಕೊಡುವ ವಾಯು

ವಂತರ್ಗತ, ವಾಯುವಿಗೆ ಒಡೆಯನಾದ ಸಂಕರ್ಷಣ=ಸಮ್ಯಕ್ ಕರ್ಷಯತೀತಿ ಸಂಕರ್ಷಣಃ–ಪಾಪಿಗಳನ್ನು ಪೀಡಿಸುವನಿಗೆ, ಭಕ್ತರನ್ನು ಸಮೀಪಕ್ಕೆ ಳೆದುಕೊಳ್ಳುವನಿಗೆ ಸಂಕರ್ಷಣ=ಅಥವಾ ದೇವಾನ್–ಸಂ=ಜ್ಞಾನಂ ಕರ್ಷಯತೀತಿ ಸಂಕರ್ಷಣ। ಸಚಾಸೌಣಶ್ಚ ಸುಖರೂಪಶ್ಚೇತಿ ಸಂಕರ್ಷಣ. ಅಥವಾ ಪ್ರಳಯ ಕಾಲದಲ್ಲಿ ಸರ್ವ ಜೀವರನ್ನು ಶಳೆದು–ವಾಸುದೇವನ ವಶಮಾಡಿ ಮುಕ್ತಿದಾನ ಮಾಡುವನು.

**ಭಾವಸೂಚನ:** ವನ ಇತಿ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವನ" ಇತಿ "ವನಂ" "ಜಲಂ ॥" "ತ್ರಚ್ಚರಃ" "ಮತ್ಸ್ಯಃ" ॥ "ಅದ್ರಿಃ" ಮಂದರಃ ॥ ತದ್ಧರಃ ಕೂರ್ಮಃ ॥ ಧರಪದಂ ಉಭಯಾನ್ವಯಿ ॥ ಧರಾಧರಃ ಕೋಲಃ ॥ "ಮನುಜ ಮೃಗವರಃ" ನೃಹರಿಃ ॥ "ಭೂಮ" ಪೂರ್ಣ ॥ "ರುಕ್ಮಿಣೀವಲ್ಲಭ" ಇತ್ಯಸ್ಯ ಪ್ರತಿಪದಮ್ ॥ ತಾಳರಕ್ಷಣಾರ್ಥಂ ವಾ ॥ ನಾರಾಯಣೇತ್ಯಭಿಯುಕ್ತ ಪ್ರಯೋಗವತ್ ॥ ಜಯಾ ರಮಣ ಸಂಕರುಷಣ. ॥ ೨೪ ॥

**ಕನ್ನಡಾರ್ಥ**

"ವನಚರಾದ್ರಿ ಧರಾಧರ" ಎಂಬ ಪದ್ಯದಲ್ಲಿರುವ "ವನ" ಎಂಬ ಪದಕ್ಕೆ "ಉದಕ-ಜಲ-ನೀರು" ಎಂದು ಅರ್ಥವೇ ಹೊರತು "ಕಾಡು" ಎಂದು ಅರ್ಥ ವಲ್ಲ. "ಕಾಡು" ಎಂಬ ಅರ್ಥವು ಇಲ್ಲಿ ಹೊಂದುವದಿಲ್ಲ. "ಜಲ"ವೆಂದು ಹೇಳಿದರೆ "ಜಲಚರ–ಮತ್ಸ್ಯ", "ಮತ್ಸ್ಯಾವತಾರ" ಎಂದು ಅರ್ಥವು. ಭಗವ ದವತಾರ ಪರವಾಗಿ ಹೊಂದುತ್ತದೆ. ಅದ್ರಿಯೆಂದರೆ ಮಂದರಪರ್ವತ; ಅದನ್ನು ಧರಿಸಿದವರು ಶ್ರೀ ಕೂರ್ಮದೇವರು. "ಧರಾಧರ" ಎಂಬಲ್ಲಿರುವ "ಧರ" ಎಂಬ ಪದವನ್ನು "ಅದ್ರಿ–ಧರಾ" ಎಂಬ ಎರಡೂ ಪದಗಳಿಗೆ "ಅದ್ರಿಧರ" "ಧರಾಧರ" ವೆಂಬುದಾಗಿ ಯೋಜಿಸಬೇಕು. ಅಂದರೆ "ಅದ್ರಿಧರ–ಕೂರ್ಮ", "ಧರಾಧರ–ವರಾಹ" ಎಂದು ಅರ್ಥವಾಗುತ್ತದೆ. "ಮನುಜ ಮೃಗವರ" ಎಂದರೆ "ನರಸಿಂಹ" ಎಂದು ಅರ್ಥ. "ಭೂಮ" ಎಂದರೆ "ಪೂರ್ಣ" ಎಂದು ಅರ್ಥ. "ಜನಕಜಾವಲ್ಲಭ" ಎಂದು ಹೇಳಿದಂತೆ "ರುಕ್ಮಿಣೀ ವಲ್ಲಭ" ಎಂಬುದಾಗಿಯೇ ಶ್ರೀ ಕೃಷ್ಣ ಪರವಾಗಿ ಪದವನ್ನು ಪ್ರಯೋಗಿಸಬಹುದಾಗಿತ್ತು. "ಅದೇ ಅರ್ಥವು

ಹೆಚ್ಚು ವಿವರಣೆಯಿಂದ ತಿಳಿಯಲಿ" ಎಂಬ ಅಭಿಪ್ರಾಯದಿಂದ ಅದರ ಸಮಾನಾರ್ಥಕವಾದ "ಶ್ರೀ ರುಕ್ಮಿಣೀ ಮನೋರಥ ಸಿದ್ಧಿದಾಯಕ" ಎಂಬುದಾಗಿ ಪದವನ್ನು ವಿವರಿಸುತ್ತಾರೆ. "ನಾರಾ ಲಕ್ಷ್ಮೀಃ 'ಪತಿತ್ವೇನ' ತದಯನಂ ನಾರಾಯಣಃ" ಎಂದು ಜ್ಞಾನಿಗಳು ಪದಪ್ರಯೋಗ ಮಾಡಿರುವಂತೆ ಈ ಪದವನ್ನು ಉಪಯೋಗಿಸಿರುತ್ತಾರೆ. "ಜಯಾರಮಣ" – "ಜಯಾ" ರಮಾದೇವಿಯ ರೂಪ. ಈ ರೂಪಕ್ಕೆ ಪತಿಯಾದ ನಾರಾಯಣನ ರೂಪ ಸಂಕರ್ಷಣ. ಈ ಸಂಕರ್ಷಣ ರೂಪಕ್ಕೆ "ಜಯಾರಮಣ" ಎಂದು ಕರೆಯುತ್ತಾರೆ. ॥ ೨೪ ॥

**ಅವತರಣಿಕಾ:** ಈ ಅವತಾರಾದಿ ರೂಪಗಳು ಸಹ ಪ್ರಾಕೃತವಲ್ಲ, ಅಪ್ರಾಕೃತ ರೂಪಗಳು. ಎಲ್ಲಿ ಸತು, ಚಿತು, ಆತ್ಮ ಆನಂದ ರೂಪಗಳು ಇಂಥ ಜ್ಞಾನಾನಂದ ರೂಪಿ ಹರಿಯನ್ನು ಮಧ್ವಾಂತರ್ಯಾಮಿಯಾಗಿ ಯಾರು ಉಪಾಸನೆ ಮಾಡುತ್ತಾರೋ ಅವರನ್ನು ಸಂತತ ರಕ್ಷಿಸುತ್ತಾನೆಂದು ದೃಷ್ಟಾಂತಪೂರ್ವಕ ಹರಿಯ ಸ್ತೋತ್ರಗೈದು ಸಂಧಿಯ ಉಪಸಂಹಾರಗೈಯುತ್ತಾರೆ.

ಮೂಲ :

**ಸಚ್ಚಿದಾನಂದಾತ್ಮ ಬ್ರಹ್ಮಕ ।**
**ರಾರ್ಚಿತಾಂಘ್ರಿ ಸರೋಜ ಸುಮನಸ ।**
**ಪ್ರೋಚ್ಚ ಸನ್ಮಂಗಳದ ಮಧ್ವಾಂತಃಕರಣ ರೂಢ ॥**
**ಅಚ್ಯುತ ಜಗನ್ನಾಥ ವಿಠ್ಠಲ ।**
**ನಿಚ್ಚ ನೆಚ್ಚಿದ ನಿಜ ಜನರಬಿಡ ಕಾ ।**
**ಡ್ಗಿಚ್ಚ ಸುಂಡಾರಣ್ಯದೊಳು ಗೋ ಗೋಪರನು ಕಾಯ್ದಾ ॥೨೫॥**

ಅಂತು ಸಂಧಿ ೧೦ಕ್ಕೆ ಪದ ೩೧೨ಕ್ಕೆ ಸರ್ವಪ್ರತೀಕ ಸಂಧಿ ಸಮಾಪ್ತ ಮಂಗಳಮಾಹ
॥ ಶ್ರೀ ಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :** ಸಚ್ಚಿದಾನಂದಾತ್ಮ=ಸತು=ಸಿರ್ದೋಷ, ಚಿತ್ ಪ್ರಾಕೃತ ರಹಿತ ಚಿತ್=ಜ್ಞಾನಸ್ವರೂಪ, ಆನಂದ=ಆನಂದ ಸ್ವರೂಪ, ಆತ್ಮ=ಸ್ವಾಮಿ ಒಡೆಯ "ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ಯಥಾಕ್ರಮೈಃ" ॥ ಎಂದು ಸರ್ವಜ್ಞರ ಉಕ್ತಿ. ಹೀಗೆ ಚತುರ್ಗುಣಾರಂಭಿಸಿ ಅನಂತ ಜ್ಞಾನಾನಂದಾತ್ಮ ಉಳ್ಳವ, ಬ್ರಹ್ಮ ಕರಾರ್ಜಿತಾಂಘ್ರಿ ಸರೋಜ=ಸದಾ ಸರ್ವಕಾಲ ಸರ್ವ ದೇಶ

ದಲ್ಲಿ ಸರ್ವ ಜೀವ ಬಹಿರ್ ಸಕಲ ವಸ್ತುಗಳಲ್ಲಿ ಪೂಜಾ ಮಾಡತಕ್ಕ ಪುರುಷ ನಲ್ಲೆ, ನಿತ್ಯ ಸನ್ನಿಹಿತವಾದ ಸಾಲಗ್ರಾಮದಲ್ಲಿ ಬ್ರಹ್ಮದೇವರೆ ಅರ್ಚಕರೆಂಬ ಕಾರಣ, ಬ್ರಹ್ಮದೇವರ ಕೈಯಿಂದ ಪೂಜಾ ಮಾಡಿಸಿಕೊಳ್ಳುವ ಪಾದಪದ್ಮ ಉಳ್ಳ ಹರಿಯೆ, ಸುಮನಸೆ ಪ್ರೋಚ್ಯ=ದೇವತೆಗಳಿಗೆ ಶ್ರೇಷ್ಠನಾದವ=ಒಡೆ ಯನು, ಸನ್ಮಂಗಳದ=ಉತ್ತಮವಾದಂಥ ಸದಾ ಮಂಗಳವನ್ನು ಕೊಡುವವ, "ಮಂಗಳಂ ಭಗವಾನ್ ವಿಷ್ಣುಃ ಮಂಗಳಂ ಮಧುಸೂದನ" ಮಧ್ವಾಂತಃ ಕರುಣ ರೂಢ=ವಾಯ್ವಂಶರಾದ ಅಂಶ ಅವತಾರಾದಿಗಳಲ್ಲಿ ಕಿಂಚಿತ್ ಭೇದ ವಿಲ್ಲದ ಮಧ್ವಾಚಾರ್ಯರ, ಅಂತಃಕರುಣಾರೂಢ=ಮನಸಿನಲ್ಲಿ ಆರೂಢನಾಗಿ ರುವ-ನೆಲೆಗೊಳಿಸಿರುವ, ಜಗನ್ನಾಥ ವಿಠ್ಠಲ=ಜಗತ್ತಿಗೆ ಒಡೆಯ ಸ್ವಾಮಿಯಾ ದವ, ವಿಠ್ಠಲ=ಅಜ್ಞ ಜನರನ್ನು ಜ್ಞಾನಮಾರ್ಗಕ್ಕೆ ಹಚ್ಚುವ, ಅಚ್ಯುತ= ಜೀವರಿಂದ ಒಂದರಘಳಿಗೆ ಬಿಟ್ಟಗಲದೇ ಇರುವ, ನಿಚ್ಚ ನೆಚ್ಚಿದ=ನಿತ್ಯ, ಯಾವಾಗಲೂ, ನೆಚ್ಚಿದ=ನಂಬಿದ ನಿಜಭಕ್ತರಾದ ಜನರನ್ನು ಎಂದೆಂದಿಗೂ ಬಿಡನು, ಕಾಡ್ಗಿಚ್ಚು=ಕಾಡಿನಲ್ಲಿ ಹುಟ್ಟಿದ ಅಗ್ನಿಯನ್ನು ಉಂಡು, ಗೋವು ಗಳನ್ನು (ಆಕಳುಗಳಾಗಿ ಸನಕಾದಿಗಳು ಜನಿಸಿದ್ದರು.) ಋಷಿಗಳನ್ನು, ಗೋಪ ರನ್ನು=ಗೋಪರು=ದೇವತೆಗಳೇ ಗೋಪಾಲಕರಾಗಿ ಗೋಕುಲದಲ್ಲಿ ಜನಿಸಿದ ನಿಜಭಕ್ತರನ್ನು ಕಾಯ್ದ ಶ್ರೀ ಕೃಷ್ಣನೇ, ಸರ್ವದಾ ಗೋ-ಗೋಪಾಲರನ್ನು ರಕ್ಷಿ ಸಿದಂತೆ ಧ್ಯಾನೋಪಾಸನರತರಾದ ನಿನ್ನ ಭಕ್ತರನ್ನು ರಕ್ಷಿಸೆಂದು ಶ್ರೀ ಕೃಷ್ಣ ನನ್ನು ಪ್ರಾರ್ಥಿಸಿದ್ದಾರೆ. ಇಂತು ೧೦ನೇ ಸಂಧಿಯವರೆಗೆ ಪದ್ಯಾರ್ಥವನ್ನು, ಶ್ರೀ ವಿಜಯಗೋಪಾಲರು, ಶ್ರೀ ಜಗನ್ನಾಥ ಪ್ರಾಣೇಶ ದಾಸಾರ್ಯರು ಬಲ ಎಡ ಹಿಂದು ಮುಂದೆ ನಾಲ್ಕು ದಿಕ್ಕಿಗೆ ನಿಂದು ಬರೆಸಿದ್ದು ಬರೆದೆನೆಂಬ ಅನು ಭವ, ನಾನಾ ಬಗೆಯಿಂದ ನಿಮಿಷ ನಿಮಿಷಗಳಲ್ಲಿ ಸ್ಮರಣೆ ಇತ್ತು ಪುಳುಕಾಂಕಿತ ನನ್ನ ಮಾಡಿಸಿ ಸೇವೆ ತೆಗೆದುಕೊಂಡ ದಾಸಾರ್ಯರ ಅಂತರ್ಯಾಮಿ ಮಧ್ವೇ ಶನು ಪ್ರೀತನಾಗಲಿ ಎಂದು ಪದ್ಯಾರ್ಥದ ಪರಿಮಳವನ್ನು ಶ್ರೀಕೃಷ್ಣನಡಿದಾವರೆ ಗಳಿಗೆ ಅರ್ಪಿಸಲು ಪ್ರೇರಿಸಿದ ದಾಸವರ್ಯರೆ ಧನ್ಯರು, ಮಾನ್ಯರು. ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು.

**ಭಾವಸೂಚನ**: ಸಚ್ಚಿದಾನಂದಾತ್ಮೇತಿ ‖ ೨೫ ‖ ಇತಿ ಶ್ರೀ ಹರಿಕಥಾ

ಅಮೃತಸಾರ ವ್ಯಾಖ್ಯಾನೆ ಭಾವಸೂಚನ ಸರ್ವಸಮರ್ಪಣ ಸಂಧಿ ಸಮಾಪ್ತ.

|| ಶ್ರೀ ಗುರು ಮಧ್ವೇಶ ಕೃಷ್ಣಾರ್ಪಣಮಸ್ತು ||

**ಸೂಚನೆ : ಶ್ರೀ ವಿಜಯದಾಸರ ಸುಳಾದಿ** ಉಪಾಸನಾ ಭಾಗ ಪುಟ (೨) ಧ್ರುವತಾಳದಲ್ಲಿ

ಅನಂತಕಲ್ಯಾಣ ಗುಣ ಪರಿಪೂರ್ಣ ನಿತ್ಯ ನಿರ್ದೋಷ |
ಜ್ಞಾನಾನಂದಾತ್ಮಕ ವಿಷ್ಣುರ್ಮೇಸ್ವಾಮಿ ತ್ರಿಲೋಕ ಕರ್ತಾ |
ನೀನೆ ಸ್ವತಂತ್ರ ಬೊಮ್ಮಾದಿಗಳು ನಿನ್ನ ದಾಸಾನುದಾಸರು |
ಅನಂತ ಅನಂತ ಕಾಲದಲ್ಲಿ ನಿಜವೆಂದು ಪೇಳುತ್ತ |
ಮಾನುಷೋತ್ತಮ ಹೀಗೆ ಬಹುಕಾಲವರ್ಚಿಸಲು |
ಮನದೊಳಗೆ ವಿಜಯ ವಿಠ್ಠಲನು ಕೃಪೆಯಿಂದ ಧ್ಯಾನಕ್ಕೆ ಪೊಳೆವಾ ||೪||

ಈ ಪದ್ಯಾರ್ಥವು ಈ ಸುಳಾದಿಯಿಂದ ಮಾಡಿಕೊಂಡರೆ ಜನ್ಮ ಸಫಲ.

"ಮತ್ತು ಸರ್ವ ಸಮರ್ಪಣೆ ಮಾಡು ಮುಕ್ತಿಯ ಬೇಡು" ಸುಳಾದಿ (ಪ್ರಮೇಯ ಭಾಗ)—ಸಕಲ ಕಾಲಗಳಲ್ಲಿ ಸರ್ವ ಜೀವಾಂತರ್ಯಾಮಿ ಹರಿಗೆ ಸಕಲ ಕರ್ಮಗಳನ್ನೂ ತ್ರಿವಿಧರಾದವರು ಅರ್ಪಿಸುವ ವಿಚಾರವೂ ನೋಡುವದಾಗಿ ಪ್ರಾರ್ಥನೆ. ಶ್ರೀ ಮಧ್ವೇಶಾರ್ಪಣಮಸ್ತು.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಉಪಸಂಹರತಿ "ಸಚ್ಚಿದಾನಂದಾತ್ಮ" ಇತಿ || "ಸುಮನಸ"—ದೇವ || "ಪ್ರೋಚ್ಚ"—ಉತ್ತಮಃ || ಏಕ ಪದಂ ವಾ || "ಮುಖ್ಯೇಷ್ಟಂ ವಾ ಸುಮನಸಾಂ" ಇತ್ಯುಕ್ತೇಃ || "ನಿಚ್ಚ"=ಸಮೀಚೀನಂ (ತಯಾ) | "ನೆಚ್ಚ" ವಿಶ್ವಸ್ತಃ || ೨೮ ||

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ಸೋದೇಶಾನುಗೃಹೀತ ಶ್ರೀನಿವಾಸಾಚಾರ್ಯ ಸುತ ವಾದಿರಾಜಾರ್ಯ ವಿರಚಿತಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಸರ್ವಪ್ರತೀಕ ಸಂಧಿಃ ಸಮಾಪ್ತಃ || ಶ್ರೀಃ || ಶ್ರೀಃ || ಶ್ರೀಃ ||

**ಕನ್ನಡಾರ್ಥ**

ಈ ಸಂಧಿಯನ್ನು ಉಪಸಂಹರಿಸುತ್ತಾರೆ—"ಸಚ್ಚಿದಾನಂದಾತ್ಮ" ಎಂಬುದಾಗಿ "ಸುಮನಸ"=ದೇವ | "ಸುಮನಸಪ್ರೋಚ್ಚ" ಎಂದರೆ "ದೇವೋತ್ತಮ"

ಎಂದು ಅರ್ಥ. "ಸುಮನಸಪ್ರೋಚ್ಚ"ವೆಂದು ಅಖಂಡ ಪದವನ್ನು ಮಾಡಬೇಕು. ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ "ಪರಮಾತ್ಮನು ಉತ್ತಮರಾದ ದೇವತೆಗಳಿಗೆ ಮುಖ್ಯವಾದ ಇಷ್ಟ ಸ್ವರೂಪನು ; ಅತಿ ಪ್ರಿಯತಮನು" ಎಂದು ನಿರೂಪಿಸಿರುತ್ತಾರೆ. ಅದರಂತೆ ಇಲ್ಲಿಯೂ ದೇವತೆಗಳಿಗೆ ಮುಖ್ಯ ಇಷ್ಟ ರೂಪನು" ಎಂದೂ ಅರ್ಥ ಮಾಡಬೇಕು. "ನಿಚ್ಚ ನೆಚ್ಚಿದ" ಎಂಬ ಪದಕ್ಕೆ ಸಮೀಚೀನವಾಗಿ ದೃಢವಾದ ಶಾಸ್ತ್ರವಿಹಿತವಾದ ಭಕ್ತಿಯಿಂದ ನಂಬಿರುವ" ಎಂದು ಅರ್ಥಮಾಡಬೇಕು. || ೨೫ ||

ಶ್ರೀ ಹರಿಕಥಾಮೃತಸಾರ ಟೀಕಾ ವ್ಯಾಸದಾಸ ಸಿದ್ಧಾಂತ ಕೌಮುದೀ ಕನ್ನಡಾರ್ಥಾನುವಾದದಲ್ಲಿ ೧೦ನೆಯ "ಸರ್ವಪ್ರತೀಕ"ಸಂಧಿಯು ಮುಗಿದುದು.

ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ.

ಇಲ್ಲಿಗೆ ಹರಿಕಥಾಮೃತಸಾರ ೧೦ನೇ ಸಂಧಿ ಹರಿಯ ಸೃಷ್ಟ್ಯಾದಿ ಲೀಲಾ ೨ನೇ ಭಾಗ ಟೀಕಾ ಪಂಚರತ್ನ ಪ್ರಕಾಶಿಕಾ ಮುಗಿದುದು.

॥ ಶ್ರೀ ಮಧ್ವೇಶ ಶ್ರೀ ಕೃಷ್ಣಾರ್ಪಿತವು ॥




ಹರಿಃ ಓಂ

॥ ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ ॥

॥ ಶ್ರೀ ಗುರುರಾಜೋ ವಿಜಯತೇ ॥

# ೧೧ ಧ್ಯಾನಪ್ರಕ್ರಿಯಾ ಸಂಧಿಯ ಸಾರ

ಪರಮ ಕರುಣಾಳುಗಳಾದ ಶ್ರೀಮಜ್ಜಗನ್ನಾಥ ದಾಸವರ್ಯರು ೧೦ನೇ ಸಂಧಿ ಸಂಪೂರ್ತಿಯಾಗಿ ಪ್ರತಿಯೊಂದು ಬ್ರಹ್ಮಾಂಡದಲ್ಲಿ ಸೃಷ್ಟಿ ಸ್ಥಿತ್ಯಾದಿ ವ್ಯಾಪಾರ ಕಾರ್ಯಗಳಾದ ಹರಿಲೀಲೆಯ ಹರಿಕಥಾಮೃತಸಾರವನ್ನು ವಿಶದವಾಗಿ ವರ್ಣಿಸಿದ್ದಾರೆ. "ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋ ಜೀವ ಏವಚ । ಯದನುಗ್ರಹತಃ ಸಂತಿ ನ ಸಂತಿಯದುಪೇಕ್ಷಯಾ ॥" ಎಂಬುವಂತೆ ಶ್ರೀ ರಮಾನಾರಾಯಣರಲ್ಲದೆ, ನಿತ್ಯವಾದ ವಸ್ತುಗಳು ಆರು (೬); ಅವು ಯಾವವೆಂದರೆ: (೧) ಜೀವ, (೨) ಪ್ರಕೃತಿ, (೩) ದೇಶ, (೪) ಕಾಲ, (೫) ಕರ್ಮ, (೬) ವೇದ. ಇವು ಆರು ಸಂತತ ನಿತ್ಯವಸ್ತುಗಳು. ಇವುಗಳಲ್ಲಿ ಜೀವಚೇತನ ಸಾಧನಮಾಡಲು ಯೋಗ್ಯ, ಉಳಿದ ೫ ಜಡಗಳು. ಇಂಥ ನಿತ್ಯರಾದ ಜೀವರನ್ನು ಸೃಷ್ಟಿಗೆ ತರಲು, ಭಗವದಿಚ್ಛೆ ಮೂಲ ಕಾರಣ. ಶ್ರೀಹರಿ ತನ್ನ ಇಚ್ಛೆಯಿಂದ, ಅನಾದಿಯಾದ ಮೂಲಜಡಪ್ರಕೃತಿದ್ವಾರಾ, ಜೀವನ ಸ್ವಭಾವ - ಅವನ ಅನಾದಿಕರ್ಮ - ದೇಶ-ಕಾಲ ಗುಣಾದಿಗಳನ್ನನುಸರಿಸಿ, ಪ್ರಕೃತಿಯಿಂದ ಬಂಧವನ್ನು ಮಾಡುವನು. ಮತ್ತು ಈ ಬಂಧನಿವೃತ್ತಿಗೆ ತಾನೇ ಕಾರಣನಾಗಿ, ವೇದಗಳು ಜಡವಾದರೂ, ನಿತ್ಯವಾದ ವೇದಗಳಿಗೆ ಅಂಭೃಣಿದ್ವಾರಾ ಅಭಿವ್ಯಂಜಕ ಶಕ್ತಿಯಿತ್ತು, ತಾನೇ ಆಮಂತ್ರವರ್ಣ ಪ್ರತಿಪಾದ್ಯನಾಗಿ "ವಿದ್" ಜ್ಞಾನೆ ಎಂಬಂತೆ ವೇದದ್ವಾರಾ ಜ್ಞಾನವನ್ನಿತ್ತು ದೇಶ-ಕಾಲ-ಕರ್ಮ-ಪ್ರಕೃತಿ ಇವುಗಳ ಬಂಧದಿಂದ ದೂರಮಾಡುವನು.

ಇಂತಹ ನಿತ್ಯವಾದ ವಸ್ತುಗಳ ಗುಣಧರ್ಮಗಳನ್ನು ಪ್ರವರ್ತನಮಾಡುವ ಶ್ರೀಹರಿಯ ಮಹಿಮೆಯನ್ನರಿಯುವುದು, ಅತ್ಯಾವಶ್ಯಕವಾದುದು. ಪ್ರಕೃತ್ಯಾದಿ ೪ ಜಡವಸ್ತುಗಳು ಮತ್ತು ಜೀವಜೀವರ ಸ್ವಭಾವಗುಣಧರ್ಮಗಳನ್ನು ವೇದದಿಂದಲೇ ತಿಳಿಸುತ್ತಾನಾದಕಾರಣ, ಆ ವೇದಪ್ರತಿಪಾದ್ಯನಾದ ಹರಿಯ ಧ್ಯಾನ

ಆಯಾವಸ್ತುಗಳಲ್ಲಿ ಹೇಗೆ ಮಾಡುವದೆಂಬೀ ಸುವಿಚಾರವನ್ನು ದಾಸಾರ್ಯರು, ೧೧ನೇ ಸಂಧಿಯಿಂದ ೧೭ನೇ ಸಂಧಿ ಪೂರ್ತಿಯಾಗಿ ನಿತ್ಯವಾದ ವಸ್ತುಗಳ ನೈಜಸ್ಥಿತಿ ಬಂಧಕತ್ವ ಮತ್ತು ಮೋಚಕತ್ವವನ್ನು ವಿವರಗೈಸಲು ಮೊದಲಿಗೆ ಪ್ರಕೃತಿಗಳ ವಿವರ ಹೇಳುತ್ತಾರೆ.

"ಭೂಮಿರಾಪೋನಲೋ ವಾಯುಃ । ಖಂಮನೋ ಬುದ್ಧಿರೇವಚ । ಅಹಂಕಾರ ಇತೀಯಂಮೇ ಭಿನ್ನಾಪ್ರತಿರಷ್ಟಧಾ" ॥ ಎಂಬ ಗೀತೋಕ್ತಿಯಂತೆ, ನಿತ್ಯಮೂಲ ಜಡಪ್ರಕೃತಿಯಿಂದ ಉಪಚಯವಾದ - ಭೂ, ಉದಕ, ಅನಲ (ಅಗ್ನಿ) ಅನಿಲ (ವಾಯು), ಆಕಾಶ-ಮನೋ-ಬುದ್ಧಿ, ಅಹಂಕಾರ ಈ ಎಂಟು ವಿಧವಾದ ಜಡಪ್ರಕೃತಿಯ ಬಿಡುಗಡೆಗೋಸುಗ - ಧ್ಯಾನಪ್ರಕ್ರಿಯಾ ಎಂಬೀ ೧೧ನೇ ಸಂಧಿಯನ್ನು ಆರಂಭಿಸಿರುವರು.

ಮುಂದೆ ೧೨ನೇ ನಾಡಿಪ್ರಕರಣ — ಈ ನಾಡಿಗಳು ಜಡಪ್ರಕೃತಿ ವಿಭಾಗ ವಾದರೂ ತೇಜೋಮಯ ನಾಡಿಗಳ ಜ್ಞಾನ ತದ್ವಿವರ - ನಾಡಿಗಳ ವಾಯು-ಹರಿರೂಪಗಳ ಧ್ಯಾನದಿಂದ ಬಿಡುಗಡೆ ಈ ವಿಚಾರ ವಿಸ್ತಾರಗೈಸಿರುವರು.

೧೩ನೇ ನಾಮಸ್ಮರಣ ಸಂಧಿಯಲ್ಲಿ ನಾಮಾಭಿಮಾನಿ ಉಷಾರಂಭಿಸಿ ಪ್ರಾಣಪರಿಯಂತವಾಗಿ, ವೇದವರ್ಣನಾಮ ಪದಕ್ರಮಾದಿಗಳಲ್ಲಿಪ್ಪ ಹರಿಯ ಪ್ರವರ್ತಕರೂಪಗಳ ಧ್ಯಾನದ್ವಾರಾ ಪ್ರಕೃತಿ, ಜೀವ, ಕಾಲ, ದೇಶ, ಕರ್ಮಗಳ ಜ್ಞಾನವನ್ನರಿಯುವರು; ವೇದಜ್ಞಾನವೇ ಪ್ರಾಮುಖ್ಯ.

೧೪ನೇ ಜೀವನಪ್ರಕ್ರಿಯಾ ಸಂಧಿಯಲ್ಲಿ ಜೀವರುಗಳ ಸ್ವರೂಪ - ಜೀವನ ಉತ್ಪತ್ತಿ, ಮಾತಾಪಿತೃ ಬಂಧುಬಾಂಧವರ ಋಣವಿಮೋಚನ ವಿವರ, ಜೀವ ಜೀವರ ಭೇದನಿಶ್ಚಯ. ಜೀವಜಡಈಶ್ವರ ಭೇದಪಂಚಕ ತಾರತಮ್ಯಜ್ಞಾನ ದಿಂದ ಮಾತಾಪಿತೃಗಳಲ್ಲಿ ಪುತ್ರಪತ್ನ್ಯಾದಿಗಳಲ್ಲಿ ಅಭಿಮಾನ ಬಿಡುಗಡೆಯಾಗಲು ಪಿತ್ರಾದಿ ಋಣವಿಮೋಚನಗೈವ ಹರಿಯ ಮಾಹಾತ್ಮ್ಯ, ಜೀವನಪ್ರಕ್ರಿಯಾ ಸಂಧಿ ಮಧ್ಯದಲ್ಲಿ ಹೇಳಿ, ಮುಂದೆ ೧೫ನೇ ಶ್ವಾಸಸಂಧಿಯಲ್ಲಿ ಕಾಲ-ದೇಶ-ವಿವರ — ಕಾಲದೇಶಿಗನಾಗಿ ಶ್ರೀಹರಿಯು ಜೀವನನ್ನು, ಆಯಾ ಕಾಲ ದೇಶ ಬಾಧ್ಯನಾಗಿ ಬಾಧಕನಾಗುವ ಚರಿಯ, ಕಾಲಾತೀತ ದೇಶಾತೀತನ ಮಹಿಮಾ ಜ್ಞಾನದಿಂದ ಕಾಲದೇಶಗಳ ಭಯವಿಮೋಚನವಾಗುವ ರೀತಿ ಇತ್ಯಾದಿ ಸಂಗತಿ ಗಳನ್ನು ಹೇಳಿದ್ದಾರೆ.

ಮುಂದೆ ೧೬-೧೭ನೇ ಸಂಧಿಗಳಲ್ಲಿ ನಿತ್ಯವಾದ ಅನಾದಿಕರ್ಮಸ್ವರೂಪ, ಅನಾದಿಕರ್ಮ ಮೊನೆಮಾಡಿ ಬಾಹ್ಯಸ್ಥೂಲ ಕರ್ಮಾದಿಗಳಿಂದ ಶ್ರೀಹರಿಯು ಬಂಧಕಗೈಸುವನು. ಮತ್ತು ಇಂಥ ಕರ್ಮಗಳ ಬಂಧನದಿಂದ ಬಿಡುಗಡೆ ಮಾಡುವನು. ಶ್ರೀಹರಿಯೇ ಮುಖ್ಯ ಸ್ವತಂತ್ರಕರ್ತಾ ಕಾರಯಿತಾ, ಜೀವನು ಸದಾ ಅಸ್ವತಂತ್ರ "ತೇನ ವಿನಾ ತೃಣಮಪಿ ನ ಚಲತಿ" ಎಂಬ ನಿಶ್ಚಯ ಜ್ಞಾನದಿಂದಲೇ ಕರ್ಮಬಂಧನದಿಂದ ಮೋಚನವಾಗುವುದೆಂದು ಸ್ವಗತಸ್ವಾತಂತ್ರ್ಯ-ದತ್ತಸ್ವಾತಂತ್ರ್ಯವಿಭಾಗ ಸಂಧಿಗಳನ್ನು ಹೇಳಿರುವರು. ಹೀಗೆ ಪ್ರಕೃತಿ, ವೇದ-ಜೀವ-ಕಾಲ-ದೇಶ-ಕರ್ಮಗಳಲ್ಲಿ ಧ್ಯಾನಮಾಡುವ ಬಗೆ ೭ ಸಂಧಿಗಳಿಂದ ಶ್ರೀ ವಿಜಯದಾಸಾರ್ಯರ ಸುಳಾದಿಗಳ ಮರ್ಮವನ್ನರಿತ ಅಪರೋಕ್ಷಿಗಳಾದ ದಾಸಾರ್ಯರು ಸಜ್ಜೀವರುಗಳಿಗೆ ಕರುಣಿಸಿರುವರು. ಹೀಗೆ ಕರ್ಮವಿಪಾಕಾನಂತರ, ವಿಶೇಷ ಜ್ಞಾನವಿತ್ತು, ಬಿಂಬೋಪಾಸನೆ ವಿಚಾರ ಮುಂದೆ. ೧೫ ಸಂಧಿಗಳಲ್ಲಿ ವಿವರಿಸಿದ ದಾಸಾರ್ಯರ ಮಹಾಮಾಹಾತ್ಮ್ಯೆ ಹರಿಯನ್ನು ಒಲಿಸಿ ಕುಣಿದು ತಣಿದು, ಐದೇ ನುಡಿಗಳಲ್ಲಿ "ದಾಸೋಹಂ ತವ ದಾಸೋಹಂ ವಾಸುದೇವವಿಗತಾಘ ಸಂಘ ತವ ದಾಸೋಹಂ" ಎಂಬ ಪದದಲ್ಲಿ ಸಂಕ್ಷಿಪ್ತವಾಗಿ ಪೇಳ್ದ ವಿಚಾರವೇ ಸವಿಸ್ತರವಾಗಿ ೧೧ ರಿಂದ ೧೭ ಸಂಧಿ ಎಂದರೆ ೭ ಸಂಧಿಗಳಲ್ಲಿ ವಿವರಿಸಿರುವರು. ಈ ಸುಜ್ಞಾನವು ಶ್ರೀ ವಿಜಯದಾಸಾರ್ಯರ ಸುಳಾದಿಗಳಿಂದ ಲಭಿಸುವದು. ವಿಜಯದಾಸಾರ್ಯರ ಪಾದಗಳನ್ನು ಸ್ಮರಿಸಿ ಅವರು ತಿಳಿಸಿದಷ್ಟು ಸವಿಸ್ತರ ಬಿನ್ನೈಸುವೆ. ಬೇಸರಿಯದೇ ಓದಿ ಮನನ ಧ್ಯಾನಗೈಯ್ಯಲು ವಿನಂತಿ.*

---

* ಧ್ಯಾನವೆಂದರೆ Meditation (ಮೆಡಿಟೇಷನ್) = ಆಲೋಚನೆ ಚಿಂತನಮಾಡುವುದು. Thought (ಥಾಟ್) = ವಿಚಾರ, Reflection (ರಿಫ್ಲೆಕ್ಷನ್) = ಮನಸ್ಸಿನಲ್ಲಿ ಬಿಂಬಿಸಿದ ಮಾತುಗಳ, attention (ಅಟೆನ್ಷನ್) = ಲಕ್ಷ್ಯಕೊಡುವುದು. Head (ಹೀಡ್) = ವಿಶೇಷ ಲಕ್ಷ್ಯ ಕೊಡುವುದು. Looking at = ನೋಡುವುದು. Observation (ಅಬ್ಜರ್ವೇಷನ್) = ಸೂಕ್ಷ್ಮವಾಗಿ ನೋಡುವುದು, ದರ್ಶನ, ಅವಲೋಕನ ನೋಟ ಇತ್ಯಾದಿ. ೧. ಮನಗೊಟ್ಟು ಚಿಂತನೆಮಾಡು; ೨. ಮನದಲ್ಲಿ ಬರುವ ವಿಚಾರ ನೆಲೆಗೊಳಿಸಿರುವುದು ಧ್ಯಾನ; ೩. ವಸ್ತುವಿನಲ್ಲಿ ಮನಸ್ಸು ಹಾಕುವುದು; ೪. ಧಾರ್ಮಿಕ ಮನೋನಿಗ್ರಹ ಪೂರ್ಣಕಾರ್ಯವು ಧ್ಯಾನ; ೫. ಮನಸ್ಸಿನಲ್ಲಿ ದೇವದೇವತೆಗಳ ಗುಣಗಳನ್ನು ಆಲೋಚಿಸಿ, ಪ್ರತಿನಿಧಿಸೋಣ ಧ್ಯಾನ; ೬. Lost in Thought (ಲಾಸ್ಟ್ ಇನ್ ಥಾಟ್) = ಭಗವಂತನ ವಿಚಾರದಲ್ಲಿ ಮುಳುಗಿ ತನ್ನ

ಹೀಗೆ ಆಸನದಲ್ಲಿ ಕುಳಿತು, ಉಪಾಸನಾಯುಕ್ತಕ್ರಮ. ಭಾಗವತಾದಿ ಗ್ರಂಥಪ್ರಕಾಶಸಂಹಿತಾ ಮತ್ತು ಸುಳಾದಿಗಳಲ್ಲಿ ವರ್ಣಿಸಿರುವಂತೆ, ದೇಹ ಚಲಿಸದೆ "ಸಮಂ ಕಾಯಂ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ। ಸಂಪ್ರೇಕ್ಷ್ಯನಾಶಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥" ಎಂಬುವ ವಚನ ದಂತೆ ಆಸನದಲ್ಲಿ ಕುಳಿತು ಗುರೂಪದಿಷ್ಟವಾದಂತೆ ಭಗವಂತನ ಚಿಂತನೆ, ಮನನಾಭ್ಯಾಸವೇ ಧ್ಯಾನವೆಂದು ಕರೆಸಿಕೊಳ್ಳುತ್ತದೆ. "ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಶೀತಮತ್ಪರಃ ॥ **ಇದೇ ಧ್ಯಾನಯೋಗವೆಂದು** ಶ್ರೀ ಪುರಂದರ, ಶ್ರೀ ವಿಜಯದಾಸರಾಯರಾದಿ ಪ್ರಭೃತಿಗಳು ಧ್ಯಾನವೇ ಮುಖ್ಯವೆಂದು ಸವಿಸ್ತರ ವರ್ಣಿಸಿರುವರು. **ಸುಳಾದಿ** "ಧ್ಯಾನದೊಳಗೆ ಸ್ನಾನ ವಡಕಾ। ಧ್ಯಾನದೊಳಗೆ ಮೌನ ಅಡಕಾ। ಧ್ಯಾನದೊಳಗೆ ದಾನವಡಕಾ। ಧ್ಯಾನದೊಳಗೆ ಮಾನವಡಕಾ। ಧ್ಯಾನದಿಂದ ಜ್ಞಾನಉಂಟು। ಧ್ಯಾನದೊಳಗೆ ಜಗವಡಕಾ। ಧ್ಯಾನದೊಳಗೆ ದೇವರಡಕಾ। ಧ್ಯಾನದೊಳಗೆ ಸರ್ವ ಅಡಕಾ। ಧ್ಯಾನವನ್ನು ಘಳಿಸಿಕೊಂಡು। **ಧನ್ಯ ವಿಜಯ ವಿಠ್ಠಲನ್ನ**। ಧ್ಯಾನವನ್ನು ಮಾಡುನೀ। ದಾನದಿಂದ ಭಕುತಿಯಲ್ಲಿ। ಧ್ಯಾನವನ್ನು ಬಿಡದ ನರಗೆ। ಏನು ಇರಲಿ ಸರ್ವ ವಡಕ. (ಧ್ಯಾನವನ್ನು ಬಿಟ್ಟ ನರಗೆ ಏನು ಇರಲಿ ಸರ್ವ ವಡಕು ॥೧॥ ಧ್ಯಾನವನ್ನು ಬಿಟ್ಟವನಿಗೆ ಬೇಕಾದ ಸೌಲಭ್ಯವಿದ್ದರೂ ಎಲ್ಲವು ವಡಕ ಗಡಿಗಿ ಯಂತೆ ನಿಷ್ಫಲವೆಂದು ವರ್ಣಿಸಿದ್ದಾರೆ. ಮತ್ತು ರೂಪಕತಾಳದಲ್ಲಿ **ಧ್ಯಾನ**

---

ದೇಹಪರವಿಲ್ಲದೇ ಇರೋಣ = ಅಸಂಪ್ರಜ್ಞಾತ ಸಮಾಧಿ; ೭. Absorbed in Meditation (ಅಬ್‌ಸಾರಬ್ಡ್ ಇನ್ ಮೆಡಿಟೇಷನ್) = ಧ್ಯಾನಪರ ಚಿಂತನೆಯಲ್ಲಿ. ಮಗ್ನನಾಗಿರೋಣ; ೮. Profound Meditation (ಪ್ರಫೌಂಡ್ ಮೆಡಿಟೇಷನ್) ಚಿಂತನದಲ್ಲಿ ಮುಳುಗಿರುವುದು; ೯. ಧಾರ್ಮಿಕವಾದ ಚಿಂತನಾಭ್ಯಾಸ; ೧೦. ಧ್ಯಾನಿಸು ಮನಸ್ಸಿನಲ್ಲಿಡು ಆಲೋಸು ಎಂದು ಕಿಟ್ಟೆಲರ ನಿಘಂಟು

೨. ಧ್ಯಾನ ಉಳ್ಳವನಿಗೆ ಜ್ಞಾನ, ಧ್ಯಾನವಿಲ್ಲದವನು ಕಾನನಕ್ಕೆ ಹೋದರೇನು, ಮೌನದಿಂದ ಧ್ಯಾನ ಮಾಡಬೇಕು, ಧ್ಯಾನಪರನಾಗಬೇಕು, ಧ್ಯಾನಯೋಗ ಜ್ಞಾನಿಲಭ್ಯ ಧ್ಯಾನಯೋಗದಿಂದಲೇ ವಿಶೇಷ ಜ್ಞಾನ-ಧ್ಯಾನಿಸಿದವನೇ ಮಾನಿ ಎಂದು ಅನೇಕ ನಾಣ್ನುಡಿಗಳು ಇವೆ.

ಧ್ಯಾನವೆಂದರೆ ಸ್ಮರಣಚಿಂತನೆ, "ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋ ಪಾಸನ ಮಾಸನೆ" ಎಂಬುವಂತೆ ಸಂತತ ಭಗವನ್ನಾಮಸ್ಮರಣ ಚಿಂತನವೆ, "ಚೈಲಾಜನ ಕುಶೋತ್ತರಂ".

**ರಹಿತನ ವಿಚಾರ ಹೇಳುತ್ತಾರೆ ಮತ್ತು ಧ್ಯಾನವೆ ಮುಖ್ಯ;** "ಧ್ಯಾನ ರಹಿತನಾದ ಮನುಜ । ರೇನು ಕರ್ಮವ ಮಾಡಲೇನು । ಆನೆ ಕಪಿಥ್ಥ ನುಂಗಿದಂತೆ । ಹೇನು ಬಿಡದೆ ವಾಸನಿಯಾ । ತಾನು ನಿರುತಾಶ್ರೈಸಿದಂತೆ । ಜಾಣನೊಬ್ಬ ಕಿನ್ನರಿ ಧರಿಸಿ । ಕೋಣನಲ್ಲಿ ಮಿಾಟಿದಂತೆ । ಗಾಣದೊಳಗೆ ಮಳಲು ತುಂಬಿ । ಭಾನುಮುಣಿಗಿ ಸುತ್ತಿದಂತೆ ಕಾಣಿರೋ । **ಧ್ಯಾನ ಜ್ಞಾನಸಂಗುತಿಯಿಂದ ವಾನರನ್ನ ಮುಷ್ಟಿಯಂತೆ** । ದೀನನಾಗಿ ಒಂದು ನಿಮಿಷಾ ಧ್ಯಾನವನ್ನು ಮಾಡಲು ಶ್ರೀನಿವಾಸ ವಿಜಯವಿಠ್ಠಲ । ಆನಂದವಾಗಿ ಪೊಲಿವನು । ಧ್ಯಾನದಿಂದ ಗತಿಗೆ ಸೋಪಾನ ವಿರಚಿಸು ॥೩॥ ಮುಂದೆ **ಜತೆ** ಯಲ್ಲಿ ॥ ಧ್ಯಾನದಿಂದಲಿ ಮನಸು ನಿಲಿಸಿ । ಜ್ಞಾನವನು ಪಡೆದು । ಆನಂದ ವಿಜಯ ವಿಠಲನ ಲೋಕವ ಸೇರೋ ॥ ಉಪಾಸನಾ ಸುಳಾದಿ ಪುಟ ೨-೩.

ಮುಂದೆ ಸುಳಾದಿ—**(೨) ಪುಟ ೩-೪ ರಲ್ಲಿ ಧ್ರುವತಾಳ:** "ಏನಾ ದರೇನು ನಿನ್ನ ಧ್ಯಾನವ ಬಿಡುವೆನೆ । ಏನಾದರಾಗಲಿ ಎನಗಿಂದೀಗ । ಶ್ರೀನಿ ವಾಸನೆ ನಿನ್ನ ಧ್ಯಾನದಿಂದಲಿ ಕರೆದು । ಆನೀಗ ನಿರುತಾರ್ಚನೆ ಮಾಡುವೇ । ನಾನಾಕರ್ಮದ ಶ್ರೇಣಿಯಿಂದಲಿ ಸೋ । ಪಾನವಾಗುವ ಗತಿಗೆ ಅನಂತ ಜನುಮ ದಲ್ಲಿ । **ಕಾಣೆನೋ ಧ್ಯಾನಸಮಾನವಾದ ಭಕುತಿ** । ಈ ನಿರಂತರದಲ್ಲಿ ಜ್ಞಾನಶೂನ್ಯ । ನಾನಾಗಿ ತಿಳಿಯದೇ । ನೀನೆಂಬೋದು ಮರೆದು । ಧ್ಯಾನಹೀನ ನಾಗಿ ಮಾನವಳಿದೇ । ಕ್ಷೋಣಿಧರನೆ ನಮ್ಮ ವಿಜಯವಿಠಲ ನಿನ್ನ । ಧ್ಯಾನ ಮರೆದಮೇಲೆ ಮಾಣುವದೆಂತೋ ॥೧॥

### ಮುಂದೆ ಮಟ್ಟತಾಳದಲ್ಲಿ

**ಧ್ಯಾನವೆ ಗತಿಗೆ ಪ್ರಧಾನವೆ ಎನುತಲಿ** । ಜ್ಞಾನಿಗಳು ತಿಳಿದು । ಆನಂದವಾಗುತ್ತ । ಗಾನಮಾಡುವರು ಆನಂದಗತಿಯಲ್ಲಿ । ಗೇಣವನಿ ಇಲ್ಲ । ಈ ನುಡಿಯನು ಕೇಳಿ । ನಾನು ನೆಚ್ಚಿದೆ ನಿನ್ನ । ಶ್ರೀನಿವಾಸಮೂರ್ತಿ ವಿಜಯ ವಿಠ್ಠಲ ಎನಗೆ । **ಧ್ಯಾನವೆ ಗತಿ ನಿಧಾನದ ಪದವಿಗೆ ॥೨॥** ಧ್ಯಾನ ಮಹಿಮಾ ಹೀಗೆ ವರ್ಣಿಸಿ ಮುಂದೆ ತ್ರಿವಿಡಿ ತಾಳದಲ್ಲಿ **ಧ್ಯಾನರಹಿತರಾದವರ ವಿಚಾರ ಹೇಳುತ್ತಾರೆ.**

"ಮನವೆ ನಿಲ್ಲದ ಧ್ಯಾನ । ಗುಣವೆ ಇಲ್ಲದ ನಾರಿ । ಹಣವೆ ಇಲ್ಲದ ನೃಪತಿ । ಕ್ಷಣವೆ ತಿಳಿಯದ ಜ್ಞಾನಿ । ಪ್ರಣವೆ ಇಲ್ಲದ ಮಂತ್ರ । ಘನವೇ

ಇಲ್ಲದ ದಾನಾ । ಪಣವೆ ಇಲ್ಲದ ದೇಹ ಅನುವೆ ಇಲ್ಲದ ನಡತೆ । ಜನವೆ ಇಲ್ಲದ ಸಭಾ ಲಕ್ಷಣವಿಲ್ಲದ ಗುರು । ನೆನವೆ ಇಲ್ಲದ ಸಾಧನವೆ ಇಲ್ಲದ ಸಂಗತಿ । ದಿನ ವಸ್ತಮಾನಾ ನೂರು ಕಲ್ಪವಿರಲು ರಂಜನ । ವಾಗುವದೆನಾ ಜನಜನಕಾ । ತನುಮನಾಧೀನ ವಿಜಯವಿಠ್ಠಲ ಕೃಪಾ । ವನಧಿ ನಿನ್ನನು ಧ್ಯಾನವನು ಮಾಳ್ಪ ಮನವಿಯೋ ॥೩॥ ಮುಂದೆ ಆದಿತಾಳದಲ್ಲಿಯೂ, "ಧ್ಯಾನವನ್ನು ಕೈಕೊಳ್ಳಲು । ಜ್ಞಾನವನ್ನೆ ಪುಟ್ಟುವದು । ಹೀನಕರ್ಮವೆಂಬೋ ಕಾನನ ರಾಶಿಗೆ ಕೃ । ಶಾನನಾಗಿ ಪೋಗಗಳೆದು । ಮಾನವಭಿಮಾನವೆನಿಸಿ । **ಧ್ಯಾನ ಧ್ಯಾನ ಧ್ಯಾನವನ್ನು ದಿನದಿನಕಧಿಕವಾಗೆ । ಅದಕ್ಕಾನಂದ ಏನೆಂದು ಪೇಳಲೇನು । ಧ್ಯಾನವಿನಾಗತಿಗೆ ಸಾಧನವನ್ನು ಕಾಣೆನಯ್ಯಾ ।** ನೀನೆ ನೀನೆ ಎಂದು ಧ್ಯಾನದಲ್ಲಿ ನಂಬಿದೆನೊ । ಧ್ಯಾನದೊಳಗೆ ಪೊಳೆವ ವಿಜಯವಿಠ್ಠರೇಯಾ । ದಾನಿ ದಯದಿಂದ ಉತ್ತುಮನ ಮಾಡು ॥೫॥ ಮುಂದೆ ಜತೆಯಲ್ಲಿ "ಸ್ಥೂಲ ಸೂಕ್ಷ್ಮಧ್ಯಾನವ ಭೇದವೆನಿಸುವದು । ನೀಲವರ್ಣ ವಿಜಯವಿಠ್ಠಲ ಪ್ರಾಕೃತರಹಿತಾ ॥೬॥ ಹೀಗೆ ಶ್ರೀ ವಿಜಯದಾಸಾರ್ಯರು, ಸವಿಸ್ತರ ಧ್ಯಾನ ಮಹಿಮಾ ಪೇಳಿರುವರಲ್ಲದೇ, ಶ್ರೀ ಗೋಪಾಲದಾಸರಾಯಾದಿ ಪ್ರಭೃತಿಗಳು ನಾನಾವಿಧವಾಗಿ ಧ್ಯಾನದ ಬಗೆಯ ಪ್ರಾಮುಖ್ಯವನ್ನು ವರ್ಣಿಸಿರುವರು, ಇಂತು ಧ್ಯಾನವಿಚಾರ ಪೇಳಿ.

8223 ಈ ಹನ್ನೊಂದನೇ ಸಂಧಿಯಲ್ಲಿ ಸಂತತ ಭಗವಂತನ ಧ್ಯಾನರತನಾದವನಿಗೆ ಯಾವ ದೋಷಗಳು ಹತ್ತದೆ ದುರಿತರಾಶಿ ದೂರಾಗಿ–ಮೋಕ್ಷ ಮಾರ್ಗಕ್ಕೆ ವಿರೋಧ ಗೈಸಲಾರವು ಎಂದು ದೃಷ್ಟಾಂತಪೂರ್ವಕವಾಗಿ ವರ್ಣಿಸುತ್ತಾರೆ. ಮಾರ್ಗ ನಡೆಯುವ ಮನುಜನಿಗೆ, ಕಾಲಿನಲ್ಲಿ ಪಾದುಕೆ, ಎಂದರೆ ಚಮ್ಮಾಳಿಗೆ –ಮೆಟ್ಟು ಹಾಕಿಕೊಂಡು ನಡೆಯುವ ಪುರುಷನಿಗೆ ಹಾದಿಯಲ್ಲಿದ್ದ ಕಂಟಕ ಮುಳ್ಳು, ಸಿಕತ ಉಸುಕು ಹರಳು ಮುಂತಾದವುಗಳು ಕಾಲಿಗೆ ನಟ್ಟು ಭಾದೆ ಮಾಡಲಾರವು. ಅದರಂತೆ ಮನಾದಿ ಹನ್ನೊಂದು ಇಂದ್ರಿಯಗಳಲ್ಲಿ ಸಂತತವಾಗಿ ಬಿಡದೆ ಇಂದ್ರಿಯ ನಿಯಾಮಕನಾದ ಶ್ರೀ ಹೃಷೀಕೇಶನಾಮಕ ಹರಿಯ ಮೂರ್ತಿಯನ್ನಿಟ್ಟು ಬಹು ಭಕ್ತಿಯಿಂದ ನೆನೆಯುವವನು ಅಕಸ್ಮಾತ್ ಇಂದ್ರಿಯ ಜನ್ಯ ಏನಪರಾಧಗಳನ್ನು ಮಾಡಿದರೂ ಆ ದುರಿತಗಳು ಬಾಧಿಸುವದಿಲ್ಲ. ಅಂದರೆ ಸದಾ ಸಕಲೇಂದ್ರಿಯಗಳಿಗೆ ಪರಮಾತ್ಮನೇ ಪ್ರೇರಕ, ಪರಮಾತ್ಮನ

ಪ್ರೇರಣೆಯಂತೆಯೇ ಸಕಲ ಕ್ರಿಯಗಳಾಗುತ್ತವೆ ಎಂದು ತಿಳಿದ ಜ್ಞಾನಿಯಿಂದ, ಪಾಪಜನ್ಯಕೃತ್ಯಗಳೇ ಆಗುವ ಸಂಭವವಿಲ್ಲ. ಕದಾಚಿತು ಏನಾದರೂ ಅಪರಾಧ ಕೃತ್ಯಗಳಾದರೂ, ಭಗವಂತನ ಸ್ಮರಣೆಯಿಂದಲೇ ಮಾಡಿದಕಾರಣ ಅವು ಅಪ ರಾಧವೆನಿಸದೇ ಈ ದುರಿತರಾಶಿಗಳು, ಮೋಕ್ಷಸಾಧನ ಮಾರ್ಗಕ್ಕೆ ಎಂದೂ ಪ್ರತಿಬಂಧಕಗಳಾಗಿ ವಿರೋಧಗೈಸಲಾರವು. ಹೀಗೆ ನಿರಂತರ ಶ್ರೀಹರಿಯ ಧ್ಯಾನಮಾಹಾತ್ಮ್ಯೆಯನ್ನು ಹೇಳುತ್ತಾ ಮುಂದೆ ಎರಡನೇ ಪದ್ಯದಲ್ಲಿ ಅಂತರಂಗ ಧ್ಯಾನರತನಾದರೂ, ಬಾಹ್ಯದಲ್ಲಿ ನಿಷ್ಕಾಮುಕನಾಗಿ ಯಾವ ಫಲಾಪೇಕ್ಷೆ ಇಲ್ಲದೇ ಹಗಲಿನಲ್ಲಿ ಶ್ರೀಹರಿಯ ಪ್ರೀತಿಗೋಸುಗವಾಗಿ ದೇವರ ಮುಂದೆ ನಂದಾದೀಪ– "ನಂದಯತೀತಿ ನಂದಾ" ಆನಂದವನ್ನು ಕೊಡುವ ಸಮಿಾಚೀನ ಪ್ರಕಾಶಮಾನವಾದ ದೀಪವು, ಕತ್ತಲ ಪರಿಹಾರಗೋಸುಗವಲ್ಲದೆ, ಹಗಲು ಸೂರ್ಯಪ್ರಕಾಶ ಬೆಳಕಿನಲ್ಲಿ ನಿರ್ವ್ಯಾಜಭಕ್ತಿಯಿಂದ ಹರಿಯ ಸಂತೋಷಕ್ಕೆ ನಂದಾದೀಪ ಹಚ್ಚುವಂತೆ ನಿಷ್ಕಾಮಭಕ್ತಿಯಿಂದ, ವೇದವೇದ್ಯನಾದ ಶ್ರೀಹರಿಯ ಪೂಜೆಯನ್ನು ಮಾಡುತ್ತಾ ಬಹುಭಕ್ತಿಯುತನಾಗಿ ಕೈಮುಗಿದು ನಮ್ರನಾಗಿ ಬಾಗಿ–ಶ್ರೀಹರಿಯೇ ನಿನ್ನ ಪ್ರೀತಿಯ ವಿನಾ ಧರ್ಮ–ಅರ್ಥ–ಕಾಮ–ಮೋಕ್ಷ ವಾದ ಈ ಚತುರ್ವಿಧ ಪುರುಷಾರ್ಥಗಳನ್ನು ನಾನು ಒಲ್ಲೆ. ಶ್ರೀಹರಿಯು ಸಕಲ ಜಗತ್ತನ್ನು ತನ್ನುದರದಲ್ಲಿಟ್ಟುಕೊಂಡು ಜಗತ್ತಿನ ಭಾರವನ್ನು ವಹಿಸಿ ಜಗತ್ತನ್ನು (ಜೀವರನ್ನು) ಸ್ವಾಮಿ ಅನಿರುದ್ಧನೇ ರಕ್ಷಿಸುತ್ತಾನೆಂಬ ನಂಬಿಕೆ ಇಟ್ಟು ಜಗದು ದರನಾದ ಅನಿರುದ್ಧನೇ ಅನ್ನನಾಮಕ ಅನ್ನನು ಎಂದು ಶ್ರೀಹರಿಯು ಯಾವ ಕಾಲಕ್ಕೆ ಏನು ಕೊಡುತ್ತಾನೋ– ಶ್ರೀ ಹರಿಯೆ ನೀನು ಕೊಟ್ಟದ್ದು ನಿನಗೆ ಅರ್ಪಿತವಾಗಲೆಂದು ಭೋಜನಮಾಡಬೇಕು. ಮತ್ತು ಮಗ–ಹೆಂಡತಿ ನನ್ನ ದೇಹ–ಇಂದ್ರಿಯ ನನ್ನ ಪ್ರಾಣ ಸಕಲವೂ ನಿನ್ನಾಧೀನ ಸ್ವಾಮಿ, ಹೆಂಡಿರು ಮಕ್ಕಳು, ನನ್ನ ದೇಹಪ್ರಾಣ ನನ್ನದಲ್ಲ ನೀ ಕೊಟ್ಟದ್ದು ನಿಜ ನಿನ್ನಾಧೀನ ವಾಗಿವೆ ಎಂಬ ನಿಶ್ಚಯಜ್ಞಾನದಿಂದ– ಸರ್ವವೂ ಹರಿಯ ಅಧೀನ ಚಿಂತಿಸುತ್ತ ಅಡಿಗಡಿಗೆ ನೆನೆವುತ್ತಲಿರಬೇಕು. ಮುಂದೆ ೩ನೇ ಪದ್ಯದಲ್ಲಿ.

"ಅಧೀನ ಚಿಂತಿಸುವದಕಿಂತ ಅಧಿಕ ಸಾಧನವಿಲ್ಲ" ಎಂಬ ವಿಜಯ ದಾಸರ ವಾಕ್ಯದಂತೆ ಶ್ರೀ ಹರಿಯ ಅಧೀನವಾಗಿರಬೇಕಾಗಿದ್ದರೆ, ಶ್ರೀ ಹರಿಯ ಸ್ವರೂಪ ಗುಣಪೂರ್ಣನೆಂಬೋ ಸಲ್ಲಕ್ಷಣಗಳನ್ನು, ಜೀವನು ಸದಾ

ಅಸ್ವತಂತ್ರನೆಂಬ ದಾಸನು, ಈತನು ಮಹತ್ವ ಮತ್ತು ಜೀವನ ಅಲ್ಪತ್ವಾದಿ ಗುಣಗಳನ್ನು ವಿಸ್ತರಿಸುತ್ತಾರೆ.

| | |
|---|---|
| ೧ ಜೀವನು ಸದಾ–ಅಸ್ವತಂತ್ರನು | ೧ ಶ್ರೀ ಹರಿಯು ಸರ್ವಸ್ವತಂತ್ರನು |
| ೨ ,, ನಿತ್ಯಬದ್ಧನು | ೨ ,, ನಿತ್ಯ ಸುಖಮಯನು |
| ೩ ,, ಅಲ್ಪ ಶಕ್ತಿಯುಳ್ಳವ | ೩ ,, ವಿಶ್ವವ್ಯಾಪಕನು |
| ೪ ,, ಸದುಃಖಿಯು | ೪ ಶ್ರೀ ಹರಿಯು ಸಕಲ ಕರ್ತೃತ್ವ ಶಕ್ತಿಸೃಷ್ಟ್ಯಾದಿ ಅಷ್ಟ ಕರ್ತೃತ್ವ ಶಕ್ತಿಯುಳ್ಳವ; ಸರ್ವಕರ್ತಾ ಕಾರಿಯತಾ, ಪ್ರೇರಕ, ಪ್ರೇರಯಿತಾ |
| ೫ ,, ನಿರ್ವಿಣ್ಣ= ಭಯ ದುಃಖ ಗಳಿಂದ ತುಂಬಿದವ | ೫ ಶ್ರೀ ಹರಿಯು ಬ್ರಹ್ಮ= ಗುಣ ಪೂರ್ಣನು. ಬ್ರಹ್ಮಾದಿ ದೇವತೆಗಳಿಂದ ಸದಾ ವಂದ್ಯನು. |
| ೬ ,, ಹ್ರಸ್ವದೇಹಿ, ಅಣುದೇಹಿ | |
| ೭ ,, ನಾಥ–ಒಡೆಯನುಳ್ಳವನು. | |

ಎಂದು ಶ್ರೀ ಹರಿಯನ್ನು ಕೊಂಡಾಡು ಎಂದು ಜೀವನ ಪರಮಾತ್ಮನ ಸ್ವರೂಪ ಹೇಳುವುದರಿಂದ – ಬಿಂಬನಾದ ಶ್ರೀ ಹರಿಯೇ ಸಕಲರಿಂದ ಉಪಾಸ್ಯ–ಧ್ಯಾನಗಮ್ಯ ಜ್ಞಾನಗಮ್ಯನೆಂದು ಪೇಳುತ್ತಾ, ಮುಂದೆ ೪ನೇ ಪದ್ಯದಲ್ಲಿ ಪ್ರಕೃತಿ ಗುಣಧರ್ಮ ಪ್ರವರ್ತಕನಾದ ಶ್ರೀ ಪ್ರಣವ ಪ್ರತಿಪಾದ್ಯ ಓಂಕಾರ ಶಬ್ದವಾಚ್ಯಾ ಓಂಕಾರಗತ ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಈ ಎಂಟು ರೂಪಗಳು ಮುಖ್ಯ. ಈ ಎಂಟು ರೂಪಕ್ಕೆ ಒಂಭತ್ತರಿಂದ ಹೆಚ್ಚಿಸಬೇಕು. ಅಂದರೆ ಅವ್ಯಕ್ತತತ್ವ, ಮಹತ್ತತ್ವ, ಅಹಂಕಾರ, ಮನಸ್ಸು ನಾಲ್ಕು ತತ್ವಗಳು ಮತ್ತು ಭೂಮಿ, ಆಪ, ಅನಲ, ವಾಯು, ಆಕಾಶ ಈ ಪಂಚಭೂತ ಈ ಐದು ಕೂಡಿದರೆ ೯ ವಿಧವಾದ ಪ್ರಕೃತಿಯಿಂದ ವಿಶ್ವಾದಿ ಎಂಟು ರೂಪ ಹೆಚ್ಚಿಸಿದರೆ ೮ × ೯ = ೭೨ ರೂಪ ಆಗುತ್ತವೆ. ಈ ೭೨ ರೂಪಕ್ಕೆ ಬೃಹತೀ ಸಹಸ್ರ ಋಕ್ಕಿನಿಂದ ಹೆಚ್ಚಿಸಿ ಗುಣಿಸಿದರೆ, ಎಪ್ಪತ್ತೆರಡು ಸಹಸ್ರ ರೂಪಗಳು ಆಗುತ್ತವೆ. ಶ್ರೀ ಹರಿಯ ಈ ಎಪ್ಪತ್ತೆರಡು ಸಾವಿರ ರೂಪಗಳೇ ದೇಹದಲ್ಲಿಪ್ಪ ೭೨ ಸಹಸ್ರ ನಾಡಿಗಳಲ್ಲಿ ಕಾರ್ಯಪ್ರವೃರ್ತಿ ರೂಪಗಳನ್ನು ತಿಳಿದು

ಭಜಿಸಬೇಕು. ಹೀಗೆ ಭೀಷ್ಮಾಚಾರ್ಯರು ಧರ್ಮತನಯನಾದ ಧರ್ಮರಾಜಗೆ ಶ್ರೀ ಮಹಾಭಾರತ, ಶಾಂತಿ (ಭೀಷ್ಮ) ಪರ್ವದಲ್ಲಿ ಉಪದೇಶಿಸಿರುವರು. ಈ ರೂಪಗಳನ್ನು ಭಜಿಸಿದರೆ ಪ್ರಕೃತಿಬಂಧನ ಬಿಡುಗಡೆಗೆ ಕಾರಣವೆಂದು ಮೊದಲಿಗೆ ಹೇಳಿ—

೫ನೇ ಪದ್ಯದಲ್ಲಿ ಎಂಟು ಪ್ರಕೃತಿಗಳಾವವು, ಅವುಗಳ ಗುಣ ಬದ್ಧತೆ ಹೇಗೆ, ಇಲ್ಲಿ ವಿಶ್ವಾದಿ ಎಂಟು ರೂಪದಲ್ಲಿ, ಶ್ರೀಹರಿಯಿದ್ದು ಭಕ್ತರ ಕಂಟಕ ಪರಿಹಾರಗೈಸುವ ವಿವರ ಹೇಳುತ್ತಾರೆ. ಇದೇ ವಿಷಯವೇ ಶ್ರೀ ಭಗವದ್ಗೀತಾ ಅಧ್ಯಾಯ ಸಪ್ತಮ, ಶ್ಲೋಕ ೭ ರಿಂದ ೧೧ರ ಪರಿಯಂತರ ಹೇಳಿರುವದೇನಂದರೆ, "ಭೂಮಿರಾಪೋನಲೋ ವಾಯುಃ ಖಂಮನೋಬುದ್ಧಿರೇವಚ ‖ ಅಹಂಕಾರಂ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ‖ ೪ ‖" ಇದಕ್ಕೆ ಶ್ರೀ ಗೀತಾವಿವೃತ್ತಿಯಲ್ಲಿ ಶ್ರೀ ಮಂತ್ರಾಲಯ ಗುರು ಸಾರ್ವಭೌಮರು ಅಪ್ಪಣೆಕೊಡಿಸಿದ್ದೇನಂದರೆ, "ಭೂಮ್ಯಾದಿ ಪಂಚ ಮಹಾಭೂತಗಳು ೩ ಪೃಥ್ವಿ ೨ ಅಪ್ಪು ೩ ತೇಜ ೪ ವಾಯು ೫ ಆಕಾಶ ೬ ಮನಸ್ತತ್ವ ೭ ಬುದ್ಧಿತತ್ವವು, ೮ **"ಅಹಂಕಾರ ಪದೇನ ಮಹತ್ತತ್ವ ಮುಪಲಕ್ಷಣೀಯಂ ‖ ಅಹಂಕಾರೇತಿ - ಶಬ್ದಾನಯಃ"** ಅಹಂಕಾರದಲ್ಲಿಯೇ ಮಹತ್ತತ್ವ ಪರಿಗಣನೆ ಹೀಗೆ ಎಂಟು ವಿಧವಾದ ಭಿನ್ನ ಪ್ರಕೃತಿಗಳು, ಬಂಧಕಗಳಾದರೂ ಇವುಗಳೆಲ್ಲವೂ ನನ್ನ ಆಧೀನವಾಗಿರುವವು. ನನ್ನಿಂದ ಪ್ರೇರಿತವಾದ ಪ್ರಕೃತಿಗಳು ಪೃಥಿವ್ಯಾದಿ ಕಾರ್ಯರೂಪದಿಂದಲೇ ಭಿನ್ನವೆಂದು ತಿಳಿಯುವದೆಂದು ಶ್ರೀಕೃಷ್ಣಪರಮಾತ್ಮನ ವಾಕ್ಯ" ಮತ್ತು

"ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ। ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ‖ ೫ ‖ ವಿವೃತ್ತಿ ‖ ಹಿಂದೆ ಹೇಳಿದ ಈ ಎಂಟು ವಿಧವಾದ ಜಡಪ್ರಕೃತಿ, "ಜೀವಾ ಅಪ್ಯುಪಲಕ್ಷ್ಯಂತೇ। ಜೀವಾಶ್ಚ ಅಪರಾ ಅಧಮಾಃ" ‖ ಹೀಗೆ ಜಡಪ್ರಕೃತಿಗಳು ಜಡದಿಂದ ಅನ್ಯ-ಭಿನ್ನರಾದ "ಜೀವಭೂತಾಂ" ಸರ್ವಜೀವರ ದೇಹಗಳಲ್ಲಿ, ಇವೆಲ್ಲವೂ ದೇಹಧಾರಿಗಳಾದ ಜೀವರ ಪ್ರಾಣಾಂತ್ಯವರೆಗೆ ಇದ್ದು, ಜೀವರ ಪ್ರಾಣಧಾರಣ ದೇಹದಲ್ಲಿರುವವು. ಅಂದರೆ ಪ್ರಾಣಾಧಾರತ್ವೇನ ಸರ್ವದಾ ವಿದ್ಯಮಾನವಾಗಿರುವವೆಂದರ್ಥ. ಜೀವರಿಗೆ ದೇಹಾಧಾರವಾದ ಜಡಪ್ರಕೃತಿ. ಮತ್ತು ಜಡಪ್ರಕೃತಿಗೆ ಅಭಿಮಾನಿಯಾದ ಚಿತ್ಪ್ರಕೃತಿ ಸಹ ನನ್ನ ಆಧೀನ, ಹೀಗೆ

ಸೃಷ್ಟ್ಯಾದಿ ವ್ಯಾಪಾರ ಕಾರ್ಯದಲ್ಲಿ, ಬ್ರಹ್ಮಾದಿ ಜೀವ ಜಗತ್ತುಗಳನ್ನು ಧಾರಣಮಾಡುತ್ತೇನೆ. ಮತ್ತು, ಮುಕ್ತರುಗಳಲ್ಲಿಯೂ, ಪರಾಭಾಸತ್ವವಾದ ಶುದ್ಧ ಸತ್ವವೂ ನನ್ನಾಧೀನ, ಹೀಗೆ ಶರೀರೇಂದ್ರಿಯ ವಿಷಯಲಕ್ಷಣ ಕಾರ್ಯ ಸಹಿತವಾಗಿ, "ಜೀವಜಾತರೂಪಭೂತಾನಿ" ಜೀವರ ಸ್ವಭಾವಾನುಸಾರ ಪ್ರಕೃತಿ ಮೊನೆಮಾಡಿ ಪುಟ್ಟದ ದೇಹಾದಿ ಸರ್ವಯೋನಿಗಳ ಜಡಾಜಡ ಪ್ರಕೃತಿ ಕಾರಣಿಕವಾಗಿ ಉತ್ಸನ್ನವಾಗುತ್ತವೆಂದು ಭಾವ. ಹೀಗೆ, ಭಗವಂತನ ಇಚ್ಛೆ ಯಿಂದ ಭಗವಂತನ ಆಧೀನವಾದ ಚಿತ್ಪ್ರಕೃತಿ, ಮೂಲ ಜಡಪ್ರಕೃತಿ ಮಹತ್ತತ್ವಾದಿ ೮ ಪ್ರಕೃತಿಗಳು, ಸತ್ವರಜತಮೋ ಭೇದದಿಂದ ಜೀವರುಗಳನ್ನು ದೇಶ ಕಾಲಾನುಸರಿಸಿ ಭಗವಂತನ ಇಚ್ಛೆಯಂತೆ ಬಂಧಿಸುತ್ತವೆ. ಈ ಎಲ್ಲ ವಿಧವಾದ ಪ್ರಕೃತಿಯು ಪ್ರಾಕೃತ, ವಿಕೃತ, ವೈಕೃತವೆಂದು ಮೂರು ವಿಧ. ಪ್ರಾಕೃತ ಬಹಿರ್ಬ್ರಹ್ಮಾಂಡದಲ್ಲಿದ್ದ ಜಡಪ್ರಕೃತಿ. ವಿಕೃತ–ಬ್ರಹ್ಮಾಂಡಖರ್ಪರ ದಲ್ಲಿ. ವೈಕೃತ ಬ್ರಹ್ಮಾಂಡದಲ್ಲಿಪ್ಪ ಪ್ರಕೃತಿಗಳ ಲಕ್ಷಣ, ಮತ್ತು ಇಪ್ಪತ್ತು ನಾಲ್ಕು ಜಡಪ್ರಕೃತಿಗಳ ಲಕ್ಷಣ, ಶ್ರೀಮದ್ಭಾಗವತ ತೃತೀಯಸ್ಕಂದದಲ್ಲಿ ಹೇಳಿದಂತೆ "ಶ್ರೀ ವಿಜಯದಾಸರ ಸೃಷ್ಟಿಪ್ರಕರಣ ಸುಳಾದಿ" ಹಿನ್ನುಡಿಯಲ್ಲಿ ಪುಟ ೫೦ ರಿಂದ ೫ಳ ಪೂರ್ತಿ "ಜಡತತ್ವಗಳ ಲಕ್ಷಣವನ್ನು" ವಿಸ್ತಾರವಾಗಿ ಸೂಚಿಸಿದೆ. ಜಡತತ್ವ ಲಕ್ಷಣ ಅವುಗಳ ಗುಣಕಾರ್ಯ ವಿಚಾರ ಚೆನ್ನಾಗಿ ತಿಳಿಯಬೇಕು. ಮತ್ತು ಜಡಗುಣಕಾರ್ಯಗಳ ಪ್ರವರ್ತಕನೂ, ಬಂಧಕನೂ, ಮೋಚಕನೂ, ಶ್ರೀಹರಿಯೇ ಎಂದರಿತು, ಭಗವಧ್ಯಾನೋಪಾಸನೆ ಮುಖ್ಯ ವೆಂದು ಶ್ರೀ ಗುರುಸಾರ್ವಭೌಮರ ಆಜ್ಞೆ. (ಇಲ್ಲಿ ವಿಸ್ತಾರ ಭಯದಿಂದ ಜಡತತ್ವ ಗಳನ್ನು ಕೊಡಲಿಲ್ಲ. ಸೃಷ್ಟಿ ಪ್ರಕರಣ ಸುಳಾದಿ ನೋಡಿರಿ) ಹೀಗೆ ಎಂಟು ಪ್ರಕೃತಿ. ಪೃಥ್ವಿ, ಜಲ, ತೇಜ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ. ಪ್ರಕೃತಿಯಲ್ಲಿ ವಿಶ್ವ, ತೈಜಸ, ಪ್ರಾಜ್ಞ–ತುರ್ಯ, ಆತ್ಮ, ಅಂತರಾತ್ಮ–ಪರ ಮಾತ್ಮ, ಜ್ಞಾನಾತ್ಮ ಕ್ರಮೇಣ ಇದ್ದು, ನೆಂಟ–ಆಪ್ತನಂದದಿ ಇದ್ದು ಭಕ್ತರಾದ ಜೀವರ ಕಂಟಕ–ಆಪತ್ತುಗಳನ್ನು ಎಂದರೆ ಮೋಕ್ಷಮಾರ್ಗಕ್ಕೆ ಅಡ್ಡಾಗುವ ದುರಿತಗಳನ್ನು ಪರಿಹರಿಸುವನು. ಮತ್ತು ಈ ಪಂಚಭೂತ ಸತ್ವರಜೋಂಶವಾದ ಜ್ಞಾನ – ಕರ್ಮೇಂದ್ರಿಯಗಳಲ್ಲಿಯೂ, ಮನಸ್ಸಿನಲ್ಲಿಯೂ ಸ್ವರಮಣನು ಶ್ರೀಹರಿಯು, "ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರಕೃತಿ, ಕಳಾ, ವಿದ್ಯಾ,

ಮತಿಃ, ನೀತಿ, ಮಾಯಾ, ಕಾಲ, ಪುರುಷ" ಈ ಹನ್ನೆರಡು ರೂಪದಿಂದ ಶ್ರೀದೇವಿಯರ ೧೨ ರೂಪ–ಶ್ರೀ ವಾಯುದೇವರ ೧೨ ರೂಪದಿಂದ ಇದ್ದು ತನ್ನ ಸ್ವಾಖ್ಯವಾದ ಶುಭಕರ ರಸವನ್ನು ಸ್ವೀಕರಿಸುತ್ತಾ, ತಾನು ದೋಷದೂರನಾಗಿ. ಸ್ಥೂಲ ವಿಷಯಗಳನ್ನು, ಜೀವರುಗಳಿಗೆ ಇಂದ್ರಿಯದ್ವಾರಾ–ಎಂದರೆ ತದಭಿಮಾನಿ ದೇವತೆಗಳ ದ್ವಾರಾ (ತಾನು ಶುಭರಸವನ್ನುಂಡು) ನಿತ್ಯದಲ್ಲಿಯೂ ಉಣಿಸುವನೆಂದರೆ ಮೋಚಕವು. ಜೀವನು ಇದನ್ನರಿಯದಲೇ ನಾನೇ ಕರ್ತಾ ಸ್ಥೂಲ ವಿಷಯಾದಿಗಳನ್ನು ನಾನೆ ಉಣುವೆನೆಂಬುವನು, ನಿಜವಾಗಿಯೂ ನಿರಯಭಾಗಿಯಾಗಿ ನರಕ ದುಃಖಗಳನ್ನುಂಡು ಪುನಃ ಪುನಃ ಭವವೆಂಬ ಅಡವಿಯಲ್ಲಿ ಸಂಚರಿಸುತ್ತ ಬಳಲುವನು.

ಇಂತು ಪ್ರಕೃತಿ ಗುಣಧರ್ಮ ಪ್ರವರ್ತಕನೂ, ಇಂದ್ರಿಯಜನ್ಯ ಕಾರ್ಯ ಕರ್ತನೂ, ತತ್ತ್ರದಿಂದ್ರಿಯದ್ವಾರಾ, ಜೀವನಿಂದ ಭುಂಜಿಸಲ್ಪಟ್ಟ, ಪ್ರಥಿವ್ಯಾದಿ–ಅನ್ನರಸ ವಿಭಾಗಕರ್ತನೂ, ಆ ರಸಗಳಿಂದ ನಾಡಿಗಳಿಗೆ ಉಪಚಯ ಕರ್ತೃವೂ, ಶ್ರೀಹರಿಯೇ ನಾನಾ ರೂಪಗಳಿಂದ ಪ್ರಚೋದಕನೆಂದು ಹೇಳಲು, ಇಲ್ಲಿ ಗೀತಾ "ಪುಣ್ಯೋಗಂಧಃ ಪೃಥಿವ್ಯಾಂಚ–ತೇಜಶ್ಚಾಸ್ಮಿ ವಿಭಾವಸೌ ॥ ಜೀವನಂ ಸರ್ವ ಭೂತೇಷು ತಪಶ್ಚಾಸ್ಮಿ ತಪಸ್ವಿಷು ॥೯॥ ಬೀಜಂಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥಸನಾತನಮ್ ॥ ಬುದ್ಧಿರ್ಬುದ್ಧಿ ಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥೧೦॥ ಬಲಂ ಬಲವತಾಂಚಾಹಂ ಕಾಮರಾಗವಿವರ್ಜಿತಂ । ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ ಭರತರ್ಷಭ ॥೧೧॥ ಯೇಚೈವ ಸಾತ್ವೀಕಾಭಾವಾರಾಜಸಾಃತಾಮಸಾಶ್ಚಯೇ । ಮತ್ತ ಏವೇತಿ ತಾನ್ವಿದ್ಧಿ ನತ್ವಹಂತೇಷು ತೇ ಮಯಿ ॥೧೨॥ ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್॥ ಮೋಹಿತಂನಾಭಿಜಾನಾತಿ ಮಾಮೇಭ್ಯಪರಮವ್ಯಯಂ॥೧೩॥" ಗೀತಾ ಸಪ್ತಮಾಧ್ಯಾಯ ॥ ಇದರ ಸಾರಾಂಶ – ಗೀತಾವಿವೃತ್ತಿಯಲ್ಲಿ ಗುರುರಾಜರು ಆಜ್ಞೆ ಕೊಡಿಸುವದೇನಂದರೆ—

ಪೃಥ್ವಿಯಲ್ಲಿ ಯಾವ ಪುಣ್ಯಗಂಧವಿರುವದೋ ಅದು ಭೂಮಿಯ ಅನಾಗಂತುಕ ಧರ್ಮಸ್ವಭಾವವು. ಈ ಪೃಥ್ವಿಗಂಧ ಧರ್ಮವು, **ಸಾರತ್ವವೂ** ಗಂಧ ತತ್ವಕ್ಕೆ ಶ್ರೀಹರಿಯೇ ಕಾರಣನಾದುದರಿಂದ ಗಂಧವೆಂದರೆ, **"ಗಂಧೋಹಮಸ್ಮೀತ್ಯುಚ್ಯತೆ"** ॥ ಗಂಧವೂ ಗಂಧ ಪ್ರವರ್ತಕಗುಣವೂ ನಾನೇ ಎಂದು

ಶ್ರೀಕೃಷ್ಣನ ವಚನ. ಇದರಂತೆ ಅಪ್ಪಿನಲ್ಲಿರುವ ರಸ, ಅನಲನಲ್ಲಿ ತೇಜ, ಹೀಗೆ ವಾಯು ಆಕಾಶ ಗುಣಧರ್ಮಗಳೆಲ್ಲವೂ, ಶ್ರೀಹರಿಯೇ ಎಂದು ತಿಳಿಯಬೇಕು. ಸರ್ವಜೀವರಲ್ಲಿ ಬಲ, ಬುದ್ಧಿಪ್ರದನು ನಾನೇ ಸರ್ವ ಜೀವರುಗಳಿಗೆ ಸಾರಭೂತ ವಾದ ಯಾವ ಜೀವನವಿದೆಯೋ ( ಬದುಕುವಿಕೆ-ಬಾಳುವಿಕೆಗೆ ) ಇವೆಲ್ಲಕ್ಕೂ ನಿಯಂತ್ರನೂ ನಾನೇ ಎಂದು ತಿಳಿ; ತಪಸ್ವಿಗಳ ಕೃಚ್ಛ್ರಾದಿ ತಪಸ್ಸಿನಲ್ಲಿಯೂ ನಾನೇ ತನ್ನಿಯಾಮಕನಾಗಿರುವೆ. ನಾನು ಶಾಶ್ವತನೂ, ಎಲ್ಲ ಪ್ರಾಣಿಗಳಿಗೆ ಬೀಜರೂಪನೂ, ಜ್ಞಾನಿಗಳಲ್ಲಿಪ್ಪ ಬುದ್ಧಿಗೂ ತೇಜಸ್ವಿಗಳ ತೇಜಕ್ಕೂ ನಾನೇ ಪ್ರೇರಕ-ವ್ಯಂಜಕನೆಂದು ತಿಳಿ. ಬಲವಂತರಲ್ಲಿ ಬಲವಂತನು, ಕಾಮರಾಗ ಗಳಿಂದ ರಹಿತನಾದ ಬಲ=ಶಕ್ತಿರೂಪನೂ, ಮತ್ತು ಪ್ರಾಣಿಗಳಲ್ಲಿರುವ ಧರ್ಮಕ್ಕೆ ಅವಿರುದ್ಧವಾದ ಇಚ್ಛಾರೂಪನು ನಾನೇ ಮತ್ತು ಸತ್ವ, ರಜ ತಮೋ ಗುಣವಿಕಾರಗಳಾದ ಎಲ್ಲ ವಸ್ತುಗಳೂ ನನ್ನಿಂದಲೇ ಸೃಷ್ಟವಾಗಿ ನನ್ನ ಆಧಾರ ದಿಂದಲೇ ಜಡ ಜೀವಿಗಳು ಉಪಜೀವಿಸತಕ್ಕವೆಂದು ತಿಳಿ. ಆದರೆ ನಾನು ಮಾತ್ರ ಸತ್ವಾದಿ ಗುಣತ್ರಯ ಜೀವಸ್ವಭಾವಾದಿ ಆಧಾರದ ಮೇಲಿಲ್ಲ. ನಾನು ಸ್ವತಂತ್ರನು, ಸರ್ವಕ್ಕೂ ಪ್ರೇರಕನು ಎಂದು ತಿಳಿಯದೆ, ತ್ರಿಗುಣಾತ್ಮಕವಾದ ಈ ಮೂರು ತರದ ಪದಾರ್ಥಗಳಿಂದ- ಈ ಅಜ್ಞವಾದ ಜಗವೆಲ್ಲವೂ ಜಡ ಪ್ರಕೃತಿ ಜೀವಾದಿಗಳಿಂದ ನಾನು ಭಿನ್ನನು, ಉತ್ತಮನು, ಚಿನ್ಮಯನು, ದೇಹದಿಂದ ನಾಶರಹಿತನು ಎಂದು ನನ್ನನ್ನು ಸರಿಯಾಗಿ ತಿಳಿಯದೇ ಮೋಹ ವನ್ನು ಹೊಂದುವುದು. ಯಾಕೆಂದರೆ

" ದೈವೀ ಹ್ಯೇಷಾಗುಣಮಯೀ ಮಮ ಮಾಯಾದುರತ್ಯಯಾ ||
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿತೇ" ||೧೪||

"ನನ್ನ ಅಧೀನಳಾದ ತ್ರಿಗುಣಾಭಿಮಾನಿಯಾದ ದುರ್ಗಾದೇವಿಯೇ ಈ ಮೋಹಕ್ಕೆ ಕಾರಣಳು. ನನ್ನ ಇಚ್ಛೆಯಿಂದ ಆ ದುರ್ಗಾಮಾಯೆಯನ್ನು ಮೀರುವದು ಸಾಧ್ಯವಲ್ಲ. ಅನನ್ಯಭಾವದಿಂದ ನನ್ನನ್ನೇ ಮೊರೆಹೊಗುವವರು ಈ ಮೋಹ ವನ್ನು ದಾಟುವರು" ಎಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಮಾತು ಸಂತತ ಮರೆಯಲಾಗದು. " ಪುಣ್ಯತ್ವಾದಿ ವಿಶೇಷಣೋಪಾದನಂ ತು ಗಂಧ ಬಲಕಾಮಾದಿಷು ವಿಶಿಷ್ಟೇಷ್ವೇವ **ಭಗವಾನುಪಾಸ್ಯಃ**" ಎಂಬ ಶ್ರೀಗುರು ರಾಜರ ವಾಕ್ಯವನ್ನು ಮರೆಯದೇ ಪ್ರಕೃತ್ಯಾದಿ ರಸಗುಣ ಧರ್ಮವ್ಯಂಜಕನು

ಹರಿಯೇ ಎಂದು ತಿಳಿದು ಪೂರ್ಣ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯ ಧ್ಯಾನೋಪಾಸನೆಯೇ, ಪ್ರಕೃತಿ ಬಂಧನ ಬಿಡುಗಡೆಗೆ ಮುಖ್ಯ ಕಾರಣ. (ಇದನ್ನು ಅರಿಯದೇ ನಾನೆ ಉಂಬೆನೆಂಬುವನು, ಭವನೆಂಬ ಅಡವಿಯಲ್ಲಿ ಪುನಃ ಪುನಃ ಸಂಚರಿಸುವನು.) ಪೃಥಿವ್ಯಾದಿ-ಭೂತ ಸಾರಮಯವಾದ, ಸುರುಚಿ = ಒಳ್ಳೇ ರುಚಿಯಾಗಿರುವ, ರುಚಿರ = ಪ್ರೀತಿಯುಕ್ತ ಮನೋಹರ, ಸುಗಂಧ = ಶೋಭನಗಂಧ, ಶುಚಿ = ಪವಿತ್ರಂ ಕರೋತಿ ಎಂಬ ಈ ನಾಲ್ಕು ರೂಪಗಳಿಂದ ಆರು ರಸಗಳಲ್ಲಿ ಶ್ರೀ ಭೂ ದುರ್ಗಾದೇವಿಯರ ಸಹಿತ ಇರುವನು. ೬ ರಸಗಳಲ್ಲಿ ಒಂದೊಂದರಲ್ಲಿ ಸುರುಚ್ಯಾದಿ ೪ ರೂಪಗಳಾದರೆ ೬ × ೪ = ೨೪ ರೂಪಗಳಲ್ಲಿ ಸತ್ವ ಶ್ರೀ ರಜೋ-ಭೂ, ತಮೋ-ದುರ್ಗಾ ಈ ಮೂರು ರೂಪ ಗಳಿಂದಾದರೆ ೨೪ × ೩ = ೭೨ ರೂಪ. ಬೃಹತೀ ಸಹಸ್ರ ಋಕ್‌ಗತ ೩೬೦೦೦ ಪುರುಷರೂ, ೩೬೦೦೦ ಸ್ತ್ರೀರೂಪ ವಿಜ್ಞಾನಮಯನಲ್ಲೇ ರಮಿಸುವ, ಆನಂದ ಮಯ ಪುರುಷರೂಪದಿಂದ ರಮಿಸುವನು. ಸ್ವರಮಣನಾದ ಹರಿಯು ಎಪ್ಪತ್ತೆ ರಡು ಸಾವಿರ ಪ್ರಾಣರೂಪಗಳೊಳಗಿದ್ದು, ೭೨ ಸಾವಿರ ನಾಡಿಗಳಿಗೆ ಆಯಾ ರಸವಿಭಾಗದ್ವಾರಾ ಬಲಾದಿ ಉಪಚಯ ಕೊಡುತ್ತಾ, ಉತ್ಕೃಷ್ಟಪರಾಕ್ರಮನೂ ಸ್ವತಂತ್ರಕರ್ತನೂ ಎಂದು ಕರೆಸುತ್ತಾ ನಾಡಿಗಳೊಳಗೆ ಸಮೀರ ಅಂತರ್ಗತ ನಾಗಿ ಇರುವನು.

ಈ ಮರ್ಮ ಚನ್ನಾಗಿ ಅರಿತು, ಶ್ರೀ ವಿಜಯದಾಸಾರ್ಯರು ಉಪಾಸನಾ ಭಾಗ ಸುಳಾದಿ (೨೪ - ಪುಟ ೮೦ - ೮೫ ವರೆಗೆ) — ಅರ್ಚಾಅರ್ಚನೆ ಮಾಡು ಅಧಿಕಾರತನ ಭೇದದಿಂದ - ಎನ್ನುವ ಸುಳಾದಿಯಲ್ಲಿ ಪಂಚಭೂತಗಳಲ್ಲಿ ಶ್ರೀ ಹರಿಯ ಉಪಾಸನಕ್ರಮ ವಿಸ್ತಾರ ಹೇಳಿದ್ದಾರೆ. **ಮಟ್ಟತಾಳದಲ್ಲಿ—** ಧರಣಿ - ಉದಕ - ವೈಶ್ವಾನರ ಮಾರುತಗಗನ । ಎರಡೆರಡು ವೊಂದು ಭೂತ ಗಳಲ್ಲಿದ್ದ । ಹರಿಯು ವ್ಯಾಪಾರಗಳು ಚಿಂತಿಸು ಚನ್ನಾಗಿ । ಪರಿಪರಿ ಬಗೆಯಿಂದ ಗುಣಿಸುವದು ಬಿಡದೆ । ವರಗುಣ, ರೂಪ, ಕ್ರಿಯೆಗಳಾನಂತ । ಚರಿಸುವ ಬಗೆ ತಿಳಿದು ಚತುರತೆ ನೀನಾಗೋ । ಇರಳು ಹಗಲು ಭೂತಾಭೂತಾಭಿಮಾನಿಗಳ । ಶರೀರ ತದಧಿಷ್ಠಾನ ಸಿರಿನಾರಾಯಣ । ಸಿರಿಲಕುಮಿ ಬೊಮ್ಮಹರ ಮಿಕ್ಕಾದ ಸಿರ್ಜರಗಣ ನಾನಾ । ತರ ತಮ್ಯದಿಂದಲಿ ಜ್ಞಾನೇಚ್ಛಾ ಪ್ರಯತ್ನ ಸ್ವಾಭಾವಿಕ ವೆಂದು । ನಿರುತ ತದಾಕಾರ ನಿಸ್ಸಂಗರುಯೆಂದು । ಅರಿತು ಸಂತಸನಾಗು ಸಜ್ಜನ

ರೊಡನಾಡಿ । ದುರಿತಾಂಬುಧಿತಾರಿ ವಿಜಯವಿಠ್ಠಲರೇಯ । ಕರುಣಾಕರ ಮೂರ್ತಿ ಚರಣವ ನೆರೆನಂಬಿ ॥೨॥

ಇಂತು ಪೃಥಿವ್ಯಾದಿ ಪಂಚಭೂತಗಳಲ್ಲಿ ಶ್ರೀ ಹರಿಯ ವ್ಯಾಪಾರ ತದಧೀನ ರಾದ ಶ್ರೀ ಲಕ್ಷ್ಮೀಬ್ರಹ್ಮಾದಿ ತತ್ವೇಶರ ಕಾರ್ಯ ಶರೀರದಲ್ಲಿ ಚೆನ್ನಾಗಿ ತಿಳಿಯತಕ್ಕದ್ದೆಂದು ಹೇಳಿದರು. ಈ ವಿವರ ಗುರುಮುಖದಿಂದ ತಿಳಿದು ಉಪಾಸನ ಮಾಡಿದರೆ ಧ್ಯಾನ-ಜ್ಞಾನಾಭಿವೃದ್ಧಿಗೆ ಕಾರಣ.

ಮುಂದೆ ರೂಪಕ, ಝಂಪಿ, ತ್ರಿವಿಡಿ, ಧ್ರುವ, ಝಂಪಿ ೫ ತಾಳಗಳಲ್ಲಿ, ಆಕಾಶಾದಿ ಪಂಚಭೂತ ವಿವರ ಅಲ್ಲಿ ಹರಿಯ ಧ್ಯಾನವಿಚಾರ ಹೇಳುತ್ತಾರೆ. ಕಾರಣ, ಸುಳಾದಿಯನ್ನೇ ಕೊಟ್ಟಿದೆ. **ಆಕಾಶಗುಣಧರ್ಮ** — ಕ್ಷುದ್ರಾ ಕಾಶದಿಂದ ಮಹಾ ಅವ್ಯಾಕೃತ ಆಕಾಶ ಗುಣಪರ್ಯಂತ ಧ್ಯಾನಕ್ರಮ ರೂಪಕ ತಾಳದಲ್ಲಿ ಹೇಳುತ್ತಾರೆ. **ರೂಪಕತಾಳ** — ಹೃದಯಾಕಾಶ ರೋಮ ಕೂಪ ಗಳೊಂದೊಂದು । ಉದರನಾಸ ಶ್ರವಣನಯನ ರಾಜಿಸುವ । ವದನ ಹಸ್ತ ಸಂಧಿಗಳ ವಿವರ । ಹೊದರು ಗುಹ್ಯ ಒಂಭತ್ತು ದ್ವಾರ ಕ್ಷುದ್ರಛಿದ್ರ । (ಇವೆಲ್ಲ ದೇಹದಲ್ಲಿಪ್ಪ ಆಕಾಶ ವಿವರ) ಮುದದಿಂದ ಘಟ, ಮಠಾಕಾಶ ಜಾಲರಂಧ್ರ । ಮದುವೆ ಛಪ್ಪರ ಯಜ್ಞಶಾಲೆ ಮುಡಿಗೆ ಮರುತ್ಪದ (ಆಕಾಶ) ಚತುರ್ವೀಧಿಗಳು ತತ್ತು ಶ್ರೇಣಿಗಳು । ಚದುರಂಗಾಕ್ಷ ಮನೆ ಗಾ । ವುದ ಹರದಾರಿ ಲೆಖ್ಖದ ಬೈಲು ವರಣಾ ವರಣಾದಿಗ್ಭಾಗ । ಹದಿನಾಲ್ಕು ಲೋಕ ವಿರಾಡ್ರೂಪ, ವೈಕುಂಠ । ಪದುಮಭವಾಂಡ ಸಪ್ತಾವರಣ ಮೇಲೆ । ತದನಂತರವ್ಯಾಕೃತಾಕಾಶ ಭೂತ ಈ ತುದಿ ಮೊದಲು ಗುಣಿಸೋದು **ಆಕಾಶಪ್ರಭೇದ** । ಇದರಲ್ಲಿ ಹರಿಚಿಂತನೆಯ ಮಾಡು ಪರಿಪರಿ । ಹೃದಯಾರಂಭಿಸಿಕೊಂಡು ಅಲ್ಲಿ ಹರಿಯಂತ । ತದಕಾರ ತನ್ನಾಮ ವಿಜಯವಿಠ್ಠಲರೇಯ । ವಿಧಿದೂರ ತದ್ಭಿನ್ನ ತತ್ತನ್ಮಧ್ಯಾ ಎನ್ನು ॥೩॥ ಹೀಗೆ ಆಕಾಶವಿಭಾಗ ಗುಣಪ್ರವೃತ್ತಕ ಹರಿಯ ವ್ಯಾಪಾರವನ್ನು ಪೇಳಿ ಮುಂದೆ

**ಝಂಪಿ ತಾಳದಲ್ಲಿ, ವಾಯುಗುಣಕಾರ್ಯ** ತತ್ತ್ವಸ್ಥಾನ ವಿವರ ಗೈಸುತ್ತಾರೆ.

"ನಾಸ ಮೊದಲಾದ ಶ್ವಾಸೋಚ್ಛ್ವಾಸ ಮತ್ತೆ ಉಪ । ಶ್ವಾಸ ಸರ್ವ ಜೀವರಾಶಿಯಲ್ಲಿ । ಬೀಸುವ ವ್ಯಜನ ಚಾಮರ, ನವಿಲುಗರಿ । ಕೋಶವಾರಿಧಿ ತೆರೆ ಊದುವ ವಾದ್ಯ। ಲೇಸು ಪಕ್ಷಿಯು ಗರಿಯಿಂದ ಬರುವ ಗಾಳಿ । ಗ್ರೀಷ್ಮ

ಖುತು ಬೀರಿಸುತ್ತ ವಾಯುಪಟ ವಿಂಕ್ಕ । ಈ ಸಮೀರ ಭೂತ ತತ್ತ್ವಲ್ಲೋಕದ ಗತಿ । ಅಶೇಷ ವಿಶೇಷ ಬ್ರಹ್ಮಾಂಡದಲ್ಲಿ । ಭೂಸಲಿಲಭಾಗ ಮೇಲಾವರಣಾ ಚೀಲಿ । ಸೂಸಿಕೊಂಡಿದ್ದ ಮಾರುತ ಚಂಡವಾತಗಳ । ಈಸುಬಗೆಯನು ಪೂರ್ವದಂತೆ ೨ । ಣಿಸುವದು ವಾಯುಪರಮಾಣುಗಳಲ್ಲಿ । ವಾಸುದೇವನೆ ಇಪ್ಪನೆಂದು ಚಿಂತಿಸು ಮನುಜಾ । ದೋಷ ದೂರನಾಗು ಇದರಿಂದಲೀ । ಈಶ ಸರ್ವೇಶ ನಮ್ಮ ವಿಜಯವಿಠ್ಠಲರೇಯನ್ನ । ಬೇಸರದಲೆ ಮನದೊಳಗೆ ನಿಲಿಸೊ ॥೪॥ ಇಂತು ವಾಯುಪರಮಾಣು ಪ್ರಕೃತಿಯಲ್ಲಿ ಶ್ರೀ ಹರಿಯ ರೂಪಕಾರ್ಯ ಚಿಂತನಪ್ರಕಾರ ಹೇಳಿ :

**ತ್ರಿವಿಡಿತಾಳದಲ್ಲಿ—ಅನಳ ಅಗ್ನಿಪರಮಾಣ್ವಾದಿ** ವಿವರ, ಚಿಂತನೆ ಬಗೆ ಪೇಳುತ್ತಾರೆ.

"ನೇತುರಾಗ್ನಿ ಜಠರಾಗ್ನಿ ಪಾವಕಕಣ । ಜ್ಯೋತಿ ಜ್ವಾಲೆದೀಪ ಪಂಚವಿಧ ಪಂಚಾಗ್ನಿ । ಜಾತಕರ್ಮ ವಿವಾಹ ವೈಶ್ವದೇವ ಉಪ । ನೀತ ಶಾಂತಿಕರ್ಮ ಅಭಿಚರಾಗ್ನಿ ಪಿತೃ । ನೀತಾ ನಿತ್ಯಾಗ್ನಿಹೋತ್ರ ನಾನಾ ಬಗೆಯಾಗಾ । ಜಾತ ವೇದದಾವಾವಡಬಾಗ್ನಿ ಧೂಮ್ರಾದಿ । ಭೂತಳವಿಡಿದು ವಿರಾಟಪರಿಯಂತ । ಜೋತಿಪ್ರಕಾಶಗಳು ಪದ್ಮಜಾಂಡ ತೃತಿಯ । ಭೂತಾವರಣ ಸಹ ಚಿಂತಿಸು ಪರಮಾಣು । ಮಾತುರಾ ತೇಜೋಬಿಂದುಗಳಿನ್ನ ಪ್ರತಿ ಪ್ರತಿ । ಭೀತಿರಹಿತ ನಮ್ಮ ವಿಜಯವಿಠ್ಠಲರೇಯ । ಈ ತೆರದಲ್ಲಿಪ್ಪ ಬಲ್ಲವಗೆಲ್ಲೆಲ್ಲಿ ॥೫॥" ಹೀಗೆ ಅಗ್ನಿಪರಮಾಣ್ವಾದಿಗಳಲ್ಲಿಪ್ಪ ಶ್ರೀ ಹರಿಯ ಕಾರ್ಯ ವಿವರಿಸಿ ಮುಂದೆ,

**ಧ್ರುವತಾಳದಲ್ಲಿ — ಅಪ್ಪಿನ ಗುಣಧರ್ಮ** ಮತ್ತು ಅಪ್ಪಿನಲ್ಲಿ ಅಣ್ವಾದಿ ವಿವರ ಹೇಳುವ ಜ್ಞಾನಿಗಳ ಕರುಣಾರಸವಿರಲಿ.

"ರಸನೆ ಮಿಕ್ಕಾದೋದಕ ಶ್ರೀಕರ ವರುಷಧಾರಿ — ಬೆಸನೆ ಅಗ್ರೋದಕ ನೈವೇದ್ಯವಾರಿ ತೃಷಿ । ಬಿಸ್ನಿನಿಧಿ ನದಿ ಕ್ಷುದ್ರ ನದಿ ತಟಾಕವಾಪಿ । ಕುಶಲಕೂಪ ದೇವಖಾತವರತೆ ಮಡುವು । ಪ್ರಸರಸರೋವರ ಕ್ರೀಡಾಜಲವ ಸಂ । ದಿಸಿ ಪೂರ್ವ ಪ್ರವಹಸುಳೆ ಫೇನ ಬುದ್ಬುದ । ಎಸೆವ ಥೆರೆ ಬಹುರಸ ಸಮಸ್ತ ಜೊಮ್ಮಾಂಡ । ಮುಸುಕಿದ ಸುತ್ತು ಮಿತಿತಿಳಿದು ಕೊಂಡಾಡುವದು । ವಸು ದೇವ ಪುತ್ರನಿಜ ರೂಪದಿಂದಿಪ್ಪನೆಂದು । ನಸುನಗುತ ತಿಳಿವದು ಯೋಗ್ಯಜನಕ್ಕೆ ।

ಅಸಮ ಸಹಾಸ ನಮ್ಮ ವಿಜಯವಿಠ್ಠಲರೇಯ । ವಶವಾಗಿಯಿಪ್ಪ ಸಾಕಾರ ಸರ್ವೋತ್ತಮ ॥೬॥" ಹೀಗೆ ಅಪ್ಪಿನ ವಿವರ ತದ್ಗುಣಕಾರ್ಯ ವಿವರಿಸಿ ಮುಂದೆ

**ಝುಂಪಿತಾಳದಲ್ಲಿ—ಪೃಥ್ವಿಪರಮಾಣು** ತದ್ವಿವರ ಪೇಳುತ್ತಾರೆ.

"ಪುರಿಗೋಪುರ ದುರ್ಗಸಾಲಿ ಪ್ರಾಸಾದ ಮಂ। ದಿರ ಸಭೆ ಸಮಸ್ತ ದೇವಾಲಯ । ಪುರ ಅಗ್ರಹಾರ ಖೇಟಕ (ಹಳ್ಳಿ) । ಘೋಷ (ಗೋವಳರ ವಾಸಸ್ಥಾನ) । ವೇದಿಕ । ಅರವಂಟಿಗೆ ಆಸ್ಥಾನ ರಾಜಧಾನಿ । ಶರನಿಧಿ ನದಿಕೂಲ ದ್ವೀಪ ಪರ್ವತ ನಿಮ್ನ । ತರು ಮೊದಲಾದ ಭೂರುಹಜಾತಿ । ಮರಕತ ಮಿಕ್ಕ ನವರತುನರತ ಸ್ವರ್ಣ । ಪರಿಲೋಹಕಾಂಶ ತಾಮ್ರಾದಿ ಧಾತು । ಪರಶುನೇಗಲಿ ಶಕ್ತಿ ಗದ ಶಂಖಚಕ್ರ ತೋ। ಮರ ಪರಿಘ ಚಾಪ ನಾನಾ ಶಸ್ತ್ರವು । ಪರಿಪರಿ ಧ್ಯಾನರಥ ಫಲಪುಷ್ಪ ಹದಿನಾಲ್ಕು । ಧರಣಿತಳ ಉಪದ್ವೀಪ ಎಂಭತ್ತುನಾಲ್ಕು ಲಕ್ಷ । ಶರೀರಧಾರಿಗಳ ಗಾತ್ರ ಚಿತ್ರ ಲಿಖ್ಯ ನಿಂ । ದಿರದೆ ಬೊಮ್ಮಾಂಡ ಖರ್ಪರ ದ್ವಿಗುಣ । ಧರೆಮಿಾರಿ ಮೂಲಪ್ರಕೃತೀತನಕ ಯೋಚಿಸು । ಪರಮಾಣು ಮೂರು ವಿಧ ಅಂಶಿ ಅಂಶಾ । ಭರಿತವಾಗಿವೆ ನೋಡು ಜಗವೆಲ್ಲ ಸರ್ವದಾ । ಇರುತಿಪ್ಪವು ಶುಭ್ರರಕ್ತ ಕಪ್ಪು । **ಹರಿಯು ಚಿಂತಿಸು ಅಲ್ಲಿ ಒಂದೊಂದು ಭಾವದಲಿ ।** ಮೆರೆವ ಆತುಮ ಜಗದಾತುಮನ್ನಾ । ಮರೆಯದಿರು ಆವಾವ ಕ್ರಿಯೆಮಾಡು ವಾಗ । ಹೊರಗೆ ಒಳಗೆ ನೆನೆದು ಸುಖಿಸು ಸತತಾ । ಚರರಿಗೆ ಬದ್ಧವಾಗಿಪ್ಪ ಲಿಂಗ ಗಾ । ತುರದ ಸ್ಥಿತಿ ತಿಳಿದು ತಿಳಿದು ತಿಳಿಯೋ । ಪರಿಪೂರ್ಣ ಗುಣಪೂರ್ಣ ವಿಜಯವಿಠ್ಠಲರೇಯ । ಸುರನರೋರುಗರಲ್ಲಿ ಇನಿತು ನಿರ್ನೈಸಿ ॥೭॥

ಹೀಗೆ ಭೂತಪಂಚಕ ಪ್ರಕೃತಿ ಪರಮಾಣುಗಳಲ್ಲಿ ಬಹು ವಿಧವಾಗಿ ತಿಳಿದು ತತ್ತದ್ಗುಣಗಳನ್ನು ಪಂಚತನ್ಮಾತ್ರಾ ಕರ್ಮೇಂದ್ರಿಯ ಜ್ಞಾನೇಂದ್ರಿಯ ತತ್ವಗಳು, ಪಂಚಕೋಶಗಳಲ್ಲಿ ಹುದುಗಿವೆ ಎಂದು ನಾನಾಬಗೆ ತಿಳಿದು ಶ್ವೇತದ್ವೀಪ ಸೂರ್ಯ ಮಂಡಲ ತನ್ನ ದೇಹ ಸಾಲಿಗ್ರಾಮ ವಾತಪ್ರತೀಕ ಪಂಚಭೇದ ಸ್ಥಾನದಲ್ಲಿ ಅರ್ಚನೆಮಾಡುವರೆಂದು ಅಟ್ಟತಾಳದಲ್ಲಿ ಹೇಳಿದ್ದಾರೆ. ಮುಂದೆ **ಆದಿತಾಳ ದಲ್ಲಿ** ಪೃಥಿವ್ಯಾದಿ ಪಂಚಭೂತ ಪರಮಾಣು ದ್ವ್ಯಣುಕಾದಿಗಳಲ್ಲಿ ಶ್ರೀ ಹರಿಯ ಪ್ರವರ್ತಕ ಗುಣಾತಿಶಯಗಳನ್ನು ಪೊಗಳಿ ಜತೆಯಲ್ಲಿ, "ಹರಿಯು ಚಿಂತಿಸು ಪಂಚಭೂತದಲ್ಲಿ ನಿತ್ಯ । ಕರುಣಾಳು ವಿಜಯವಿಠ್ಠಲನೆ ಏಕೀಭೂತಾ ॥೧೦॥" ಹೀಗೆ ಅಷ್ಟವಿಧ ಪ್ರಕೃತಿಯಲ್ಲೇ ಮೂಲಪ್ರಕೃತಿ ಅಡಗಿದೆ. ಇವುಗಳಲ್ಲೇ ೨೪

ತತ್ವ ಪಂಚಕೋಶ ಪಿಂಡಾಂಡ ಬ್ರಹ್ಮಾಂಡದಲ್ಲಿರುವ ವಿವರ, ಪ್ರಕೃತಿ ಪರಮಾಣು ಗಳ ಸಂಖ್ಯೆ ತದ್ಗುಣಕಾರ್ಯ ಸೃಷ್ಟಿಪ್ರಕರಣದಲ್ಲಿ ವಿವರಿಸಿದಂತೆ ತಿಳಿದು ಧ್ಯಾನಿ ಸಲು ವೈಕುಂಠಸ್ಥಾನ ವೈದುವನೆಂದು ಎಲ್ಲ ದಾಸಾರ್ಯರ ಮತ.

ಇದನ್ನರಿತು, ನಿತ್ಯಧ್ಯಾನೋಪಾಸನೆ ಮಾಡುವವನು ಶ್ರೀ ಹರಿಯನ್ನು ಸರ್ವತ್ರದಲ್ಲಿ ಸ್ಮರಿಸುವವನು ಅನ್ಯಕರ್ಮಶಾಸ್ತ್ರ ಧರ್ಮ ವಿರುದ್ಧವಾದ ಕರ್ಮ ಮಾಡುವದೇ ಇಲ್ಲ. ಕದಾಚಿತ್ ಮಾಡಿದರೂ ಭಗವಂತನ ಸ್ಮರಣೆಪೂರ್ವಕ ಸ್ವಾಧೀನಕರ್ತೃತ್ವ ಮರೆತು, ಶ್ರೀ ಹರಿಯ ಆಧೀನಕರ್ತೃತ್ವ ಚಿಂತಿಸಿ ಮಾಡಿದ ಕರ್ಮಗಳೆಲ್ಲ ಪುಣ್ಯಕರ್ಮಗಳೆನಿಸುತ್ತವೆ. ಹರಿಯೇ ಸರ್ವಕರ್ತಾ ಎಂಬದನ್ನು ಮರೆತರೆ ಪುಣ್ಯಕರ್ಮಗಳಾದರೂ ಪಾಪಕರ್ಮವೆನಿಸುತ್ತವೆ. ಹರಿಸ್ಮರಣೆಯಿಂದ ಮತ್ತೊಂದು ವಿಧ ಫಲಾಪೇಕ್ಷೆಯಿಂದ ಅಧರ್ಮವಾಗಿ ತೋರುವ ಕರ್ಮಮಾಡಿದರೂ ಲೇಪಿಸವು. "ಧರ್ಮೋ ಭವತ್ಯಧರ್ಮೋಪಿ ಕೃತೋ ಭಕ್ತೈಸ್ತವಾಚ್ಯುತ ॥ ಪಾಪಂ ಭವತ್ಯಧರ್ಮೋಪಿ ಯೇನ ಭಕ್ತೈಕೃತೋ ಹರೇಃ ॥" ಏನು ಉದ್ದಿಶ್ಯ ಇಡದೆ ನಿಷ್ಕಾಮನದಿಂದ ಸದ್ಧರ್ಮಮಾಡುವದೆಂದು ಅಭಿಪ್ರಾಯ. ಹರಿಯನ್ನು ಸ್ಮರಿಸದೇ ಡಂಭಾಚಾರದಿಂದ ಸ್ನಾನ ಜಪ ಹೋಮ ಅನ್ನ ವಸ್ತ್ರ ಗಜಾ ಅಶ್ವ ಭೂ ಧನ ಧಾನ್ಯ ಮೊದಲಾದ ಸಮಸ್ತ ದಾನಗಳನ್ನು ಮಾಡಿದರೂ ಏನೂ ಫಲವಿಲ್ಲ. ಹರಿಯ ವಿಸ್ಮರಣೆಯೆ ಅಶುಭ, ಸ್ಮರಣೆಯೆ ಶುಭ. "ಶುಭವೆಂದು ಪಿಡಿಯಲು ಅಶುಭವಾಗಿ ತೋರುವ ಅಶುಭವನ್ನು ಶುಭಮಾಡಿ ತೋರುವನು." ಇದು ಧ್ಯಾನಯೋಗಿಗಳ ಸಂಪ್ರಜ್ಞಾತ ಅಸಂ ಪ್ರಜ್ಞಾತ ಸಮಾಧಿಯ ಕರ್ಮವಿವರವೇ ಹೊರತಾಗಿ, ನಮ್ಮಂಥ ಅಜ್ಞರ ಜಡಕರ್ಮ ಯಾವಾಗಲೂ ಅಶುಭವೇ!

ಜ್ಞಾನಿಗಳಾದ ಸಜ್ಜನರು ಸಕಲ ಕ್ರಿಯೆಗಳು ಭಗವಂತನಲ್ಲಿ ಯಜ್ಞತ್ವೇನ ಸಮರ್ಪಿಸುವ ಧ್ಯಾನಾನುಸಂಧಾನ ಹೇಳುತ್ತಾರೆ.

ಇಷ್ಟ ಸರ್ವೇಷ್ಟಪ್ರದನಾದ ಹರಿಯು, ತಾನು ತನಗೆ ಬೇಕಾದ ಇಷ್ಟವಾದ ಜೀವರ ಸ್ವಭಾವಗುಣವಾಗಿರುವ ತ್ರಿವಿಧ ಜೀವರ ಸ್ವಭಾವಗುಣಧರ್ಮಕ್ಕೆ ಅನು ಕೂಲವಾದ ಭೋಗ್ಯ = ಸುಖಾನುಭವ ಕೊಡತಕ್ಕ ಪದಾರ್ಥಗಳಲ್ಲಿ ಶಿಪಿವಿಷ್ಟ ನಾಮಕ ಹರಿ ಯಜ್ಞಪಶುವಂತರ್ಯಾಮಿಯಾಗಿ ಆ ಹವಿರ್ಯೋಗ್ಯನಾಗಿ ಹೋಮಿಸಿಕೊಳ್ಳುವ ಮತ್ತು ಆ ವಸ್ತು ಸ್ವೀಕರಿಸುವ ಹರಿಯು, ಅವರವರ

ಶುಭಾಶುಭ ರಸಗಳನ್ನು ಕೊಟ್ಟು ಸರ್ವ ಜೀವರನ್ನು ತುಷ್ಟಿ ಬಡಿಸುವನಲ್ಲದೇ ತಾನು ತನ್ನ ಶುಭರಸವನ್ನು ಸ್ವೀಕರಿಸಿ ಸಂತುಷ್ಟನಾಗುವನು. ಅಲ್ಲದೆ ಜೀವರ ಕೋಷ್ಟ = ಶರೀರ, ಶರೀರದೊಳಗಿನ ಅನ್ನಮಯಾದಿ ಕೋಶಗಳಲ್ಲಿಯೂ ತಾನೆ, ಶಿಪಿವಿಷ್ಟನಾಮಕರೂಪದಿಂದ ನೆಲಸಿದ್ದು ರಸಮಯನೆಂದು ಕರೆಸುತ್ತಾ, ಇಂದ್ರಿಯಗಳನ್ನು ಪುಷ್ಟಿಗೈಸುತ್ತಾ ಸರ್ವ ಜೀವರಾದ ಎಲ್ಲರಿಗೆ ಶ್ರೇಷ್ಠನಾಗಿ, ಬಹು ಪ್ರೀತಿಯುಳ್ಳವನಾಗಿ ಸಕಲ ವಿಷಯಗಳನ್ನೂ ಜೀವರಿಗುಣಿಸಿ, ತಾನು ತನ್ನ ಶುಭಸಾರ ರಸಗಳನ್ನು ಸ್ವೀಕರಿಸುವನೆಂದು ಧ್ಯಾನಗೈಯ್ಯಬೇಕು.

ಹೀಗೆ ಶ್ರೀಹರಿಯು ತಾನೆ ಮುಖ್ಯ ಕಾರಣನೆಂಬ ನಾಮದಿಂದ ಕರೆಸುತ್ತಾ, ಜ್ಞಾನ ಕರ್ಮೇಂದ್ರಿಯಗಳಿಗಧಿಪರಿಗೆ ಪ್ರೇರಕನಾಗಿ, ಕರ್ಮೇಂದ್ರಿಯಾಭಿಮಾನಿ ದೇವತೆಗಳಿಂದ ಸಕಲ ಕ್ರಿಯಾಗಳನ್ನು ಮಾಡಿಸುತ್ತ ಮುಖ್ಯ ಕರ್ಮ ಕರ್ತೃನೆಂದು ತೋರಿಕೊಳ್ಳದೆ (ತನ್ನ ಕ್ರಿಯಾಶಕ್ತಿತ್ವ ತೋರದೇ) ವ್ಯಕ್ತ ಪಡಿಸದೇ ಜನರನ್ನು ಮೋಹಿಸುವನು. ಭ್ರಾಂತಿಗೊಳಿಸಿ, ತಾನೇ ಮೋಹ ಕಲ್ಪಕನೆನಿಸುವನು.

ಪಂಚಭೂತದಲ್ಲಿದು ದ್ರವ್ಯ = ದ್ರುರಿವದ್ರವ್ಯಂ, ವೃಕ್ಷದಂತೆ ಇರುವದೊ ವೃಕ್ಷದಲ್ಲಿ ರಸಮಯವಾಗಿ ಪುಷ್ಟಿಯಾಗಿರುವದು. ಸತ್ವಾದಿಗುಣ, ರೂಪ ರಸಾದಿಗುಣಗಳಿಗೆ ಆಶ್ರಯವಾದುದು ಇದರಲ್ಲಿ **ದ್ರವ್ಯ**ನೆಂದು ಶ್ರೀ ಹರಿಯು ಕರೆಸುತ್ತಾನೆ. ಪಂಚತನ್ಮಾತ್ರದಿ ಅವ್ಯಯ = ಸ್ವರೂಪತಃ ಯಾವ ವಸ್ತುವಿಗೆ ನಾಶವಿಲ್ಲವೋ ಅವ್ಯಯನೆಂದು ಸಹಸ್ರನಾಮದಂತೆ ಈ ರೂಪದಿಂದ ಇರುವನು. ಇನ್ನು ಕರ್ಮೇಂದ್ರಿಯಗಳಲ್ಲಿರುವನು, ಸತ್ಕ್ರಿಯವೆನಿಸಿ. **ಭವ್ಯ** = ಕುಶಲನು ಎಂದರ್ಥ = ಭೂತಭವ್ಯನೆಂದು ಸಹಸ್ರನಾಮ ಜ್ಞಾನೇಂದ್ರಿಯದಲ್ಲಿ ತಾನು ಸುಖಮಯನಾಗಿ, **ಸ್ತವ್ಯ** = ಸ್ತುತ್ಯನಾಗಿ ಸ್ತವ್ಯಸ್ತವ ವಿಷ್ಣುಸಾಸಿರನಾಮದಿಂದ, ಸೇವ್ಯ = ಸೇವೆ ತೆಗೆದುಕೊಳ್ಳುವನಲ್ಲಿ ಸೇವಕ ಸೇವಾಮಾಡುವವರಲ್ಲಿಯೂ, ಈ ಸ್ತವ್ಯನಾಮದಿಂದ ಕರೆಸುತ್ತ, ಅಗ್ನಿಯು ಅರಣಿ ಪಾತ್ರೆಯಲ್ಲಿ ಕಾಣಿಸದೆ ಇರುವಂತೆ ಇರುವನು. ದ್ರವ್ಯ ಅವ್ಯಯ ಭವ್ಯ ಸ್ತವ್ಯ ಈ ನಾಲ್ಕು ರೂಪಗಳನ್ನರಿತು ಧ್ಯಾನಗೈವುದು. ಮೇಲೆ ವಿವರಿಸಿದಂತೆ ನಾಲ್ಕು ರೂಪಗಳು ವಾಯ್ವಂತರ್ಯಾಮಿ ಎಂದು ಚಿಂತಿಸಬೇಕು. ಮನಸ್ಸೇ ಮೊದಲಾದ ಇಂದ್ರಿಯಗಳಲ್ಲಿ, ಅನಿಲ = ವಾಯುದೇವನು ಶುಚಿಯಾಗಿ ಪವಿತ್ರನಾಗಿ

ಇರುವನು. ಕರ್ಮೇಂದ್ರಿಯದಲ್ಲಿ ಶುಚಿನಾಮದಿಂದ – ಜ್ಞಾನೇಂದ್ರಿಯದಲ್ಲಿ ವಾಯು ಶುಚಿಷತ್ ನಾಮದಿಂದ ಮನಸ್ಸಿನಲ್ಲಿ ಹೋತಾನಾಮದಿಂದ ಇರುವನು. ಈ ಶರೀರದೊಳಗೆ ವಾಮನ ಸುಂದರ ರೂಪನಾಗಿ, ಇಂದ್ರಿಯ ಪ್ರೇರಕನಾಗಿ ಹೃಷೀಕೇಶನಾಮದಿಂದ ಸಕಲ ಸುಖವಿಷಯಗಳನ್ನೂ ಜೀವರುಗಳ ಅನುಭವಕ್ಕೆ ತಂದುಕೊಡುವನು. ಹೀಗೆ ಕಾಠಕದಲ್ಲಿ ಹೇಳಿದೆ. ಶ್ರೀ ಹರಿಯು ಸರ್ವ ಪ್ರೇರಕನು, ಪ್ರೇರಣೆ ಮಾಡಿ ನಡಿಸುವವನು. ಪ್ರೇರ್ಯ, ಪ್ರೇರಣ ಮಾಡಿಸಿಕೊಂಬುವರಲ್ಲಿ ಪ್ರೇರಕನು. ನಡಿಸುವನು = ನಡೆಸಿದರೆ ನಡೆಯುವರಲ್ಲಿ ಬಿಂಬನಾದ ಹರಿಯು ಸಕಲ ಜೀವರಲ್ಲಿ ಸಮನಾಗಿ ನಿರ್ವೈರದಿಂದ ಪ್ರವರ್ತಿಸುವ ವ್ಯಾಪಾರ ಮಾಡುವನು. ಆಯಾ ನಾಮರೂಪಗಳಿಂದ ಕರೆಸಿ ಪ್ರೇರಕಪ್ರೇರ್ಯನಾದರೂ, ತಾನು ಅಜ್ಞರಿಗೆ ತೋರಿಕೊಳ್ಳದಲೇ ಸರ್ವರೊಳಗೆ ತಾನು ಭಾಗೀರಥಿ ಜನಕನು ಬಹು ಪವಿತ್ರನಾಗಿ ದೋಷದೂರನಾಗಿ ಸಕಲ ಜೀವರ ಯೋಗ್ಯತೆಯಂತೆ ವ್ಯಾಪಾರ ಮಾಡಿದ್ದಾಗ್ಯಾದರೂ ಅಜ್ಞರಿಗೆ ತನ್ನ ವ್ಯಾಪಾರ ತಾನೆ ತಿಳಿಸದೇ, ಸಕಲ ಕ್ರಿಯಾ ತಾನೆ ಮಾಡಿಸಿ, ಅಜ್ಞರನ್ನು ನೋಡಿ ನಗುತ್ತಾ ಇರುತ್ತಾನೆ. ಕಾರಣಬಿಂಬನಾದ ಶ್ರೀಹರಿಯೇ ಮುಖ್ಯ, ಸರ್ವರ ನಿಯಾಮಕ ಸರ್ವಕರ್ತಾಕಾರಯಿತಾ ಎಂದು ತಿಳಿದು, ಪುಣ್ಯ-ಪಾಪಗಳು, ಹರುಷ = ಸುಖಸಂತೋಷ, ಅಮರ್ಷ = ಕೋಪ, ಸಿಟ್ಟು, ಸುಖ ದುಃಖ ಈ ದ್ವಂದ್ವಗಳನ್ನು ನಿತ್ಯದಲ್ಲೂ ಬಿಂಬನಾದ ಶ್ರೀ ಹರಿಯ ಅಂಘ್ರಿಗೆ ಸಮರ್ಪಿಸು. ಜೀವರುಗಳ ಯೋಗ್ಯತೆಯಂತೆ ನರಕ–ಭೂಮಿಸಂಚಾರ, ಸ್ವರ್ಗಸುಖ–ಅಪವರ್ಗ ಮೋಕ್ಷಸುಖ ಕೊಡುವ ಬಿಂಬನೇ ಸರ್ವರ ಸರ್ವೇಂದ್ರಿಯ ನಿಯಾಮಕನು ಮುಖ್ಯನೆಂದು ಮರೆಯದಲೇ ನೆನೆವುತ್ತಿರಬೇಕು. ಈ ಸುಜ್ಞಾನ ಬರಬೇಕಾದರೆ ನಿಷ್ಕಾಮದಿಂದ — ಎಂದರೆ ಯಾವ ಫಲಾಪೇಕ್ಷಾ ರಹಿತನಾಗಿ ಕರ್ಮ ಮಾಡಬೇಕು. ಹೇಗಂದರೆ, ಚಿಕ್ಕ ಬಾಲಕನು ಇದು ಚಲೋದು, ಇದು ಕೆಟ್ಟದೆಂದು ತಿಳಿಯದೇ (ನಿಷ್ಕಾಮದಲ್ಲಿ ಕಿಂಚಿತ್ ಸಾಮ್ಯ ಉಪಮೆ) ಹೇಗೆ ಎಲ್ಲ ಕೆಲಸ ಮಾಡುತ್ತಾನೋ ಹಾಗೆಯೇ ಮಾಣವಕ ಬಾಲಕನ ಅನುಸಂಧಾನ (ತಿಳಿವಳಿಕೆ) ರಾಹಿತ್ಯದಂತೆ ನಿಷ್ಕಾಮದಿಂದ ಸ್ವೇಚ್ಛಾನುಸಾರ = ಅಂದರೆ ಮನಬಂದಂತೆ ಎಂದು ಸಾಮಾನ್ಯ ಅರ್ಥ. ಆದರೆ ಈ ಫಲತ್ಯಾಗಕ್ಕಾಗಿ ಸ್ವ (ತನ್ನ) ಇಚ್ಛಾಕ್ಕೆ ಅನುಸರಿಸಿ ಪ್ರೇರಿಸಿ ಸಕಲಕ್ರಿಯಾ ಸ್ವೇಚ್ಛಾ

ನಾಮಕ ಹರಿಯು ಜೀವನ ಇಚ್ಛಾಭದಲ್ಲಿ ತನ್ನ ಸ್ವಇಚ್ಛಾ ಇಟ್ಟು ಮಾಡಿ ಮಾಡಿಸುವನೆಂದು ಜ್ಞಾನಪೂರ್ವಕವಾಗಿ ತಿಳಿದು, ವಿಧಿ ಶಾಸ್ತ್ರವಿಹಿತ ನಿಷೇಧ ಶಾಸ್ತ್ರ ವಿರುದ್ಧಕರ್ಮ ಇವೇನೂ ನೋಡದೇ ಶ್ರೀ ಹರಿ ಮಾಡಿಸಿದಂತೆ ನಾನು ಸಕಲ ಕರ್ಮ ಮಾಡುವೆನೆಂಬ ಸುಜ್ಞಾನಪೂರ್ವಕ ತಿಳಿದು, ಪ್ರಧಾನ ಪುರುಷ ಬ್ರಹ್ಮಾದಿ ಸಕಲರಿಗೆ ಪುರುಷಶ್ರೇಷ್ಠ ಅಥವಾ, ಪುರಿ = ಜೀವಾಂತ ರ್ಯಾಮಿಯಾಗಿ ಜೀವ ದೇಹದಲ್ಲಿ, ಶೇತಿ = ಇರುವನೆಂದು ಪ್ರಧಾನಪುರುಷ ನಲ್ಲಿ ಅರ್ಪಿಸಿ, ನಿರ್ವ್ಯಾಜದಿಂದ ಭಕ್ತಿಯನ್ನು ಮಾಡುತ್ತ ಕೊಂಡಾಡಬೇಕು; ಸ್ತೋತ್ರಗೈಯ್ಯಬೇಕು.

ಹಾನಿ = ನಷ್ಟ ಕೇಡು, ವೃದ್ಧಿ = ಬೆಳೆಯುವಿಕೆ ಹೆಚ್ಚಾಗುವಿಕೆ, ಜಯಾಪಜಯಗಳು = ಗೆಲುವಿಕೆ, ಸೋಲು ಏನು ಕೊಟ್ಟರೂ ಶ್ರೀಹರಿ ಇಚ್ಛೆ ಯಿಂದ ಬಂದದೆ ಎಂದು ಭುಂಜಿಸಿ = ಸ್ವೀಕರಿಸಿ, ಅನುಭವಿಸುತ್ತಾ ಶ್ರೀ ಲಕ್ಷ್ಮೀ ನಿವಾಸನಾದ ಸಂಪತ್ಕರನಾದ ಶ್ರೀಹರಿಯ ಕರುಣಾರಸವನ್ನು ನಿತ್ಯದಲ್ಲಿ ಸಂಪಾದಿ ಸುತ್ತಲಿರಬೇಕು. ಹೀಗೆ ಅನನ್ಯಭಾವದಿಂದ ಶ್ರೀಹರಿಯನ್ನು ಸ್ಮರಿಸುತ್ತ ಇದ್ದರೆ, ಶ್ರೀಹರಿಯು ಪರಮ ಆಪ್ತನು ದೇಹ ಅನುಬಂಧಿಗಳಂತೆ ಒಳಗೆ ಹೊರಗೆ ಇದ್ದು ಸದಾ ಸಂರಕ್ಷಿಸುವನು. ಸಂತೈಸುವನು = ಸಮಾಧಾನಮಾಡುವನು. ಬಿಂಬನಾದ ಹರಿಯು ಬಹು ಕರುಣಾಳು. ಹೀಗೆ ಆ ವೈಕುಂಠ-ಅನಂತಾಸನ ಶ್ವೇತದ್ವೀಪ ನಿವಾಸಿಯೇ ಬಿಂಬನಿಗೆ ಅಭಿನ್ನನಾದ ಶ್ರೀಹರಿಯೇ ಪರಮ ಉತ್ತಮನು. ಸಕಲೇಂದ್ರಿಯಗಳಲ್ಲಿ ತಾನು ವ್ಯಾಪಕನಾಗಿ ಇಂದ್ರಿಯಜನ್ಯ ಸುಖದುಃಖ ವಿಷಯಗಳನ್ನು ಜೀವರಿಗೆ ಉಣಿಸುತ್ತ, ತನ್ನ ನಿಜ ವ್ಯಾಪಾರ ಗಳನ್ನು ತಿಳಿಸದಲೇ ತನ್ನ ಶುಭರಸವನ್ನು ಪರಿಗ್ರಹಿಸುವನು-ಸ್ವೀಕರಿಸುವನು. ಬಿಂಬನಾದ ಶ್ರೀಹರಿಯು, ಅನಾದ್ಯನಂತಕಾಲದ ಪುರಾಣ ಪುರುಷನು, ಸನಾತನನು. ಸರ್ವ ಜೀವಾಂತರ್ಯಾಮಿಯಾಗಿ ಸಮೀಪದಲ್ಲೇ ನೆಲಸಿದ್ದು ಅಂತಃ ಪ್ರೇರಕನಾಗಿದ್ದರೂ ಬಹಿಃಕಾಲರೂಪಿಯಾಗಿ ನಾನಾ ಚಿತ್ರ ವಿಚಿತ್ರ ರೂಪಗಳನ್ನು ಧಾರಣಮಾಡಿ, ತನ್ನ ನಿಜರೂಪವನ್ನು ತೋರದೇ ಇಂದ್ರಿಯಾಭಿ ಮಾನಿಗಳಲ್ಲಿ ನಿಂತು ಕರ್ಮಗಳನ್ನು ಮಾಡುವನು.

ಹೀಗೆ ಸಕಲ ಜೀವರಾದ ಎಂದರೆ ಖೇಚರರು ಆಕಾಶದಲ್ಲಿ ಸಂಚರಿಸುವರು ದೇವತೆಗಳು, ಭೂಚರರು = ಭೂಮಿಯಲ್ಲಿ ಸಂಚರಿಸುವರು, ಮಾನವರು

ವಾರಿಚರರು = ಉದಕದಲ್ಲಿ ಸಂಚರಿಪ ಜೀವರು, ನಿಶಾಚರರು = ರಾತ್ರಿಕಾಲ ಸಂಚರಿಪ, ರಾಕ್ಷಸ ದೈತ್ಯಾದಿಗಳು. ಈ ಎಲ್ಲ ಜೀವರೊಳಗಿದ್ದು ಸಕಲ ಕರ್ಮ ಗಳನ್ನೂ ತಾನು ಆಚರಿಸುವನು. ಮಾಡುವನು – ಶ್ರೀ ಹರಿಯು ತಾನು ಘನ ಮಹಿಮನಾದರೂ, ಪರಮ ಅಲ್ಪನಂತೆ ಗೋಚರಿಸನು. ಬಹು ಪ್ರಕಾರ ಆಲೋಚನೆ ಚಿಂತನೆ ಧ್ಯಾನಮಾಡದೆ ಮನಸ್ಸಿಗೆ ತೋರುವದಿಲ್ಲ. ಈತನು ಕೀಚಕ ದೈತ್ಯ ಸಂಹಾರಿ – ಶ್ರೀ ಭೀಮಸೇನರೂಪ ಶ್ರೀ ವಾಯುದೇವರಿಗೆ ಪ್ರಿಯ. ಹೀಗೆ ಭಾರತೀರಮಣ ಮುಖ್ಯ ಪ್ರಾಣಾಂತರ್ಯಾಮಿಯಾಗಿ ಸಕಲ ಕಾರ್ಯಮಾಡಿ ಮಾಡಿಸುತ್ತಾನೆಂದು ಕವಿಜ್ಞಾನಿ ಜನರು ಈ ಮಹಾರಾಯ ನನ್ನು ಸ್ತೋತ್ರಮಾಡುತ್ತಾರೆ. ಒಟ್ಟಿಗೆ ಜ್ಞಾನಿಗಳು ವಾಯ್ವಂತರ್ಗತ ಹರಿಯನ್ನು ಭಜಿಸಿದರೆ ಜ್ಞಾನಿಗೋಚರನೆಂದು ಧ್ಯಾನೋಪಾಸನೆಯು ಮುಖ್ಯ ತಥ್ಯ.

ಹೀಗೆ ಒಂದೇ ಗೋತ್ರಪ್ರವರದ ತಂದೆ ಮಕ್ಕಳು ವಂದನಮಾಡಿ, ಕೊನೆಗೆ ತಮತಮ್ಮ ಜನ್ಮನಾಮ ಬೇರೆ ಬೇರೆ ಹೇಗೆ ಉಚ್ಚಾರಮಾಡುವರೋ ಅದರಂತೆ ಜೀವರು ಈಶನು ಒಂದೇ ದೇಹದೊಳಿದ್ದರೂ, ಸರ್ವ ಜೀವರಲ್ಲಿ ಶ್ರೀಹರಿಯು ನಿಂದ್ಯ ಅನಿಂದ್ಯ, ಪಾಪ ಪುಣ್ಯಕರ್ಮಗಳನ್ನು ತಾನು ಮಾಡಿ, ತತ್ವಪತಿಗಳ ದ್ವಾರಾ ಜೀವರಿಂದ ಮಾಡಿಸುವನು. ಈತನು ಶ್ರೀ ಲಕ್ಷ್ಮೀಪತಿಯು ಸರ್ವೇಶನು, ಜೀವರಿಗೆ ಈಶನು. ಜೀವರು ದಾಸರೆಂಬ ಈ ಅನುಸಂಧಾನ ಭಾವನೆ ನಿತ್ಯ ಧ್ಯಾನದಲ್ಲಿಡಬೇಕು.

ಹೇಗೆ ಕಬ್ಬಿಣಕ್ಕೆ ಕಿಟ್ಟ ಜಂಗು ಹೊಲಸು ಹತ್ತಿದ್ದರೆ, ಅಗ್ನಿಯಲ್ಲಿಟ್ಟು ಕಾಸಿ ಬಡಿದರೆ ಅಗ್ನಿಯು ಆ ಕಿಟ್ಟವನ್ನು ಸುಟ್ಟು ಲೋಹವನ್ನು ಸ್ವಚ್ಛವಾಗಿ ಬೇರೆ ಮಾಡುವುದೋ ಹಾಗೆಯೂ ಮತ್ತು ಘರಟ್ಟ = ಬೀಸುವಕಲ್ಲು ಅಥವಾ ಒನಿಕೆ, ವ್ರೀಹಿ = ಭತ್ತನೆಲ್ಲಿನ ಹೊಟ್ಟು ತೆಗೆದು, ಒಳಗಿನ ತಂಡುಲ = ಅಕ್ಕಿಯನ್ನು ಕಡೆಗೆ ಹಾಕುವುದೋ ಹಾಗೆಯೂ, ಅಗ್ನಿಗೆ, ಘರಟ್ಟಾದಿಗಳಿಗೆ ಸದೃಶನಾದ (ಕಿಂಚಿತಸಾಮ್ಯ) ಶ್ರೀ ವಿಠ್ಠಲನಾಮಕ ಹರಿಯನ್ನು, ವೈಮರೆತು, ಭಕ್ತ್ಯುದ್ರೇಕದಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿ, ಹೇ ಅಜ್ಞಾನಿಗಳನ್ನು ಸುಜ್ಞಾನಮಾರ್ಗಕ್ಕೆ ಹಚ್ಚುವ ಶ್ರೀ ವಿಠ್ಠಲಾ ವಿಠ್ಠಲಾ ಎಂದು ಅಟ್ಟಹಾಸದಿಂದ ಆನಂದದಿಂದ ಹೇ ವಿಠಲಾ ಬಾರೈ ಬಾಬಾ–ಎಂದು ಕರೆಯುತ್ತ ವಿಠ್ಠಲನ

ನಾಮೋಚ್ಚಾರಣೆಮಾಡಲು, ಸಕಲ ದುರಿತ = ಪಾಪಗಳ, ಅಟ್ಟುಳಿ = ಪೀಡೆಯನ್ನು ಬಿಡಿಸಿ, ಅಂದರೆ ಲಿಂಗ ಭಂಗವನ್ನುಮಾಡಿ, ಮೋಕ್ಷಾನಂದಾವಿರ್ಭಾವ ತನ್ನ ಉದರದಲ್ಲಿ ಪ್ರವೇಶಿಸಿ, ಕಡೆಗೆ ತೆಗೆದು, ಶ್ವೇತದ್ವೀಪಗತನಾದ ಶ್ರೀಹರಿಯ ಸಂದರ್ಶನಾನಂದವನ್ನು ಇತ್ತು ಸಂರಕ್ಷಿಸುವನು.

ಮೋಕ್ಷಾನಂದದಲ್ಲಿ ಸರ್ವ ಜೀವರು ಹೇಗೆ ಆನಂದಪಡುತ್ತಲಿರುತ್ತಾರೆಂಬುದು ಸಾಮಾನ್ಯ ದೃಷ್ಟಾಂತದಿಂದ ಪೇಳುತ್ತಾರೆ. ಸಮುದ್ರದಲ್ಲಿ ಸಕಲ ಜಲಚರ ಪ್ರಾಣಿಗಳು ತಮ್ಮ ಮನಸ್ಸಿಗೆ ಬಂದಂತೆ ಸ್ವೇಚ್ಛಾನುಸಾರದಿಂದ, ತಮತಮಗೆ ಯೋಗ್ಯವಾದ ಸ್ಥಳಗಳಲ್ಲಿದ್ದು ಸಂತೋಷದಿಂದ ಸಂಚಾರಮಾಡುವಂತೆಯೇ, ಮಹಾಜಲಧಿ ಸದೃಶನಾದ ಪದ್ಮನಾಭರೂಪಿ ಶ್ರೀ ಹರಿಯಲ್ಲಿ ಬ್ರಹ್ಮ ರುದ್ರ, ವೈಗಣ್ಣ = ಇಂದ್ರನೇ ಮೊದಲಾಗಿ ಅನಂತ ಜೀವರಗಣವು ನಿತ್ಯದಲ್ಲಿ. ಅಂದರೆ ನಿತ್ಯವಾದ ಮುಕ್ತಿಯಲ್ಲಿ, ವರ್ತಿಸುತ್ತ= ಆನಂದದಿಂದ ಚರಿಸುತ್ತ ಸರ್ವ ಜೀವರಗಣವು ತುಂಬಿಹದು.

ಹೀಗೆ ಪದ್ಯ ೮ ರಿಂದ ಆರಂಭಿಸಿ ಪದ್ಯ ೨೧ ಪರಿಯಂತವಾಗಿ ಧ್ಯಾನಗಮ್ಯ ಶ್ರೀಹರಿಯ ಅನಂತ ಗುಣರೂಪ, ಕ್ರಿಯಾದಿ ಮಹಾ ಮಹಿಮೆಗಳನ್ನು ಪೇಳಿದರು. ಮಾಹಾತ್ಮ್ಯಜ್ಞಾನ ವಿನಾ ಶ್ರೀಹರಿಯಲ್ಲಿ ವಿಶೇಷ ಭಕ್ತಿಯುಂಟಾಗುವದಿಲ್ಲ. "ಭಕ್ತ್ಯರ್ಥವಾಗಿಯೇ ಕಾಲಕಾಲಕ್ಕೆ ಭಗವನ್ಮಹಿಮೆ ಕೊಂಡಾಡುವದು ಅತ್ಯಾವಶ್ಯಕ."

ಇನ್ನು ಮುಂದೆ ಪದ್ಯ ೨೨ ರಿಂದ ಆರಂಭಿಸಿ ಪದ್ಯ ೨೬ರವರೆಗೆ ಹೀಗೆ ಐದು ಪದ್ಯಗಳಿಂದ, ಬಿಂಬೋಪಾಸನೆಯಲ್ಲಿ ಅನ್ವಯಪೂಜಾ ಯಾವುದು, ಪಂಚಭೂತಾದಿಗಳಿಂದ ನಿರ್ಮಿತವಾದ ವಸ್ತುಗಳಿಂದ ಶ್ರೀಹರಿಯನ್ನು ಪೂಜಿಸುವದು ಹೇಗೆ ವ್ಯತಿರೇಕ ಪೂಜಾ ಎನಿಸುವುದು, ಎಂಬ ಈ ಅನ್ವಯ ವ್ಯತಿರೇಕ ಪೂಜೆಗಳನ್ನು ವಿವರಿಸುತ್ತಾರೆ. ಇದು ಧ್ಯಾನಕ್ಕೆ ಮುಖ್ಯ ಕಾರಣವು.

## ಸಮನ್ವಯ ಪೂಜಾ

ಮುಕ್ತಿಪ್ರದ ವಾಸುದೇವನಾದ ಬಿಂಬನೇ ಸರ್ವತ್ರ ಒಳಗೂ ಹೊರಗೂ ಪ್ರಕಾಶಮಾನನಾಗಿ ಜೀವರೋಪಾದಿಯಲ್ಲಿ (ಆಭಾಸಕ) ನಟನೆಮಾಡುವನಾಗಿಯೂ, ಒಳಗೆ ಜೀವಾಂತರ್ಯಾಮಿಯಾಗಿ ಬಿಂಬನು ಪ್ರಕಾಶಮಾನನಾಗಿ ಜ್ಞಾನಿಗಳಿಗೆ ಗೋಚರಸಿ ತತ್ತನ್ನಾಮಕನಾಗಿ ಆಯಾ ಜೀವ ಜಡಗಳ ನಾಮದಿಂದ

ಆಯಾ ರೂಪವನ್ನು ಧರಿಸಿರುವನೂ ಎನ್ನ ಬಿಂಬನು. ಬಿಂಬರೂಪಕ್ಕೂ ಬಹಿಃ ಎಂದರೆ ಹೊರಗೆ ಇರುವ ಎಲ್ಲ ರೂಪಗಳ ಅಂತರ್ಯಾಮಿರೂಪಕ್ಕೂ ಕಿಂಚಿತ್ತಾದರೂ ಭೇದವಿಲ್ಲವೆಂದು ತಿಳಿದು ಪರಮಾತ್ಮನ ಎಲ್ಲ ರೂಪಗಳಿಗೂ ಐಕ್ಯ ಚಿಂತಿಸುವದೇ **ಸಮನ್ವಯ** ಪೂಜಾ ಎಂದು ತಿಳಿದು ಧ್ಯಾನಮಾಡುತ್ತ ಹೀಗೆ ಸದುಪಾಸನೆಯ ಗೈಯ್ಯುವವನು ಮೋಕ್ಷೇಚ್ಛುಗಳಲ್ಲಿ ಉತ್ತಮನು. ಅವನೇ ಇತರ ಸಂಸಾರಾದಿ ಬಾಧೆಗಳಿಂದ ದಾಟಿದ ಜೀವನ್ಮುಕ್ತನೆಂದು ಕರೆಸುತ್ತಾನೆ. ಮತ್ತೂ ಈ ಸಮನ್ವಯ ಪೂಜಾ ವಿವರಿಸುತ್ತಾರೆ. ಇನ್ನು ಶ್ರೀಹರಿಯು ಸರ್ವರಸಮಯನು, ಸರ್ವ ವಸ್ತುಮಯನು ಇರುವನೆಂಬ ನೈಜ ಭಾವವರಿಯಬೇಕು. ಭೋಗ್ಯ ವಸ್ತುಗಳಲ್ಲಿ ಅಂದರೆ ಆಯಾ ಜೀವರು ಭೋಗಿಸಿ ಎಂದರೆ ಭುಜಿಸಿ ಆನಂದಪಡುವ ಪದಾರ್ಥಗಳಲ್ಲಿ, ಅಂದರೆ ಮನುಜರಿಗೆ ಅನ್ನರಸದಲ್ಲಿ, ಪಶುಗಳಿಗೆ ತೃಣ, ದೇವತೆಗಳಿಗೆ ಆಜ್ಯ ಇತ್ಯಾದಿ ರಸಗಳು ಅಷ್ಟಮರಸವಾದ ಸ್ವಾಖ್ಯ ಹರಿಯ ರಸಾರಂಭಿಸಿ–ರಮಾ–ಬ್ರಹ್ಮ–ತತ್ವಾಭಿಮಾನಿರಸ, ಪುಷ್ಕರನ ಪರಿಯಂತವಾಗಿ ಯೋಗ್ಯ ರಸಗಳ ವಿಭಾಗಗಳು. ಗುರುದ್ವಾರಾ ತಿಳಿದು ದೇವತೆಗಳದ್ವಾರಾ ಹರಿಗೆ ಶುಭರಸಗಳನ್ನು ಅರ್ಪಿಸಬೇಕು. ಮತ್ತು ಜಡ ಪದಾರ್ಥಗಳಲ್ಲಿ ಕಲ್ಯಾದಿ ತಮೋಭಾಗ ರಸವಿದೆಂದು, ಇಂಥ ಅಸಾರವಾದ ರಸವು ಬೇರೆ ಇದೆಂಬ ಜ್ಞಾನವಿರಬೇಕು. "ದೈತ್ಯಭಾಗ ಬ್ಯಾರೆಂಬ ಜ್ಞಾನವಿರಲಿ" ಎಂದು ಗೋಪಾಲದಾಸರ ವಚನದಂತೆ ಇದೇ ಅಭೋಗ್ಯರಸ ಸಮರ್ಪಣೆ ಸದುಪಾಯವೆಂದು ಜ್ಞಾನಿಗಳ ವಚನದಲ್ಲಿ ನಂಬಿಕೆ ಇಟ್ಟು ಶ್ರೀ ಹರಿಗೆ ಶುಭರಸಗಳನ್ನೇ ಸಮರ್ಪಿಸಬೇಕು. "ಹರಿಗೆ ಹರಿಗೆ ಐಕ್ಯ, ಶಿರಿಗೆ ಶಿರಿಗೆ ಐಕ್ಯ" ಇತ್ಯಾದಿ ಶ್ರೀವಿಜಯರ ವಚನದಂತೆ ಸಮರ್ಪಿಸುವದೇ ಅನ್ವಯಪೂಜಾ. ಮಹಾಭಾಗ್ಯ ಸಂಪತ್ತು ಶ್ರೀಹರಿಯ ಸ್ಮೃತಿಯು, ಬಡತನ ವೆಂಬುವದೇ ಹರಿಯ ವಿಸ್ಮೃತಿ ರೂಪವು. ಈ ವಿಸ್ಮೃತಿಯು ಹರಿಯೇ ಎನ್ನ ಕರ್ಮಾನುಸರಿಸಿ ಕೊಟ್ಟಹನೆಂಬ ತಿಳುವಳಿಕೆಯಿಂದ ಭಾಗ್ಯ ಬಂದಾಗ ಸಂತೋಷ ಪಡದೆ, ಬಡತನ ಬಂದಾಗ್ಗೆ ಕುಗ್ಗಿ ಸೊರಗದೇ, ಕಾಲಕಾಲಕ್ಕೆ ಶ್ರೀಹರಿಯು ಕೊಟ್ಟದ್ದು ಭುಂಜಿಸಿ ಹರಿಗೆ ಸಮರ್ಪಣಮಾಡುವದೇ ಮಹಾ ವೈರಾಗ್ಯವೆಂಬ ಶ್ರೀ ಗೋಪಾಲದಾಸರ ವಚನದಲ್ಲಿ ನಂಬಿಕೆ ಇಡು, ವೈರಾಗ್ಯಮಾಡು. ನೀನು ಹರಿಯ ಮರೆತು ನಿರ್ಭಾಗ್ಯನೆನಿಸಬೇಡ ಎಂದು ಬೋಧಿಸಿದ್ದಾರೆ.

**ಇನ್ನು ವ್ಯತಿರೇಕಪೂಜಾ ಯಾವುದೆಂಬ** ವಿಧಾನವನ್ನು ಹೇಳುತ್ತಾರೆ. ಸ್ಥಳ = ಭೂಮಿ, ಜಲ = ನೀರು, ಅದ್ರಿ= ಪರ್ವತಗಳಲ್ಲಿ ಹರಿಯಿಂದ ಪುಟ್ಟುವ ಫಲಗಳು, ಸಮೀಚೀನವಾದ ಸುಗಂಧಪುಷ್ಪಗಳು ಸುವಾಸನೆ ಗಂಧವು, ಅಗ್ರೋದಕಾದಿ ಜಲರಸ-ಫಲರಸಗಳು. ಶ್ರೀ ತುಳಸಿಯೇ ಮೊದಲಾಗಿರುವ ಶ್ರೀ ಹರಿಗೆ ಸಮಸ್ತ ಪೂಜಾಕ್ಕೆ ಯೋಗ್ಯವಾದ ಪದಾರ್ಥಗಳನ್ನು ಗಂಗಾಜನಕನಿಗೆ ಅನೇಕ ಬಗೆಯಿಂದ ಆಹಿತ ಪ್ರತಿಮಾ ಸಾಲಗ್ರಾಮಾದಿಗಳಿಗೆ ಅರ್ಪಿಸಿ ಅರ್ಚಿಸುವದೇ ವ್ಯತಿರೇಕ (ಭಿನ್ನಪೂಜಾ) ಪೂಜಾಯೆನಿಸುತ್ತದೆ.

ಹೀಗೆ ಶ್ರೀಕರ ಸಂಪತ್ಕರ ಮೋಕ್ಷವೆಂಬ ಸಂಪತ್ತನ್ನು ಕೊಡುವ ಶ್ರೀ ಹರಿಯನ್ನು ಸರ್ವತ್ರ ಸ್ಥಳಗಳಲ್ಲಿ, ಸರ್ವ ಜಡಪದಾರ್ಥಗಳಲ್ಲಿ, ತೃಣಾದಿ ಬ್ರಹ್ಮಾಂತ ಜೀವರಲ್ಲಿ ಸಮನಾಗಿಪ್ಪ ಒಬ್ಬನೇ ಹರಿಯೆಂದು ಶ್ರೀ ಹರಿಯನ್ನು ನೋಡುತ್ತ ಶ್ರೀ ಹರಿಯ ಗುಣರೂಪ ಕ್ರಿಯಾದಿಗಳಿಗೆ ವ್ಯತಿರೇಕಭೇದ ತಿಳಿಯದೇ ಸರ್ವಗತ ಹರಿಯು ಸಮನು, ಒಬ್ಬನೇ "ಸರ್ವರಬಿಂಬನೇ ಎನ್ನ ಬಿಂಬನೆಂದು" ಮರೆಯದೇ ಸ್ವಬಿಂಬನಲ್ಲಿ ಐಕ್ಯ ಚಿಂತಿಸಿ ಸಮನ್ವಯಿಸು. ಈ ಅನ್ವಯ ಪೂಜಾ ಕರುಣಾಳುವಾದ ಶ್ರೀ ಹರಿಯು ಸ್ವೀಕರಿಸಿ ಭಕ್ತರ ಕೋಶಾದಿಬಂಧಕಗಳನ್ನು ಕಳೆದು ಮೋಕ್ಷದಲ್ಲಿ ಸುಖವನ್ನು ಪಾಲಿಸುತ್ತ ನಿರಂತರದಲ್ಲಿ ಬಿಡದೆ ಪೊರೆಯುವನು.

ಈ ಪ್ರಕಾರವಾಗಿ ವ್ಯತಿರೇಕ ಸಮನ್ವಯ ಪೂಜಾ ವಿಧಾನಗಳನ್ನು ಸದ್ಗುರುಗಳಿಂದ ಚೆನ್ನಾಗಿ ತಿಳಿದು, ಈ ಎರಡೂ ವಿಧ ಪೂಜೆಗಳಿಂದ ಅನಿಮಿಷೇಶ = ದೇವತೆಗಳ ಒಡೆಯನಾದ ಶ್ರೀ ಹರಿಯನ್ನು ತೃಪ್ತಿಬಡಿಸುತ್ತಿರಬೇಕು. ನಿಜಲಾಭ ಪೂರ್ಣನಾದ ಹರಿಗೆ ನಮ್ಮ ಪೂಜಾದಿಂದ ಏನೂ ಲಾಭವಿಲ್ಲವಾದರೂ ಭಕ್ತರ ಉದ್ಧಾರಗೋಸುಗ ಪೂಜಾ ಕೈಕೊಂಡು, ಸ್ಥಿತಿ = ಸೃಷ್ಟಿಯಲ್ಲಿ ಇರುವಿಕೆಯನ್ನೂ ಮರಣಜನನಾದಿಗಳನ್ನೂ ದೂರಗೈಸಿ, ತನ್ನ ಸೇವಕರಾದ ಜ್ಞಾನಿಗಳಲ್ಲಿ ಇಟ್ಟು ಆನಂದಬಡಿಸುವನು. ಏಕೆಂದರೆ, ಶ್ರೀ ಹರಿಯು ಭಕ್ತವತ್ಸಲನೆಂಬ ಬಿರುದುಳ್ಳವನು. ಇನಿತು ಅಷ್ಟವಿಧ ಪ್ರಕೃತಿಯಲ್ಲಿ ಶ್ರೀ ಹರಿಯ ವ್ಯಾಪಕತ್ವ, ಕರ್ತೃತ್ವ, ಪ್ರೇರಕತ್ವ, ಬಂಧಕತ್ವ, ಮೋಚಕತ್ವ ವಿಧಾನಗಳನ್ನು ತಿಳಿದು ಧ್ಯಾನಮಾಡುವದು.

ಇನ್ನು ಶ್ರೀ ಹರಿಯನ್ನು ಅರ್ಚಿಸಲು, ಅಧಿಷ್ಠಾನ. **ಎರಡು ವಿಧವಾದ ಪ್ರತಿಮಾಗಳೆಂದು** ಹೇಳುತ್ತಾರೆ. ಕಮಲನಾಭನಾದ ಪುರುಷರೂಪಿ ಹರಿಗೆ

ಎರಡು ಪ್ರತಿಮೆಗಳು: ೧ ಜಡ — ೨ ಚೇತನಗಳೆಂದು ಎರಡು ವಿಧ. **ಚೇತನ ಪ್ರತಿಮಾಗಳಲ್ಲಿ** ೧ ಪುರುಷ, ೨ ಸ್ತ್ರೀ ಎಂದು ಎರಡು ವಿಧ. **ಜಡದಲ್ಲಿ** ೧ ಆಹಿತ, ೨ ಸಹಜ ಪ್ರತಿಮಾಗಳೆಂದು ಎರಡು ವಿಧ. (೧) ಆಹಿತ ಪ್ರತಿಮಾಗಳು, ವಿಶ್ವಕರ್ಮಾದಿ ನಿರ್ಮಿತ ಪಂಚಲೋಹ ಶಿಲಾವಿಗ್ರಹಗಳು; (೨) ಸಹಜವೆಂದರೆ ಸಾಲಗ್ರಾಮ–ಸ್ವಯಂವ್ಯಕ್ತಾದಿಗಳು ಸಹಜ ಸಾಲಿಗ್ರಾಮ. ಸ್ವಯಂ ವ್ಯಕ್ತಾದಿಗಳಲ್ಲಿ ಗೋಳಕಚಿಂತನವಿಲ್ಲವಾದರೂ ಅಜ್ಞಾನಿಗಳಾದ ನಮ್ಮ ಕಣ್ಣಿಗೆ ಕಾಣುವ ಈ ಸಾಲಗ್ರಾಮ – ಸ್ವಯಂವ್ಯಕ್ತ. ಜಡದಲ್ಲಿ ವಿಶ್ವಕರ್ಮ ನಿರ್ಮಿತಗೋಳಕ ಚಿಂತನೆ ಇಲ್ಲವಾದರೂ (೧) ತದಂತರ್ಗತ ವಾಯು, (೨) ವಾಯ್ವಂತರ್ಗತ ರಮಾ, (೩) ಅಂತರ್ಗತ ತೇಜೋರೂಪ ನಾರಾಯಣ, ವಿಷ್ಣು ಪ್ರತಿಮಾಗಳಲ್ಲಿ ಹೀಗೆ ಚಿಂತಿಸಬೇಕೆಂದು ಕೆಲವರು ಜ್ಞಾನಿಗಳಮತ. ಶ್ವೇತ ದ್ವೀಪಗತನಾದ ಸಾಕ್ಷಾದ್ರಮಾವಲ್ಲಭನು ಸಾಲಗ್ರಾಮ ಸ್ವಯಂವ್ಯಕ್ತಾದಿ ಗಳಲ್ಲಿರುವನೆಂದು ತಿಳಿಯಬೇಕೆಂದು ಹೇಳಿದ್ದಾರೆ. ಇದು ಬಹು ಸಮಂಜಸ ತೋರುತ್ತದೆ.

ಇನ್ನು ಆಹಿತ ಪ್ರತಿಮಾ ಜಡಗಳಲ್ಲಿ ಪಂಚಗೋಳಕ:

೧. ಪ್ರತಿಮಾಂತಸ್ಥ– ಪ್ರತಿಮಾಜಡ

೨. ,, ತದ್ಗತ ತತ್ವಾಭಿಮಾನಿ

೩. ತದಂತರ್ಗತ – ವಾಯು

೪. ತದಂತರ್ಗತ – ರಮಾ

೫. ತದಂತರ್ಗತ ನಾರಾಯಣ — ಹೀಗೆ ಶಿವಾದಿಪ್ರತಿಮಾಗಳಲ್ಲಿ ವಿಶ್ವಕರ್ಮನಿರ್ಮಿತ ಎಲ್ಲ ಪ್ರತೀಕಗಳಲ್ಲಿ ತಿಳಿವುದು. ಮತ್ತು ತಂತ್ರಸಾರದಲ್ಲಿ ಹೇಳಿರುವಂತೆ ಸದ್ಗುರುಗಳಿಂದ ಚೆನ್ನಾಗಿ ಈ ಮರ್ಮವರಿತು ಧ್ಯಾನಿಸಬೇಕು.

ವಾಯು ರಮಾಂತರ್ಗತ — ಶ್ರೀ ಹರಿ ಈ ಗೋಳಕತ್ರಯವಾದರೂ ಮಂದರಿಗೆ ದುರ್ಬೋಧವು. ಜ್ಞಾನಿದೃಷ್ಟಿಯಿಂದ— ಬ್ರಹ್ಮಾಂಡದಲ್ಲಿ ಸಂಸೃಷ್ಟ ವಾದ ೨೪ ಜಡತತ್ವಗಳು, ತದ್ಗತ ಅಭಿಮಾನಿಗಳು ೨೪ — ವಾಯು, ಲಕ್ಷ್ಮೀ ನಾರಾಯಣರು ಹೀಗೆ ಬಹು ವಿಧವಾದ ಗೋಳಕಗಳು ಉಂಟೆಂದು ತಿಳಿಯ ಬೇಕೆಂದು ಶ್ರೀ ವಿಜಯದಾಸರ ಸುಳಾದಿ ಇವೆ.

(೧) ಇನ್ನು ಚೇತನರಾದ **ಪುರುಷರ ಕಳೇವರ** ಎಂದರೆ ದೇಹದಲ್ಲಿ ಬ್ರಹ್ಮ-ವಾಯು-ಗರುಡ ಶೇಷ ಉಮಾರಮಣ-ರುದ್ರ, ಇಂದ್ರ ಕಾಮ ಅಹಂ ಕಾರಿಕ ಪ್ರಾಣಾದಿಗಳು ಇವರ ಅಂತರ್ಗತ ಅನಿರುದ್ಧ ನಾರಾಯಣನು ತೋರಿ ಕೊಳ್ಳದೆ ಇರುವನು. ಈ ಅನಿರುದ್ಧ ನಾರಾಯಣನು ದೋಷದೂರನೆಂದು ಎಲ್ಲ ದೇವತೆಗಳು ಭಜಿಸುತ್ತ, ಪುರುಷ ಶರೀರಾಭಿಮಾನಿಗಳಾಗಿ ಸುಖವನ್ನು ಕೊಡುವರು.

(೨) ಚೇತನರಾದ ಸ್ತ್ರೀಪ್ರತಿಮಾ, **ಸ್ತ್ರೀಯರ ಶರೀರ**ದಲ್ಲಿ ರಮಾ ದೇವಿ-ಸರಸ್ವತಿ ಭಾರತೀದೇವಿಯರು ಸೌಪರಣೀ ವಾರಣೀ ಪಾರ್ವತೀದೇವಿ ಯರೇ ಮೊದಲಾಗಿ ಉಳ್ಳ ಸಮಸ್ತ ತತ್ವೇಶರ ಪತ್ನಿಯರಾದ ಸ್ತ್ರೀಯರು, ಸ್ತ್ರೀ ಶರೀರಕ್ಕೆ ಅಭಿಮಾನಿಗಳಾಗಿದ್ದು ವಾಯ್ವಂತರ್ಗತ ಅರುಣವರಣದಂತೆ ಸುಪ್ರಕಾಶ್ಯನಾದ ಸಂಕರುಷಣ-ಪ್ರದ್ಯುಮ್ನ ರೂಪಗಳನ್ನು ಹಗಲಿರಳು ಬಿಡದೇ ಉಪಾಸನಾಗೈಯ್ಯುತ್ತ ಆನಂದಪಡುವರು.

(೩) ಜಡವಾದ **ಕೃತಪ್ರತಿಮೆಗಳು** ಮಾಡಿದ ಮೂರ್ತಿಗಳಲ್ಲಿ (೧) ಶಿಲಾ-ಕಲ್ಲುಪ್ರತಿಮಾದಲ್ಲಿ, ಕಲ್ಲು ಕಟೆಯುವ ಆಯುಧ ಟಂಕ = ಆಯುಧ ವನ್ನು ಧಾರಣಮಾಡಿದ "ಟಂಕಿ" ನಾಮಕ ಪರಮಾತ್ಮನು. (೨) ಸ್ವರ್ಣ- ರಜತ ಪಂಚಲೋಹಾದಿ ಮೂರ್ತಿಗಳನ್ನು ಸ್ವರ್ಣಕಾರನು, ಸ್ವರ್ಣರಜತಾದಿ ಗಳನ್ನು ಕಾಶಿ ಬಡಿದು ಪ್ರತಿಮೆ ಮಾಡುತ್ತಾನೆ. ಇವುಗಳಲ್ಲಿ ಭಾರ್ಗವ ಪರಶು ರಾಮದೇವರು ಇದ್ದಾನೆ. ಇಲ್ಲಿ ಅಗ್ನಿ ವಾಯ್ವಾದಿ ಸಮಸ್ತ ದೇವತೆಗಳು ಪ್ರತಿಮಾದಲ್ಲಿ ಅಭಿಮಾನಿಗಳಾಗಿದ್ದಾರೆಂದು ಅರಿತು, ಈ ಶಿಲಾ ಮತ್ತು ಪಂಚ ಲೋಹಾದಿ ಪ್ರತಿಮಾಗಳಿಗೆ ತಂತ್ರಸಾರರೀತ್ಯಾ ಅರ್ಚನಮಾಡುತ್ತ ನಿತ್ಯದಲ್ಲಿ ಶ್ರೀ ತುಳಸಿ-ಗಂಧ ಅಕ್ಷತೆ-ಹೂವು ಅನೇಕ ಫಲ ದೀಪ ಧೂಪ-ಪಂಚಾಮೃತಾದಿ ಅಭಿಷೇಕಗಳಿಂದ ಪೂಜಾ ಮಾಡತಕ್ಕ ಭಕ್ತರಿಗೆ ಧರ್ಮಾರ್ಥಕಾಮ ಮೋಕ್ಷಾದಿ ಪುರುಷಾರ್ಥವನ್ನು ಕೊಡುವರು.

(೪) ನಗಗಳು — ಪರ್ವತಗಳಿಗೆ ಅಭಿಮಾನಿಗಳಾದ ದೇವತೆಗಳು ಸಹ ಜಾಚಲ = ಸಹಜ ಜಡ ಸಾಲಗ್ರಾಮಗಳಿಗೆ ಅಭಿಮಾನಿಗಳಾದ ಶ್ರೀ ವಾಸು ದೇವನನ್ನು ಪೂಜಿಸುವರು. ಹೀಗೆ ನಾಲ್ಕು ವಿಧವಾದ ಪ್ರತೀಕ, ಚೇತನರಲ್ಲಿ ಸ್ತ್ರೀ-ಪುಂ ಭೇದ ಎರಡು ವಿಧ. ಜಡದಲ್ಲಿ ಕೃತಪ್ರತೀಕ ಆಹಿತಜಡ ಸಹಜ

ಜಡಗಳಲ್ಲಿಪ್ಪ ತನ್ನಲ್ಲಿ ತನಗೆ ಭೇದವಿಲ್ಲದ ಸ್ವಗತಭೇದ ವಿವರ್ಜಿತನ ನಾಲ್ಕು ವಿಧ ಪ್ರತೀಕದಲ್ಲಿ ಭಗವಂತನ ರೂಪಗಳನ್ನು ತಿಳಿದು ಉಪಾಸನೆ ಮಾಡಲು, ಇಂಗಡಲ= ದುಃಖಮಯವಾದ ಸಂಸಾರ ಸಮುದ್ರವನ್ನು ದಾಟಿಸಿ ಲಿಂಗಭಂಗಾನಂತರ ಮುಕ್ತರನ್ನು ಮಾಡುವನು. ಶ್ರೀ ಹರಿಯು ಅತ್ಯಂತ ಅಗಾಧ ಮಹಿಮನು.

ಶ್ರೀದೇವಿಗೆ ವರನಾದ ಸಮಸ್ತ ಜಗತ್ತಿಗೆ ಒಡೆಯನಾದ ವಿಠ್ಠಲನು ಮೇಲೆ ವಿವರಿಸಿದ ಪ್ರಕಾರ ಜಡ ಜಂಗಮಸ್ಥಾವರ ಜೀವರಲ್ಲಿ ಪರಿಪೂರ್ಣನಾಗಿ ಅನಂತಮಹಿಮಾ ವ್ಯಕ್ತಮಾಡುವನೆಂದು ತಿಳಿಯದೇ ಬರಿ ಡಂಭಾಚಾರದಿಂದ ಆವ ಪುಣ್ಯಕ್ಷೇತ್ರಗಳಿಗೆ ಪೋಗಿ ಹರಿಯ ಪ್ರತಿಮಾ ಸಂದರ್ಶನಮಾಡಿದರೂ ಜ್ಞಾನಶೂನ್ಯನಾಗಿ ಯಾವ ತೀರ್ಥದಲ್ಲಿ ಮುಳುಗಿದರೂ, ಕಾನನದಲ್ಲಿ ಕುಳಿತು ಜಪ ತಪ ಯಜ್ಞ ಹೋಮಾದಿಗಳನ್ನು ಮಾಡಿದರೂ, ಯಾವ ದಾನಮಾಡಿದರೂ ಏನೂ ಫಲವಿಲ್ಲ.

ಈ ಪ್ರಕಾರವಾಗಿ ಅನೇಕ ಉಪನಿಷತ್ ಪ್ರಮೇಯ ರಹಸ್ಯಗಳನ್ನು ಒತ್ತಟ್ಟಿಗೆ ಸೇರಿಸಿ ಅಷ್ಟವಿಧ ಪ್ರಕೃತಿಯಲ್ಲಿ ಹರಿಯ ಉಪಾಸನೆ ಪೇಳಿದ ಕರುಣಾಳುಗಳಾದ ದಾಸರ ಚರಣಕ್ಕೆ ಸದಾ ಶಿರವೆರಗಲಿ. ಗ್ರಂಥಬಾಹುಲ್ಯ ಭಯದಿಂದ ಅನೇಕ ಉಪನಿಷದಾದಿ ಪ್ರಮಾಣಗಳನ್ನು ದಾಸರು ಬರೆಸಲಿಲ್ಲ. ಸಜ್ಜನರು ಮುಖ್ಯವಾಗಿ ಈ ರಹಸ್ಯ ತಿಳಿಯಲು, ಐತರೇಯಾದಿ ಉಪನಿಷತ್ತು ದಾಸರಾಯರ ಸುಳಾದಿಗಳು, ಸಂತತ ಪಾರಾಯಣ ಮಾಡಿ ಪಠಿಸಿದರೆ ಸುಜ್ಞಾನವಿತ್ತು ಶ್ರೀ ಹರಿಕಥಾಮೃತಸಾರ ಸಾರಾಮೃತವನ್ನು ಕರೆದು ಸಾಧಕರಾದ ಭಕ್ತರನ್ನು ಉದ್ಧರಿಸುವರೆಂದು ಬಿನ್ನಹ.

ಈ ಸಂಧಿಯ ಸಾರವು ಬಹು ವಿಸ್ತಾರವಾಯಿತು. ನಾನರಿಯೆ ಸದ್ಗುರುಗಳ ಪ್ರೇರಣೆಯಂತೆ ಬರೆದು ಬರೆಸಿದದು. ಹರಿಯು ಸುಪ್ರೀತನಾಗಿ ಧ್ಯಾನ ಗೋಚರನಾಗಲೆಂದು ಪ್ರಾರ್ಥಿಸುತ್ತೇನೆ.

॥ ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ ॥

ಶ್ರೀ ಗುರುರಾಜೋ ವಿಜಯತೇ

# ೧೧ ಧ್ಯಾನಪ್ರಕ್ರಿಯಾ ಸಂಧಿ

ಶ್ರೀ ರಾಘವೇಂದ್ರ ಗುರು-ಶ್ರೀ ವರದೇಂದ್ರ ಗುರು

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥

**ಅವತರಣಿಕಾ :** ಶ್ರೀ ಹರಿಯ ಧ್ಯಾನಮಾಹಾತ್ಮ್ಯೆಯನ್ನು ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ.

ಮೂಲ :

**ಪಾದುಕೆಯು ಕಂಟಕ ಸಿಕತ ಮೊದ ।**
**ಲಾದವನುದಿನ ಬಾಧಿಸವು ಏ ।**
**ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ॥**
**ಸಾದರದಿ ನೆನೆವವನು ಏನಪ ।**
**ರಾಧಗಳ ಮಾಡಿದರು ಸರಿಯೆ ನಿ ।**
**ರೋಧಗೈಸವು ಮೋಕ್ಷಮಾರ್ಗಕೆ ದುರಿತ ರಾಶಿಗಳು ॥ ೧ ॥**

**ಪದ್ಯಾರ್ಥ :** ಪಾದುಕೆಯು = ಕಟ್ಟಿಗೆಯ ಹಾವಿಗೆ, ಅಥವಾ ಪಾದರಕ್ಷೆಯನ್ನು ಹಾಕಿಕೊಂಡು ಮಾರ್ಗಪ್ರಯಾಣ ಮಾಡುವವನಿಗೆ, ಕಂಟಕ = ಮುಳ್ಳು, ಸಿಕತ = ಉಸುಬಿನ ಕಣಗಳು ಕಲ್ಲು, ಮುಳ್ಳು ಮೊದಲಾದವುಗಳು ಬಾಧಿಸವು. ನಿತ್ಯದಲ್ಲಿ ಬಾಧೆಮಾಡಲಾರವು. ಅದರಂತೆ ಏಕಾದಶೇಂದ್ರಿಯಗಳಲಿ = ಮನವೇ ಮೊದಲಾದ ಹನ್ನೊಂದು ಇಂದ್ರಿಯಗಳಲ್ಲಿ, ಬಿಡದೆ = ಸಂತತವಾಗಿ ನಿತ್ಯದಲ್ಲಿ ಪ್ರತಿಕ್ಷಣ, ಹೃಷೀಕಪನಮೂರ್ತಿ = ಹೃಷೀಕೇಶ ಇಂದ್ರಿಯನಿಯಾಮಕ ಶ್ರೀ ಹರಿಯಮೂರ್ತಿಯ ಪಾದವನ್ನು ನಿತ್ಯದಲ್ಲಿ, ಸಾದರದಲ್ಲಿ = ಭಕ್ತಿಪುರಸ್ಸರವಾಗಿ ಧ್ಯಾನರೀತ್ಯಾ ನೆನೆವವನು, ಧೇನಿಸುವವನು, ಚಿಂತಿಸುವವನು, ಏನಪರಾಧಗಳು ಮಾಡಿದರು ಸರಿಯೆ = ಆಕಸ್ಮಿಕವಾಗಿ ಸಂಭವಿಸುವ ಅಪರಾಧ

ಗಳನ್ನು ಮಾಡಿದರೂ ಭಕ್ತಾಪರಾಧ ಸಹಿಷ್ಣುವಾದ ಶ್ರೀ ಹರಿಯು ಮೋಕ್ಷ ಮಾರ್ಗಕ್ಕೆ ಸಂಭವಿಸುವ ಕಂಟಕ ಮುಳ್ಳು ಕಲ್ಲು, ಬಾಧೆ = ದೈತ್ಯಾದಿಗಳ ಬಾಧೆ ಇವುಗಳನ್ನು ಪರಿಹರಿಸುತ್ತಾನೆ. ಸದಾ ಭಗವಂತನ ಪಾದಧ್ಯಾನಮಾಡುವವರ ಕ್ಷುದ್ರಾಪರಾಧಗಳು = ದುರಿತ ಸಮೂಹಗಳು ಮೋಕ್ಷಮಾರ್ಗಕ್ಕೆ, ನಿರೋಧ ಗೈಸವು = ಅಡ್ಡಾಗುವದಿಲ್ಲ. ಕಲ್ಲು ಮುಳ್ಳಿನ ಬಾಧೆಯಂತೂ ಮೊದಲಿಗೆ ಇರುವದಿಲ್ಲ. ಹೀಗೆ ಹರಿಪಾದ ಧ್ಯಾನರತರಿಗೆ ಅನಾಯಾಸದಿಂದ ಮೋಕ್ಷ ಸುಖ ದೊರೆಯುತ್ತದೆಂದು ಫಲಿತಾಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ಪಾದುಕೆಯು — ಮನೋ ಇಂದ್ರಿಯ ಮೊದಲಾದುದರಿಂದ ಧ್ಯಾನ ಮಾಡುವಗೆ - ಏನಪರಾಧವಿದ್ದರೂ, ಮೋಕ್ಷ ವಿರೋಧವಿಲ್ಲ.

**ಭಾವಸೂಚನ :** ಇದಾನೀಂ ಧ್ಯಾನಪ್ರಕಾರಮಾಹ ಪಾದುಕೇತಿ ‖ ಮಂಜೂಷಾಸ್ತು ‖ ೧ ‖

" ತಂದೆತಾಯ್ ಸಖ ಬಂಧುವರ್ಗಗ ।
ಳಿಂದೆ ಸದ್ಗತಿ ಎನದ ಲಾವಗ ।
ಲಿಂದಿರಾಧವನಿವರ ಹೃದಯದಿ ನಿಂದು ಅವರಂತೆ ‖
ಸಂದೆಹಿಲ್ಲದೆ ಕ್ರೀಡೆಗೈದಪ ।
ನೆಂದು ತಿಳಿಯಲು ಜನನಿಯೋಲ್ ತಾ ।
ವೊಂದರಕ್ಷಣ ಬಿಡದೆ ಪಾಲಿಪನತಿ ಹರುಷಬಡುತಾ ‖ ೧೧ ‖

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಓಂ * " ಆಸೀನಃ ಸಂಭವಾತ್ " ಇತ್ಯುಕ್ತಾಸನಾಪೇಕ್ಷಂ "ಓಂ ಧ್ಯಾನಾಚ್ಚ ಓಂ" ಇತ್ಯುಕ್ತಂ ಶ್ರೀ ವರಧ್ಯಾನಂ ವಕ್ತುಂ ಆರಭತೇ—"ಪಾದುಕೆ" ಇತಿ ‖ ಪಾದತ್ರಾಣವಾನ್ ‖ ಶರ್ಕರಾಕಂಟಕಾದಿಭ್ಯಃ ಯಥಾ ಉಪಾನತ್‌ಪದಂ ಶಿವಂ" ಇತಿ ಭಾಗವತೇ ‖ " ಹೃಷೀಕಪ " ಇತಿ ‖ ಓಂ * ಇಂದ್ರಾಯ ದ್ಯಾವ ಓಷಧೀರುತಾಪಃ ಪತಿಂ ವೋ ಅಧ್ನ್ಯಾನಾಮ್ ‖ ರಯಿ ರಕ್ಷಂತಿ ಜೀರಯೋ ವನಾನಿ ಧೇನೂನಾ ಮಿಕ್ಷುಧ್ಯಸೌ ‖ ಓಂ ‖ ಇಂದ್ರಿಯಾದೀನಿ ರಕ್ಷತಿ ಇತ್ಯನೇನ ಇಂದ್ರಿಯಗಣ ನಿಷೇವ್ಯತ್ವಂ ತತ ಏವ ತತ್ಸ್ವಾಮಿತ್ವಂ ತಸ್ಪದಾರ್ಥಃ ‖ ಗೈಸವು = ಮಾಡವು ‖ ೧ ‖

## ಕನ್ನಡಾರ್ಥ

"ಹೃಷೀಕೇಶ – ಶ್ರೀ ಹರಿಯ ಮೂರ್ತಿಗಳನ್ನು ಆದರದಿಂದ ನೆನೆಯುವ ಸಾತ್ವಿಕ ಭಕ್ತರಿಗೆ ಪ್ರಮಾದದಿಂದ ಆಕಸ್ಮಿಕವಾಗಿ ಸಂಭವಿಸುವ ಅಪರಾಧ ದುರಿತಗಳು–ಮೋಕ್ಷಮಾರ್ಗಕ್ಕೆ ತಡೆಯನ್ನು ಮಾಡುವದಿಲ್ಲ" ಎಂದು ಹೇಳುತ್ತಾರೆ. "ಆಸೀನಃ ಸಂಭವಾತ್" ಆಸನದಲ್ಲಿ ನಿರೂಢನಾಗಿಯೇ ಉಪಾಸನವನ್ನು ಮಾಡಬೇಕು. ಆಸನದಲ್ಲಿದ್ದು ಉಪಾಸನವನ್ನು ಮಾಡಿದರೇಯೇ ಆ ಉಪಾಸನವು (ಧ್ಯಾನವು) ಯುಕ್ತವಾಗುತ್ತದೆ" ಎಂದು ಧ್ಯಾನೋಪಾಸನೆಗೆ ಮುಖ್ಯವಾದ ಅಂಗವು "ಆಸನ" ಎಂದು ಹೇಳಲಾಗಿರುತ್ತದೆ. ಮತ್ತು ಭಗವಂತನಲ್ಲಿ ನಿರಂತರವಾದ ಅಖಂಡ ಸಂಸ್ಮರಣೆಯೇ ಧ್ಯಾನವೆನಿಸುತ್ತದೆ. ಇಂಥ ಧ್ಯಾನವು ಆಸನವಿಲ್ಲದೇ ನಡೆಯುವದಿಲ್ಲವಾದುದರಿಂದ ಧ್ಯಾನೋಪಾಸನೆಗೆ ಅಂಗವಾಗಿ ಆಸನಾದಿ ನಿಯಮಗಳನ್ನು ಅವಶ್ಯವಾಗಿ ಅನುಷ್ಠಿಸತಕ್ಕದ್ದು" ಎಂದು ಬ್ರಹ್ಮಸೂತ್ರದಲ್ಲಿ ಹೇಳಲಾಗಿರುತ್ತದೆ. ಆದುದರಿಂದ ಸೂತ್ರದಲ್ಲಿ ಹೇಳಲ್ಪಟ್ಟ ಈ ಧ್ಯಾನೋಪಾಸನೆಯನ್ನು ಹೇಳಲು ಶ್ರೀ ದಾಸವರ್ಯರು ಉಪಕ್ರಮಿಸುತ್ತಾರೆ. "ಪಾದುಕೆಯು" ಎಂಬ ಪದ್ಯದಿಂದಾರಂಭಿಸಿ "ಪಾದರಕ್ಷೆಯು ಮುಳ್ಳು ಹರಳು (ಕಲ್ಲು) ಗಳಿಂದ ಪಾದವನ್ನು ಹೇಗೆ ಸಂರಕ್ಷಿಸುತ್ತದೆಯೋ ಹಾಗೆ ಪರಮಾತ್ಮನ ಪಾದಧ್ಯಾನವು ಭಕ್ತರನ್ನು ಪಾಪಗಳಿಂದ ಸಂರಕ್ಷಿಸುತ್ತದೆ" ಎಂದು ಭಾಗವತದಲ್ಲಿ ಹೇಳಲಾಗಿರುತ್ತದೆ. "ಹೃಷೀಕಪ" ಎಂಬ ನಾಮವು ಸಹಸ್ರನಾಮಾಂತರ್ಗತವಾಗಿರುತ್ತದೆ. "ಹೃಷೀಕೇಶ" ಎಂಬುದು ಮೂಲನಾಮ. ಇದರ ಅರ್ಥವನ್ನು ಬೃಹತೀಮಂತ್ರವು ವಿವರಿಸುತ್ತದೆ. ಇಂದ್ರಿಯ ಮುಂತಾದವುಗಳನ್ನು ರಕ್ಷಿಸುತ್ತಾನೆ. ಹಾಗೂ ಇಂದ್ರಿಯಾಭಿಮಾನಿ ದೇವತೆಗಳು ಶ್ರೀ ಹರಿಯನ್ನು ಸಂಸೇವಿಸುವವರಿಂದ ಪರಮಾತ್ಮನು ಇಂದ್ರಿಯ ಸ್ವಾಮಿಯಾದುದರಿಂದ "ಹೃಷೀಕೇಶ" – "ಹೃಷೀಕಪ" ಎಂದು ಅವನನ್ನು ಕರೆಯುತ್ತಾರೆ.

"ಗೈಸವು" = "ಮಾಡಲಾರವು." ॥ ೧ ॥

**ಅವತರಣಿಕಾ :** ಶ್ರೀಹರಿಯ ಧ್ಯಾನವು ಸಕಾಮನಾ ಎಂದರೆ ಫಲ ಇಚ್ಛಾದಿಂದ ಸರ್ವಥಾ ಮಾಡಬಾರದು. ಫಲರಾಹಿತ್ಯ ಬುದ್ಧಿಯಿಂದ ಏನೇನೂ ಅಪೇಕ್ಷಿಸದೇ ಭಗವಂತನ ಪ್ರೀತಿ, ಭಗವಂತನ ಅಪರೋಕ್ಷಗೋಸುಗವಾಗಿಯೇ ಮಾಡಬೇಕೆಂದು ನಂದಾದೀಪದ ದೃಷ್ಟಾಂತಪೂರ್ವಕ ಹೇಳುತ್ತಾರೆ.

ಮೂಲ :

**ಹಗಲು ನಂದಾದೀಪದಂದದಿ ।**
**ನಿಗಮವೇದ್ಯನ ಪೂಜಿಸುತ ಕೈ ।**
**ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ ।**
**ಜಗದುದರ ಕೊಟ್ಟುದನು ಭುಂಜಿಸು ।**
**ಮಗ ಮಡದಿ ಪ್ರಾಣೇಂದ್ರಿಯಾತ್ಮಾ ।**
**ದಿಗಳು ಭಗವದಧೀನವೆಂದಡಿಗಡಿಗೆ ನೆನವುತಿರು ॥ ೨ ॥**

**ಪದ್ಯಾರ್ಥ :** ಹಗಲು = ಹಗಲುಹೊತ್ತಿನಲ್ಲಿ ಸೂರ್ಯನ ಮಹಾ ಪ್ರಕಾಶವಿರುತ್ತದೆ. ಸೂರ್ಯನ ಪ್ರಕಾಶದ ಮುಂದೆ ದೀಪದ ಪ್ರಕಾಶ ಏನೂ ಉಪಯೋಗ ಬೀಳದಿದ್ದರೂ, ಹಗಲಿನಲ್ಲಿ ಶ್ರೀಹರಿಯ ಮುಂದೆ, ಶ್ರೀಹರಿಯ ಪ್ರೀತಿಗೋಸುಗ, ನಂದಾ = ನಂದದ, ಆನಂದವನ್ನು ಕೊಡುವ, ದೀಪ= ಸದಾ ಭಗವಂತನ ಎದುರಿಗೆ ಹಚ್ಚುವ ದೀಪವು, ನಂದಾದೀವಿಗೆ, ನಂದಾದೀಪ. (ಆ ದೀಪವು ನನ್ನದೆಂದು ಶ್ರೀಹರಿ ಸಂತುಷ್ಟತೆಯಿಂದ ಸ್ವೀಕರಿಸುವನು) ಹೀಗೆ ನಿರ್ವ್ಯಾಜ ಭಕ್ತಿಯಿಂದ ಫಲರಾಹಿತ್ಯನಾಗಿ ಹಗಲು ದೇವರ ಮುಂದೆ ಹಚ್ಚುವ ಆನಂದದಾಯಕವಾದ ಪ್ರಕಾಶಮಾನ ದೀಪದಂತೆ, ನಿಗಮ ವೇದ್ಯನ = ವೇದವೇದ್ಯನ ವೇದಸ್ತುತ್ಯನಾದ ಹರಿಯನ್ನು, ಪೂಜಿಸುತ = ಧ್ಯಾನದಲ್ಲಿಟ್ಟು ನೆನೆದು, ಧ್ಯಾನೋಪಾಸನೆಯ ಪೂಜಾ ಶ್ರೀ ವಿಜಯದಾಸರ ಸುಳಾದಿಯಂತೆ, ಪದಪದಾರ್ಥಗಳನ್ನು ಮನದಿ ಧ್ಯಾನಮಾಡಿ, ತದಭಿಮಾನಿ ದೇವತೆಗಳನ್ನೂ ತದ್ಗತನಾದ ಹರಿಯ ರೂಪಗಳನ್ನೂ ಬಿಂಬೈಕ್ಯ ಚಿಂತಿಸುತ್ತಾ ಪೂಜಾಮಾಡಿ, ಕೈ ಮುಗಿದು = ನವ್ರಭಾವದಿಂದ ತಲೆಬಗ್ಗಿಸಿ ಕೈಗಳನ್ನು ಮುಗಿದು, ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೇ = ಧರ್ಮ ಅರ್ಥ ಕಾಮ-ಮೋಕ್ಷವನ್ನು ಸಹ ಬೇಡದೇ ಕೇವಲ ಹರಿಪ್ರೀತಿಗೋಸುಗ ವಾಗಿಯೇ ಪೂಜಾಮಾಡುವದು. ಜಗದುದರ ಕೊಟ್ಟದನು = ಸಕಲ ಜಗತ್ತು ಜೀವರನ್ನು ಉದರದಲ್ಲಿ ಧರಿಸಿದ ಹರಿಯು, ಯಾವ ಕಾಲಕ್ಕೆ ಏನು ತಂದೀ ವನೋ ಭುಂಜಿಸು, ಊಟಮಾಡು. ಹರಿ ಇಚ್ಛೆಯಿಂದ ಬಂದೊದಗಿದ ಸುಕರ್ಮ-ದುಷ್ಕರ್ಮ ಆಗಾಮಿ ಪ್ರಾರಬ್ಧಕರ್ಮಗಳನ್ನು ಸಂತೋಷದಿಂದ ಭುಂಜಿಸು-ಅನುಭವಿಸು. ಮಗ-ಪುತ್ರ, ಮಡದಿ-ದಾರಾ, ಹೆಂಡತಿ, ಪ್ರಾಣ =

ತನ್ನ ಪ್ರಾಣ ಇಂದ್ರಿಯಗಳು, ಆತ್ಮ-ದೇಹಾದಿಗಳು, ಸದಾ ಭಗವದಧೀನವೆಂದಡಿಗಡಿಗೆ ನೆನೆವುತಿರು = ಷಡ್ಗುಣೈಶ್ವರ್ಯಪೂರ್ಣನಾದ ಬಿಂಬನಾದ ಹರಿಯ ಆಧೀನವೆಂದು ಕಾಲಕಾಲಕ್ಕೆ ನೆನೆದು, ಎಲ್ಲವೂ ಶ್ರೀಹರಿಯಾಧೀನವೆಂದು ಚಿಂತಿಸಬೇಕು. ಇದೇ ಧ್ಯಾನ ಉಪಾಯ.

**ದ್ರೌಪದೀಶಪತಿ ವಿಠಲರು :** ಹಗಲು ನಂದಾದೀಪದಂದದಿ.

**ಭಾವಸೂಚನ :** ಸಕಾಮಾದ್ವಿಗುಣಾಃ ಪ್ರೋಕ್ತಾಃ ಕಾಮ್ಯೈಸ್ತು ಕೃತಾ ಕ್ರಿಯಾ || ಎಂಬಂತೆ ತಂತ್ರಸಾರದರ್ಥ ಹೇಳುತ್ತಾರೆ. ಹಗಲೇತಿ || ೨ ||

ಅನುಭಾವಿಕಂ ನಿವೃತ್ತಸೇವನೇ ನಿದರ್ಶನಮಾಹ — "ಹಗಲು" ಇತಿ || "ಮಡದಿ" – ಹೆಂಡತಿ || "ಅಡಿಗಡಿಗೆ" -- ಪ್ರತಿಕ್ಷಣಮ್ || ೩ ||

## ಕನ್ನಡಾರ್ಥ

ನಿವೃತ್ತಧರ್ಮಗಳನ್ನು ಸೇವಿಸುವದರಲ್ಲಿ ಅನುಭವೆದಲ್ಲಿ ಬಂದಿರುವ ನಿದರ್ಶನವನ್ನು-ದೃಷ್ಟಾಂತವನ್ನು ಹೇಳುತ್ತಾರೆ "ಹಗಲು" ಎಂಬ ಪದ್ಯದಿಂದ.

ಉಳಿದ ಯಾವ ಫಲವನ್ನೂ ಅಪೇಕ್ಷಿಸದೇ ಪರಮಾತ್ಮನ ಪ್ರೀತಿಯನ್ನೇ ಮುಖ್ಯ ಉದ್ದೇಶವನ್ನು ಮಾಡಿಕೊಂಡು ಭಗವಂತನ ಪೂಜಾರೂಪವಾದ ಕರ್ಮಗಳನ್ನು ಆಚರಿಸಬೇಕು. ಈ ವಿಷಯದಲ್ಲಿ ದೇವರಿಗೋಸುಗ ಹಚ್ಚುವ ಹಗಲು ನಂದಾದೀಪವು ದೃಷ್ಟಾಂತವಾಗಿರುತ್ತದೆ. ಹಗಲು ನಂದಾದೀಪವು ಬೆಳಕಿಗೋಸುಗವಾಗಲೀ ಮತ್ತಿನ್ನಾವ ಪ್ರಯೋಜನಕ್ಕೋಸುಗವಾಗಲೀ ಇರದೆ, ಕೇವಲ ದೇವರ ಪೂಜೆಗೋಸುಗವಾಗಿಯೇ ಇರುತ್ತದೆ. ಅದರಂತೆ ನಾವು ಮಾಡುವ ಕರ್ಮಗಳಿಗೆ ನಮ್ಮ ಪ್ರಯೋಜನಗಳನ್ನು ಉದ್ದೇಶ್ಯಮಾಡಿಕೊಳ್ಳದೇ "ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣುಪ್ರೀತ್ಯರ್ಥಂ" ಎಂದು ಹೇಳಿದಂತೆ ಶ್ರೀ ವಿಷ್ಣುಪ್ರೀತಿಯನ್ನು ಮಾತ್ರ ಉದ್ದೇಶ್ಯವನ್ನು ಮಾಡಿಕೊಂಡು ಆ ಕರ್ಮಗಳನ್ನು ಭಗವತ್ಪೂಜಾರೂಪವಾಗಿ ಆಚರಿಸತಕ್ಕದ್ದು. "ಮಡದಿ" – ಹೆಂಡತಿ, "ಅಡಿಗಡಿಗೆ" – ಪ್ರತಿಕ್ಷಣ.

ದೈವಪ್ರೇರಣೆಯಿಂದ ತಾನಾಗಿಯೇ ಬಂದ ವಿಷಯಗಳನ್ನು ಭಗವತ್ಪ್ರಸಾದವೆಂದು ಅನುಭೋಗಿಸುತ್ತ, ನಿಷ್ಕಾಮಕರ್ಮದಿಂದ ಹರಿಯನ್ನು ಪೂಜಿಸುತ್ತ, ದಾರಾಪುತ್ರ ಮುಂತಾದ ಸಕಲ ವಸ್ತುಗಳು ಅವನ ಅಧೀನವೆಂದು ಕ್ಷಣಕ್ಷಣಕ್ಕೆ

ನೆನೆಯುತ್ತ, ಭಗವದನುಚಿಂತನೆಯಲ್ಲಿಯೇ ಕಾಲಕ್ಷೇಪಮಾಡುವುದು "ನಿಷ್ಕಾಮ ಸೇವನೆ" ಎಂದು ಅನ್ನಿಸಿಕೊಳ್ಳುತ್ತದೆ. ॥ ೨ ॥

**ಅವತರಣಿಕಾ :** ಉತ್ತಮರ ಆಧೀನ ಅವರರಾಗಿರುತ್ತಾರೆ. ಅವರನಾದ ಜೀವಸ್ವಭಾವ, ಉತ್ತಮನಾದ ಶ್ರೀ ಹರಿಯ ಗುಣೋತ್ಕರ್ಷಗೈಯ್ಯುತ್ತಾರೆ. ಜೀವರು ಸದಾ ದಾಸರು, ಶ್ರೀ ಹರಿಯು ಈಶನು, ಸರ್ವರಿಂದ ಉಪಾಸ್ಯನೆಂದು ಉಪದೇಶಿಸುತ್ತಾರೆ.

ಮೂಲ :

**ಅಸ್ವತಂತ್ರನು ಜೀವ ಹರಿ ಸ ।**
**ರ್ವಸ್ವತಂತ್ರನು ನಿತ್ಯ ಸುಖಮಯ ।**
**ನಿತ್ಯ ಬದ್ಧಾಲ್ಪಜ್ಞ ಶಕ್ತಿ ಸದುಃಖ ನಿರ್ವಣ್ಯ ॥**
**ಹೃಸ್ವದೇಹಿ ಸನಾಥಜೀವನು ।**
**ವಿಶ್ವವ್ಯಾಪಕ ಕರ್ತೃಬ್ರಹ್ಮ ಸ ।**
**ರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು ॥ ೩ ॥**

**ಪದ್ಯಾರ್ಥ :** ಜೀವನು, ಅಸ್ವತಂತ್ರನು = ಸದಾ ಹರಿಯ ಆಧೀನನು. ಹರಿ ಸರ್ವಸ್ವತಂತ್ರನು = ಬಿಂಬನಾದ ಶ್ರೀ ಹರಿಯು, ಸರ್ವಸ್ವತಂತ್ರ = ನಿರ್ದೋಷ, ಕರ್ತಾಕಾರಯಿತಾ ಪ್ರಭು, ಶ್ರೀ ಹರಿಯು, ನಿತ್ಯ = ಸದಾ ಸುಖಮಯ, ಸುಖಪೂರ್ಣ – ಆನಂದಪೂರ್ಣನು, ಜೀವನು, ನಿತ್ಯಬದ್ಧ = ಶ್ರೀ ಹರಿ ಇಚ್ಛಾವೆಂಬ ಪ್ರಕೃತಿಯಿಂದ ಸದಾಕಾಲದಲ್ಲೂ ಬದ್ಧನಾಗಿರುವನು. ಮುಕ್ತಿಯಲ್ಲೂ ಶ್ರೀ ಹರಿಯ ಸ್ವರೂಪೇಚ್ಛಾದಿಂದ ಬದ್ಧನಾಗಿರುವನು, ಜೀವನು ಅಲ್ಪಜ್ಞ = ಸ್ವಲ್ಪ ತಿಳಿದವನು, ಅಲ್ಪಶಕ್ತಿ = ಸ್ವಲ್ಪ ಶಕ್ತಿಯುಳ್ಳವನು, ಸದುಃಖ ನಿರ್ವಿಣ್ಯ = ಸಂಸಾರಾವಸ್ಥೆಯಲ್ಲಿ ದುಃಖದಿಂದ ಕೂಡಿದವನಾಗಿರುವನು ಮತ್ತು ನಿರ್ವಿಣ್ಯ = ಭಯದುಃಖಾದಿಗಳಿಂದ ತುಂಬಿದ ಚಿಂತಾಕ್ರಾಂತನು, ಹೃಸ್ವದೇಹಿ = ಅಣ್ವಾತ್ಯಣುವಾದ ದೇಹವುಳ್ಳವ, ಸನಾಥಜೀವನು = ಸದಾ ಜೀವನಿಗೆ ಒಡೆಯ–ನಾಥನು ಶ್ರೀಹರಿಯೇ ಆಗಿರುವನು. ಹೀಗೆ ಜೀವನು ಅಸ್ವತಂತ್ರನು, ಅಲ್ಪಶಕ್ತಿ, ಅಲ್ಪಜ್ಞಾನಿ, ಅತ್ಯಣುಪರಾಧೀನತೆ ಮೊದಲಾದ ದೋಷಗಳಿಂದ ಯುಕ್ತನಾದವನು. ಶ್ರೀ ಹರಿಯು, ವಿಶ್ವವ್ಯಾಪಕನು = ಸಕಲ ಜೀವಜಡಾತ್ಮಕವಾದ ಬ್ರಹ್ಮಾಂಡ ಪಿಂಡಾಂಡ, ಬಹಿರ್‌ಬ್ರಹ್ಮಾಂಡದಲ್ಲಿ ವ್ಯಾಪಿಸಿದ ಮಹದ್ರೂ

ಪನು. ಕರ್ತೃ = ಸ್ವತಂತ್ರ ಕರ್ತೃವಾದವನು, ಬ್ರಹ್ಮ = ಬ್ರಹ್ಮದೇವರು, ಸರಸ್ವತೀ = ಸರಸ್ವತಿದೇವಿಯರೂ, ಈಶ = ರುದ್ರದೇವರೇ ಮೊದಲಾದ, ಅಮರನುತ = ದೇವತೆಗಳಿಂದ, ನುತ = ವಂದನೆ ಸ್ತೋತ್ರಗಳನ್ನು ಮಾಡಿಸಿ ಕೊಳ್ಳುವ ಮಹಾಸಮರ್ಥನು ಶ್ರೀ ಹರಿಯು, ಎನ್ನ ಬಿಂಬನೇ ಸರ್ವರಬಿಂಬ ಸರ್ವವ್ಯಾಪಕನೆಂದು, ಕೊಂಡಾಡು = ಸ್ತೋತ್ರಮಾಡು.

**ದ್ರೌಪದೀಶಪತಿ ವಿಠಲರು :** ಅಸ್ವತಂತ್ರನು ಜೀವ.

**ಭಾವಸೂಚನ :** ಅಸ್ವತಂತ್ರೇತಿ ॥ "ಆತ್ಮಾಹಿ ಪರಮ ಸ್ವತಂತ್ರೋ ಅಧಿಗುಣೋ ಜೀವೋಲ್ಪಶಕ್ತಿ ರಸ್ವತಂತ್ರೋಽವರ ಇತಿ ಭಾಲ್ಲವೇಯ್ಯಶ್ರುತೇಃ ॥ ಪರಮಃಸ್ವತಂತ್ರಃ । ಸ್ವಸತ್ತಾದೌ ಪರಾನಪೇಕ್ಷಃ । ಅಧಿಗುಣಃ । ಪೂರ್ಣ ಗುಣಃ ॥ ೩ ॥

ಧ್ಯಾನಾರ್ಥಂ ಧ್ಯೇಯಂ ಬಿಂಬಂ ಪ್ರತಿಬಿಂಬಂ ಚಾಹ "ಅಸ್ವತಂತ್ರ" ಇತಿ ॥ "ಅಸ್ವತಂತ್ರಃ ಅವರಃ ಸ ದುಃಖೀ" ॥ "ಅಲ್ಪಶಕ್ತಿಃ ಅಸಾರ್ವಜ್ಞ್ಯಮ್" ಇತಿ ಚ ॥ "ನಿಸ್ವಃ" ನಿರ್ದ್ರವ್ಯಃ ॥ ಅಲ್ಪಪದಂ ಶಕ್ತಾವಪಿ ಅನ್ವಯಿ ॥ ೩ ॥

### ಕನ್ನಡಾರ್ಥ

ಧ್ಯಾನೋಪಾಸನೆಗೆ ಬೇಕಾಗುವ–ಧ್ಯೇಯ ಮೂರುತಿಬಿಂಬನನ್ನೂ–ಪ್ರತಿ ಬಿಂಬವನ್ನೂ ಹೇಳುತ್ತಾರೆ– "ಅಸ್ವತಂತ್ರ" ಎಂಬುದಾಗಿ. ಜೀವನು ಅಸ್ವ ತಂತ್ರನು; ಎಂದರೆ ಕೇವಲ ಪರಾಧೀನನೆಂದೇ ಅರ್ಥವಲ್ಲ. "ಪರಮ ಪರತಂತ್ರನು, ಬಹಳೇ – ಅನಂತಾನಂತಕೋಟಿ ಗುಣದಕಿಂತಲೂ ಕಡಿಮೆ ಯಾದವನು; ದುಃಖ ಮುಂತಾದ ದೋಷಭರಿತನೂ" ಎಂದು ಹೆಚ್ಚಿನ ಅರ್ಥ ಗಳನ್ನೂ "ಅಸ್ವತಂತ್ರನು" ಎಂಬ ಪದವು ಸೂಚಿಸುತ್ತದೆ. ಜೀವನು ಅಲ್ಪಶಕ್ತಿ ಜ್ಞಾನ ಮುಂತಾದ ಗುಣಗಳುಳ್ಳವನು; ಅವನು ಅಪೂರ್ಣಜ್ಞಾನಿಯು." ಎಂಬುದಾಗಿ ಪ್ರಮಾಣಗಳಿರುತ್ತವೆ. "ಅಲ್ಪ" ಎಂಬ ಪದವು, ಶಕ್ತಿಯು ಅಲ್ಪವೆಂದೂ ಜ್ಞಾನಯೋಗ್ಯತೆಗಳೂ ಅಲ್ಪವೆಂದೂ, ಸ್ವತಃ ಜೀವನೇ ಅಲ್ಪ ನೆಂದೂ ಅಭಿಪ್ರಾಯವನ್ನು ಹೇಳುತ್ತದೆ.

"ನಿಸ್ವ" ಎಂಬ ಪದಕ್ಕೆ "ದ್ರವ್ಯವಿಲ್ಲದವನು" ಎಂದು ಅರ್ಥವು. ॥ ೩ ॥

**ಅವತರಣಿಕಾ :** ಭೂಮಿರಾಪೋನಲೋವಾಯು ಎಂಬಂತೆ ಮೊದಲಿಗೆ, ಪ್ರಕೃತಿ ಗುಣ ಪ್ರವರ್ತಕನಾದ ಶ್ರೀಹರಿಯ ರೂಪಗಳನ್ನು ವಿಶದೀಕರಿಸುತ್ತಾರೆ.

ಈ ಪ್ರಕೃತಿಗತ ರೂಪಗಳೇ ನಾಡಿಗಳಿಗೆ ರಸೋಪಚಾಯಕವೆಂದು ಉಪದೇಶ ಗೈಯ್ಯುತ್ತಾರೆ.

ಮೂಲ :

**ಮತ್ತೆ ವಿಶ್ವಾದ್ಯೆಂಟು ರೂಪೊಂ ।**
**ಭತ್ತರಿಂದಲಿ ಪೆಚ್ಚಿಸಲು ಎ ।**
**ಪ್ಪತ್ತೆರಡು ರೂಪಗಳಹವು ಒಂದೊಂದೆ ಸಾಹಸ್ರ ॥**
**ಪೃಥ್ಪೃಥಕು ನಾಡಿಗಳೊಳಗೆ ಸ ।**
**ರ್ವೋತ್ತಮನ ತಿಳಿಯೆಂದು ಭೀಷ್ಮನು ।**
**ಬಿತ್ತರಿಸಿದನು ಧರ್ಮತನಯಗೆ ಭೀಷ್ಮ(ಶಾಂತಿ) ಪರ್ವದಲಿ॥೪॥**

**ಪದ್ಯಾರ್ಥ:** ಮತ್ತೆ =ಪುನಃ, ವಿಶ್ವಾದ್ಯೆಂಟುರೂಪ =ಓಂಕಾರವರ್ಣ ಪ್ರತಿಪಾದ್ಯ, ೧ ವಿಶ್ವ, ೨ ತೈಜಸ, ೩ ಪ್ರಾಜ್ಞ, ೪ ತುರ್ಯ, ೫ ಆತ್ಮ, ೬ ಅಂತರಾತ್ಮ, ೭ ಜ್ಞಾನಾತ್ಮ, ೮ ಪರಮಾತ್ಮನ ಈ ಎಂಟು ರೂಪಗಳಿಗೆ, ಒಂಭತ್ತರಿಂದ ಪೆಚ್ಚಿಸಲು, ಮೂಲಪ್ರಕೃತಿಗತ– ೧ ಅವ್ಯಕ್ತ, ೨ ಮಹತ್ತತ್ವ, ೩ ಅಹಂಕಾರ, ೪ ಮನಸ್‌ತತ್ತ್ವ, ೫ ಪೃಥ್ವಿ, ೬ ಅಪ್ಪು, ೭ ತೇಜ, ೮ ವಾಯು, ೯ ಆಕಾಶ– ಪಂಚಮಹಾಭೂತಗಳು ಕೂಡಿದರೆ ಒಂಭತ್ತು, ಆಗುತ್ತವೆ. ಅಥವಾ, ಪ್ರಕೃತಿ ಸತ್ವ, ರಜ–ತಮವೆಂದು ಮೂರು ವಿಧ. ಇದರೊಳಗೆ ಒಂದೊಂದರಲ್ಲಿ, ಸತ್ವ ಸತ್ವ, ಸತ್ವರಜ, ಸತ್ವತಮ ಮತ್ತು ರಜೋ ಗುಣದಲ್ಲಿ ರಜಸ್ಸತ್ವ, ರಜೋರಜ, ರಜತಮಃ; ತಮೋಗುಣದಲ್ಲಿ, ತಮಸ್ಸತ್ವ, ತಮೋರಜಃ ತಮೋ ತಮಃ ಹೀಗೆ ಒಂಭತ್ತು ಪ್ರಕೃತಿ ವಿಭಾಗ. ಇವುಗಳಲ್ಲಿ ವಿಶ್ವಾದಿ ರೂಪದಿಂದ ಪ್ರವರ್ತಿಸುವ ಹರಿಯ ರೂಪಗಳಿಂದ, ಹೆಚ್ಚಿಸಲು = ಗುಣಿಸಲು, ೮×೯ =೭೨ ರೂಪಗಳಾಗುತ್ತವೆ, ಬೃಹತೀ ಸಹಸ್ರ ಛಂದೋ ಮಯ ರೂಪಗಳು. ೭೨ಕ್ಕೆ ಸಹಸ್ರದಿಂದ ಗುಣಿಸಿದರೆ ಎಪ್ಪತ್ತೆರಡು ಸಾವಿರ ರೂಪಗಳಾಗುತ್ತವೆ. ಪೃಥ್ಪೃಥಕುನಾಡಿಗಳೊಳಗೆ = ಈ ಎಪ್ಪತ್ತೆರಡುಸಾವಿರ ನಾಡಿಗಳೊಳಗೆ, ಸರ್ವೋತ್ತಮನ =ಸರ್ವರಲ್ಲಿ ಶ್ರೇಷ್ಠನಾದ ಶ್ರೀಹರಿಯ ರೂಪಗಳನ್ನು ತಿಳಿಯಬೇಕೆಂದು, ಭೀಷ್ಮನು = (ಶಂತನು ಚಕ್ರವರ್ತಿ ಪುತ್ರ ನಾದ ಭೀಷ್ಮಾಚಾರ್ಯರು) ಧರ್ಮತನಯಗೆ, ಯಮಧರ್ಮನ ಪುತ್ರನಾದ ಧರ್ಮರಾಜನಿಗೆ, ಬಿತ್ತರಿಸಿದನು =ವಿವರಿಸಿ ಹೇಳಿದನು. ಇದು ಭೀಷ್ಮ

ಪರ್ವದಲಿ = ಮಹಾಭಾರತಗತ ಭೀಷ್ಮಪರ್ವದಲ್ಲಿ, ಭೀಷ್ಮ ಧರ್ಮರಾಜರ ಸಂವಾದವಿದೆಂದು ಹೇಳುತ್ತಾರೆ.

**ದ್ರೌಪದೀಶಪತಿ ವಿಠಲರು :** ಮತ್ತೆ ವಿಶ್ವಾದ್ಯೈಂಟು. ವಿಶ್ವಾದಿ ೮ ರೂಪ ೯ ಒಂಭತ್ತರಿಂದ ಹೆಚ್ಚಿಸಬೇಕು. ಒಂಭತ್ತರ ವಿವರ. ಪಂಚಭೂತ (೫) ಮತ್ತು ನಾಲ್ಕು ಅವ್ಯಕ್ತಾದಿ ತತ್ವಗಳು, ಹೀಗೆ ಒಂಭತ್ತು ಮೇಲಿನ ವಿಶ್ವಾದಿ ೮ ರೂಪಗಳು ತದಂತರ್ಗತ ಚಿಂತನೆಮಾಡಿ ಹೆಚ್ಚು ಹೆಚ್ಚು ಗುಣಿಸಿದರೆ ೭೨, ಒಂದೊಂದೆ ಸಾಹಸ್ರ ೭೨ ಸಾವಿರ ಪ್ರಥುಕುನಾಡಿಗಳೊಳಗೆ ತಿಳಿವುದು.

**ಪ್ರಕಾರಾಂತರ :** ಗುಣತ್ರಯಗಳು ಮೂರು, ಒಂದರೊಳಗೆ ಮೂರು ಮೂರು ಒಟ್ಟು (೯).

**ಭಾವಸೂಚನ :** ಮತ್ತೇತಿ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿ

"ಮತ್ತೆ" ಇತಿ || "ಪೆಚ್ಚಿಸಲು" – ಗುಣಿಸಲು. ನಾಡೀ ವಿಚಾರಃ ಪ್ರಮಿತಃ ಇತ್ಯಾಹ – "ಭೀಷ್ಮ" ಇ

## ಕನ್ನಡಾರ್ಥ

ಧ್ಯಾನಪ್ರಕ್ರಿಯಾಸಂಧಿಯಾದುದರಿಂದ – "ದೇಹಗತ ೭೨ ನಾಡಿಗಳಲ್ಲಿ ಭಗವಂತನ ೭೨ ರೂಪಗಳನ್ನು ಚಿಂತಿಸಬೇಕು ;" ಎಂದು ದಾಸವರ್ಯರು ನಿರೂಪಿಸುತ್ತಾರೆ – "ಮತ್ತೆ" ಎಂಬ ಪದ್ಯದಿಂದ ವಿಶ್ವ ಮುಂತಾದ ಎಂಟು ರೂಪಗಳಿಗೆ ಒಂಭತ್ತರಿಂದ ಗುಣಿಸಲು ೭೨ ರೂಪಗಳಾಗುವವು. ಮೂಲ ಪ್ರಕೃತಿಯನ್ನು ಪರಿಗಣಿಸಿ – ಪಂಚಮಹಾ ತಗಳು – ಮನಸ್ಸು, ಅಹಂಕಾರ, ಮಹತ್ತತ್ವಗಳನ್ನು ಸೇರಿಸಿ ೯ ಪ್ರಕೃತಿಗ ುವವು. ಇವುಗಳಲ್ಲಿ ೮ ರೂಪ ಗಳಿಂದ ಇರಲು ೭೨ ರೂಪಗಳಾಗುವವು. ವುಗಳಿಗೆ ಸಾವಿರದಿಂದ ಗುಣಿಸಿದರೆ ೭೨೦೦೦ ಆಗುತ್ತವೆ. ಹೀಗೆ ನಾಡೀಗತ ಭಗವಂತನ ರೂಪಗಳನ್ನು ಚಿಂತಿಸುವದು, ಪ್ರಮಾಣಗಳಿಂದ ಸಮ್ಮತವಾಗಿರುತ್ತದೆ" ಎಂದು ಹೇಳಲು–"ಭೀಷ್ಮನು ಧರ್ಮತನಯುಗೆ ಪೇಳಿದನು" ಎಂದು ಹೇಳಿ ಭೀಷ್ಮ– ಧರ್ಮರಾಜರ ಸಂವಾದ ರೂಪವಾದ ಶಾಂತಿಪರ್ವ ಮಹಾಭಾರತ–ಭಾಗವತ ಮುಂತಾದ ಪುರಾಣಗಳೇ ಆಧಾರವೆಂದು ಸೂಚಿಸುತ್ತಾರೆ. || ೪ ||

**ಅವತರಣಿಕಾ :** ಎಂಟು ಪ್ರಕೃತಿಗಳಾವವು, ಅವುಗಳ ಗುಣಧರ್ಮವೇನು, ಪ್ರಕೃತಿಯ ಬಂಧಕತ್ವವು ಹೇಗೆ? ಭಗವಂತನೆ ಆ ಎಂಟು ಪ್ರಕೃತಿಗಳಿಗೆ ಪ್ರವರ್ತಕನೆಂದರಿತು ವಿಶ್ವಾದಿ ಎಂಟು ರೂಪಗಳನ್ನು ಧ್ಯಾನಗೈದರೆ, ಭಕ್ತರ ಆಪತ್ತೆನಿಸುವ ಲಿಂಗ ಭಂಗವನ್ನು ಮಾಡಿ ಮೋಕ್ಷಾನಂದವೀಯುವನೆಂದು ಉಪದೇಶಿಸುತ್ತಾರೆ.




ಮೂಲ :

**ಎಂಟು ಪ್ರಕೃತಿಗಳೊಳಗೆ ವಿಶ್ವಾ ।**
**ದ್ಯೆಂಟು ರೂಪದಲಿದ್ದು ಭಕತರ ।**
**ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ ॥**
**ನೆಂಟನಂದದಿ ಎಡೆಬಿಡದೆ ವೈ ।**
**ಕುಂಠ ರಮಣನು ತನ್ನವರ ನಿ ।**
**ಷ್ಕಂಟಕ ಸುಮಾರ್ಗದಲಿ ನಡೆಸುವ ದುರ್ಜನರ ಬಿಡುವ ॥೫॥**

**ಪದ್ಯಾರ್ಥ :** ಎಂಟು ಪ್ರಕೃತಿಗಳೊಳಗೆ ಗೀತಾ ಅಧ್ಯಾಯ ೭ ಶ್ಲೋಕ ೪ ರಲ್ಲಿ ಈ ಎಂಟು ಪ್ರಕೃತಿಗಳಾವುವೆಂಬುದನ್ನು ವಿವರಿಸಿರುವರು. "ಭೂಮಿರಾಪೋನಲೋವಾಯುಃ ಖಂಮನೋಬುದ್ಧಿರೇವ ಚ ॥ ಅಹಂಕಾರ ಇತೀಯಂಮೇ ಭಿನ್ನಾಪ್ರಕೃತಿರಷ್ಟಧಾ ॥ ೧ ಭೂಮಿ, ೨ ಆಪ = ಉದಕ, ೩ ಅನಳ = ತೇಜ, ೪ ವಾಯು, ೫ ಆಕಾಶ, ೬ ಮನಸ್ಸು, ೭ ಬುದ್ಧಿ, ೮ ಅಹಂಕಾರ, ಹೀಗೆ ೮ ಪ್ರಕೃತಿ. ಭೂಮ್ಯಾದಿ ಪಂಚಭೂತಗಳು ಮನಸ್‌ತತ್ವ ಬುದ್ಧಿತತ್ವ ಅಹಂಕಾರ ಪದದಿಂದ "**ಮಹತ್ತತ್ವ ಮುಪಲಕ್ಷಣೀಯಂ**" ಎಂದು ಗೀತಾ ವಿವೃತ್ತಿಕಾರರ ವಚನದಂತೆ ಕಾರ್ಯರೂಪವಾದ ಮಹತ್ತತ್ವವು ಕಾರಣರೂಪವಾದ ಅಹಂಕಾರ ತತ್ವದಲ್ಲೇ ಪರಿಗಣನೆ. ಹೀಗೆ ಈ ೮ ಪ್ರಕೃತಿಗಳು "ಮದಧೀನಾ ಪ್ರಕೃತಿರಷ್ಟಧಾ ಭಿನ್ನಾ । ಉದ್ದಿಷ್ಟಾಪೇಕ್ಷಯಾ **ಅಷ್ಟಧೇತ್ಯುಕ್ತಿಃ** ಉಪಲಕ್ಷಿತಾಪೇಕ್ಷಯಾ ನವವಿಧೇತಿ ಜ್ಞೇಯಂ ॥ ಮತ್ಪ್ರೇರಿತಾ ಪ್ರಕೃತಿ, ಪೃಥಿವ್ಯಾದಿ, ಕಾರ್ಯರೂಪೇಣೈವ ಭಿನ್ನೇತ್ಯರ್ಥಃ ॥ ಎಂಬ ಗೀತಾಪ್ರವೃತ್ತಿಯ ವಚನಾನುಸಾರವಾಗಿ ಈ ಎಂಟು ಪ್ರಕೃತಿಗಳೊಳಗೆ ೧) ಭೂಮಿಯಲ್ಲಿ–ವಿಶ್ವ, ೨) ಅಪ್ಪಿನಲ್ಲಿ–ತೈಜಸ, ೩) ತೇಜದಲ್ಲಿ–ಪ್ರಾಜ್ಞ, ೪) ವಾಯುವಿನಲ್ಲಿ–ತುರ್ಯ, ೫) ಆಕಾಶದಲ್ಲಿ–ಆತ್ಮ, ೬) ಮನದಲ್ಲಿ–ಅಂತರಾತ್ಮ, ೭) ಬುದ್ಧಿಯಲ್ಲಿ–ಪರಮಾತ್ಮ, ೮) ಅಹಂಕಾರದಲ್ಲಿ (ಇದರಲ್ಲಿಯೇ ಮಹತತ್ವ ಚಿಂತನೆ)–ಜ್ಞಾನಾತ್ಮ ಹೀಗೆ ಎಂಟು ರೂಪಗಳಿಂದ ಒಂದೊಂದು ಪ್ರಕೃತಿಯಲ್ಲಿ ಒಂದೊಂದು

ಭಿನ್ನಪ್ರಕೃತಿಗುಣಧರ್ಮಗಳಿಗೆ ಪ್ರವರ್ತಕ ರೂಪಗಳಿಂದ ಇದ್ದು, ಈ ಎಲ್ಲ ಪ್ರಕೃತಿಗಳನ್ನೂ ತನ್ನ ಆಧೀನದಲ್ಲಿಟ್ಟುಕೊಂಡು ಪ್ರಕೃತಿಬಂಧಕನು ಆಗಿರುತ್ತಾನೆಂದು ತಿಳಿದು ವಿಶ್ವಾದಿ ೮ ರೂಪ ಧ್ಯಾನಮಾಡಲು, ಭಕತರ = ಈ ಎಂಟು ರೂಪಗಳನ್ನು ಧ್ಯಾನಮಾಡುವ ತನ್ನ ಭಕ್ತರ, ಕಂಟಕ = ಮುಳ್ಳು, ಆಪತ್ತು ಸದೃಶವಾದ ಲಿಂಗದೇಹವನ್ನು, ಪರಿಹರಿಸುತ್ತ= ಪರಿಹಾರ ಮಾಡುತ್ತಾ ಭಂಗ ಮಾಡಿ, ಪ್ರತಿದಿನದಿ ಪಾಲಿಸುವ = ನಿತ್ಯಾನಂದವಾದ ಮೋಕ್ಷ ಸುಖವನ್ನು ಕೊಟ್ಟು ರಕ್ಷಿಸುವನು. ನೆಂಟನಂದದಿ ಎಡಬಿಡದೆ = ಆಪ್ತನಂದದಿ ಪರಮಾಪ್ತನಾದ ಹರಿಯು ಒಂದು ಕ್ಷಣವಾದರೂ ಬಿಡದೆ ನಿತ್ಯದಲ್ಲಿ, ವೈಕುಂಠರಮಣನು = ವೈಕುಂಠಲೋಕಕ್ಕೆ ಪತಿಯಾದ ಶ್ರೀಮನ್ನಾರಾಯಣನೇ ವಿಶ್ವಾದಿ ಅಷ್ಟರೂಪಗಳಿಂದ ಅಭಿನ್ನನಾದವನೇ ಎನ್ನ ಬಿಂಬನೆಂದು, ತನ್ನವರು = ಈ ಸುಜ್ಞಾನ ಉಳ್ಳ ತನ್ನ ಭಕ್ತರನ್ನು, ನಿಷ್ಕಂಟಕ = ಮುಳ್ಳು ಇಲ್ಲದ, ಒಳ್ಳೇ ಸುಮಾರ್ಗದಲ್ಲಿ = ಸನ್ಮಾರ್ಗವಾದ ಸಮೀಚೀನ ಜ್ಞಾನಭಕ್ತಿ ವಿರಕ್ತ್ಯಾದಿಗಳಿತ್ತು, ನೀವು ಮೋಕ್ಷಮಾರ್ಗವಾದ ಸಮೀಚೀನ ಹಾದಿಯಲ್ಲಿ ನಡೆಯಿರೆಂದು, ನಡೆಸುವನು = ತಾನೇ ಪ್ರೇರಕನಾಗಿ ಭಕ್ತರನ್ನು ನಡೆಸುವನು. ದುರ್ಜನರನ್ನು= ದುಷ್ಟರಾದ ತಮೋ ಅಜ್ಞಾನ ಉಳ್ಳ ದೈತ್ಯಾದಿಗಳನ್ನು, ಬಿಡುವ = ಈ ಸನ್ಮಾರ್ಗದಾರಿ ತೋರಿಸದೇ ಬಿಡುವನು, ಅಥವಾ ಬಡಿವ = ಅವರನ್ನು, ದುರ್ಜನರನ್ನು ಶಿಕ್ಷಿಸಿ ಅಧಂತಮಾದಿಗಳಲ್ಲಿ ಹಾಕುವನು.

**ವಿಶೇಷ ಸೂಚನೆ:** ಅಸಂಸೃಷ್ಟವಾದ ೮ ಪ್ರಕೃತಿಗಳಲ್ಲಿ ವಿಶ್ವಾದಿ ಎಂಟು ರೂಪಗಳಿಂದ ಇದ್ದು ಕಾರ್ಯಮಾಡುವನು. ಬ್ರಹ್ಮಾಂಡ ಪಿಂಡಾಂಡ ಸಂಸೃಷ್ಟವಾದ ತತ್ವಗಳಲ್ಲಿ – ಒಂದೊಂದು ಸಂಸೃಷ್ಟ ತತ್ವದಲ್ಲಿ ವಿಶ್ವಾದಿ ಒಂದೊಂದು ಸಂಸೃಷ್ಟರೂಪದಿಂದ ಕಾರ್ಯಮಾಡುವನೆಂದು ತಿಳಿಯಬೇಕು. ಹೀಗೆ ೯ × ೮ = ೭೨ ಆಗುತ್ತವೆ ಎಂಬ ನಿಜವಾದ ಜ್ಞಾನವಿರಬೇಕು.

ಜಡತತ್ವ ಪ್ರಕೃತಿಲಕ್ಷಣಗಳು — ಭಾಗವತದಲ್ಲಿ ಹೇಳಿರುವಂತೆ ಸೃಷ್ಟಿಪ್ರಸುಳಾದಿ ಹಿನ್ನುಡಿ ಪುಟ ೫೦–೫೧ ರಲ್ಲಿ ವಿಸ್ತಾರವಾಗಿ ಆಪ್ರಕೃತಿ ಲಕ್ಷಣ ಗುಣ ಧರ್ಮಗಳನ್ನು ತಿಳಿಯುವದು ಆವಶ್ಯಕ.

೧. **ಅವ್ಯಕ್ತತತ್ವ** — ೧) ಸ್ವಚ್ಛತ್ವ, ೨) ನಿರ್ಮಲತ್ವ, ೩) ಅವಿಕಾರಿತ್ವ, ೪) ಶಾಂತತ್ವ.

**೨. ಮಹತ್ತತ್ವ**—೧) ಸ್ವಚ್ಛತ್ವ, ೨) ಅಲ್ಪವಿಕಾರತ್ವ, ೩) ಶಾಂತತ್ವ, ೪) ಪ್ರಸನ್ನತ್ವ, ೫) ಜ್ಞಾನಪ್ರಧಾನತ್ವ — ಈ ಎರಡೂ ಪ್ರಕೃತಿಜ್ಞಾನ ಪ್ರಧಾನಗಳು.

**೩. ಅಹಂಕಾರದಲ್ಲಿ** — ( ಕ್ರಿಯಾಪ್ರಧಾನ ) ವೈಕಾರಿಕ, ತೈಜಸ ತಾಮಸ ಬೇಧತ್ರಯ = ಇದೇ ಬಂಧಕತ್ವ, ವೈಕಾರಿಕದಲ್ಲಿ — ೧) ಕರ್ತೃತ್ವ, ೨) ಶಾಂತತ್ವ.

ಕರ್ತೃತ್ವದಲ್ಲಿ — **ಮನಸ್ಸು ಚಂಚಲ** ಸಂಶಯಜನಕತ್ವ, ಸಾಮಾನ್ಯ ಜ್ಞಾನಜನಕತ್ವ, ಚಂಚಲ ಸಂಶಯ, ವಿಶೇಷ ವಿಚಾರೇಣ ನಿವೃತ್ತಿ.

**ಬುದ್ಧಿತತ್ವ ಲಕ್ಷಣ :** ೧) ವಿಶೇಷಜ್ಞಾನ ಜನಕತ್ವ, ೨) ಅಸಂಶಯ ಜನಕತಾ (ನಿಶ್ಚಿತತತ್ವ) ಚಂಚಲಸ್ಮೃತಿ, ವಿಶೇಷ ವಿಮರ್ಶದಿಂದ ನಿವೃತ್ತಿ ||

ಶಾಂತತ್ವದಿಂದ ಚಿತ್ತ = ಸ್ಥಿರಸ್ಮೃತಿ ಹೀಗೆ ವೈಕಾರಿಕ - ಅಹಂಕಾರ ಲಕ್ಷಣಗಳು.

**ತೈಜಸಾಹಂಕಾರಲಕ್ಷಣ:** ೧ ಕರಣತ್ವ, ೨ ಘೋರತ್ವ. ಕರಣತ್ವದಿಂದ, ೧ ತೈಜಸ ಬುದ್ಧಿಕಾರ್ಯ-೨ ಜ್ಞಾನೇಂದ್ರಿಯ ಪ್ರೇರಕತ್ವ.

**ಘೋರತ್ವ ಅಹಂಕಾರದಿಂದ :** ಕ್ರಿಯಾಶಕ್ತಿತ್ವ, ಕರ್ಮೇಂದ್ರಿಯ ಪ್ರೇರಕತ್ವ.

ತಾಮಸಾಹಂಕಾರ ಕಾರ್ಯಲಕ್ಷಣ, ೧ ಕಾರ್ಯತ್ವ, ೨ ವಿಮೂಢತ್ವ, ೧ ಕಾರ್ಯತ್ವ =ಪಂಚತನ್ಮಾತ್ರಾಗಳು. ೨ ವಿಮೂಢತ್ವ =ಪಂಚಭೂತಗಳು.

ತೈಜಸಾಹಂಕಾರ ಕರಣತ್ವದಿಂದ ಜ್ಞಾನೇಂದ್ರಿಯ ಪ್ರೇರಕತ್ವ ಹೇಳಿದ್ದು ಪಂಚಜ್ಞಾನೇಂದ್ರಿಯ, ಕರ್ಮೇಂದ್ರಿಯ, ತನ್ಮಾತ್ರಾದಿ ಲಕ್ಷಣಗಳು, ಸೃಷ್ಟಿ ಸುಳಾದಿ ಹಿನ್ನುಡಿ ಪುಟ ೫೧-೫೨-೫೩ರಲ್ಲಿ ನೋಡುವದು. ಇಲ್ಲಿ ಈ ಪ್ರಕೃತಿಗಳ ವಿಚಾರ ಹೇಳಿಲ್ಲ. ಈ ಎಲ್ಲವೂ ಅಹಂಕಾರದಲ್ಲೇ ಅಡಗಿವೆ.

ಪಂಚಭೂತಗಳ ಸತ್ವಾಂಶವೇ ಜ್ಞಾನೇಂದ್ರಿಯ. ರಜೋಂಶವೇ ಕರ್ಮೇಂದ್ರಿಯ, ತಮೋಂಶವೇ ಪಂಚತನ್ಮಾತ್ರಾದಿಗಳೆಂದು ನೆನಪಿನಲ್ಲಿಡತಕ್ಕದ್ದು.

ಇನ್ನು **ಪಂಚಮಹಾಭೂತಲಕ್ಷಣ, ಪ್ರಕೃತಿ ಗುಣಧರ್ಮ.**

**೧. ಆಕಾಶ**—ಸೂಕ್ಷ್ಮಶಬ್ದದಿಂದ ಆಕಾಶ ಉತ್ಪತ್ತಿ, ೧ ಬಹಿರಂತರ

ದಿಗಾದಿರೂಪತ್ವ, ೨ ಗಮನಾದ್ಯರ್ಥ ಅವಕಾಶ ಪ್ರದತ್ವ, ೩ ದೇಹಾತ್‌ರ್ಬಹಿ ವಿದ್ಯಮಾನಾನಾಂ ಪ್ರಾಣಿನಾಂ, ಪ್ರಾಣಾಪಾನಾದೀನಾಂ ಇಂದ್ರಿಯಾಣಾಂ, ಆತ್ಮನಾ ಮನಸ್ಸಶ್ಚನಾಡ್ಯಾದಿ ಛಿದ್ರರೂಪೇಣ ಆಶ್ರಯತ್ವಂ ೪ ಬಹಿರಂತಃ ರತಿ ವ್ಯವಹಾರಾಸ್ಪದತ್ವ.

**೨. ವಾಯುಲಕ್ಷಣ—**ಸ್ಪರ್ಶದಿಂದ ವಾಯು ಉತ್ಪತ್ತಿ, ೧ ಚಲನ ಕರ್ತೃತ್ವ, ೨ ಪ್ರಥಕ್ ಸ್ಥಿತಾನಾಮ್ ಏಕೀಕರಣತ್ವ, ೨ ಸರ್ವವಸ್ತು ವ್ಯಾಪ್ತತ್ವ ೪ ಪ್ರರ್ಣಾದಿದ್ರವಸ್ಯ ವರ್ಣಾತ್ಮಕ ಧ್ವನ್ಯಾತ್ಮಕ ಶಬ್ದಸ್ಯಚ ದೇಶಾಂತರ ಪ್ರಾಪ ಕತ್ವ, ರೂಪನೇತೃತ್ವ, ೫ ಸರ್ವೇಂದ್ರಿಯಾಣಾಂ ಸ್ವಾಮಿತ್ವ.

**೩. ತೇಜಲಕ್ಷಣ—**ರೂಪದಿಂದ ತೇಜಸ್ಸು ಉತ್ಪತ್ತಿ, ಪ್ರಕಾಶನಂ = ಪ್ರಕಾಶಮಾಡೋಣ, ೨ ಪಾಕಕರಣಂ = ಪಚನಮಾಡೋಣ, ೩ ರಸೌದ ನಂ = ರಸಪಾನಮಾಡೋಣ, ೪ ಅದನ = ಭಕ್ಷಣಮಾಡೋಣ, ೫ ಹಿಮ ಮರ್ದನ = ಶೀತ ಹೋಗಲಾಡಿಸುವಿಕೆ, ೬ ಶೋಷಣ = ಒಣಗಿಸೋಣ, ೭ ಪ್ರಾಣಿನಾಂಕ್ಷುತ್ ತೃಡ್‌ಜನಕತ್ವ = ಪ್ರಾಣಿಗಳಿಗೆ ಹಸಿವೆ ನೀರಡಿಕೆ ಹುಟ್ಟಿಸುವಿಕೆ.

**೪. ಅಪ್ಪು ತತ್ವ ಲಕ್ಷಣ—**ರಸದಿಂದ ಅಪ್ಪು ಉತ್ಪತ್ತಿ, ೧ ಆದ್ರೀಕರಣ–ತೋಯಿಸೋಣ, ೨ ಪಿಂಡೀಕರಣ = ಮುದ್ದೆ ಮಾಡೋಣ, ೩ ಚೇಷ್ಟಾಹೇತುತ್ವ = ಪ್ರಾಣಕ್ಕೆ ಜೀವನೋಪಾಯವಾದ ಚೇಷ್ಟಾ ಕ್ರಿಯಾ ಕಾರಣತ್ವ, ೪ ತೃಪ್ತಿಜನಕತ್ವ = ಸಾಕೆಂಬ ಅಲಂಬುದ್ಧಿ ಹುಟ್ಟಿಸುವಿಕೆ, ೫ ಸುಖಕರತ್ವ ಆಪ್ಯಾಯನದಿಂದ ಸುಖವಾಗುವಿಕೆ, ೬ ಬಿಂದುಭಾವ ಪೃಥ್ವಿ ತೇಜಸ್ಸು ಸಂಯೋಗದಿಂದ ನೀರಿನಲ್ಲಿ ಒಂದು ಬಿಂದುಭಾವ.

**೫. ಪೃಥ್ವೀತತ್ವಲಕ್ಷಣ–**ಗಂಧದಿಂದ ಪೃಥ್ವಿ, ೧ ಭಾವನ =ಉತ್ಪಾದ ಕತ್ವ, ೨ ಧಾರಣ ಪದಾರ್ಥಗಳಿಗೆ ಆಧಾರವಾಗುವಿಕೆ, ೩ ಬ್ರಹ್ಮಸ್ಥಾನ = ಪಾರ್ಥಿವಶರೀರೆ (ಬ್ರಹ್ಮಣಃ) ಬ್ರಹ್ಮನ ಸನ್ನಿಧಾನತ್ವ ಇರುವುದರಿಂದ ಮನುಜ ಶರೀರದಿಂದಲೇ ಬ್ರಹ್ಮದರ್ಶನ, ೪ ಸದ್ವಿಶೇಷಣ = ಭೂತತ್ರಯ, ತೇಜಸ್ಸು–ಪೃಥ್ವಿ–ಅಪ್ಪಿನಲ್ಲಿ ವಿಶೇಷದಿಂದ ವ್ಯಕ್ತತ್ವ (ಮೂರ್ತದ್ರವ್ಯ). ೫ ಸರ್ವ ಸತ್ವ ಗುಣೋದ್ಭೇದ = ಸರ್ವ ಪ್ರಾಣಿಗಳ ಶರೀರಗಳಲ್ಲಿ ಆಯಾ ಸರ್ವಗುಣಗಳ ವ್ಯಕ್ತಿಕಾರ್ಯ.

**ಈ** ಪ್ರಕಾರ, ಶ್ರೀ ಭಾಗವತ ಮತ್ತು ಸುಳಾದಿಗಳಲ್ಲಿ ಪೇಳಿದಂತೆ, ಅಷ್ಟ ಪ್ರಕೃತಿ ಬಂಧಕತ್ವ ಗುಣಧರ್ಮ, ಇದರಿಂದ ಮೋಚಕತ್ವ ಗುಣಧರ್ಮವೂ ಉಳ್ಳವನು ಭಗವಂತನೆಂದು, ವಿಶ್ವಾದಿ ಅಷ್ಟರೂಪಗಳ ಕಾರ್ಯವೆಂಬುದನ್ನು ತಿಳಿದು ಜ್ಞಾನಿಗಳಿಂದ ಉಪದಿಷ್ಟನಾಗಿ ಹರಿಯ ಧ್ಯಾನಿಸಿದರೆ, ಬಂಧಮೋಚಕನಾಗಿ ನಿಷ್ಕಂಟಕವಾದ ಸುಮಾರ್ಗದಲ್ಲಿಡುವನು. ವೈಷ್ಣವ ದೇಹ ದುರ್ಲಭ. ಶ್ರೀ ವಿಜಯದಾಸರ ಕರುಣೆಯೆಂಬ ಜ್ಞಾನವಂತೂ ಮತ್ತೂ ದುರ್ಲಭ. ಶ್ರೀದಾಸರೇ ಪ್ರೇರಿಸಿದಷ್ಟು ಬರೆದದು. ಎನ್ನ ಸ್ವಬುದ್ಧಿಯಲ್ಲ. ಬೇಸರದೇ ನಿಂದಿಸದೇ–ಒಂದೇ ಮನದಿಂದ ತಿಳಿದು ಉಪಾಸಿಸಿದರೆ ಎನ್ನ ಸೇವೆ ಸಫಲವೆಂದು ವಿಜಯದಾಸವರ್ಯರನ್ನು ಮೊರೆಪೊಗುವೆ.

**ದ್ರೌಪದೀಶಪತಿ ವಿಶಲರು :** ಎಂಟು ಪ್ರಕೃತಿಗಳೊಳಗೆ = ಭೂತ ೫. ಅಹಂಕಾರ–ಬುದ್ಧಿ–ಮನಸ್ಸು ಎಂಟು. ಒಂಭತ್ತರಿಂದ ಪೆಚ್ಚಿಸಲು ೭೨ಕ್ಕೆ ಸಾವಿರದಂತೆ ೭೨ ಸಾವಿರ.

**ಭಾವಸೂಚನ :** ಎಂಟೇತಿ ॥ ಉಕ್ತಂಚ ಸಪ್ತಮಗೀತಾಯಾಂ ಭೂಮಿರಾಪೋನಲೋವಾಯುಃ ಖಂ ಮನೋಬುದ್ಧಿರೇವ ಚ ಅಹಂಕಾರ ಇತೀಯಂ ಮೇ ಭಿನ್ನಾಪ್ರಕೃತಿರಷ್ಟಧಾ ॥ ೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಎಂಟು ಪ್ರಕೃತಿ" ಇತಿ ॥ "ಭೂಮಿ ರಾಪೋನಲೋ ವಾಯುಃ ಖಂ ಮನೋ ಬುದ್ಧಿರೇವ ಚ ॥ ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ ॥" ಇತಿ ಗೀತಾಯಾಮ್ ॥ "ಪ್ರಕೃತ್ಯಷ್ಟಕಗಃ ಶ್ರೀಶಃ ವಿಶ್ವಾದ್ಯಾತ್ಮೇತಿ ವೈಭವೇ ॥" "ನೆಂಟ"—ಸ್ನೇಹೀ ॥ "ಎಡೆಬಿಡದೆ"—ಸಹೈವ ॥ ೫ ॥

**ಕನ್ನಡಾರ್ಥ**

"ಭೂಮಿ-ಜಲ-ಅಗ್ನಿ-ವಾಯು–ಆಕಾಶ–ಮನಸ್ಸು-ಬುದ್ಧಿ-ಅಹಂಕಾರ" ಎಂದು ಎಂಟು ವಿಧವಾಗಿ ಪ್ರಕೃತಿಯು ವಿಭಾಗವನ್ನು ಹೊಂದಿರುತ್ತದೆ ಎಂದು ಶ್ರೀ ಗೀತೆಯಲ್ಲಿ ಭಗವಂತನ ವಚನವಿರುವದರಿಂದ ದಾಸವರ್ಯರು "ಎಂಟು ವಿಧ ಪ್ರಕೃತಿಗಳು" ಎಂದು ನಿರೂಪಿಸಿರುತ್ತಾರೆ. ವೈಭವವೆಂಬ ಪ್ರಮಾಣ ಗ್ರಂಥದಲ್ಲಿ "ಎಂಟು ವಿಧಗಳಾದ ಪ್ರಕೃತಿಗಳಲ್ಲಿಯೂ ಶ್ರೀಪತಿಯು ಎಂಟು ರೂಪಗಳಿಂದ ಇರುತ್ತಾನೆ" ಎಂಬುದಾಗಿ ನಿರೂಪಿಸಲಾಗಿರುತ್ತದೆ. "ನೆಂಟ"—ಸ್ನೇಹಿತ. "ಎಡೆಬಿಡದೆ"—ಒಡನೆಯೇ! ಸಹಿತವಾಗಿಯೆ! ॥ ೫ ॥

**ಅವತರಣಿಕಾ:** ಜ್ಞಾನೇಂದ್ರಿಯ, ಕರ್ಮೇಂದ್ರಿಯ, ತತ್ವಜಡಪ್ರಕೃತಿಗಳಲ್ಲಿ ತದಭಿಮಾನಿ ದೇವತೆಗಳಲ್ಲಿ ಇಪ್ಪ, ಶ್ರೀಹರಿಯ ಶಕ್ತ್ಯಾದಿ ದ್ವಾದಶರೂಪಗಳ ಕಾರ್ಯ ತಿಳಿದು ಸ್ಥೂಲ ವಿಷಯಗಳನ್ನು ಹರಿಯೇ ಉಂಡುಣಿಪನೆಂದು ಚಿಂತಿಸಿದರೆ, ಬಂಧ ಮೋಚಕ; ಇಲ್ಲವಾದರೆ ಪುನಃ ಪುನಃ ಸಂಸಾರಬಂಧನವೆಂದು ಪೇಳುತ್ತಾರೆ.

ಮೂಲ :

**ಸ್ವರಮಣನು ಶಕ್ತ್ಯಾದಿ ರೂಪದಿ ।**
**ಕರಣಮಾನಿಗಳೊಳಗೆ ನೆಲಸಿ ।**
**ದ್ದರವಿದೂರನು ಸ್ಥೂಲ ವಿಷಯಗಳುಂಡುಣಿಪ ನಿತ್ಯ ॥**
**ಅರಿಯದಲೆ ತಾನುಂಬೆನೆಂಬುವ ।**
**ನಿರಯಗಳ ನುಂಬುವನು ನಿಶ್ಚಯ ।**
**ಮರಳಿ ಮರಳಿ ಭವಾಟವಿಯ ಸಂಚರಿಸಿ ಬಳಲುವನು ॥ ೬ ॥**

**ಪದ್ಯಾರ್ಥ:** ಸ್ವರಮಣನು = ಶ್ರೀಹರಿಯು ತನ್ನಲ್ಲಿ ತಾನೆ ರಮಿಸುವನು, ಎಂದರೆ ತನ್ನ ವಿಜ್ಞಾನಮಯವಾದ ಸ್ತ್ರೀರೂಪದಲ್ಲಿ ಆನಂದಮಯ ನಾಮಕ ಪುರುಷರೂಪದಿಂದ ರಮಿಸುವನೆಂದು ಮತ್ತು ಪ್ರಕಾಶಸಂಹಿತಾ "ಮಹಾ ಸೌಂದರ್ಯ ಯುಕ್ತೇಷು ನಿರ್ದೋಷೇಷು ಚ ಸರ್ವದಾ ॥ ರಮತೇ ಸ್ತ್ರೀ ಸ್ವರೂಪಾಣಿ ಪುಂ ರೂಪಾಣಿವಿಧಾಯ ಚೇತಿ ॥ ಸತ್ತತ್ವ ರತ್ನಮಾಲಾವಾಕ್ಯ ಶಕ್ತ್ಯಾದಿ ರೂಪದಿ = ಶಕ್ತ್ಯಾದಿ ೧೨ ರೂಪಗಳು ಶಕ್ತಿ, ಪ್ರತಿಷ್ಠಾ, ಸಂವಿತ, ಸ್ಫೂರ್ತಿ, ಪ್ರಕೃತಿ, ಕಳಾ, ವಿದ್ಯಾ, ಮತಿಃ, ನೀತಿ, ಮಾಯಾ, ಕಾಲ, ಪುರುಷ, ಹೀಗೆ, ಮನ ಬುದ್ಧಿ, ಮತ್ತು ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ ಹೀಗೆ ೧೨ ರೂಪಗಳೆಂದು ಪ್ರಮೇಯ. (ಕೆಲವರು ೧೧ ರೂಪಗಳೆಂದೆ ಅಭಿಪ್ರಾಯಪಟ್ಟಿದ್ದಾರೆ.) ಕರಣಮಾನಿಗಳೊಳಗೆ = ಇಂದ್ರಿಯಾಭಿಮಾನಿ ದೇವತೆಗಳೊಳಗೆ, ನೆಲಸಿ = ಇದ್ದು, ಅರವಿದೂರನು = ತಾನು ದೋಷದೂರನಾದರೂ ಸ್ಥೂಲ ವಿಷಯಗಳುಂಡುಣಿಪ ನಿತ್ಯ = ತಾನು ಶುಭ ರಸಭೋಕ್ತ್ರ, ತನ್ನ ಸ್ವರೂಪರಸವನ್ನು ಸ್ವೀಕರಿಸಿ, ಸ್ಥೂಲ ಜೀವರಿಗೆ ಯೋಗ್ಯವಾದ ರಸವನ್ನು, ತ್ರಿವಿಧ ಜೀವರಿಗೆ ಉಣಿಸುವನು. ಇಂದ್ರಿಯ ಜನ್ಯ ಸುಖದುಃಖಾದಿಗಳು ಶ್ರೀಹರಿಯ ಆಧೀನ ಶ್ರೀಹರಿಯ ವ್ಯಾಪಾರವೆಂದು ತಿಳಿಯದಲೆ, ಎಂದರೆ (ಪಂಚಜ್ಞಾನ ಕರ್ಮೇಂದ್ರಿಯ ತತ್ವ ಪ್ರಕೃತಿ ಲಕ್ಷಣಗುಣ ಧರ್ಮಗಳನ್ನು

ಸೃಷ್ಟಿ ಪ್ರ|| ಸುಳಾದಿಯಲ್ಲಿ ನೋಡಿರಿ) ಅರಿಯದಲೆ ತಾನುಂಬೆನೆಂಬುವನು, ನಿರಯಗಳನುಂಬುವನು = ನರಕದಲ್ಲಿ ಆಗುವ ದುಃಖಗಳನ್ನು ನಿಚ್ಚಳವಾಗಿ ಉಂಬುವನಲ್ಲದೇ, ಮರಳಿ ಮರಳಿ = ಪುನಃ ಪುನಃ, ಭವಾಟವಿಯ ಸಂಚರಿಸಿ ಬಳಲುವನು. ಸಂಸಾರವೆಂಬ ಅರಣ್ಯದಲ್ಲಿ–ಕಲ್ಲು ಮುಳ್ಳುಗಳನ್ನು ತುಳಿದು ಸಂಚರಿಸುತ್ತಾ, ದುಃಖದಲ್ಲಿ ಬಳಲುವನು. ಮನ ಬುದ್ಧಿ, ದಶೇಂದ್ರಿಯಗಳ ಕಾರ್ಯ, ತದ್ಗುಣ ಬಂಧಕ, ಮೋಚಕನು ಶ್ರೀಹರಿಯ ಆಧೀನವಾಗಿವೆ ಇವುಗಳಿಗೆಲ್ಲ ಶ್ರೀಹರಿಯೇ ಪ್ರವರ್ತಕನೆಂಬ ನಿಶ್ಚಯಜ್ಞಾನಬೇಕು. ಈ ದ್ವಾದಶೇಂದ್ರಿಯಗಳ ಲಕ್ಷಣಗಳನ್ನು "ಏತೇ ಸಪ್ತಗತೇಪ್ರಾಣಾಃ" || ಎಂಬ ಸೂತ್ರಕ್ಕೆ ಶ್ರೀಮದಾಚಾರ್ಯರ ಭಾಷ್ಯ, ಶ್ರೀಮಂತ್ರಾಲಯ ಗುರುರಾಜರ ನ್ಯಾಯ ವಿವರಣ ಟಿಪ್ಪಣಿಯಲ್ಲಿ ಬಹು ಸ್ವಾರಸ್ಯವಾಗಿ ವಿವರಿಸಿದ್ದಾರೆ. ಗುರುಗಳಿಂದ ತಿಳಿವುದು. ಮುಂದಿನ ಪದ್ಯದಲ್ಲಿಯೂ ೧೨ ರೂಪ ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ಸ್ವರಮಣನು ಶಕ್ತ್ಯಾದಿರೂಪದಿ = ೧೧ ಇಂದ್ರಿಯಗಳಲ್ಲಿ ೧೧ ಶಕ್ತ್ಯಾದಿರೂಪ (ಇದೊಂದು ಪಕ್ಷಜ್ಞಾನಿಗಳಿಂದ ಉಕ್ತ).

**ಭಾವಸೂಚನ :** ಸ್ವರಮಣೇತಿ || ೬ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ವರಮಣ" ಇತಿ || "ಶಕ್ತಿಪ್ರತಿಷ್ಠಾ" ಇತ್ಯುತ್ತ್ಯೈಕಾದಶ ರೂಪಾಣಿ ಮನ ಆದಿಗತಾನಿ || "ಮರಳಿ" – ಪುನಃ || ೬ ||

## ಕನ್ನಡಾರ್ಥ

೧. ಶಕ್ತಿ, ೨. ಪ್ರತಿಷ್ಠಾ, ೩. ಸಂವಿತ್, ೪. ಸ್ಫೂರ್ತಿ, ೫. ಪ್ರವೃತ್ತಿ, ೬. ಕಲಾ, ೭. ವಿದ್ಯಾ, ೮. ಮತಿ (ನೀತಿ) ೯. ಮಾಯಾ, ೧೦. ಕಾಲ, ೧೧. ಪುರುಷ, ಹೀಗೆ ಪರಮಾತ್ಮನ ಈ ಹನ್ನೊಂದು – ರೂಪಗಳು ಮನ ಮುಂತಾದ ಹನ್ನೊಂದು – ಇಂದ್ರಿಯಾಭಿಮಾನಿ ದೇವತೆಗಳಲ್ಲಿ ನಿಯಾಮಕ ವಾಗಿರುತ್ತವೆ" ಎಂದು ತಿಳಿಯಬೇಕು. ಮರಳಿ–ತಿರುಗಿ–ಮತ್ತೆ || ೬ ||

**ಅವತರಣಿಕಾ :** "ಪುಣ್ಯತ್ವಾದಿ ವಿಶೇಷಣೋಪಾಸನಂತು ಗಂಧ ಬಲಕಾಮಾದಿಷು, ವಿಶಿಷ್ಟೇಷ್ವೇವ ಭಗವಾನುಪಾಸ್ಯ" ಎಂಬುವ ಗೀತಾ ವಿವೃತ್ತಿಕಾರರ ವಚನದಂತೆ; ಇಂದ್ರಿಯ ಬಲಪ್ರದನಾದ, ಪೃಥಿವ್ಯಾದಿ ರಸಗಳಲ್ಲಿ ನಾಲ್ಕು ಭಗವದ್ರೂಪಗಳನ್ನು ಉಪಾಸನೆಮಾಡುವದೆಂದು ಉಪದೇಶಿಸುತ್ತಾರೆ.

ಮೂಲ:

**ಸುರುಚಿ ರುಚಿರ ಸುಗಂಧ ಶುಚಿಯೆಂ ।**
**ದಿರುತಿಹನು ಷಡ್ರಸಗಳೊಳು, ಹ ।**
**ನ್ನೆರಡು ರೂಪದಲಿಪ್ಪ, ಶ್ರೀ ಭೂದುರ್ಗೆಯರ ಸಹಿತ ॥**
**ಸ್ವರಮಣನು ಎಪ್ಪತ್ತೆರಡು ಸಾ ।**
**ವಿರ ಸಮೀರನ ರೂಪದೊಳಗಿ ।**
**ದ್ದುರು ಪರಾಕ್ರಮ ಕರ್ತೃ ಎನಿಸುವ ನಾಡಿಗಳೊಳಿದ್ದು ॥ ೭ ॥**

**ಪದ್ಯಾರ್ಥ: ಸುರುಚಿ** = ರಸನೇಂದ್ರಿಯವಾದ ನಾಲಿಗೆಗೆ ಸಮೀಚೀನವಾದ ರುಚಿಕರವು ಪ್ರತಿಯೊಂದು ಪದಾರ್ಥಗಳಾಗಬೇಕಾದರೆ, ಶ್ರೀಸುರುಚಿನಾಮದಿಂದ ಮತ್ಸ್ಯರೂಪನಾಗಿ ಕಾರ್ಯಪ್ರವೃತ್ತಿಮಾಡುವನು, **ರುಚಿರ** = ವಾಗೇಂದ್ರಿಯದಿಂದ ಭುಂಜಿಸಲು ರುಚಿರ ರುಚಿಸತಕ್ಕವನಾಗಿ ಶ್ರೀಭಾರ್ಗವ ರಾಮನು ಇರುವನು. **ಸುಗಂಧ** = ಪ್ರತಿಯೊಂದು ಪದಾರ್ಥಗಳಲ್ಲಿ ಸುಗಂಧ ತಂದುಕೊಡಲು, ಶ್ರೀನರಸಿಂಹರೂಪಿಹರಿಯು ಘ್ರಾಣೇಂದ್ರಿಯದಿಂದ ಆಘ್ರಾಣಿಸಿ ಸುಗಂಧಮಾಡುವನು. ಶುಚಿ = ಪ್ರತಿಯೊಂದು ಪದಾರ್ಥಕ್ಕೆ ಪವಿತ್ರತೆ, ಮತ್ತು ನೋಡಲು ಒಳ್ಳೇ ನಿರ್ದುಷ್ಟವಾಗಲು, ಕಪಿಲನಾಮಕ ಹರಿಯು, ನೇತ್ರೇಂದ್ರಿಯದಿಂದ ನೋಡಿ, ಶುಚಿನಾಮಕನಾಗಿ, ಷಡ್ರಸಗಳೊಳು = ಆರು ರಸಗಳಲ್ಲಿ, ಅಪ್ಪಿನಲ್ಲಿ ಒಂದೇ ಸೀಗುಣವಿದ್ದರೂ, ಪೃಥಿವ್ಯಾದಿ ಭೇದದಿಂದ ಸೀ–ಹುಳಿ–ಕಾರ–ಕಟು ಮುಂತಾದ ಆರು ರುಚಿಗಳಲ್ಲಿದ್ದು, ಶ್ರೀಹರಿಯೇ ಶಕ್ತ್ಯಾದಿ ೧೨ ರೂಪದಲ್ಲಿ, ಸತ್ವಾ, ರಜ, ತಮೋ ಮೂರು ಭೇದರಸಗಳಲ್ಲಿ ಶ್ರೀ–ಭೂ, ದುರ್ಗಾದೇವಿಯರಿಂದ ಒಡಗೂಡಿ ಇದ್ದು, ಅಥವಾ ಷಡ್ರಸಗಳು, ಪ್ರತಿಯೊಂದು ಪದಾರ್ಥದಲ್ಲಿ ೧. ಶುಭಸಾರವಾದ ಸ್ವಾಖ್ಯಹರಿಯ ರಸ, ೨. ರಮಾದೇವಿ ರಸ, ೩. ಬ್ರಹ್ಮವಾಯು ರಸ, ೪. ಸರಸ್ವತೀ ಭಾರತೀ ರಸ, ೫. ಸಮಸ್ತ ತತ್ವಾಭಿಮಾನಿ ದೇವತೆಗಳ ರಸ, ಮತ್ತು ೬. ಜೀವರುಗಳ ರಸ. ಅವರವರಿಗೆ ತಕ್ಕ ಯೋಗ್ಯರಸ ಪ್ರವರ್ತಕ, ಶ್ರೀಹರಿಯೆಂದು ತಿಳಿಯುವದೇ ಮುಖ್ಯವೆಂದು ಜ್ಞಾನಿಗಳ ವಚನ. ಹೀಗೆ, ಸ್ವರಮಣನು, ಪುಂಸ್ತ್ರೀರೂಪ ಧರಿಸಿ ತನ್ನಲ್ಲೆ ತಾನು ರಮಿಸುವ ಶ್ರೀಹರಿಯು, ೭೨ ಸಾವಿರ ನಾಡಿಗಳಿಗೆ ರಸ ವಿಭಾಗಮಾಡಿಕೊಡುವ ಸಮೀರನ = ಸಮೀರ ನಾಮಕನಾದ **ಪ್ರಾಣನ**

ಎಪ್ಪತ್ತೆರಡು ಸಾವಿರ ರೂಪದೊಳಗೆ ಶ್ರೀಹರಿಯು ತಾನಿದ್ದು, ಉರುಪರಾಕ್ರಮ = ಉತ್ಕೃಷ್ಟವಾದ ಪರಾಕ್ರಮ, ಶ್ರೇಷ್ಠವಾದ ಬಲ-ತೇಜ ವೀರ್ಯಜ್ಞಾನಾದಿಗಳಿಂದ ಪೂರ್ಣನಾದ ಹರಿಯು, ೭೨ ಸಾವಿರ ನಾಡಿಗಳೊಳಗಿದ್ದು, ತಾ ಕರ್ತೃ ಎನಿಸುವ = ತಾನೇ ಸ್ವತಂತ್ರದಿಂದ ಎಲ್ಲ ಕಾರ್ಯಮಾಡುವ ಅಧಿಕಾರವುಳ್ಳವನೆಂದು ಶ್ರೀಹರಿಯ ಮಹಿಮೆ ಕೊಂಡಾಡು. ಈ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿಪ್ಪ ಭಗವದ್ರೂಪೋಪಾಸನಕ್ಕೆ ಮುಖ್ಯ ಋಜುಗಳೇ ಅಧಿಕಾರಿಗಳು. ತರುವಾಯ ವಾಯು ಅನುಗ್ರಹದಿಂದ ತತ್ವಾಭಿಮಾನಿದೇವತೆಗಳ ಸಾಮಾನ್ಯಾಧಿಕಾರವಾದುದರಿಂದ, ಶ್ರೀಮದಾಚಾರ್ಯರು ತಂತ್ರಸಾರದಲ್ಲಿ "ರಹಸ್ಯತ್ವಾತ್ ನ ಕಥ್ಯತೇ" ಎಂದು ಹೇಳಿದಾರೆ.

**ದ್ರೌಪದೀಶಪತಿ ವಿಠಲರು :** ಸುರುಚಿ-ರುಚಿರ, ೧. ಕಹಿ, ೨. ಸಿಹಿ, ೩. ಒಗರು, ೪. ಹುಳಿ, ೫. ಉಪ್ಪು, ೬. ಖಾರಾ, ಈ ಆರು ರಸಗಳಲ್ಲಿ ಒಂದೊಂದರಲ್ಲೂ ಸುರುಚಿ ರುಚಿರ, ಶುಚಿ, ಸುಗಂಧ. ಹೀಗೆ ೪ ಪ್ರಕಾರ ಹೆಚ್ಚಿಸಿದರೆ ೬×೪=೨೪ ಆಗುತ್ತದೆ. ಶ್ರೀದೇವಿ ವಿಷ್ಣು, ಭೂದೇವಿ ಬ್ರಹ್ಮಾ, ದುರ್ಗಾದೇವಿ ರುದ್ರಮೂರ್ತಿ ೩. ಇಪ್ಪತ್ತುನಾಲ್ಕು ಈ ಮೂರದಿಂದ ಹೆಚ್ಚಿಸಿದರೆ ೭೨, ಸಹಸ್ರ ಸಂಖ್ಯೆಯಿಂದ ಹೆಚ್ಚಿದರೆ, ೭೨೦೦೦ ರೂಪ. ಅಷ್ಟೇ ಸಮೀರನ ರೂಪ.

**ಭಾವಸೂಚನ :** ಸುರುಚೀ ತಿ ‖ ಸುರುಚಿ ಹುತಭುಗಿತಿ ‖ ೭ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸುರುಚಿ" ಇತಿ ‖ ಏಕತ್ರ ಚತುರಾತ್ಮಾ ।. ಶ್ರ್ಯಾ (ಶ್ಚಾ) ದಮೋಽಪಿ ಏಕೈಕತ್ವ ತ್ರಿರೂಪತಯಾ ದ್ವಾದಶ ‖ ೭ ‖

## ಕನ್ನಡಾರ್ಥ

ಷಡ್ರಸಗತ ರೂಪಗಳನ್ನೂ ಚಿಂತನೆಯನ್ನೂ ಹೇಳುತ್ತಾರೆ-"ಸುರುಚಿ" ಎಂಬ ಪದ್ಯದಿಂದ.

ಮಧುರ ಮುಂತಾದ ಆರು ರಸಗಳಲ್ಲಿ- ಒಂದೊಂದರಲ್ಲಿ "ಸುರುಚಿ-ರುಚಿರ-ಸುಗಂಧ-ಶುಚಿ" ಎಂಬ ನಾಲ್ಕು ನಾಲ್ಕು ರೂಪಗಳಿಂದ ಶ್ರೀಹರಿಯು (ನಿಯಾಮಕನಾಗಿ) ಇರುತ್ತಾನೆ. ಮತ್ತು ಶಕ್ತಿ ಮುಂತಾದ ೧೨ ರೂಪಗಳೂ ಸಹ ಶ್ರೀ ಭೂ ದುರ್ಗಾ ಎಂಬ ರಮಾರೂಪಗಳಿಂದ ಸಹಿತವಾಗಿಯೇ ಆರು

ರಸಗಳಲ್ಲಿ ಇರುತ್ತವೆ. ಸ್ವರಮಣನಾದ ಶ್ರೀಹರಿಯು ೭೨೦೦೦ ನಾಡಿಗಳಲ್ಲಿರುವ ವಾಯುದೇವರ ರೂಪಗಳಲ್ಲಿಯೂ ೭೨೦೦೦ ರೂಪಗಳಿಂದ ಇದ್ದು "ಉರು ಪರಾಕ್ರಮ" ಎಂದು ಹೇಳಿಸಿಕೊಳ್ಳುವನು. ಶ್ರೀ – ಭೂ – ದುರ್ಗಾರಮಣ ರೂಪಗಳು ಒಂದೊಂದರಲ್ಲಿ – ಮೂರು ಮೂರು ಇರುವದರಿಂದ ೧೨ ರೂಪ ಗಳಾಗುವವು. ||೭||

**ಅವತರಣಿಕಾ :** ಹಿಂದೆ ಹೇಳಿದಂತೆ ಸಕಲ ಪ್ರಕೃತಿತತ್ವಗಳಲ್ಲಿ ಶ್ರೀಹರಿಯನ್ನು ಸದಾ ಧ್ಯಾನಮಾಡುವ ಭಕ್ತರಾದ ಧ್ಯಾನಯೋಗಿಗಳೂ, ಅಸಂಪ್ರಜ್ಞಾತ ಸಮಾಧಿ ಯುಳ್ಳ ಜ್ಞಾನಿಗಳೂ, ಕದಾಚಿತ್ ಅನ್ಯಕರ್ಮ ಮಾಡಿದರೂ ಅವು ಪುಣ್ಯಕರ್ಮಗಳೆನಿ ಸುವವೆಂದು ಉಪದೇಶಿಸುತ್ತಾರೆ.

**ಮೂಲ :**

**ನಿನ್ನ ಸರ್ವತ್ರದಲಿ ನೆನೆವವ ।**
**ರನ್ಯ ಕರ್ಮವ ಮಾಡಿದರು ಸರಿ ।**
**ಪುಣ್ಯಕರ್ಮಗಳೆನಿಸುವವು ಸಂದೇಹವಿನಿತಿಲ್ಲ ॥**
**ನಿನ್ನ ಸ್ಮರಿಸದೆ ಸ್ನಾನ ಜಪ ಹೋ ।**
**ಮಾನ್ನ ವಸ್ತ್ರ ಗಜಾಶ್ವ ಭೂಧನ ।**
**ಧಾನ್ಯ ಮೊದಲಾದಖಿಳ ಕರ್ಮವ ಮಾಡಿ ಫಲವೇನು ? ॥೮॥**

**ಪದ್ಯಾರ್ಥ :** ನಿನ್ನ ಸರ್ವತ್ರದಲಿ ನೆನೆವವ = ಶ್ರೀಹರಿಯೆ ನೀನೆ ಸರ್ವರಿಗೆ ಬಿಂಬ "ಬಿಂಬ ಚಲಿಸಿದರೆ ಪ್ರತಿಬಿಂಬ ಚಲಿಸುವದೆಂಬ" ಈ ನಿಜ ಜ್ಞಾನದಿಂದ, ಸರ್ವರ ಬಿಂಬನೇ ಎನ್ನ ಬಿಂಬನೆಂಬ ಬಿಂಬನ ಆಧೀನ ಆಗಿ ಚರಿಸುವ ಜ್ಞಾನಿಯು, ಅನ್ಯಕರ್ಮವ ಮಾಡಿದರು ಸರಿ = ನಿಜಭಕ್ತರಾದರೂ ಕದಾಚಿತ್ ಅನ್ಯಕರ್ಮ ಎಂದರೆ ದಾರಾಪುತ್ರ ಪೋಷಣಾದಿ ಇನ್ನೂ ಅನೇಕ ಅಶುಭ ಕರ್ಮಗಳನ್ನು ನಿನ್ನ–ಹರಿಯ ರೂಪಚಿಂತನ ಪೂರ್ವಕ ದಾವ ಕರ್ಮ ಮಾಡಿದರೂ ಪಾಪ ಲೇಪವಿಲ್ಲ. ಅವೆಲ್ಲವೂ ಪುಣ್ಯ ಕರ್ಮವೆನಿಸುವವೆ–ಅಂದರೆ ಹರಿಸ್ಮೃತಿಯಿಂದ ಮಾಡಿದ ಕರ್ಮಗಳೆಲ್ಲವೂ ಪುಣ್ಯ ಶುಭ ಕರ್ಮಗಳು. ಇದಕೆ ಸಂದೇಹವಿನಿತಿಲ್ಲ = ಕಿಂಚಿತ್ತಾದರೂ ಸಂಶಯವಿಲ್ಲ. ನಿನ್ನ ಸ್ಮರಿಸದೆ = ಶ್ರೀ ಬಿಂಬನಾದ ಹರಿಯ ಕರ್ತೃತ್ವಾನುಸಂಧಾನ ಇಲ್ಲದೆ, ಮತ್ತು ಯಾವ ಯಾವ ಕರ್ಮದಲ್ಲೂ ಯಾವ ಭಗವದ್ರೂಪಗಳನ್ನೂ ಚಿಂತನಮಾಡದಲೇ,

ಸ್ನಾನ = ಭಗವತ್ ಸತ್ಕರ್ಮಾಚರಣೆಗೆ ಶುಚಿಯಾಗಲು ದಶವಿಧ ಸ್ನಾನ ವಿಧಾನ ತಿಳಿಯದೇ, ಜಪಾನುಷ್ಠಾನ ಮಾಡುವ ಬಗೆ ತಿಳಿಯದೇ ಸ್ನಾನ ಜಪಗಳನ್ನು ಮಾಡಿದರೂ, ಹೋಮ = ಪಂಚಾಗ್ನಿಯಲ್ಲಿ ಹೋಮ ಮಾಡುವ ವಿಧಾನ ತಿಳಿಯದೇ ಹೋಮ ಮಾಡಿದರೂ, ಅನ್ನ, ವಸ್ತ್ರ, ಗಜ, ಅಶ್ವ, ಭೂ, ಧನ, ಧಾನ್ಯ ಮೊದಲಾದುದರಲ್ಲಿ ಇರುವ ಹರಿಯ ರೂಪ ಅನುಸಂಧಾನವಿಲ್ಲದೆ ಇವುಗಳ ದಾನದ ಮರ್ಮವನ್ನು ಅರಿಯದೇ ಯಾವ ಪುಣ್ಯ ಕರ್ಮವ ಮಾಡಿ ಫಲವೇನು ? = ಅಹಂಕರ್ತೃತ್ವಾಭಿಮಾನದಿಂದ ಯಾವ ಪುಣ್ಯ ಕೆಲಸ ಮಾಡಿದರೂ ಕಿಂಚಿತ್ತೂ ಫಲವಿಲ್ಲ.

**ದ್ರೌಪದೀಶಪತಿ ವಿಠಲರು :** ನಿನ್ನ ಸರ್ವತ್ರದಲಿ.

**ಭಾವಸೂಚನ :** ಧರ್ಮೋ ಭವತ್ಯಧರ್ಮೋಹೀ ತ್ಯಕ್ತೇಃ ‖ ೮ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಿನ್ನ ಸರ್ವತ್ರದಲಿ" ಇತಿ ‖ "ಸಮೇ ಆಹಿತಮ್, ಯದ್ವಾ ಸಮ್ಯಕ್ ತತ್ರ ಆಹಿತಂ ಮನಃ ಯಸ್ಯ ಇತ್ಯರ್ಥಕ ಸಮಾಹಿತಂ ಯಸ್ಯ ಮನಃ ಪ್ರಶಾಂತಂ ದಾನಾದಿಭಿಃ ಕಿಂವದ" ಇತ್ಯತ್ರ ಪ್ರಮಾದಿಕ ರೀತ್ಯಾ ಅಥವಾ ಸಂಪ್ರಜ್ಞಾತ ಧಿಯಾಂ-ಯದ್ವಾ ಭಗವತ್ಕಥಾ ದಿನಾ ಕಾಲ ಸಂಧ್ಯಾದಿ ಕೃತಾಮಪಿ ನ ದೋಷಃ" ಇತ್ಯತ್ರ ತಾತ್ಪರ್ಯಾತ್ ‖ ೮ ‖

## ಕನ್ನಡಾರ್ಥ

"ಸಮಾಹಿತಂ ಯಸ್ಯ ಮನಃ ಪ್ರಶಾಂತಂ ದಾನಾದಿಭಿಃ ಕಿಂ ವದ" ಎಂಬ ಶ್ಲೋಕವನ್ನು ವಿವರಿಸುವಾಗ-"ಸಮಾಹಿತಂ" ಎಂಬ ಪದಕ್ಕೆ ಈ ಕೆಳಗಿನ ಅರ್ಥಗಳನ್ನು ಹೇಳಿರುತ್ತಾರೆ.

"ಸಮ ಶಬ್ದವಾಚ್ಯನಾದ ಭಗವಂತನಲ್ಲಿ ಯಾರ ಮನಸ್ಸು ಇಡಲ್ಪಟ್ಟಿದೆಯೋ ಅವನು ಸಮಾಹಿತ ಮನಸ್ಕನು ಅಥವಾ ಸಮೀಚೀನವಾಗಿ ಸರಿಯಾಗಿ ಆ ಪರಮಾತ್ಮನಲ್ಲಿ ಯಾವನ ಮನಸ್ಸು ಸಮರ್ಪಿತವಾಗಿರುತ್ತದೆಯೋ ಅಂಥ ಪ್ರಸನ್ನನಾದ ಪ್ರಶಾಂತವಾದ ಮನಸ್ಸುಳ್ಳ ಜ್ಞಾನಿಗೆ ದಾನ ಮುಂತಾದ ಧರ್ಮಗಳಿಂದ ಯಾವ ಹೆಚ್ಚಿನ ಪ್ರಯೋಜನವಾಗುವುದಿಲ್ಲ" ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಹಾಗೂ, ಪ್ರಮಾದದಿಂದ ಅಸಲೀ ಅಥವಾ ಅಸಂಪ್ರಜ್ಞಾತ ಸಮಾಧಿ ಅವಸ್ಥೆಯಲ್ಲಿ ಇದ್ದು ಅವಿರತವಾಗಿ ಭಗವಧ್ಯಾನದಲ್ಲಿಯೇ ಮಗ್ನರಾಗಿರು

ವದರಿಂದಾಗಲೀ ಅಥವಾ ಭಗವತ್ಕಥಾಶ್ರವಣ ಮನನ ಮುಂತಾದವುಗಳಲ್ಲಿಯೇ ಅತಿ ಮಗ್ನರಾಗಿರುವದರಿಂದಲಾಗಲೀ ಅಕಾಲ ಸಂಧ್ಯಾವಂದನ ಮುಂತಾದವು ಗಳನ್ನು ಮಾಡಿದರೂ ಸಹ ಇಂಥ ಅಸಂಪ್ರಜ್ಞಾತ ಅವಸ್ಥೆಯಲ್ಲಿರುವ ಸ್ಥಿತಪ್ರಜ್ಞ ರಂಥವರಿಗೆ ಇದು ದೋಷವೆನಿಸುವುದಿಲ್ಲ" ಎಂದು ಈ ಶ್ಲೋಕಕ್ಕೆ ತಾತ್ಪರ್ಯ ವಿರುವದರಿಂದ—"ನಿನ್ನ ಸರ್ವತ್ರದಲಿ ನೆನೆವವರನ್ಯ ಕರ್ಮವ ಮಾಡಿದರು ಸರಿ ಪುಣ್ಯ ಕರ್ಮಗಳೆನಿಸುವವು ಸಂದೇಹವಿಲ್ಲ" ಎಂದು ದಾಸವರ್ಯರು ನಿರೂಪಿಸಿರುತ್ತಾರೆ. ಇದು ಶಾಸ್ತ್ರಸಮ್ಮತವಾಗಿರುತ್ತದೆ. ॥ ೮ ॥

**ಅವತರಣಿಕಾ :** ಪ್ರಕೃತಿಜನ್ಯ ಗುಣಧರ್ಮ, ತತ್ವಗಳಿಗೆ, ಉಪಚಾಯಕವಾದ ಬಹಿಃ ಜಡಪದಾರ್ಥಗಳು, ಪ್ರಕೃತಿ ನಿರ್ಮಿತವಾದ ರಸಗಳಿಂದಲೇ, ದೇಹಸ್ಥಿತಿ ೨೪ ತತ್ವ ಕೋಶ ನಾಡಿಗಳಿಗೆ ಉಪಚಯಕೊಟ್ಟು ತುಷ್ಟಿಬಡಿಸುವನೂ ಶ್ರೀಹರಿಯೇ ಈ ರಸ ವಿಭಾಗಮಾಡಿ, ಜೀವರಿಗೆ ತೃಪ್ತಿಬಡಿಸುವನು. ಇವುಗಳನ್ನು ಯಜ್ಞತ್ವೇನ ಸಮರ್ಪಿಸಿ, ಹರಿಯ ರೂಪಧ್ಯಾನಗೈವ ವಿಚಾರ ಹೇಳುತ್ತಾರೆ.

ಮೂಲ :

**ಇಷ್ಟಭೋಗ್ಯ ಪದಾರ್ಥದೊಳು ಶಿಪಿ ।**
**ವಿಷ್ಟನಾಮದಿ ಸರ್ವ ಜೀವರ ।**
**ತುಷ್ಟಿಬಡಿಸುವ ದಿನದಿನದಿ ಸಂತುಷ್ಟ ತಾನಾಗಿ ॥**
**ಕೋಷ್ಟದೊಳು ನೆಲಸಿದ್ದು ರಸಮಯ ।**
**ಪುಷ್ಟಿ ಐದಿಸುತಿಂದ್ರಿಯಗಳೊಳು ।**
**ಪ್ರೇಷ್ಟನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೇ ॥ ೯ ॥**

**ಪದ್ಯಾರ್ಥ :** ಇಷ್ಟಭೋಗ್ಯ ಪದಾರ್ಥದೊಳು = ತ್ರಿವಿಧ ಸರ್ವಜೀವರಿಗೆ ಇಷ್ಟಪ್ರೀತಿಕರವಾದ, ಭೋಗ್ಯಪದಾರ್ಥ = ಭೋಜನ ಅನುವ ಮಾಡತಕ್ಕ ವಸ್ತುಗಳಲ್ಲಿ ಇದು ಸಮಸ್ತ ಪದ, ಇನ್ನು ಇಷ್ಟ–ಭೋಗ್ಯ ಪದಾರ್ಥ ವ್ಯಸ್ತಪದ ಮಾಡಿದರೆ ಸ್ವಾರಸ್ಯವಾದ ಮುಖ್ಯಾರ್ಥ. ಇಷ್ಟ = "ಇಷ್ಟೋ ವಿಶಿಷ್ಟಃ ಶಿಷ್ಟೇಷ್ಟ" ಎಂಬ ವಿಷ್ಣು ಸಹಸ್ರನಾಮ, ಇಷ್ಟವೆಂಬ ನಾಮಕ್ಕೆ ಶ್ರೀ ವಿದ್ಯಾಧಿ ರಾಜರು "ಇಷ್ಟೈರಿಷ್ಟಃ ಪೂಜಿತಃ, ಶಿಷ್ಟಾನಾಂ ಇಷ್ಟಪ್ರಿಯ ಇತಿ ವಾ" ಸರ್ವರಿಂದ ಪೂಜ್ಯನಾದವ, ಜ್ಞಾನಿಗಳಾದ ಶಿಷ್ಟರು ಸತ್ಕರ್ಮರತ =ಸದಾ ಭಗವ ಧ್ಯಾನರತರಿಗೆ ಪ್ರಿಯನಾದ ಹರಿಯು ಇಷ್ಟನೆಂದು ವೇದಗಳು ಹೊಗಳುತ್ತವೆ.

ಇಂಥ ಜ್ಞಾನಿಗಳಿಗೆ ಇಷ್ಟ ಶ್ರೀಹರಿ. ಭೋಗ್ಯಪದಾರ್ಥದೊಳು = ಸರ್ವಜೀವರು ಭೋಜನ ಮಾಡಿ ಅಥವಾ ಭೋಗ ಅನುಭವಿಸಿ ಆನಂದ ಪಡೆಯುವ ಪದಾರ್ಥಗಳು, ತ್ರಿವಿಧ, ಸತ್ವರಜೋ-ತಮೋ ಜೀವರಿಗೆ ಯೋಗ್ಯಪದಾರ್ಥಗಳು ಶ್ರೀಗೀತೆಯಲ್ಲಿ ಉಕ್ತವಾದಂತೆ ತ್ರಿವಿಧ ಪದಾರ್ಥಗಳ ಗುಣಪ್ರಚೋದಕ ಹರಿಯು ಎಂದು ನಿಶ್ಚಯವಾಗಿ ತಿಳಿದು, ಈ ಹರಿಯು "ಶಿಪಿವಿಷ್ಟನಾಮದಿ" = **"ಶಿಪಿವಿಷ್ಟ ಪ್ರಕಾಶನಃ"** ಎಂಬುದು ವಿಷ್ಣು ಸಾಸಿರನಾಮ. ಇದಕ್ಕೆ ಶ್ರೀ ವಿದ್ಯಾಧಿರಾಜರು "ಶಿಪಯಃ ಪಶವಃ ತೇಷು ಪ್ರವಿಷ್ಟ ಇತಿ ಯಜ್ಞರೂಪೇಣೇತಿ ಶಿಪಿವಿಷ್ಟಃ ॥" ಯಜ್ಞದಲ್ಲಿ, ಯೂಪಸ್ತಂಭದಲ್ಲಿರುವ ಪಶುವಿನ ಪುರೋಡಾಶಾ, ಚರುಹವಿರ್ಭಾಗ ತೆಗೆದು ಯಜ್ಞದಲ್ಲಿ ಆ ಪಶುವಿನ ಚರುಹೋಮಿಸುವರು, ಈ ಪಶುವಿಗೆ ಶಿಪಯಃ ಎಂದು ಕರೆಯುತ್ತಾರೆ. ಈ ಶಿಪಿಯಜ್ಞ ಪಶುವಿನಲ್ಲಿ ಪ್ರವಿಷ್ಟನಾದ ಹರಿಗೆ ಶಿಪಿವಿಷ್ಟನೆಂದು ಹೆಸರು. ಈ ಹರಿಯು ತಾನೆ ಆ ಚರುಹವಿರ್ಭೋಗ್ಯ ಪದಾರ್ಥದಲ್ಲಿದ್ದು-ಚರುಹೋಮಿಸಿದ ನಂತರ ತಾನೆ ಅಗ್ನ್ಯಂತರ್ಗತ ಪರಶುರಾಮರೂಪದಿ ಸ್ವೀಕರಿಸುವನು ಎಂದು ವೇದದಲ್ಲಿ ಹೇಳುತ್ತದೆ. **"ಯಜ್ಞೋವೈವಿಷ್ಣುಃ ಪಶವಃ ಶಿಪಿರ್ಯಜ್ಞ ಏವ ಪಶುಷು ಪ್ರತಿಷ್ಟತೀತಿಶ್ರುತೇಃ ॥"** ಶಿಪಯೋ ರಶ್ಮಯಸ್ತೇಷು ನಿವಿಷ್ಟ ಇತಿವಾ ಶಿಪಿವಿಷ್ಟಃ ॥ ಈ ಯಜ್ಞದಲ್ಲಿ ಶಿಪಿವಿಷ್ಟನಾಮಕ ಹರಿಯಂತೆ ಸರ್ವರ ಭೋಗ್ಯಪದಾರ್ಥಗಳಲ್ಲಿಯೂ ಶಿಪಿವಿಷ್ಟನಾಮದಿಂದಿದ್ದು ಆ ಭೋಗ್ಯಪದಾರ್ಥಗತರಸ ಶುಭರಸ ತಾನು ಸ್ವೀಕರಿಸಿ ಸರ್ವಜೀವರ ತುಷ್ಟಿಬಡಿಸುವ = ತ್ರಿವಿಧ ಯೋಗ್ಯತತ್ತದ್ರಸ ಅವರಿಗೆ ಉಣಿಸಿ, ದಿನದಿನದಿ = ಪ್ರತಿನಿತ್ಯದಲ್ಲಿ ಆನಂದಬಡಿಸುವನು. **ಸಂತುಷ್ಟ**ನಾಗಿ = ಹರಿಯು ತಾನು ಭೋಗ್ಯಪದಾರ್ಥಗತ ತನ್ನ ಶುಭ ಸ್ವಾಖ್ಯರಸ ಸ್ವೀಕರಿಸಿ ತಾನು ತೇಗಿ ತೃಪ್ತಿಬಟ್ಟು ಸರ್ವಜೀವರಿಗೆ ತೃಪ್ತಿ ಕೊಡುವನು. ಇದಕ್ಕೆ ಶ್ರೀ ವೇಂಕಟೇಶನು ಶ್ರೀ ಶುಕಾಚಾರ್ಯರಿತ್ತ ಉತ್ತರಾಣಿ ಅಕ್ಕಿಯ ಚರು ಆಸ್ವಾದಿಸಿ, ಘೂತ್ಕಾರ ಗಾಳಿಯಿಂದ ಸರ್ವದೇವತೆಗಳನ್ನೂ (ಶುಕಾಚಾರ್ಯರ ಆಶ್ರಮದಲ್ಲಿ) ತುಷ್ಟಿಗೈಸಿದುದೆ ಸಾಕ್ಷಿಯಾಗಿರುವುದು.

ಬಹಿರ್ಯಜ್ಞದಲ್ಲಿ ತುಷ್ಟಿಪಡಿಸುವಂತೆ ಆತ್ಮರೂಪ ಪ್ರಾಣಾಗ್ನಿಹೋತ್ರ ಯಜ್ಞವೆನಿಸುವ ಸರ್ವಭೋಗ್ಯ ವಸ್ತುಗಳಲ್ಲಿ ತಾನು ಶಿಪಿವಿಷ್ಟನಾಗಿದ್ದು ಸಂತುಷ್ಟನಾಗಿ, ಕೋಷ್ಟದೊಳು = ಸರ್ವಜೀವರ ದೇಹದೊಳು, ಅಥವಾ

ಕೋಷ್ಟದೊಳು ಅನ್ನಮಯಾದಿ ಪಂಚಕೋಶಗಳಲ್ಲಿ ನೆಲಸಿದ್ದು = ವಾಸವಾಗಿದ್ದು, (ಇಲ್ಲಿ ಕೋಷ್ಟಕ್ಕೆ ಕೋಶಪರಾರ್ಥವೆ ಸ್ವಾರಸ್ಯವಾದುದು) ಪದಾರ್ಥಗತ ಸರ್ವರಸಗಳ ವಿಭಾಗಮಾಡಿ, ತಾನು ರಸಮಯನೆನಿಸಿ, ಇಂದ್ರಿಯಗಳನ್ನು ಪುಷ್ಟಿ ಐದಿಸುತ್ತಾ = ಸಕಲ ಇಂದ್ರಿಯಗಳಿಗೆ ಬಲಪ್ರದನಾಗಿ ಬಲಕೊಡುತ್ತಾ ಇಂದ್ರಿಯಗಳೊಳು ಸಹ ಪ್ರೇಷ್ಟನಾಗಿದ್ದು = ಬಹು ಪ್ರೀತಿಯುಳ್ಳವನಾಗಿದ್ದು, ಎಲ್ಲ ವಿಷಯಗಳುಂಬ ತಿಳಿಸದಲೆ = ಸಕಲ ಭೋಗ್ಯಪದಾರ್ಥಗಳ ರಸದಿಂದ ಆಯಾ ಇಂದ್ರಿಯರಸ ಆಯಾ ಇಂದ್ರಿಯಕ್ಕೆ ಮುಟ್ಟಸಿ, ಜೀವರಿಂದ ಇಂದ್ರಿಯ ಜನ್ಯ ವ್ಯಾಪಾರ ಮಾಡಿಸಿ, ತಾನು ತನ್ನ ಶುಭರಸಗಳನ್ನು ಉಣ್ಣುವದನ್ನು, ತಿಳಿಸದಲೇ = ಅಜ್ಞಾನಿಗಳಿಗೆ ಹರಿಯೇ ಸರ್ವ ಸಾರಭೋಕ್ತ್ರ ರಸವಿಭಾಗಕರ್ತಾ ಜೀವ, ಇಂದ್ರಿಯ, ನಾಡಿಗಳೆಂಬ ಬಲಪ್ರದಾತನೆಂದು ಜ್ಞಾನ ಕೊಡದೇ ತಾನು ಸರ್ವಸಾರಭೋಕ್ತ್ರನಾಗಿಪ್ಪನು. ಒಟ್ಟಿಗೆ ಸಾರಾಂಶವೇನೆಂದರೆ, ಸಕಲ ಜಡ ತತ್ವಪ್ರಕೃತಿ ಪರಮಾಣುಗಳಲ್ಲಿಯೂ ಹರಿಯ ಕಾರ್ಯ ಮತ್ತು ಜಡಪ್ರಕೃತಿಯಾದ ದೇಹಗತ ಪ್ರಕೃತ್ಯಾದಿಗಳಲ್ಲಿಯೂ ಹರಿ ನಿಯಾಮಕ ಪ್ರೇರಕ, ಈ ದೇಹಗತ ಪ್ರಕೃತಿ ಪುಷ್ಟಿಗೈಸಲು ಬಹಿರ್ ಪ್ರಕೃತ್ಯಾತ್ಮಕವಾದ ಜಡವಸ್ತುಗಳಲ್ಲಿಯ ರಸವಿಭಾಗ ಮಾಡಿ ದೇಹ ಪುಷ್ಟಿಗೈಸುವನು ಶ್ರೀಹರಿಯೇ! ತ್ರಿವಿಧವಾದ ಪ್ರಕೃತಿಯಲ್ಲಿ ಶ್ರೀಹರಿಯ ಧ್ಯಾನವಿಚಾರ ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ಇಷ್ಟಭೋಗ್ಯ ಪದಾರ್ಥ — ಭೋಗ್ಯ ಪದಾರ್ಥದೊಳಗೆ, ಶಿಪಿವಿಷ್ಟನಾಮಕ ಶರೀರದೊಳಗೆ ಇದ್ದು ಪುಷ್ಟಿ ಕೊಡುತ್ತಾನೆ.

**ಭಾವಸೂಚನ :** ಇಷ್ಟೇತಿ ॥ ಶಿಪಿವಿಷ್ಟೇತಿ ಶಿಪಿವಿಷ್ಟಪ್ರಕಾಶನ ಇತ್ಯುಕ್ತೇಃ॥ ಪುತ್ರಕಾಮೇಷ್ಟಿ ದೇವತಾಯಾ ಹರೇರ್ನಾಮೇತಿ ॥ ಶಿಪಿವಿಷ್ಟಾಯ ವಿಷ್ಣುವ ಇತಿ ಚತುರ್ಥ ಭಾಗವತ ಟೀಕಾಯಾಮುಕ್ತಂ ॥೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಇಷ್ಟ" ಇತಿ ॥ ಓಂ * ಗೃಣೇ ವಿಶ್ವ(ಷ್ಟ)ತಯೋಯಥಾಯಥ ಮಿಂದ್ರ ತ್ವದ್ಯೇತಿ ರಾತಯಃ॥ (ತ್ವದ್ಯಾತಿರಾತಯಃ) ॥ ತ್ವಾಮಿಚ್ಛ ವಸಸ್ಪತೇಯಂತಿ ಗಿರೋ ನ ಸಂಯತಃ ॥ ಓಂ* ಪರಮೇಷ್ಟ ಸುಖರೂಪತ್ವಾತ್ ಇಷ್ಟಃ ॥ ಅಥವಾ ವೇದವಾಚಾಂ ಪ್ರತಿಪಾದಯಿತುಂ ಇಷ್ಟಃ ॥ ಓಂ * ರಾಜಾ ಆಸಸ್ವಾಣಾಂಸಃ

(ಶ್ರಾಣಾಸಃ) ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯೋ(ಥ್ಯಾ)ಸೌ ಅಶ್ವಾಃ ॥ ಅಭಿಶ್ರವ (ಶ್ರಾ) ಋಜ್ಯಂತೇ ವಹಯನ್ ಚಿನ್ನು ॥ ಓಂ ॥ (ಅಭಿಶ್ರಾ ಋಜ್ಯಂತೋ ವಹೇಯುರ್ನೋ ಚಿನ್ನ) ॥ ಶಿಪಿಃ ಯಜ್ಞಃ ॥ ಶಿಪಿ ಯಜ್ಞ ಸಾಧನಚರು ಪುರೋಡಾಶಾದಿಕಂ ವಿಶತಿ ಪ್ರವಿಶತಿ ಗೃಹ್ಣಾತಿ ಇತಿ ಶಿಪಿವಿಷ್ಟಃ ಕೋಷ್ಟಃ ದೇಹಃ ॥ ರಸಮಯಃ ಉತ್ತಮೋತ್ತಮ ಪ್ರಚುರಃ ॥೯॥

## ಕನ್ನಡಾರ್ಥ

ಈ ಪದ್ಯಾರ್ಥದಲ್ಲಿರುವ "ಇಷ್ಟಭೋಗ್ಯ ಪದಾರ್ಥದೊಳು" ಎಂಬುದು ಅಖಂಡ ಪದವೆಂದು ತೋರುತ್ತದೆ. ಆದರೆ ಟಿಪ್ಪಣೀಕಾರರು "ಇಷ್ಟ" ಎಂಬುದೊಂದು ಬೇರೆ ಪದವೆಂದೂ ಅದು ಪರಮಾತ್ಮನ ಸಹಸ್ರ ನಾಮಾಂತರ್ಗತವಾದುದರಿಂದ ಪರಮಾತ್ಮನಿಗೇ ಸಂಬಂಧಿಸಿರುತ್ತದೆಂದೂ ಆದುದರಿಂದಲೇ ವಿಶೇಷ್ಯನಾದ ಪರಮಾತ್ಮನಿಗೆ ಅನ್ವಯಿಸಿ, ಅರ್ಥವನ್ನು ಹೊಂದಿಸಿ ಹೇಳಬೇಕೆಂದೂ ಪ್ರಕೃತ ಟೀಕಾಕಾರರು ಅಭಿಪ್ರಾಯಪಟ್ಟಿರುತ್ತಾರೆ. "ಇಷ್ಟ" ಈ ನಾಮದ ಅರ್ಥವನ್ನು ಬೃಹತೀ ಛಂದಸ್ಸಿನ ಮಂತ್ರವು "ಗೃಣೇ ವಿಶ್ವತಯಾ" ಎಂದು ಮುಂತಾಗಿ ವಿವರಿಸುತ್ತದೆ. ಪರಮ ಇಷ್ಟವಾದ ಸುಖಪ್ರದ ಸ್ವರೂಪನಾದುದರಿಂದ ಇಷ್ಟವೆಂದೂ ಅಥವಾ ಪರಮ ಪ್ರಿಯನಾದುದರಿಂದ ಇಷ್ಟವೆಂದೂ ಪರಮಾತ್ಮನಿಗೆ ಕರೆಯುವರು. ವೇದವಚನಗಳಿಗೆ ಮುಖ್ಯ ವೃತ್ತಿಯಿಂದ ಪರಮಾತ್ಮನನ್ನೇ ಹೇಳಲು ಮುಖ್ಯ ತಾತ್ಪರ್ಯವಿರುವದರಿಂದ ಪರಮಾತ್ಮನಿಗೆ ಇಷ್ಟನೆಂದು ಕರೆಯುವದುಂಟು.

"ಶಿಪಿವಿಷ್ಟ" ಎಂಬ ನಾಮವು ವಿಷ್ಣು ಸಹಸ್ರನಾಮಾಂತರ್ಗತವಾದುದು. "ಶಿಪಿ" ಎಂದರೆ ಯಜ್ಞಕ್ಕೆ ಸಾಧನ ದ್ರವ್ಯಗಳಾದ ಚರುಪುರೋಡಾಶ ಮುಂತಾದ ಹವಿರ್ದ್ರವ್ಯಗಳು. ಇವುಗಳನ್ನು ಪ್ರವೇಶಿಸುತ್ತಾನೆ. ಆದರೆ ಸ್ವೀಕರಿಸುತ್ತಾನೆ" —ಹವಿರ್ದ್ರವ್ಯಗಳಲ್ಲಿ ಪ್ರವೇಶಿಸಿ, ಅವುಗಳನ್ನು ಸ್ವೀಕರಿಸುವದರಿಂದ ಪರಮಾತ್ಮನಿಗೆ "ಶಿಪಿವಿಷ್ಟ" ಎಂದು ಕರೆಯುತ್ತಾರೆ. ಇದು ಬೃಹತೀ ಮಂತ್ರದ ಸಾರಾರ್ಥ. "ಕೋಷ್ಟ" ಎಂಬ ಪದಕ್ಕೆ ದೇಹವೆಂದು ಅರ್ಥ. "ರಸಮಯ" ಎಂದರೆ — "ಉತ್ತಮೋತ್ತಮಪ್ರಚುರ" ಎಂದು ಅರ್ಥ. ಅಂದರೆ, "ಪ್ರಚುರವಾದ ನಿರವಧಿಕವಾದ ಉತ್ತಮ ರಸಸ್ವರೂಪಿಯು" ಎಂದು ಅರ್ಥ. ಪರಮಾತ್ಮನ ಉತ್ತಮೋತ್ತಮ ರಸಸ್ವಭಾವಕ್ಕೆ ವಾಕ್ಕು ಮುಂತಾದವುಗಳಿಗೆ ಇರುವಂತೆ ಅವಧಿಯು

ಇಲ್ಲಿಯವರೆಗೆ ಎಂಬ ಮರ್ಯಾದೆಯೂ ಇರುವದಿಲ್ಲ! ಎಂಬುದು ವ್ಯಾಖ್ಯಾನಕಾರರ ವಿವರಣೆಯ ಭಾವ. "ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯಃ" ಎಂಬ ಛಾಂದೋಗ್ಯ ಉಪನಿಷತ್ತಿನ ವಚನವು ಈ ವಿಷಯದಲ್ಲಿ ಆಧಾರವಾಗಿರುತ್ತದೆ. ||೯||

**ಅವತರಣಿಕಾ :** ಹಿಂದೆ ಹೇಳಿದಂತೆ ತತ್ವೇಶರಾದ ಸಕಲ ಕರ್ಮೇಂದ್ರಿಯ ಜ್ಞಾನೇಂದ್ರಿಯಾಧಿಪರೊಳಗೆ ಜ್ಞಾನ-ಕ್ರಿಯಾ ಪ್ರೇರಕನೂ ಜಡಪ್ರಕೃತಿಯಾದ ತ್ರಿವಿಧ ದ್ರವ್ಯದಲ್ಲಿಯೂ ತತ್ತದಾಕಾರನಾಗಿಯೂ, ತತ್ತನ್ನಾಮದಿಂದ ಕರೆಸುವನಾಗಿ ತಾನು ಜನರಿಗೆ ತೋರಿಕೊಳ್ಳದೆ ತನ್ನ ಇಚ್ಛೆಯಿಂದ ಜನರನ್ನು ಮೋಹಗೊಳಿಸಿ ಬಂಧನಗೈಸುವ ಹರಿಯ ಶಕ್ತಿ ವಿವರಿಸುತ್ತಾರೆ.

ಮೂಲ :

**ಕಾರಣಾಹ್ವಯ ಜ್ಞಾನ ಕರ್ಮ ।**
**ಪ್ರೇರಕನು ತಾನಾಗಿ ಕ್ರಿಯೆಗಳ ।**
**ತೋರುವನು ಕರ್ಮೇಂದ್ರಿಯಾಧಿಪರೊಳಗೆ ನೆಲಸಿದ್ದು ||**
**ಮೂರು ಗುಣಮಯ ದ್ರವ್ಯಗತದಾ ।**
**ಕಾರ ತನ್ನಾಮದಲಿ ಕರೆಸುಪ ।**
**ತೋರಿಕೊಳ್ಳದೆ ಜನರ ಮೋಹಿಪ ಮೋಹಕಲ್ಪಕನು ||೧೦||**

**ಪದ್ಯಾರ್ಥ :** ಕಾರಣಾಹ್ವಯ "ಕರಣಂ, ಕಾರಣಂ" ಎಂದು ವಿಷ್ಣು ಸಹಸ್ರನಾಮ. ಇದಕ್ಕೆ (ಶ್ರೀ ವಿದ್ಯಾಧಿರಾಜರು) ಕ್ರೀಯತೇ ನೇನೇತಿಕರಣಂ" "ಕಾರ್ಯತೇ ನೇನೇತಿ ಕಾರಣಂ" ಸಕಲ ಇಂದ್ರಿಯ ಕರ್ಮಗಳನ್ನು ಮಾಡಿಸುತ್ತಾನಾದುದರಿಂದ ಶ್ರೀಹರಿಯು ಕಾರಣಾಹ್ವಯ = ಕಾರಣನಾಮದಿಂದ ಕರೆಸುತ್ತಾನೆಂದು ಹೇಳಿದ್ದಾರೆ. ಈ ಕಾರಣಾಹ್ವಯ ಆಹ್ವಯ = ನಾಮವುಳ್ಳವ, ಜ್ಞಾನಕರ್ಮ ಪ್ರೇರಕನು ತಾನಾಗಿ = ಜ್ಞಾನ ಜ್ಞಾನೇಂದ್ರಿಯಾಧಿಪರಲ್ಲಿ ಪ್ರೇರಿಸಿ ಜೀವರಿಗೆ ತಿಳಿವಳಿಕೆ ಈಯುವನು ಮತ್ತು ಕರ್ಮ ಇಂದ್ರಿಯಾಧಿಪರಾದ ತತ್ವೇಶರಿಗೆ ಕ್ರಿಯಾಪ್ರೇರಕನಾಗಿ ನೆಲೆಸಿದ್ದು, ಜೀವರಿಂದ ಸಕಲ ಕ್ರಿಯಾ ಮಾಡಿಸುವನು. ಮೂರು ಗುಣಮಯ ದ್ರವ್ಯ = ಸತ್ವ, ರಜ, ತಮೋಗುಣಮಯ = ಪ್ರಾಚುರ್ಯವಾದ, ದ್ರವ್ಯಗ = ತ್ರಿವಿಧವಾದ ಪದಾರ್ಥ ರೂಪಗಳಾದ ಜಡಪ್ರಕೃತಿಯಲ್ಲಿಯೂ, ಆ ಪದಾರ್ಥಗಳಲ್ಲಿ ದ್ರವ್ಯಗ = ಸತ್ವಾದಿ ಗುಣರೂಪ

ರಸಾದಿಗಳಿಗೆ ಆಶ್ರಯನಾಗಿ ದ್ರವ್ಯನೆಂದು, ಆ ಪದಾರ್ಥ ಆಕಾರನಾಗಿ, ತನ್ನಾಮದಲಿ, ಆಯಾ ಪದಾರ್ಥ ನಾಮದಿಂದ ಕರೆಸುತ್ತಾನೆ. ಇದನ್ನು ತೋರಿಕೊಳ್ಳದೆ = ಅಜ್ಞರಿಗೆ ತಿಳಿಸದೆ, ಜನರ ಮೋಹಿಪ = ಅಜ್ಞರಿಗೆ ಮೋಹಭ್ರಾಂತಿ ಪುಟ್ಟಿಸುವ ಮೋಹಕಲ್ಪಕನು = ಮೋಹ = ಮಾಯಾ = ಇಚ್ಛಾ ಶ್ರೀಹರಿಯು ತನ್ನ ಇಚ್ಛೆಯಿಂದ ಭ್ರಾಂತಿ ಹುಟ್ಟಿಸಿ ಬಂಧನಗೈಸುವ; ಇದನ್ನು ತಿಳಿದರೆ ಮೋಚಕ.

**ದ್ರೌಪದೀಶಪತಿ ವಿಠಲರು :** ಕಾರಣಾಹ್ವಯ.
**ಭಾವಸೂಚನ :** ಕಾರಣೇತಿ ॥ ದ್ರವ್ಯಗತೇತಿ ಪದಚ್ಛೇದಃ ॥೧೦॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಾರಣ" ಇತಿ ॥ "ಪ್ರಾಣವತಾ ಶಬ್ದಾತ್" ಇತಿ ಚ ॥ "ಗುಣಮಯ" ತದ್ವಿಕೃತ ॥ ಕಲ್ಪಕಃ ತತ್ಕರ್ತಾ ॥೧೦॥

### ಕನ್ನಡಾರ್ಥ

"ಓಂ ಪ್ರಾಣವತಾ ಶಬ್ದಾತ್ ಓಂ" ಎಂಬ ಬ್ರಹ್ಮಸೂತ್ರದಲ್ಲಿ (ಅ. ೨, ಪಾ. ೪, ಸೂ. ೧೬, ಅಧಿ. ೧೦) ಪರಮಾತ್ಮನೇ ತನ್ನ ಅಧೀನಗಳಾದ ಚಕ್ಷು ಶ್ರೋತ್ರ ಮುಂತಾದ ಕರಣಗಳಿಂದ, ಇಂದ್ರಿಯಗಳಿಂದ, ಜೀವನಿಂದ ನೋಡುವದು ಮುಂತಾದ ವ್ಯಾಪಾರಗಳನ್ನು ಮಾಡಿಸುತ್ತಾನೆ. ಯಾಕೆಂದರೆ "ಏಷ ಹ್ಯನೇನ ಆತ್ಮನಾ ಚಕ್ಷುಷಾ ದರ್ಶಯತಿ, ಶ್ರೋತ್ರೇಣ ಶ್ರಾವಯತಿ, ಮನಸಾ ಮನಯತಿ, ಬುಧ್ಯಾ ಬೋಧಯತಿ, ತಸ್ಮಾದೇತಾವಾಹುಃ ಸ್ಮೃತಿರಸ್ಮೃತಿಃ" ಎಂಬ ಭಾಲ್ಲವೇಯ ಶ್ರುತಿಯು "ಪರಮಾತ್ಮನು ಜೀವನಿಗೆ ಸ್ವಾಧೀನತೆಯಿಂದಲೇ (ಅಂದರೆ ತನ್ನ ಅಧೀನದಲ್ಲಿ ಇರುವಂತಹದೇ ಆದ) ಇಂದ್ರಿಯಗಳ ಅಲ್ಪ ಸ್ವಾಮಿತ್ವವನ್ನು, ಇಂದ್ರಿಯಗಳ ಒಡೆತನವನ್ನು (ತುಸುವಾಗಿಯೇ) ಕೊಟ್ಟು ಅಸ್ವತಂತ್ರ ಜೀವನಿಂದ ತನ್ನ ಇಚ್ಛೆಯಂತೆ ವರ್ತಿಸುವ ನೇತ್ರೇಂದ್ರಿಯದಿಂದ ರೂಪ ಮುಂತಾದವುಗಳನ್ನು ತೋರಿಸುತ್ತಾನೆ; ಕಿವಿಯಿಂದ ಕೇಳಿಸುತ್ತಾನೆ– ಮನಸ್ಸಿನಿಂದ ಮನನಮಾಡಿಸುತ್ತಾನೆ; ಬುದ್ಧಿಯಿಂದ ಬೋಧಿಸುತ್ತಾನೆ; ತಿಳಿಸುತ್ತಾನೆ; ಆದುದರಿಂದಲೇ ಪರಮಾತ್ಮನು ಸ್ವತಂತ್ರನು; ಸ್ವರೂಪ– ಜ್ಞಾನ ಇಚ್ಛಾಪ್ರವೃತ್ತಿ ಮುಂತಾದುವುಗಳಲ್ಲಿ ಪರಾಧೀನನಲ್ಲ; ಜೀವನು

ಅಸ್ವತಂತ್ರನು. ಜ್ಞಾನ ಇಚ್ಛಾ ಪ್ರವೃತ್ತಿ ಮುಂತಾದವುಗಳಲ್ಲಿ ಪರಮಾತ್ಮನನ್ನು ಅವಲಂಬಿಸಿರುವವನು" ಎಂದು ಹೇಳಿರುತ್ತದೆ. ಈ ಸೂತ್ರಭಾಷ್ಯದಲ್ಲಿ "ಕರಣೈಃ ಕಾರಣಂ ಬ್ರಹ್ಮ ಪುರುಷಾಪೇಕ್ಷಯಾಖಿಲಮ್ " ಶ್ರೋತ್ರಾದಿಭಿಃ ಕಾರಯತಿ ಕರಣಾನೀತ್ಯತೋ ವಿದುಃ ||" ಎಂಬ ವಚನಾನುಸಾರವಾಗಿ ಪರಮಾತ್ಮನು ಮುಖ್ಯ ಕಾರಕನು ಎಂಬುದಾಗಿ ಹೇಳಲ್ಪಟ್ಟದೆ. ಆದುದರಿಂದ "ಕಾರಣಾಹ್ವಯ" ಎಂದು ದಾಸವರ್ಯರು ನಿಬಂಧಿಸಿರುತ್ತಾರೆ. "ಗುಣಮಯ" ಎಂಬ ಪದಕ್ಕೆ "ತ್ರಿಗುಣಗಳ ವಿಕಾರದಿಂದ ಆದದ್ದು" ಎಂದು ಅರ್ಥ. "ಮೋಹಕಲ್ಪಕ" ಎಂದರೆ "ಮೋಹವನ್ನು ಹುಟ್ಟಿಸುವವನು ಎಂದು ಅರ್ಥವು || ೧೦ ||

**ಅವತರಣಿಕಾ:** ಈಗ ಸಂಕ್ಷಿಪ್ತ ಪಂಚಭೂತ, ತನ್ಮಾತ್ರಾ, ಕರ್ಮೇಂದ್ರಿಯ, ಜ್ಞಾನೇಂದ್ರಿಯ ಕಾರ್ಯ ಪ್ರವೃತ್ತಿ, ಯಾವಯಾವ ರೂಪದಿಂದ ಇದ್ದು ಮಾಡುತ್ತಾನೆಂಬುದನ್ನು ಹೇಳುತ್ತಾರೆ.

**ಮೂಲ:**

**ದ್ರವ್ಯನೆನಿಸುವ ಭೂತ ಮಾತ್ರ ದೊ |**
**ಳವ್ಯಯನು ಕರ್ಮೇಂದ್ರಿಯಗಳೊಳು |**
**ಭವ್ಯಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು ||**
**ಸ್ತವ್ಯ (ತವ್ಯ) ಕಾರಕನೆನಿಸಿ ಸುಖಮಯ |**
**ಸೇವ್ಯ ಸೇವಕನೆನಿಸಿ ಜಗದೊಳು |**
**ಹವ್ಯವಾಹನನರಣಿಯೊಳಗಿಪ್ಪಂತೆ ಇರುತಿಪ್ಪ || ೧೧ ||**

**ಪದ್ಯಾರ್ಥ: ದ್ರವ್ಯನೆನಿಸುವ ಭೂತದಿ—** ಪಂಚಭೂತಗಳಲ್ಲಿ ಶ್ರೀಹರಿಯು ದ್ರವ್ಯ = ಪಂಚಭೂತಾತ್ಮಕ ಸತ್ವಾದಿ ಗುಣರೂಪ ರಸಾದಿಗಳಿಗೆ ಆಶ್ರಯನಾಗಿ ದ್ರವ್ಯನೆಂದು ಕರೆಸುತ್ತಾನೆ. ಪಂಚತನ್ಮಾತ್ರಾದಲ್ಲಿ ಅವ್ಯಯ = ಸ್ವರೂಪತಃ ಯಾವುದಕ್ಕೆ ನಾಶವಿಲ್ಲವೋ ಅದು ಅವ್ಯಯವೆಂದು ಕರೆಸುತ್ತದೆ. "ಅವ್ಯಯ ಪುರುಷಃ ಸಾಕ್ಷಿಃ" ಎಂಬ ಸಹಸ್ರನಾಮ ವಚನದಂತೆ ಇನ್ನು ಕರ್ಮೇಂದ್ರಿಯಗಳೊಳು ಭವ್ಯನೆನಿಸುತ್ತಾನೆ, ಭವ್ಯ = ಕುಶಲನಾಗಿ ಬಹು ಜಾಗರೂಕತೆಯಿಂದ ಜೀವನ ಕರ್ಮೇಂದ್ರಿಯ ಪ್ರವರ್ತಕನಾಗಿರುವನು. ಭೂತ ಭವ್ಯ ಭವತ್ಪ್ರಭುಃ" ಎಂಬ ಸಾಸಿರನಾಮದಂತೆ ಸತ್ಕ್ರಿಯನೆನಿಸಿ ಭವ್ಯನಾಮದಿಂದಿರುವನು. ಇನ್ನು ಜ್ಞಾನೇಂದ್ರಿಯಗಳಲ್ಲಿ ಸ್ತವ್ಯಕಾರಕನೆನಿಸಿ = ಸ್ತುತ್ಯನಾಗಿ-

ಪೂಜ್ಯನಾಗಿ (ತವ್ಯ= ಪ್ರೇರಕನಾಗಿ) ದ್ದರೂ, ತಾನು ಸುಖಮಯ = ಸುಖ ಪೂರ್ಣ ಆನಂದಪೂರ್ಣನಾಗಿರುವನು. ಸೇವ್ಯ-ಸೇವಕನೆನಿಸಿ, ಜಗದೊಳು = ಜಗತ್ತಿನಲ್ಲಿ ಸೇವಾಮಾಡುವ ಜೀವರಲ್ಲಿ ಸೇವಕನು, ಸೇವಾ ತೆಗೆದುಕೊಳ್ಳುವವ ರಲ್ಲಿ ಸೇವ್ಯನೆಂದು, ಹವ್ಯವಾಹನ = ಹೋಮ ಮಾಡುವ ಘೃತವು ದೇವತೆ ಗಳಿಗೆ ಯಾರ ದ್ವಾರ ಮುಟ್ಟುತ್ತದೆಯೋ ಅಂದರೆ = ಅಗ್ನಿಯಲ್ಲಿ ಅರಣಿ = ಕಾಷ್ಟರೂಪವಾದ ಯಜ್ಞಪಾತ್ರೆಯನ್ನು ಕಡೆಯುವ ಕಾಷ್ಟದಿಂದ ಕಡೆದರೆ ಅಗ್ನಿ ಹೇಗೆ ಹೊರಡುವದೊ, ಹಾಗೆ ಅರಣಿಯಲ್ಲಿಪ್ಪ ಅಗ್ನಿಯಂತೆ ಇರುವನು. ಸಾಧನಮಾಡಿ ಧ್ಯಾನಗೈವರ ಹೃದಯದಿ ಪೊಳೆವನು.

**ದ್ರೌಪದೀಶಪತಿವಿಠಲರು :** ದ್ರವ್ಯನೆನಿಸುವ = ೫ ಭೂತಾ, ಇದ ರೊಳಗೆ ಕರ್ಮೇಂದ್ರಿಯ ಪಂಚ ಇದಕೆ ಕಾರ್ಯ, ಇದರೊಳು ಭವ್ಯರೂಪ ೫ ಮಾತ್ರಾ, ಇದರಲ್ಲಿ ಜ್ಞಾನೇಂದ್ರಿಯ ಪಂಚ, ಇದಕೆ ಕಾರಣಸ್ತವ್ಯರೂಪ. ಈ ಹತ್ತು ದ್ರವ್ಯಗಳು ಇದರೊಳಗೆ, ಅವ್ಯಯರೂಪ, ರಾಜಭೃತ್ಯನ್ಯಾಯದಿಂದ ಜೀವರಲ್ಲಿದ್ದಾರೆ.

**ಭಾವಸೂಚನ :** ದ್ರವ್ಯೇತಿ || " ಅವ್ಯಯಃಪುರುಷಃ ಸಾಕ್ಷೀತಿ " | **ಭೂತ** ಭವ್ಯ ಭವತ್ಪ್ರಭುಃ ಇತಿ || ಸ್ತವ = ಸ್ತವಪ್ರಿಯ ಇತಿ | ಸತ್ಕ್ರಿಯಸಾಧುರಿತಿ ಚ | ನಾಮಸುಪಾಠಾತ್ ||೧೧||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದ್ರವ್ಯ" ಇತಿ || ದ್ರವಣ ಪ್ರಾಪ್ಯತ್ವಾತ್ ದ್ರವ್ಯಮ್ || "ಅವ್ಯಯಃ"— ಓಂ * "ತ್ವಯಾ ವಯಂ ಶಾಶದ್ಮಹೇ ರಣೇಷು ನದಂ ಓದತೀನಾಮ್ || ಪ್ರಪಶ್ಯಂತೋ ಯುಧೇನ್ಯಾನಿ ಭೂರಿನದಂ ಯೋ ಯುವತೀನಾಮ್ || * ಓಂ || ಅವಿನಶ್ವರ ಗುಣಜಾತಾತ್ಮಕತ್ವಾತ್ (ವಾ) ಅವ್ಯಯಾನಿ ಗುಣಜಾತಾನಿ ಅಸ್ಯ ಇತಿ ಮತ್ವರ್ಥೀಯ ಅಚ್ ಪ್ರತ್ಯಯೇ ಅವ್ಯಯಃ ಇತಿ || ಭವ್ಯಃ ಮಂಗಲಃ || " ಸತ್ಕ್ರಿಯಃ " – ಓಂ * || ಮಹೇ ವೀರಾಯ ತವಸೇ ತುರಾಯ ವಿರಪ್ಶಿನೇ ವಜ್ರಿಣೇ ಶಂತಮಾನಿ || ವಚಾಂಸ್ಯಾಸಾ ಸ್ಥವಿರಾಯ ತಕ್ಷಂ ಸಮಾತರಾ || * ಓಂ || ಸತೀ ಸಮೀಚೀನಾ ಕೃತಿಃ ಸ್ತುತಿಃ ನಿರ್ಮಾಣರೂಪಾ ಕೃತಿಃ (ವಾ) ಯಸ್ಯ-(ಯಸ್ಮಿನ್) ಸಃ ಸತ್ಕೃತಿಃ || " ಸ್ತವ್ಯಃ " – ಓಂ * "ಮಹೇ ನೃಶಸ್ವ ಶೂರರಾಧಸೇ ಉದೂಷು ಮಹ್ಯೈ ಮಘವನ್ ಮಘತ್ತಯೇ ಉದಿಂದ್ರ

ಶ್ರವಸೇ ಮಹೇ ॥ ತ್ವಂ ನ ಇಂದ್ರ ಕೃತಯುಃ ॥" * ಓಂ ॥ ರಾಧಸಾ ದ್ರವಿಣೇನ ಅನ್ನೇನ ಜ್ಞಾನಾದಿನಾ ಚ ಸ್ತ್ರಣಾತಿ-ಆಚ್ಛಾದಯತಿ-(ಅಭಿಮೃಶತಿ) ಭಕ್ತಾನ್ ಇತಿ ಸ್ತವ್ಯಃ॥ "ಕಾರಕ"-ಜ್ಞಾನಜನಕಃ ॥ ಹವ್ಯವಾಹನೇತ್ಯಗ್ನಿಃ ॥ ಅರಣಿ - ಅಶ್ವತ್ಥ ॥೧೧॥

8223 ಹೋಗುವದು, ಬರುವದು ಮುಂತಾದ ಗತಿಯಿಂದ ಸಿಗುವಂತಹದು ಯಾವದೋ ಅದು ದ್ರವ್ಯವೆನಿಸುತ್ತದೆ. "ಅವ್ಯಯ" ನಾಮವು ಶ್ರೀ ವಿಷ್ಣು ಸಹಸ್ರ ನಾಮಾಂತರ್ಗತವಾದುದು. "ತ್ವಯಾ ಮಯುಂ" ಎಂಬ ಬೃಹತೀ ಮಂತ್ರವು ಈ ನಾಮಾರ್ಥವನ್ನು ವಿವರಿಸುತ್ತದೆ. ಪರಮಾತ್ಮನು (ಹರಿಯು) ನಾಶವಿಲ್ಲದಂತಹ ಗುಣಗಣ ಪರಿಪೂರ್ಣ ಸ್ವರೂಪನಾದುದರಿಂದ "ನಾಶರಹಿತ ಗುಣಗಳುಳ್ಳವನು-ಅವ್ಯಯನು" ಎಂದು ಈ ಮಂತ್ರದ ಸಾರ. "ಭವ್ಯ" ವೆಂಬ ಪದಕ್ಕೆ "ಮಂಗಲ" ವೆಂದು ಅರ್ಥ. "ಸತ್ಕ್ರಿಯಃ" — ಈ ಶಬ್ದವು ವಿಷ್ಣು ಸಹಸ್ರ ನಾಮಾಂತರ್ಗತವಾದ "ಸತ್ಕೃತಿ" ಎಂಬ ನಾಮದ ಸಮಾನಾರ್ಥಕ ವಾದುದರಿಂದ ಈ ನಾಮದ ಬೃಹತೀಮಂತ್ರವನ್ನೇ ಮೂಲ ಪದ್ಯದಲ್ಲಿರುವ "ಸತ್ಕ್ರಿಯ" ಶಬ್ದದ ವ್ಯಾಖ್ಯಾನರೂಪವಾಗಿ ವ್ಯಾಖ್ಯಾನಕಾರರು ಉದಾಹರಿಸು ತ್ತಾರೆ. "ಸಮೀಚೀನವಾದ ಸ್ತೋತ್ರಗಳುಳ್ಳವನು; ಅಥವಾ ನಿರ್ದುಷ್ಟವಾದ ಉತ್ತಮ ಕ್ರಿಯಾ ಜಗನ್ನಿರ್ಮಾಣ ಮೊದಲಾದ ಕ್ರಿಯಾಗಳನ್ನು ಮಾಡುವನು" ಎಂಬುದು ಈ ಮಂತ್ರದ ಸಾರ. "ಸ್ತವ್ಯ"-ಇದೂ ಸಹ ಶ್ರೀ ವಿಷ್ಣುಸಹಸ್ರ ನಾಮಾಂತರ್ಗತವಾದುದು. "ದ್ರವ್ಯ ಅನ್ನ - ಜ್ಞಾನ ಮುಂತಾದವುಗಳಿಂದ ಭಕ್ತರನ್ನು ಹೊಂದಿಸುವವನು-ಪೂರೈಸಿ ಸಂತೋಷಪಡಿಸುವದರಿಂದ "ಸ್ತವ್ಯ" ಎಂದು ಪರಮಾತ್ಮನಿಗೆ ಕರೆಯುವರು." ಎಂದು "ಮಹೇಮೃಶಸ್ವ" ಎಂಬ ಬೃಹತೀಮಂತ್ರದ ಅರ್ಥಸಾರ. "ಕಾರಕ" ಎಂಬ ಪದಕ್ಕೆ "ಜ್ಞಾನಜನಕ" ಎಂದು ಅರ್ಥಮಾಡಬೇಕು. "ಹವ್ಯವಾಹನ" ಎಂದರೆ ಅಗ್ನಿ. "ಅರಣಿ" ಎಂದರೆ ಅಗ್ನಿಯ ಆವಾಸವೆಂದು ಪ್ರಸಿದ್ಧಿಯಿರುವದರಿಂದ "ಅಶ್ವತ್ಥ"ವೆಂದು ತಿಳಿಯಬೇಕು. ॥೧೧॥

**ಅವತರಣಿಕಾ :** ಇನ್ನು ಮನಾದಿ ಇಂದ್ರಿಯಗಳಲ್ಲಿ ಶ್ರೀ ಪ್ರಾಣದೇವರು ಯಾವ ನಾಮದಿಂದ ಇರುವರೆಂಬುದನ್ನು ಮತ್ತು ಪ್ರಾಣಾಂತರ್ಯಾಮಿರೂಪವಿವರ. ಕಾಠಕೋಪನಿಷತ್ ಪ್ರಮೇಯವನ್ನು ಉಪದೇಶಿಸುತ್ತಾರೆ.




ಮೂಲ :

ಮನವೆ ಮೊದಲಾದಿಂದ್ರಿಯಗಳೊಳ ।
ಗನಿಲದೇವನು ಶುಚಿಯೆನಿಸಿ ಕೊಂ ।
ಡನವರತ ನೆಲೆಸಿಪ್ಪ ಶುಚಿಷ(ತಹೋ) ದ್ಹೋತನೆಂದೆನಿಸಿ ॥
ತನುವಿನೊಳಗಿಪ್ಪನು ಸದಾ ವಾ ।
ಮನ ಹೃಷೀಕೇಶಾಖ್ಯರೂಪದ ।
ಲನುಭವಕೆ ತಂದೀವ ವಿಷಯಜ ಸುಖವ ಜೀವರಿಗೆ ॥ ೧೨ ॥

**ಪದ್ಯಾರ್ಥ :** ಮನವೆ ಮೊದಲಾದ ಇಂದ್ರಿಯಗಳೊಳು = ಮನಸ್ಸೇ ಮೊದಲಾಗಿ ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯಗಳಲ್ಲಿ, ಅನಿಲ ದೇವನು = ಪ್ರಾಣದೇವರು, **ಶುಚಿ, ಶುಚಿಷತ್-ಹೋತ್** ಎಂದು ಮೂರು ರೂಪಗಳಿಂದ ಇರುತ್ತಾನೆ. ಕಾಠಕ ಉಪನಿಷತ್ ದ್ವಿತೀಯಾಧ್ಯಾಯ ದ್ವಿತೀಯ ದಲ್ಲಿ ಎರಡನೇ ಮಂತ್ರದಲ್ಲಿ, ಶ್ರೀಮಂತ್ರಾಲಯದ ಗುರುರಾಜರು ಖಂಡಾರ್ಥ ದಲ್ಲಿ—“ಶುಚೋವಾಯವಸ್ತೀತಿ ಶುಚಿಷತ್ । ವಾಯುಸ್ಥಃ ಶುಚಿ ಶಬ್ದೋಪ ಪದಾದಸ್ತೆ ಶತೃ ಪ್ರತ್ಯಯೇಶ್ನಸೋರಲ್ಲೋಪ ಇತ್ಯಾಕಾರಲೋಪೇ ಷತ್ವೇಚ ಶುಚಿಷದಿತಿರೂಪಂ” । ಎಂದು ಮತ್ತು **ಹೋತಾ ।** ಹು ದಾನಾದನ ಯೋರಿತ್ಯತಃ ಕರ್ತೃರಿತೃಚ್ ॥ ಜುಹೋತಿಶಬ್ದಾದಿ ವಿಷಯಾನತ್ತಿ ಅನುಭವ ತೀತೀ ಇಂದ್ರಿಯಾದಿಸ್ಥಃ ಎಂದು ಶಬ್ದ ನಿರ್ವಚನಮಾಡಿರುವರು. ದಾಸ ರಾಯರು, ಈ ಪದ್ಯದಲ್ಲಿ ಕ್ರಮವಾಗಿ ಮನ = ಶುಚಿ, ಜ್ಞಾನೇಂದ್ರಿಯ = ಶುಚಿ ಷತ್, ಕರ್ಮೇಂದ್ರಿಯದಲ್ಲಿ ಹೋತಾ, ಈ ವಾಯುರೂಪ ಅಂತರ್ಯಾಮಿಯಾಗಿ ಶ್ರೀಹರಿಯು, ಶುಚಿ ಶುಚಿಷತ್-ಹೋತಾನಾಮದಿಂದ ಇರುವನೆಂದು ಫಲಿತಾಭಿ ಪ್ರಾಯ. ಇನ್ನು ತನುವಿನೊಳಗಿಪ್ಪನು ಸದಾ **ವಾಮನ** = ವಿಶಿಷ್ಟವಾದ ದೇಹದಲ್ಲಿ, ನಿರಂತರದಲ್ಲಿ ವಾಮನರೂಪದಿಂದ ಇರುವನು = ಹಿಂದೆ ಹೇಳಿದಂತೆ ಪ್ರಾಣಾಂತರ್ಯಾಮಿಯಾಗಿದ್ದು, ಮೇಲೆ ಹೇಳಿದ ಮೂರು ರೂಪಗಳಲ್ಲದೆ ಮುಂದೆ ಕಾಠಕೋಪನಿಷತ್ ಮಂತ್ರ ೩ ರಲ್ಲಿ.

“ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ । ಮಧ್ಯೇ **ವಾಮನ** ಮಾಸೀನಂ ವಿಶ್ವೇದೇವಾ ಉಪಾಸತೇ ॥ ೩ ॥ ಇದಕ್ಕೆ ಶ್ರೀ ಮಂತ್ರಾ ಲಯ ಪ್ರಭುಗಳು “ಯೋಂಗುಷ್ಠ ಮಾತೃತ್ವಾದಿನಾ ಪ್ರಾಗುಕ್ತಪ್ರಾಣಂ

ವಾಯುಂ, ಊರ್ಧ್ವ ಮುನ್ನಯತಿ ಊರ್ಧ್ವಗತಿ ಮತ್ತಯಾ ಪ್ರೇರಯತಿ। ಅಪಾನಂ ವಾಯುಂ ಪ್ರತ್ಯಗಥಃ । ವಿಣ್ಮೂತ್ರಾದಿ ನಿಷ್ಕಾಸನ ಹೇತುತಯಾ ಅಸ್ಯತಿ ಪ್ರೇರಯತಿ । ತಂ ಮಧ್ಯೇ ಹೃದಿ ಆಸೀನಂ **ವಾಮನಂ** ವಿಶ್ವೇಸರ್ವೇ ದೇವಾ ಉಪಾಸ ಇತಿ । ಹೀಗೆ ಪ್ರಾಣಾಪಾನಾದಿಗಳಲ್ಲಿ ಅದೇ ನಾಮದಿಂದ ಶ್ರೀಹರಿಯು ಆಯಾ ಕಾರ್ಯ ಮಾಡುತ್ತಾನೆಂದು ಅರ್ಥ; ಮಧ್ಯ ದೇಹದಲ್ಲಿ ವಾಮನ =(ಸುಂದರನಾಗಿ) ಅತ್ಯಂತ ಪ್ರಿಯತಮನೂ ಇರುವನೆಂದು ವಿಶ್ವ ದೇವತೆಗಳು ಉಪಾಸನ ಮಾಡುತ್ತಾರೆಂದು ಭಾವ ಮತ್ತು ಶ್ರೀಹರಿಯು ಹೃಷೀ ಕೇಶಾಖ್ಯ ರೂಪದಿ = "ಹೋತಾ ಸರ್ವೇಂದ್ರಿಯಾದಿಸ್ಥ" ನೆಂದು ಕಾಠಕಭಾಷ್ಯ ಪ್ರಮಾಣವಿರುವ ಕಾರಣ, ಹೃಷೀಕೇಶ ಇಂದ್ರಿಯಗಳಿಗೆ ಒಡೆಯನಾದ ಹರಿಯು ಈ ಹೃಷೀಕೇಶರೂಪದಿಂದ, ವಿಷಯಜನ್ಯ ಸುಖ ಅನುಭವಕೆ ತಂದೀವ = ಸಕಲೇಂದ್ರಿಯ ವಿಷಯಗಳನ್ನು ಜೀವರ ಅನುಭವಕ್ಕೆ ತಂದುಕೊಡುವನೆಂದು ಚನ್ನಾಗಿ ಸದ್ಗುರುಗಳಿಂದ ತಿಳಿದು ಧ್ಯಾನಮಾಡಲು ವಿಷಯಾದಿ ಬಂಧನಿವೃತ್ತಿ ಪೂರ್ವಕ ಮೋಕ್ಷಾನಂದ ಸುಖ ಲಭಿಪುದು. ಇದೇ ವಿಷಯವನ್ನೇ ದ್ರೌಪ ದೀಶಪತಿ ವಿಠಲರು ಚನ್ನಾಗಿ ಬರೆದಿದ್ದಾರೆ.

**ದ್ರೌಪದೀಶಪತಿ ವಿಠಲರು:** ಮನವೆ ಮೊದಲಾದಿಂದ್ರಿಯ = ಸರ್ವೇಂದ್ರಿಯಗಳಲ್ಲಿ ಮುಖ್ಯ ಪ್ರಾಣದೇವರು ಇರುವ ರೀತಿ.

೧ ಕರ್ಮೇಂದ್ರಿಯದಲ್ಲಿ = ಹೋತಾರೂಪ

೨ ಜ್ಞಾನೇಂದ್ರಿಯದಲ್ಲಿ = ಶುಚಿಷತ್

೩ ಮನಸಿನಲ್ಲಿ = ಶುಚಿ

೪ ಇಂಥಾ ಶರೀರದೊಳಗೆ **ವಾಮನ**

೫ ಇಂದ್ರಿಯಗಳೊಳಗೆ ಹೃಷೀಕೇಶ ಇದ್ದು ಜೀವರಿಗೆ ಸುಖ ಕೊಡುತ್ತಾನೆ.

**ಭಾವಸೂಚನ:** ಮನ ಇತಿ ॥ ವಾಯುಸ್ತ ಶುಚಿಷತ್ ಸ್ಮೃತಿ. ಕಾಠಕ ಭಾಷ್ಯೋಕ್ತ ಮಾಹ ॥ ಹೋತಾ ಅನುಭವಿಪಾ ॥೧೨॥

"ಮನವೆ" ಇತಿ ॥ "ಇಂದ್ರಿಯೇಷು ಶುಚಿಃ ವಾಯುಃ" ಇತಿ ಪ್ರಥ್ಯಾನೇ ॥ "ವಾಯುಸ್ಥಃ ಶುಚಿಷತ್ ಸ್ಮೃತಃ ॥" ಇತಿ ಚ ॥ ಹೋತಾ । ಹೋತಾ ಸರ್ವೇಂದ್ರಿಯಾದಿಸ್ಥಃ ಇತಿ ಚ ॥ "ವಾಮನಃ" – ॥ ೩೦ * ॥

"ಗೋಮದಶ್ವಾವದ್ರಥವದ್ಯಂತೋ ಯೂಯಂ ಪಾತ ಸ್ವಸ್ತಿಭಿಃ ಸದಾನಃ ||
ಬ್ರಹ್ಮಾಣಿ ಇಂದ್ರೋಪಯಾಹಿ ವಿದ್ವಾನರ್ವಾಂಚಸ್ತೇ ಹರಯಃ ಸಂತು ||"
* ಓಂ || ವಾಮಂ ಅಭೀಷ್ಟಜಾತಂ ನಯತಿ ಇತಿ ವಾಮನಃ || ೧೨ ||

## ಕನ್ನಡಾರ್ಥ

"ಮನವೆ" ಎಂಬ ಪದ್ಯದಿಂದ ಮನ ಆದಿ ಇಂದ್ರಿಯಗಳಲ್ಲಿ ಹಾಗೂ ಶರೀರದಲ್ಲಿ ಚಿಂತನೀಯುವಾದ ಭಗವದ್ರೂಪವನ್ನು ತಿಳಿಸುತ್ತಾರೆ. "ಮನ ಆದಿ ಇಂದ್ರಿಯಗಳಲ್ಲಿ ಇರುವ ವಾಯುವಿಗೆ "ಶುಚಿ" ಎಂದು ಹೆಸರು" ಎಂದು ಪ್ರಧ್ಯಾನವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿರುತ್ತದೆ. "ವಾಯು ದೇವರಿಗೆ ಶುಚಿ ಯೆಂದು ಕರೆಯುವದರಿಂದ ವಾಯುದೇವರಲ್ಲಿರುವ ಭಗವದ್ರೂಪಕ್ಕೆ "ಶುಚಿಷದ್" ಎಂದು ಹೆಸರು. "ವಾಮನ" ಈ ನಾಮವು ಶ್ರೀ ವಿಷ್ಣು ಸಹಸ್ರನಾಮಾಂತರ್ಗತವಾದುದು. "ವಾಮ ಅಂದರೆ ಅತ್ಯಂತ ಅಭೀಷ್ಟ ವಾದುದು–ಪ್ರಿಯತಮವೆನಿಸಿದುದು; ಅದನ್ನು ತರುವನು, ಭಕ್ತರಿಗೆ ಒದಗಿಸಿ ತಂದುಕೊಡುವವನು ವಾಮನನು" ಎಂದು ಬೃಹತೀಮಂತ್ರದ ಭಾವಾರ್ಥ || ೧೨ ||

**ಅವತರಣಿಕಾ :** ರಮಾಬ್ರಹ್ಮಾದಿಗಳು ಪ್ರೇರ್ಯರು. ಇವರಲ್ಲಿ ಪ್ರೇರಕ ರೂಪದಿಂದ ಶ್ರೀಹರಿಯು ರಾಜ-ಭೃತ್ಯನ್ಯಾಯದಿಂದ ಇದ್ದು ಸರ್ವರಿಗೆ ಪ್ರೇರಿಸು ವನು. ಪ್ರೇರಿಸಿಕೊಂಬುವರಲ್ಲಿ ಪ್ರೇರಕನಾಮದಿಂದಿದ್ದು ಸರ್ವ ವ್ಯಾಪಾರಗಳನ್ನೂ ಸದಾ ಹರಿಯೇ ಮಾಡುತ್ತಾನೆಂಬ ನಿಶ್ಚಯವಾದ ಜ್ಞಾನವು ಧ್ಯಾನದಲ್ಲಿ ಬರಬೇಕಾಗಿ ಭಗವಚ್ಚಿಂತನಾ ಬಗೆ ಉಪದೇಶಿಸುತ್ತಾರೆ.

ಮೂಲ :

**ಪ್ರೇರಕ ಪ್ರೇರ್ಯರೊಳು ಪ್ರೇರ್ಯ |**
**ಪ್ರೇರಕನು ತಾನಾಗಿ ಹರಿ ನಿ |**
**ರ್ವೈರದಿಂದ ಪ್ರವರ್ತಿಸುವ ತನ್ನಾಮರೂಪದಲಿ ||**
**ತೋರಿಕೊಳ್ಳದೆ ಸರ್ವರೊಳು ಭಾ |**
**ಗೀರಥೀ ಜನಕನು ಸಕಲ ವ್ಯಾ |**
**ಪಾರಗಳ ತಾ ಮಾಡಿಮಾಡಿಸಿ ನೋಡಿ ನಗುತಿಪ್ಪ || ೧೩ ||**

**ಪದ್ಯಾರ್ಥ :** ಪ್ರೇರಕ = ರಮಾಬ್ರಹ್ಮಾದಿ ಸಕಲ ತತ್ವೇಶರಲ್ಲಿ ಪ್ರೇರಕ ರೂಪದಿಂದ, ಪ್ರೇರ್ಯರೊಳು = ತತ್ವಾಭಿಮಾನಿಗಳೊಳು ಪ್ರೇರಣಾ ಮಾಡಿ ಚೇಷ್ಟಾ ಮಾಡಿಸಿಕೊಂಬುವ, ಜೀವರಲ್ಲಿ ಎಂದರೆ ಪ್ರೇರ್ಯರೊಳು ಹೀಗೆ ಪ್ರೇರಕ ಪ್ರೇರ್ಯ ಎರಡೂ ರೂಪದಿಂದ ತಾನಾಗಿ, ಹರಿಯು = ಶ್ರೀಹರಿಯು ಬಿಂಬ ರೂಪನೂ ತಾನೇ, ನಿರ್ವೈರದಿಂದ ಪ್ರವೃತ್ತಿಸುವ = ಸಕಲ ತ್ರಿವಿಧ ಜೀವರಲ್ಲಿ ಅವರವರ ಯೋಗ್ಯತೆಯನುಸರಿಸಿ, ತನ್ನಾಮರೂಪದಲ್ಲಿ ಕಾರಣ ಪ್ರೇರಕ, ಕಾರ್ಯಪ್ರೇರ್ಯರಲ್ಲಿ, ಆಯಾ ನಾಮಗಳಿಂದ ಪ್ರವೃತ್ತಿಸುವ = ಕಾರ್ಯಾರಂಭ ಮಾಡಿಸುವನು. ಇಂತು ಭಾಗೀರಥೀ ಜನಕನು = ಸಕಲ ವ್ಯಾಪಾರ ಮಾಡಿದರೂ ತಾನು ಪಾವನಳಾದ **ಗಂಗೆಯನ್ನು ಪಾದದಿಂದ** ಜನಿಯಿಸಿದ ಕಾರಣ ಮಹಾ ಪಾವನನು, ದೋಷದೂರನು. ತಾನು ತೋರಿಕೊಳ್ಳದೆ = ತನ್ನ ಸ್ವಕೀಯವಾದ ಪ್ರೇರಕ ಪ್ರೇರ್ಯರೂಪಗಳನ್ನು ತೋರಿಸಿಕೊಳ್ಳದೇ, ಸರ್ವರೊಳು = ಸಕಲರಾದ ತ್ರಿವಿಧ ಜೀವರಲ್ಲಿ, ಸಕಲ ವ್ಯಾಪಾರಗಳ ಮಾಡಿ ಮಾಡಿಸುತ್ತಾ, ತನ್ನ ಈ ವ್ಯಾಪಾರಗಳನ್ನು ತಿಳಿಯದ ಅಜ್ಞಜನರನ್ನು ನೋಡಿ, ನಗುತಿಪ್ಪ = ಹಾಸ್ಯಮಾಡುತ್ತಿರುವನು.

**ದ್ರೌಪದೀಶಪತಿ ವಿಠಲರು :** ಪ್ರೇರಕ ಪ್ರೇರ್ಯರೊಳು = ಪ್ರೇರಕ ರಾಜಾ, ಪ್ರೇರ್ಯಭೃತ್ಯಾ-ಇವರೊಳಗೆ ತನ್ನಾಮದಿಂದ ಇರುತ್ತಾನೆ, ಇವನಿಗೆ ಭೇದವಿಲ್ಲ.

**ಭಾವಸೂಚನ :** ಪ್ರೇರಕೇತಿ ಬ್ರಹ್ಮಾದಯಃ ॥ ೧೩ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಪ್ರೇರಕ" ಇತಿ ॥ ರಮಾಪ್ರೇರ್ಯಾಃ ಅಜಾದಯಃ ॥ "ಹರಿಃ"—॥ ಓಂ* ನೋ ಅಭಯಂ ಕೃಧಿ ಮಘವನ್ ಶಗ್ಧಿ ತವ ತನ್ನ ಊತಿಭಿಃ ॥ ವಿದ್ವಿಷೋ ವಿಮೃಧೋ ಜಹಿ ॥ ತ್ವಂ ಹಿ ರಾಧಸ್ಪತೇ ರಾಧಸೋ ಮಹಃ ॥ ಓಂ* ॥ ಹರತಿ ಶತ್ರೂನ್ ಇತಿ ಹರಿಃ ॥೧೩॥

**ಕನ್ನಡಾರ್ಥ**

ಪ್ರೇರಕರಲ್ಲಿಯೂ ಪ್ರೇರ್ಯರಲ್ಲಿಯೂ ಭಗವಚ್ಚಿಂತನೆಯ ಬಗೆಯನ್ನು ನಿರೂಪಿಸಿರುತ್ತಾರೆ — " ಪ್ರೇರಕ ಪ್ರೇರ್ಯ " ಎಂಬ ಪದ್ಯದಿಂದ.

ಯೋಗ್ಯತೆಯಲ್ಲಿ ತನಗಿಂತ ಮಿಗಿಲಾದವರು, ಗುಣೋತ್ತಮರು.

ಇವರೇ ಸ್ತೋತ್ತಮರು. ಸ್ತೋತ್ತಮರು ಸ್ವಾವರರಿಗೆ ಕೆಳಗಿನವರಿಗೆ (ಕಡಮೆಯವರಿಗೆ) ಪ್ರೇರಕರು. ಪರಮಾತ್ಮನು ರಮಾದೇವಿಗೆ ಪ್ರೇರಕನು. ರಮಾದೇವಿಯು ಬ್ರಹ್ಮ ಮುಂತಾದವರಿಗೆ ಪ್ರೇರಕರು. ಬ್ರಹ್ಮ ಮುಂತಾದವರು ಉಳಿದವರಿಗೆ ಪ್ರೇರಕರು. ಹೀಗೆ ಪ್ರೇರಕ-ಪ್ರೇರ್ಯರಲ್ಲಿ ಆಯಾ ನಾಮ ರೂಪಗಳಿಂದ ಇದ್ದು ವ್ಯಾಪಾರಗಳನ್ನು ಪ್ರವರ್ತಿಸುತ್ತ ಅವರು ಮಾಡುವ ವ್ಯಾಪಾರದಿಂದ ಅವರೊಡನೆ ಕ್ರೀಡಿಸುವ. "ಹರಿ" ಎಂಬುದು ವಿಷ್ಣು ಸಹಸ್ರ ನಾಮಾಂತರ್ಗತವಾದುದು. "ಶತ್ರುಗಳನ್ನು ಸಂಹರಿಸುವದರಿಂದ ಹರಿ" ಎಂದು "ಹರಿನಾಮದ ಅರ್ಥ" ॥ ೧೩ ॥

**ಅವತರಣಿಕಾ :** ಹಿಂದೆ ಹೇಳಿದಂತೆ ಸಕಲ ಕರ್ಮಗಳಿಗೆ ಶ್ರೀಹರಿಯೇ ಮುಖ್ಯ ನಿಯಾಮಕನೆಂದು ಚನ್ನಾಗಿ ಅರಿತು ಸಕಲ ದ್ವಂದ್ವ ಕ್ರಿಯೆಗಳನ್ನೂ ಹರಿಗೆ ಸಮರ್ಪಿಸ ಬೇಕೆಂದು ಉಪದೇಶಿಸುತ್ತಾರೆ.

ಮೂಲ :

**ಹರಿಯೆ ಮುಖ್ಯ ನಿಯಾಮಕನು - ಯೆಂ ।**
**ದರಿದು ಪುಣ್ಯಾಪುಣ್ಯ ಹರ್ಷಾ ।**
**ಮರಷ (ಮರ್ಷ) ಲಾಭಾಲಾಭ ಸುಖದುಃಖಾದಿ ದ್ವಂದ್ವಗಳ ॥**
**ನಿರುತ ಅವನಂಘ್ರಿಗೆ ಸಮರ್ಪಿಸಿ ।**
**ನರಕ ಭೂ ಸ್ವರ್ಗಾಪವರ್ಗದ ।**
**ಕರಣ ನಿಯ್ಯಾಮಕನ ಸರ್ವತ್ರದಲಿ ನೆನೆವುತಿರು ॥ ೧೪ ॥**

**ಪದ್ಯಾರ್ಥ :** ಹರಿಯೆ = ಶ್ರೀಬಿಂಬರೂಪಿಯಾದ ಹರಿನಾಮಕ ಪರ ಮಾತ್ಮನೇ, ಮುಖ್ಯ ನಿಯಾಮಕನು = ಸಕಲ ಸ್ವತಂತ್ರಕರ್ತಾ ಕಾರಯಿತಾ ಅನ್ಯರಾದ ಯಾರಿಂದಲೂ ಪ್ರಚೋದಿತನಲ್ಲನೆಂಬುದಕ್ಕೆ ಮುಖ್ಯ ನಿಯಮನ ಮಾಡುವನು ಎಂದು, ಅರಿದು = ಈ ಪ್ರಕಾರ ತಿಳಿದು, ಪುಣ್ಯ= ಭಗವತ್ ಸ್ಮರಣೆ ಮಾಡುವ ಸಕಲ ಶುಭ ಕರ್ಮಗಳು ಶುಭವಾದ ಪುಣ್ಯಕರ್ಮಗಳು, ಅಪುಣ್ಯ = ಭಗವತ್ ಸ್ಮರಣೆಯಿಂದ ಮಾಡುವ ಸಕಲ ಸುಕರ್ಮಗಳೂ ಅಪುಣ್ಯ = ಪಾಪಕರ್ಮಗಳೂ, ಹರ್ಷ = ಸಂತೋಷ, ಆನಂದ, ಅಮರ್ಷ = ಕೋಪ-ಮತ್ಸರ-ಹಟ ಮುಂತಾದ ಅಸಂತೋಷಯುಕ್ತವಾದುವೂ, ಲಾಭ = ಪ್ರಾಪ್ತಿ, ಉಳಿತಾಯ, ಅಲಾಭ = ನಷ್ಟ-ಲಾಭಪ್ರಾಪ್ತಿ ಆಗದಿರುವಿಕೆ, ಸುಖ

ದುಃಖಾದಿ ದ್ವಂದ್ವಗಳೆರಡನ್ನೂ ಅವನಂಘ್ರಿಗೆ ಸಮರ್ಪಿಸಿ = ಬಿಂಬರೂಪನಾದ ಶ್ರೀಹರಿಯ ಅಂಘ್ರಿಗೆ ಅರ್ಪಿಸಬೇಕು, ಒಪ್ಪಿಸಬೇಕು. ಶ್ರೀಹರಿಯೇ ನೀನು ಮಾಡಿಸಿದಂತೆ ನಾನು ಮಾಡುವೆ, ನೀನು ಇಟ್ಟಿರುವಂತೆ ನಾನು ಇರುವೆ ಎಂಬ ದಾರಢ್ಯ ಜ್ಞಾನದಿಂದ-ನರಕದಲ್ಲಿ-ಭೂ = ಪೃಥ್ವಿ, ಸ್ವರ್ಗ ದೇವತೆಗಳ ಲೋಕ, ಅಪವರ್ಗದ = ಮೋಕ್ಷವನ್ನು ಕೊಡುವನು, ಸಕಲ ಕಾಲ ದೇಶ ಅವಸ್ಥಾ ನಿಯಾಮಕ ಪ್ರೇರಕ, ಕರಣನಿಯಾಮಕ = ಇಂದ್ರಿಯ ನಿಯಾಮಕ ನೆಂದು ಸರ್ವತ್ರದಲಿ ಸರ್ವಕಾಲ ದೇಶಗಳಲ್ಲಿ ಸದಾ ನೆನೆಯುತ್ತಿರಬೇಕು.

**ದ್ರೌಪದೀಶಪತಿ ವಿಠಲರು :** ಹರಿಯೆ.

**ಭಾವಸೂಚನ :** ಲಾಭಾಲಾಭೋ ಜನಾನಾಂ ಚ ಲೋಭಾಲೋಭೌ ಚ ದೇಹಿನಾಂ । ಮಾನಾಮಾನೌ ಜನಾನಾಂ ಚ । ಮೋಹಾಮೋಹೋ ತಥಾತ್ಮನಾಂ ॥ ಸುಖದುಃಖ ಸ್ವರೂಪತೇ ರಧೀನೇ ಶ್ವಾಸದೇಹಿನಃ ॥ ಇತ್ಯಾದಿ ದ್ವಂದ್ವಜಾತಾನಿ ಮಧ್ವಸಿದ್ಧಾಂತ ವೇದಿನಃ ಇತಿ ಗುರುರಾಜೀಯೇ ॥ ೧೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹರಿಯೆ" ಇತಿ ॥ "ನಿಯಾಮಕಃ" ಇತಿ ಸಮರ್ಪಣ ಪ್ರಕಾರಃ ॥ ಅರಿದು ತಿಳಿದು, ನರಕಾದಿಷು ಅಪಿ ಹರಿಃ ಆಸ್ತೇ ತಸ್ಮಾತ್ ರಾಜಭೃತ್ಯವತ್ ತದ್ದತ್ತ ಭೋಜೀ ಭಾವ್ಯಃ ॥ "ತತ್ರಾಪಿ" ನಯಾರ್ಥಃ "ಕೃಚ್ಛ್ರಂ ಯದೃಚ್ಛಯಾಽಽಪ್ನೋತಿ ತದ್ಧಿತಸ್ಯ ಪರಂತಪಃ ॥" ಇತಿ ಭಾಗವತೇ ॥ "ಲಾಭಾಲಾಭೌ ಹರ್ಯಧೀನೌ ಸುಖದುಃಖೇ ಖಗಪತೇಃ ಅಧೀನೇ ॥" ಇತಿ ಚ ಗುರು ಚರಣಾಃ ॥೧೪॥

## ಕನ್ನಡಾರ್ಥ

"ಸಕಲ ಕರ್ಮಗಳಿಗೆ ಶ್ರೀಹರಿಯೇ ನಿಯಾಮಕನು" ಎಂದು ಉಪಾಸಿಸ ಬೇಕು" ಎಂದು ಹೇಳುತ್ತಾರೆ—"ಹರಿಯೆ" ಎಂಬ ಪದ್ಯದಿಂದ.

"ಪುಣ್ಯಾಪುಣ್ಯ - ಲಾಭಾಲಾಭ ಮುಂತಾದ ದ್ವಂದ್ವಗಳನ್ನು ಹರಿಗೆ ಸಮರ್ಪಿಸಿ" ಎಂಬುದಾಗಿ ದ್ವಂದ್ವಸಮರ್ಪಣವನ್ನು ದಾಸರಾಯರು ನಿರೂಪಿ ಸಿರುತ್ತಾರೆ. ಎಲ್ಲ ದ್ವಂದ್ವ ಫಲಗಳನ್ನು ಸ್ವೀಕರಿಸುವನೆಂಬುದು ಸಮರ್ಪಣೆ ಯೆಂದೂ ತೋರಬಹುದು. ಹೀಗೆ ಸಮರ್ಪಣದ ಬಗೆಯು ಇಲ್ಲಿ ಅಭಿಪ್ರೇತ ವಾಗಿರುವುದಿಲ್ಲ. ಎಲ್ಲದಕ್ಕೂ ಶ್ರೀಹರಿಯು ಮುಖ್ಯ ನಿಯಾಮಕನೆಂದು ಸಕಲ

ಕರ್ಮಗಳಲ್ಲಿಯೂ ಭಗವದಧೀನತಾ ಧ್ಯಾನವೇ ಸಮರ್ಪಣವೆಂದೂ ಇದೇ ತರಹದ ಸಮರ್ಪಣವೇ ಇಲ್ಲಿ ಅಭಿಪ್ರೇತವಾಗಿರುವದೆಂದೂ "ಮುಖ್ಯ ನಿಯಾಮಕನು ಎಂದರಿದು ಸಮರ್ಪಿಸಿ" ಎಂಬ ಪದಗಳಿಂದ ತಿಳಿಸಿರುತ್ತಾರೆ.

ನರಕ ಮುಂತಾದವುಗಳಲ್ಲಿಯೂ ಸಹ ಹರಿಯು ನಿಯಾಮಕನಾಗಿಯೂ ದುಃಖಾನುಭವ ರಹಿತನಾಗಿಯೂ ಇರುತ್ತಾನೆ. ಆದುದರಿಂದ ರಾಜನ ಅಧೀನನಾದ ರಾಜಭೃತ್ಯನಂತೆ ನಿಯಾಮಕನಾದ ಹರಿಯು ಕೊಟ್ಟುದನ್ನು ಸಮಾಧಾನ ಮನಸ್ಸಿನಿಂದ ಭುಂಜಿಸಬೇಕು. "ನರಕ ಭೂಸ್ವರ್ಗಾಪವರ್ಗದಿ ಕರಣನಿಯಾಮಕನ ಸರ್ವತ್ರದಲಿ ನೆನೆಯುತಿರು" ಎಂಬುದು. ಓಂ—"ತತ್ರಾಪಿ ಚ ತದ್ವ್ಯಾಪಾರಾದವಿರೋಧಃ" ಓಂ ॥ ಎಂಬ ಬ್ರಹ್ಮಸೂತ್ರಾಧಿಕರಣಾರ್ಥದ (೩-೧-೧೭) ಸಂಗ್ರಹರೂಪವಾಗಿರುತ್ತದೆ.

"ಯಾದೃಚ್ಛಿಕವಾಗಿ ಭಗವದಿಚ್ಛೆಯಿಂದ ಬಂದಿರುವುದನ್ನೇ ಹೊಂದುತ್ತಾನೆ. ಅದನ್ನೇ ಸಮಾಧಾನ ಹಾಗೂ ಶ್ರದ್ಧೆಯಿಂದ ಭುಂಜಿಸಿ ತೃಪ್ತನಾಗಿ ಪರಮಾತ್ಮನನ್ನು ನೆನೆಯುವದೇ ಆ ಭಕ್ತನಿಗೆ ಶ್ರೇಷ್ಠವಾದ ತಪಸ್ಸು!" ಎಂದು ಭಾಗವತದಲ್ಲಿ ಹೇಳಲ್ಪಟ್ಟಿರುತ್ತದೆ. "ಲಾಭಾಲಾಭಗಳು ಹರಿಯ ಅಧೀನವಾದವುಗಳು ಸುಖ ದುಃಖಗಳು ಶ್ರೀಹರಿಯ ಪರಾಧೀನವಾದವುಗಳು" ಎಂದು ಶ್ರೀ ಗುರುರಾಜರು ನಿರೂಪಿಸಿರುತ್ತಾರೆ ॥ ೧೪ ॥

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ಹೇಳಿದಂತೆ ಲಾಭಾಲಾಭ ಪುಣ್ಯಾಪುಣ್ಯಗಳೆಂಬ ದ್ವಂದ್ವಗಳನ್ನು, ಫಲಾನುಸಂಧಾನವಿಲ್ಲದೇ ಫಲ ಅಪೇಕ್ಷಾರಹಿತನಾಗಿ-ಹರಿ ಮಾಡಿಸಿದಂತೆ ಜ್ಞಾನಪೂರ್ವಕವಾಗಿ ಮಾಡಿ ಶ್ರೀಹರಿಗೆ ಅರ್ಪಿಸುವ ಬಗೆ ದೃಷ್ಟಾಂತ ಪೂರ್ವಕವಾಗಿ ಉಪದೇಶಿಸುತ್ತಾರೆ.

ಮೂಲ :

**ಮಾಣವಕ ತತ್ಫಲಗಳನುಸಂ ।**
**ಧಾನವಿಲ್ಲದೆ ಕರ್ಮಗಳ ಸ್ವೇ ।**
**ಚ್ಛಾನುಸಾರದಿ ಮಾಡಿ ಮೋಹಿಸುವಂತೆ ಪ್ರತಿದಿನದಿ ॥**
**ಜ್ಞಾನಪೂರ್ವಕ ವಿಧಿನಿಷೇಧಗ ।**
**ಳೇನು ನೋಡದೆ ಮಾಡು ಕರ್ಮಪ್ರ ।**
**ಧಾನ ಪುರುಷೇಶನಲಿ ಭಕುತಿಯ ಮಾಡು ಕೊಂಡಾಡು ॥೧೫॥**

**ಪದ್ಯಾರ್ಥ :** ಮಾಣವಕ = ತಾನು, ತನ್ನದೆಂಬೋ ಅಭಿಮಾನವಿಲ್ಲದ ಸಣ್ಣ ಹುಡುಗನು, ತಾನು ಮಾಡತಕ್ಕ ಕೆಲಸದಲ್ಲಿ, ತತ್ಫಲಗಳನುಸಂಧಾನ = ಇದು ಒಳ್ಳೆಯದು, ಇದು ಕೆಟ್ಟದೆಂದು ಯಾವದೂ ಅನುಸಂಧಾನವಿಲ್ಲದೆ = ತಿಳಿಯದೇ, ಕರ್ಮಗಳ = ಸಕಲಕ್ರಿಯೆಗಳನ್ನು, ಸ್ವೇಚ್ಛಾನುಸಾರದಿ = ಹುಡುಗನು ತನ್ನ ಮನಬಂದಂತೆ ಮಾಡಿ, ಮೋಹಿಸುವಂತೆ (ಮೋದಿಸುವಂತೆ) ತನ್ನ ಬಾಲಕ್ರೀಡೆಗಳಿಂದ ತಂದೆ ತಾಯಿಗಳನ್ನು ಇತರರನ್ನು ಮೋಹಿಸುವಂತೆ ಪ್ರೀತಿ ಪುಟ್ಟುವಂತೆ, ಮೋದಿಸುವಂತೆ = ಆನಂದವನ್ನು ಪಟ್ಟು ಜನರಿಗೆ ಆನಂದಪಡಿಸುವಂತೆ, ನೀನು ಸ್ವೇಚ್ಛಾನುಸಾರದಿ = ನೀನು ಬಿಂಬರೂಪಿಯಾದ ಸ್ವ = ಸ್ವತಂತ್ರನಾದ ಹರಿಯು ತನ್ನ ಇಚ್ಛಾದಿಂದ ಹೇಗೇ ಪ್ರೇರಿಸುತ್ತಾನೋ, ಜ್ಞಾನ ಪೂರ್ವಕ = ಹರಿ ಪ್ರೇರಿಸುವಂತೆ ನಾನು ಮಾಡುವೆನೆಂಬ ನಿಶ್ಚಯ ಜ್ಞಾನದಿಂದ ವಿಧಿ = ವೇದಶಾಸ್ತ್ರ ವಿಹಿತವಾದ ಪುಣ್ಯಕರ್ಮ, ನಿಷೇಧ = ವೇದಶಾಸ್ತ್ರಕ್ಕೆ ವಿರುದ್ಧವಾದ ನಿಷೇಧ ಕರ್ಮ - ಪಾಪಕರ್ಮವನ್ನು ಮಾಡುತ್ತ, ಪ್ರಧಾನ ಪುರುಷನಲಿ = **ಪ್ರಧಾನ ಪುರುಷೇಶ್ವರ** = ಎಂಬ ಶ್ರೀವಿಷ್ಣು ಸಾಹಸ್ರನಾಮ ಉಕ್ತಿಯಂತೆ ॥ ಪ್ರಧಾನಂ ತ್ರಿಗುಣಾತ್ಮಿಕಾ ಪ್ರಕೃತಿಃ, ಪುರುಷೋ ಬ್ರಹ್ಮಾದಿ ಜೀವಸಮೂಹಃ ತಯೋರೀಶ್ವರಃ ಪ್ರಧಾನಪುರುಷೇಶ್ವರಃ । ಯದ್ವಾ ॥ ಪ್ರಧಾನ ಮುತ್ತಮಃ । "ಮಣಿರ್ಮುಖಂ ಪ್ರಧಾನಂಚೇತ್ಯುತ್ತಮಸ್ಯವಚ ಭವೇದಿತಿ ಅಭಿಧಾನಾತ್" ಪ್ರಧಾನಂಚಾಸೌ ಪುರುಷಶ್ಚ ಪ್ರಧಾನ ಪುರುಷೇಶ್ವರಃ ಇತಿ ॥ ಪುರುಷಾಣಾಂ ಈಶ್ವರ ಪುರುಷೇಶ್ವರಃ ॥ ಪ್ರಧಾನಂ ಚಾಸೌ ಪುರುಷೇಶ್ವರಃ ॥ ಪ್ರಧಾನಪುರುಷೇಶ್ವರ ಪ್ರಕೃತಿ ಬ್ರಹ್ಮಾದಿಗಳಿಗೆ ಮುಖ್ಯ ಪ್ರಧಾನ ಪುರುಷ ಮತ್ತು ಪುರುಷರಾದ ಬ್ರಹ್ಮಾದಿಗಳಿಗೆ, ಪ್ರಧಾನನಾದ (ಶ್ರೇಷ್ಠ) ಪುರುಷ - ಪುರುಷ = ಪುರಿ ಸೇತೀತಿ ಪುರುಷಃ = ಸಕಲ ಜೀವರಂತರ್ಯಾಮಿಯಾಗಿರುವನಾದುದರಿಂದ ಪುರುಷ ಪ್ರಧಾನ ಶ್ರೇಷ್ಠ, ಇಂಥ ಬಿಂಬರೂಪಿ ಹರಿಯಲ್ಲಿ-ಭಕುತಿಯಮಾಡು = ನಿರ್ವ್ಯಾಜನಾದ ಅತಿ ಪ್ರೇಮದಿ, ಸರ್ವೋತ್ತಮನು ಹರಿಯೆಂದು ತಿಳಿದು ಭಕ್ತಿಯಮಾಡು, ಕೊಂಡಾಡು = ಸ್ತೋತ್ರಮಾಡು.

**ದ್ರೌಪದೀಶಪತಿ ವಿಠಲರು :** ಮಾಣವಕ ತತ್ಫಲ = ನಾನು ನನ್ನದು ಎಂಬೋ ಅಭಿಮಾನ ಹುಟ್ಟದೇ ಇದ್ದಂಥಾ ಸಣ್ಣ ಮಕ್ಕಳು ಹ್ಯಾಂಗ ಸುಖಬಡುತ್ತಾವೊ ಹಾಂಗೆ ವಿಧಿ ನಿಷೇಧ ನೋಡದೆ, ಅಂಥಾಂಗೆ, ಪಾಪಪುಣ್ಯ ಇದಕೆ

ಪ್ರೇರಕ ಪರಮಾತ್ಮನ ಸ್ಮೃತಿಯೇ ಜ್ಞಾನ, ವಿಸ್ಮೃತಿಯೇ ಅಜ್ಞಾನ, ಸ್ಮರಣ ಸಹಿತಮಾಡಿದ ಪುಣ್ಯಕ್ಕೆ ಸ್ವರ್ಗಫಲ, ಪಾಪಕ್ಕ ನರಕ. ಸ್ಮರಣೆಪೂರ್ವಕ ಮಾಡಿದ ಪಾಪವೇ ಪುಣ್ಯವಾಗುತ್ತದೆ. ಪ್ರಮಾಣ "ಧರ್ಮೋಽಭವತ್ಯಧರ್ಮೋಽಪಿ" ಎಂತ ಆದರದಿಂದ ಭಕ್ತಿಪೂರ್ವಕ ಚಿಂತನೆಯಿಂದ-ಸರ್ವ ಕರ್ಮಮಾಡಬೇಕೆಂಬ ಅಭಿಪ್ರಾಯ.

**ಭಾವಸೂಚನ:** ಮಾಣವಕೇತಿ-ಹುಡುಗಾ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಾಣವಕ" ಇತಿ || "ಬಾಲವತ್ ಕೃತ ನಿಶ್ಚಯಃ ||" ಇತಿ ಭಾಗವತ ತಾತ್ಪರ್ಯೇ || "ವಿಧಿ" ಇತಿ || ಮಾ ಕರ್ಮಫಲಹೇತುಃ ಭೂಃ ಮಾತೇ ಸಂಗೋಽಸ್ತ್ವಕರ್ಮಣಿ ||" ಇತ್ಯುಕ್ತೇಃ || ಸ್ವರ್ಗಾದ್ಯುದ್ದೇಶೇನ ಮಾ(ಆ)ಚರ ಕರ್ಮ || "ಅತೀವ ನಿಂದಿತಮಪಿ ಬಹುಹಿಂಸಾಯುಗೇವ ಚ" || ಇತಿ ವಚನಾತ್ ಅನಿಷಿದ್ಧಪಿ ಅಸತ್ಯಭಾಷಣಂ ಮುಖಂ ಹಿಂಸಾನಿಂದಾದ್ಯುಪೇತಮಪಿ ಸದುಪಕಾರಕಂ ಚೇತ್ ತತ್ರ ದೃಷ್ಟಿಂ ಮಾಕೃಥಾಃ ಇತ್ಯತ್ರ ಚ ತಾತ್ಪರ್ಯಮ್ || ಉಪಕಾರಃ ಸತಾಂ ಯೇನ ತತ್‌ಕೃತ್ವಾ ನೈವ ದುಷ್ಯತಿ" || ಇತಿ ಚತುರ್ಥ ತಾತ್ಪರ್ಯೇ ಅಭಿಧಾನಾತ್ || ಯದ್ವಾ ವಿಧಿನಿಷೇಧಪದೇನ ತದ್ವಚನ ಗೋಚರಂ ಪುಣ್ಯಂ ಪಾಪಂ ಚ ಗೃಹ್ಯತೇ || ತಥಾ ಚ "ವಿಹಿತತ್ವಾತ್" ಚರೇತ್ ಪುಣ್ಯಮ್ || "ನಿವೃತ್ತೋಽಸ್ಮಿ ಪಾಪಾತ್ ಇತಿ ಭ್ರಾಂತಿಂ ಮಾ ಭಜ || ಕಿಂತು ಪುಣ್ಯಪಾಪ ಕೃತಿಸ್ವಾತಂತ್ರ್ಯಾತ್ ತನ್ಮಾನಮಾನಂ ಯಥಾ ಯಥೇಶ್ವರಃ ಕುರುತೇ ತಥಾತಥಾ ಭವಾಮಿ" ಇತಿ ಬುದ್ಧ್ಯಾ "ತತ್ರತತ್ಕಾಲೇ ಯದ್ಯತ್ಕರೋತಿ ತತ್ತತ್ಕರೋಮಿ ಇತಿ ಚ ವಿಚಿಂತ್ಯ-ಪುಣ್ಯಮೇವಮಾಪಾಪ ಮಿತೀಚ್ಛಾಯಾಮಪಿ ನಿಯಮ ವೈಪರೀತ್ಯಂ ಚ ಉಪಲಬ್ಧಿವನ್ನಯಾರ್ಥಮಪಿ ಅನುಭವಾರೂಢಂ ಕೃತ್ವಾ ಕರ್ಮ ಯುಕ್ತಃ ಸಮಾಚರೇತ್ ಇತಿ ತಾತ್ಪರ್ಯಮ್ ||

ಬೃಹದ್ಭಾಷ್ಯೇ ಚ ಆರ್ತಭಾಗ ಬ್ರಾಹ್ಮಣೇ—"ಜ್ಞಾನಸ್ಥಿತೇನ ರೂಪೇಣ ದೇವಾನಾಂ ಮುಕ್ತಿದಃ ಹರಿಃ || ಪುಣ್ಯಸ್ಥಿತೇನ ರೂಪೇಣ ಸ್ವರ್ಗಂ ನಿರಯ ಮನ್ಯಗಃ || ರಹಸ್ಯಮೇತತ್ ದೇವಾನಾಂ ವಿದುಃ ಕರ್ಮೇತಿ ಮಾನುಷಾಃ || ಕರ್ಮನಾಮಾ ತು ಭಗವಾನ್ ಫಲಕರ್ತೃತ್ವತಃ ಹರಿಃ || ಪಾತನಾತ್ ಪಾಪ

ನಾಮಾಸೌ ಪುನಾತೇಃ ಪುಣ್ಯನಾಮವಾನ್ ॥ ಇತಿ ಭಾರತೇ ॥" ಇತಿ ಚ ಉಕ್ತಮ್ ॥

ತತ್ರೈವ ಅನ್ಯತ್ರ—"ಸ ಯಥಾ ಕರೋತಿ ಪುರುಷಂ ತಥೈವಾಯಂ ಭವಿಷ್ಯತಿ ॥ ಸಾಧುರ್ಭವತಿ ಸಾಧುಂ ಚೇತ್ ಕರೋತಿ ಪುರುಷೋತ್ತಮಃ ॥ ಪಾಪೋ ಭವತಿ ಪಾಪಂ ಚೇತ್ ಸ ಕರೋತಿ ಜನಾರ್ದನಃ ॥ ತತ್ಪ್ರೇರಿತೇನ ಪುಣ್ಯೇನ ಪುಣ್ಯೋ ಭವತಿ ಮಾನವಃ ॥ ತತ್ಪ್ರೇರಿತೇನ ಪಾಪೇನ ತಥಾ ಪಾಪಃ ಪುಮಾನ್ ಭವೇತ್ ॥ ಆಹುಶ್ಚ ತತ್ಕಾಮಾಧೀನಂ ಜೀವಮೇನಂ ಸದೈವಹಿ ॥ ತತ್ಕಾಮಾದಸ್ಯ ಕಾಮಃ ಸ್ಯಾತ್ ಯಥಾ ಕಾಮಃ ತಥಾ ಭವೇತ್ ॥ ಸ ಭಗವಾನ್ ಸ ಯಥಾಕಾರೀ ಯಥಾ ಕಾರಯತಿ ಯಥಾ ಚಾರೀ ಯಥಾ ಚಾರಯತಿ ತಥಾ ಭವತಿ ॥ ಸ ಭಗವಾನ್ ಯಥಾ ಕಾಮೋ ಭವತಿ ತಥಾ ಕಾಮೋ ಜೀವೋ ಭವತಿ ॥ ಇತ್ಥಂ ಕಾಮೋಽಸ್ಯ ಭೂಯಾತ್ ಇತಿ ಭಗವದಿಚ್ಛಾವಶಾತ್ ಅಸ್ಯ ಕಾಮೋ ಭವತಿ ಇತ್ಯರ್ಥಃ ಇತಿ ॥ ಏವಮಾನಂದ ತೀರ್ಥ ತೀರ್ಥೀಯ ತೀರ್ಥಗುಹ್ಯಂ ಪ್ರಕಾಶಿತಮ್ ॥ ಕೇಚಿದೇತದವಿಜ್ಞಾಯ ರಮಾಯಾ ಭರ್ತರಿಪ್ರಿಯೇ ॥ ಪುಣ್ಯಪಾಪಾದಿ ಕರ್ತೃತ್ವೇ ಶಂಕತೇ ಮಂದ ಬುದ್ಧಯಃ ॥ "ಪಾಪಂ ಕುರ್ಯಾಮ್" ಇತಿ ಜೀವಸ್ಯ ಭೂಯಾತ್ ಕಾಮಃ ಇತ್ಯೇವ ಜೀವರೂಪೇಚ್ಛಾ ಪ್ರೇರಕೇಶೇಚ್ಛಾಕಾರಃ" ಇತಿ ಯತ್ಕಿಂಚಿದೇತತ್ ॥ "ಪ್ರಧಾನ ಪುರುಷೇಶ್ವರಃ—॥" * ಓಂ ಮಹೋ ಗೋತ್ರಸ್ಯ ಕ್ಷಯತಿ ಸ್ವರಾಜಃ ಪತಿಂ ವೋ ಅಧ್ನ್ಯಾನಾಮ್ ॥ ದುರಶ್ಚ ವಿಶ್ವಾ ಅವೃಣೋದಪಶ್ವಾ (ಸ್ವಾ) ಧೇನೂನಾ ಮಿಷುಧಸೇ ॥ ಓಂ * ॥ ಪ್ರಧಾನ ಪುರುಷಯೋಃ ತತ್ಕಾರ್ಯಾ ವಿದ್ಯಾನಿರಸನೇ ನೇಶ್ವರಃ ॥ ೧೫ ॥

## ಕನ್ನಡಾರ್ಥ

ಬಾಲಕನಂತೆ ಮಾನಾಪಮಾನಗಳನ್ನು ಅನುಲಕ್ಷಿಸದೆ ಕ್ರೀಡಾರೂಪವಾಗಿ ಕರ್ಮಗಳನ್ನು ಮಾಡುವಂತೆ ಫಲಾಫಲಗಳನ್ನು ಅನುಸಂಧಿಸದೆ ಕರ್ಮಗಳನ್ನು ಆಚರಿಸಬೇಕು ಎಂಬುದು ಶ್ರೀಮದ್ಭಾಗವತದಲ್ಲಿ, "ಬಾಲಕವತ್ಕೃತ ನಿಶ್ಚಯಃ" ಎಂದು ತಾತ್ಪರ್ಯದಲ್ಲಿಯೂ "ಆತ್ಮಕ್ರೀಡೋಹಿ ಆತ್ಮರತಃ ವಿಚರಾಮಿ ಹ ಬಾಲವತ್ ॥" "ಬುಧಃ ಬಾಲಕವತ್ ಕ್ರೀಡೇತ್ ॥" ಎಂದು ಏಕಾದಶ ಮುಂತಾದ ಸ್ಕಂಧಗಳಲ್ಲಿಯೂ ವರ್ಣಿತವಾಗಿರುತ್ತದೆ.

"ವಿಧಿ ನಿಷೇಧಗಳೇನು ನೋಡದೆ" ಎಂಬ ವಚನಕ್ಕೆ "ವಿಧಿನಿಷೇಧಗಳನ್ನು ಲೆಕ್ಕಿಸದೆ-ಕರ್ಮಗಳನ್ನು ಆಚರಿಸುವದು;" ಎಂಬ ಅರ್ಥವು ಆಪಾತತಃ ತೋರಿಬರುತ್ತದೆ. ಹಾಗಾದರೆ ಶಾಸ್ತ್ರವಿಧಾನಗಳನ್ನು ಉಲ್ಲಂಘಿಸಿದಂತೆ ಆಗಿ "ಯಃ ಶಾಸ್ತ್ರ ವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ" ಎಂದು ಮುಂತಾಗಿರುವ ವಚನಗಳಿಂದ ವಿರೋಧ ಬರುತ್ತದೆ. ಆದುದರಿಂದ "ವಿಧಿನಿಷೇಧಗಳನ್ನು ಮೀರಿ ಮನಬಂದಂತೆ ಕರ್ಮಮಾಡುವದು" ಎಂಬುದು ದಾಸರಾಯರ ಭಾವವಲ್ಲವೆಂದು ತಿಳಿಯಬೇಕು. ಹಾಗಾದರೆ "ವಿಧಿನಿಷೇಧಗಳೇನು ನೋಡದೆ" ಎಂಬ ವಚನದ ನಿಜವಾದ ಭಾವವೇನು? ಎಂದು ಪ್ರಶ್ನೆಯು ಮೂಡುತ್ತದೆ. ಭಗವದ್ಗೀತೆಯಲ್ಲಿ ಎರಡನೆಯ ಅಧ್ಯಾಯದಲ್ಲಿ – "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ॥ ಮಾ ಕರ್ಮಫಲಹೇತುಃ ಭೂಃ ಮಾತೇ ಸಂಗೋಽಸ್ತ್ವಕರ್ಮಣಿ" ॥ ಎಂದು ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದಲ್ಲಿ ಹೇಳಿದ ಭಾವವನ್ನೇ ದಾಸರಾಯರ ವಚನದ ಭಾವವೆಂದು ಹೇಳಿದರೆ ಯಾವ ವಿರೋಧವೂ ಬಾರದು. ಅಂದರೆ "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಎಂದು ಮುಂತಾದವುಗಳಲ್ಲಿ "ಸ್ವರ್ಗೋದ್ದೇಶದಿಂದ ಯಾಗಮಾಡಬೇಕು" ಅಂದರೆ ಯಾಗದಿಂದ ಸ್ವರ್ಗವನ್ನು ಭಾವಿಸಬೇಕು – "ಯಾಗೇನ ಇಷ್ಟಂ (ಸ್ವರ್ಗಂ) ಭಾವಯೇತ್" ಹೇಳಿರುತ್ತದೆ. ಹೀಗೆ ಯಾಗವನ್ನು ಮಾಡಲು ಪ್ರರೋಚನಾರ್ಥವಾಗಿ "ಫಲವಾಗುತ್ತದೆ" ಎಂದು ಅನುವಾದಿಸಿರುತ್ತದೆ; ಹೊರತಾಗಿ ಅದನ್ನೂ ವಿಧಿಕೋಟಿಯಲ್ಲಿ ಸೇರಿಸಿರುವದಿಲ್ಲ. ಆದುದರಿಂದ ಆ ಫಲವಿಷಯಕ ಕಾಮನೆಗಳಲ್ಲಿ – ವಿಧಿಯಿಲ್ಲದಿರುವದರಿಂದಲೂ ಫಲಭಾವನೆಗಳನ್ನು ಬಿಡಬೇಕು. ಸ್ವರ್ಗಾದಿ ಕ್ಷುದ್ರ ಫಲಕಾಮನೆಗಳನ್ನು ನೋಡದೆ ಶ್ರೀ ವಿಷ್ಣುಪ್ರೀತಿಯೇ ಮುಖ್ಯ ಉದ್ದೇಶ. ಅದಕ್ಕಾಗಿ ಜ್ಞಾನಭಕ್ತಿ ವೈರಾಗ್ಯಗಳು ಬೇಕು" ಎಂದು ತಿಳಿದು, ಕರ್ಮಫಲಗಳ ಅಪೇಕ್ಷೆಗಳನ್ನು ಮನಸ್ಸಿನಲ್ಲಿ ತಾರದೇ ಕರ್ಮಗಳನ್ನು ಮಾತ್ರ ಭಗವತ್ಪೂಜಾರೂಪವೆಂದು ಆಚರಿಸಬೇಕು ಎಂಬುದು ದಾಸರಾಯರ ಇಂಗಿತವೆಂದು ತಿಳಿಯಬೇಕು. ಫಲಭಾವನೆಯಿಂದ ಮಾಡಿದ ಕರ್ಮಗಳಿಂದ-ಹಿಂಸಾ ಮುಂತಾದವುಗಳಾಗುವದರಿಂದ ಅದು ನಿಂದಿತವಾಗಿರುತ್ತದೆ; ಮೋಕ್ಷಕ್ಕೆ ಪ್ರತಿಬಂಧಕವಾಗಿರುತ್ತದೆ" ಎಂದು ಮುಂತಾಗಿರುವ ವಚನಗಳು ಈ ವಿಷಯದಲ್ಲಿ ಆಧಾರವಾಗಿರುತ್ತವೆ.

"ಕೆಲವು ಪ್ರಸಂಗಾನುಸಾರವಾಗಿ ನಿಷೇಧಿಸಲ್ಪಡದ ಅಸತ್ಯವಚನವು ಮೇಲೆ ಹಿಂಸಾದಿಗಳಿಂದ ಕೂಡಿರುವದಾದರೂ ಸಹ ಅಂತತಃ ಸಜ್ಜನರಿಗೆ ಒಳ್ಳೆಯ ಉಪಕಾರಕವಾಗುತ್ತಿದ್ದರೆ ಅಲ್ಲಿಯೂ ಫಲಾಪೇಕ್ಷೆಯಿಂದ ದೃಷ್ಟಿಯನ್ನಿಡ ತಕ್ಕದ್ದಲ್ಲ" ಎಂಬುದು ತಾತ್ಪರ್ಯ. ಸಜ್ಜನರಿಗೆ ಉಪಕಾರ ಮಾಡುವಂತಹ ಕರ್ಮಗಳನ್ನು **ನಿರಪೇಕ್ಷವಾಗಿ** ಎಸಗಿದರೆ ದೋಷವಿಲ್ಲ"ವೆಂಬುದಾಗಿ ಶ್ರೀ ಭಾಗವತ ಚತುರ್ಥ ಸ್ಕಂಧ ತಾತ್ಪರ್ಯದಲ್ಲಿ ಹೇಳಲ್ಪಟ್ಟಿರುತ್ತದೆ.

ಅಥವಾ — "ವಿಧಿನಿಷೇಧಗಳೇನು ನೋಡದೆ" ಎಂಬಲ್ಲಿ "ವಿಧಿನಿಷೇಧ" ಪದಗಳಿಂದ ವಿಧಿಯಿಂದ ಬರುವ ಪುಣ್ಯ, ನಿಷೇಧದಿಂದ ಬರುವ ಪಾಪ, ಇವುಗಳನ್ನು ನೋಡದೆ ಎಂದು ತಿಳಿಯಬೇಕು. "ವಿಹಿತವಾದುದರಿಂದ ಪುಣ್ಯವನ್ನು ಆಚರಿಸಬೇಕು; ಪಾಪದಿಂದ ನಿವೃತ್ತನಾಗಿರುತ್ತೇನೆ" ಎಂಬುದಾಗಿ ಭ್ರಮವನ್ನು ಹೊಂದಬಾರದು. ಪುಣ್ಯ ಪಾಪಕಾರ್ಯಗಳಲ್ಲಿ ಸ್ವತಂತ್ರ ಪ್ರೇರಕನಾದ ಪರಮಾತ್ಮನು ಪುಣ್ಯಪ್ರವರ್ತಕನಾದುದರಿಂದ ಪುಣ್ಯನಾಮಕನೂ, ಪಾಪಪ್ರೇರಕನಾದುದರಿಂದ ಪಾಪನಾಮಕನೂ ಆಗಿ, ಹೇಗೆ ಹೇಗೆ ಪ್ರವರ್ತನಮಾಡುತ್ತಾನೋ ಹಾಗೆ ಹಾಗೆ ನಾನು ಮಾಡುತ್ತೇನೆ" ಎಂದು ಮನದಟ್ಟಾಗಿ ತಿಳಿಯಬೇಕು. ಹೀಗೆ ವಿಚಿಂತಿಸಿ "ಇದು ಪುಣ್ಯ; ಇಲ್ಲಿ ಪಾಪವಿಲ್ಲ; ಇದನ್ನು ಹೊಂದಬೇಕು" ಎಂಬುದಾಗಿ ಜೀವ ಮನಸ್ಸಿನಲ್ಲಿ ಬಂದ ಪುಣ್ಯಪಾಪೇಚ್ಛೆಗಳಲ್ಲಿಯೂ ಅನಿಯಮವನ್ನು ತಿಳಿಯಬೇಕು. "ಜೀವೇಚ್ಛೆಗೆ ತಕ್ಕಂತೆ ಪುಣ್ಯಪಾಪಗಳ ನಿಯಮವಿಲ್ಲ. ಪರಮಾತ್ಮನ ಇಚ್ಛೆಯೇ ಎಲ್ಲದರಲ್ಲೂ ನಿಯಮಯುಕ್ತವಾದುದು" ಎಂದು ಓಂ* ಉಪಲಬ್ಧವದ ನಿಯಮಃ ಓಂ" ಎಂಬ ಅಧಿಕರಣದಲ್ಲಿ ಹೇಳಿದ ಅರ್ಥಗಳನ್ನು ಹೃದಯದಲ್ಲಿ ತಂದುಕೊಂಡು ಕರ್ಮಗಳನ್ನು ಆಚರಿಸಬೇಕು. "ಜ್ಞಾನಲಾಭದಲ್ಲಿ ಜೀವನು ಹೇಗೆ ಅಸ್ವತಂತ್ರನೋ ಹಾಗೆ ಕ್ರಿಯಾ ತತ್‌ಫಲ ಲಾಭದಲ್ಲಿಯೂ ಜೀವನು ಅಸ್ವತಂತ್ರನು" ಎಂಬುದಾಗಿಯೂ "ಪರಮಾತ್ಮನು ಜ್ಞಾನಕರ್ಮ ಮುಂತಾದವುಗಳೆಲ್ಲದರಲ್ಲೂ ಸ್ವತಂತ್ರನು" ಎಂಬುದಾಗಿಯೂ ನಿಶ್ಚಯವಾಗಿ ತಿಳಿದು ಫಲಸಂಕಲ್ಪಗಳನ್ನೂ ತೊರೆದು ನಿಷ್ಕಾಮಕರ್ಮಗಳನ್ನು ಆಚರಿಸಬೇಕು" ಎಂಬುದು ದಾಸವರ್ಯರ ವಚನದ ತಾತ್ಪರ್ಯ.

ಬೃಹದಾರಣ್ಯೋಪನಿಷತ್ತಿನಲ್ಲಿ ಆರ್ತಭಾಗವೆಂಬ ಬ್ರಾಹ್ಮಣದಲ್ಲಿ ಈ ವಿಷಯವಾಗಿ ಶ್ರೀಮದಾಚಾರ್ಯರು ತಮ್ಮ ಶ್ರೀಮದ್ಭಾಷ್ಯದಲ್ಲಿ ಹೀಗೆ ನಿರೂಪಿ

ಸಿರುತ್ತಾರೆ. "ಜ್ಞಾನದಲ್ಲಿರುವ ತನ್ನ ಜ್ಞಾನನಾಮಕ ರೂಪದಿಂದ ದೇವತೆಗಳಿಗೆ ಮೋಕ್ಷವನ್ನು ಕೊಡುತ್ತಾನೆ. ಪುಣ್ಯದಲ್ಲಿರುವ ಪುಣ್ಯನಾಮಕರೂಪದಿಂದ ಸ್ವರ್ಗವನ್ನು ಕೊಡುತ್ತಾನೆ. ಪಾಪದಲ್ಲಿ ಪಾಪನಾಮಕನಾಗಿದ್ದು ಪಾಪಿಗಳಿಗೆ ನರಕ ಮುಂತಾದವುಗಳನ್ನು ಹೊಂದಿಸುತ್ತಾನೆ. ಇದು ದೇಹಗೋಪ್ಯವಾದ ರಹಸ್ಯವಾಗಿರುತ್ತದೆ. ಮನುಷ್ಯರು ಪುಣ್ಯ ಪಾಪ ಮುಂತಾದ ಕರ್ಮಗಳೇ ಸ್ವರ್ಗ ನರಕ ಮುಂತಾದವುಗಳಿಗೆ ಕಾರಣವೆಂದು ತಿಳಿಯುತ್ತಾರೆ. ದೇವತೆಗಳು ಹೀಗೆ ಪರಮಾತ್ಮನೇ ಎಲ್ಲದರಲ್ಲೂ ಕಾರಣವೆಂದು ತಿಳಿಯುವದರಿಂದ ದೇವತೆಗಳಿಗೆ ಈ ರಹಸ್ಯದಲ್ಲಿ ಅಧಿಕಾರವಿರುತ್ತದೆ. ಪರಮಾತ್ಮನು ಹೀಗೆ ಸರ್ವಕರ್ಮಫಲ ಕರ್ತೃವಾದುದರಿಂದ "ಕರ್ಮ" ಎಂದು ಕರೆಯಲ್ಪಡುವನು. ಕೆಳಗೆ ಪಾತನ ಮಾಡುವದರಿಂದ ಪಾಪಿ-ಅವರನ್ನು ನರಕಾದಿಗಳಲ್ಲಿ ಕೆಡುಹುವುದರಿಂದ ಹರಿಗೆ ಪಾಪವೆಂದು ಹೆಸರು ಬಂದಿರುತ್ತದೆ. ಯೋಗ್ಯರನ್ನು ಪವಿತ್ರೀಕರಿಸುವದರಿಂದ ಪುಣ್ಯವೆಂದು ಹರಿಗೆ ಹೆಸರು ಬಂದಿದೆ." ಎಂದು ಭಾರತದಲ್ಲಿ ನಿರೂಪಿಸಲ್ಪಟ್ಟಿರುತ್ತದೆ.

ಅದರಂತೆ ಶಾರೀರ ಬ್ರಾಹ್ಮಣದಲ್ಲಿಯೂ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಈ ವಿಷಯಗಳನ್ನು ನಿರೂಪಿಸಿರುತ್ತಾರೆ. "ಪರಮಾತ್ಮನು ಮಾಡಿಸಿದಂತೆ ಜೀವನು ಇರುತ್ತಾನೆ. ಸಾಧು ಸಜ್ಜನ ಸ್ವಭಾವದವನನ್ನಾಗಿ ಮಾಡಿದರೆ ಜೀವನು ಸಾಧು ಸ್ವಭಾವದವನಾಗುತ್ತಾನೆ. ಆ ಜನಾರ್ದನನು ಪಾಪಿಷ್ಟನನ್ನಾಗಿ ಜೀವವನ್ನು ಮಾಡಿದರೆ ಜೀವನು ಪಾಪಿಷ್ಠನಾಗುತ್ತಾನೆ. ಮಾನವನು ಈಶ್ವರ ಪ್ರೇರಣೆಯಿಂದ ಮಾಡಿದ ಪುಣ್ಯದಿಂದ ಪುಣ್ಯವಂತನಾಗುತ್ತಾನೆ. ಈಶ್ವರನ (ಹರಿಯ) ಪ್ರೇರಣೆಯಿಂದ ಮಾಡಿದ ಪಾಪದಿಂದ ಪಾಪಿಷ್ಠನಾಗುತ್ತಾನೆ. ಜೀವನು ಪರಮಾತ್ಮನ ಇಚ್ಛೆಯನ್ನು ಅನುಸರಿಸಿ - ಅಧೀನನಾಗಿ ಇರುತ್ತಾನೆ" ಎಂದು ಜ್ಞಾನಿಗಳು ಹೇಳುತ್ತಾರೆ. ಶ್ರೀಹರಿಯ ಸಂಕಲ್ಪಾನುಸಾರವಾಗಿ ಜೀವನಿಗೆ ಇಚ್ಛಾ ಸಂಕಲ್ಪ ಮುಂತಾದವುಗಳು ಹುಟ್ಟುತ್ತವೆ. ಈಶ್ವರೇಚ್ಛೆಯನ್ನು ಅನುಸರಿಸಿ ಜೀವನಿಗೆ ಇಚ್ಛೆಯು ಆಗುತ್ತವೆ.

"ಸ ಭಗವಾನ್"= ಆ ಪರಮಾತ್ಮನು, "ಯಥಾ ಕಾರೀ ಭವತಿ"- ಹೇಗೆ ಮಾಡಿಸುತ್ತಾನೋ, "ಯಥಾ ಚಾರೀ"= ಹೇಗೆ ಆಚರಣಮಾಡಿಸುತ್ತಾನೋ; "ಸ ಭಗವಾನ್"-ಆ ಪರಮಾತ್ಮನು "ಯಥಾ ಕಾಮೋ ಭವತಿ"

ಹೇಗೆ ಇಚ್ಛಿಸುವನೋ (ಸಂಕಲ್ಪಿಸುವನೋ) "ತಥಾ ಕಾಮಃ" – ಜೀವನು ಅಂಥ (ಹಾಗೆ) ಇಚ್ಛೆಯು ಜೀವನಿಗೆ ಆಗುತ್ತದೆ. "ಜೀವನಿಗೆ ಇಂಥ (ಅಮುಕ ವಿಷಯಕವಾದ) ಇಚ್ಛೆಯು ಬರಲಿ" ಎಂಬ ಪರಮಾತ್ಮನ ಇಚ್ಛೆಯ ಅಧೀನವಾಗಿ ಜೀವನಿಗೆ ಆಯಾ ವಸ್ತು ವಿಷಯಕವಾದ ಇಚ್ಛೆಯು ಹುಟ್ಟುತ್ತದೆ" ಎಂದು ಶ್ರೀಮದಾಚಾರ್ಯರು ಬೃಹದಾರಣ್ಯ ಭಾಷ್ಯದಲ್ಲಿ ನಿರೂಪಿಸಿರುತ್ತಾರೆ.

ಹೀಗೆ ಶ್ರೀಮದಾನಂದತೀರ್ಥರ ಪವಿತ್ರ ಶಾಸ್ತ್ರದ ರಹಸ್ಯವು ಸ್ಪಷ್ಟ– ಪ್ರಕಾಶಿತವಿದ್ದರೂ–ಕೆಲವರು ಇದನ್ನು ಅರಿತುಕೊಳ್ಳದೇ ರಮಾಕಾಂತನಾದ ಶ್ರೀಹರಿಯ ಪುಣ್ಯ ಪಾಪಗಳ ಕರ್ತೃತ್ವ ವಿಷಯದಲ್ಲಿ ಶಂಕಿಸುತ್ತಾರೆ. (ಸಂದೇಹ ಪಡುತ್ತಾರೆ.) "ಪಾಪವನ್ನು ನಾನು ಮಾಡುವೆ–ಮಾಡಲಿ" ಎಂದು ಜೀವನಿಗೆ ಇಚ್ಛೆಯು ಹುಟ್ಟಲಿ" ಎಂಬುದೇ ಈಶ್ವರನ ಇಚ್ಛೆಯ ಸ್ವರೂಪವು!" ಎಂದು ಅವರ ವಾದವು ಇರುತ್ತದೆ. ಇದು ಅಷ್ಟು ಮಹತ್ವಗರ್ಭಿತವಾದುದಲ್ಲ.

"ಪ್ರಧಾನ ಪುರುಷೇಶ್ವರಃ" – ಇದು ವಿಷ್ಣು ಸಹಸ್ರನಾಮಾಂತರ್ಗತ ವಾದುದು. "ಪ್ರಕೃತಿ ಪುರುಷರಿಗೆ"–ಪ್ರಕೃತಿ ಕಾರ್ಯವಾದ ಅವಿದ್ಯೆಯನ್ನು ನಿವಾರಿಸುವದರಿಂದ ನಿಯಾಮಕನಾದವನು;" ಎಂದು ಬೃಹತೀ ಮಂತ್ರಾ ರ್ಥದ ಸಾರ. ॥ ೧೫ ॥

**ಅವತರಣಿಕಾ :** ಸುಖದುಃಖಾದಿಗಳಲ್ಲಿ ಸಮತ್ವ ಬುದ್ಧಿಯುಳ್ಳವನಾಗಿ ಶ್ರೀಹರಿಯ ಕರುಣಾ ಸಂಪಾದಿಸಬೇಕು. ಅಂದರೆ ಹರಿಯು ತನ್ನ ನಿಜಭಕ್ತರಿಗೊಲಿದು ದೇಹಾನುಬಂಧಿಗಳಂತೆ ಸಂರಕ್ಷಿಸುವನೆಂದು ಹೇಳುತ್ತಾರೆ. ಶ್ರೀಹರಿಯ ಧ್ಯಾನಕ್ಕೆ ಇಂತಹ ಮಹತ್ವ ಜ್ಞಾನವೇ ಪ್ರಧಾನವೆಂದು ಸೂಚಿಸುತ್ತಾರೆ.

ಮೂಲ :

**ಹಾನಿವೃದ್ಧಿ ಜಯಾಪಜಯುಗಳು ।**
**ನಿನುಕೊಟ್ಟುದ ಭುಂಜಿಸುತ ಲ ।**
**ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ ॥**
**ಜ್ಞಾನ ಸುಖಮಯ ತನ್ನವರ ಪರ ।**
**ಮಾನುರಾಗದಿ ಸಂತೈಪ ದೇ ।**
**ಹಾನುಬಂಧಿಗಳಂತೆ ಒಳಹೊರಗಿದ್ದು ಕರುಣಾಳು ॥ ೧೬ ॥**

**ಪದ್ಯಾರ್ಥ:** ಹಾನಿ = ನಾಶ, ನಷ್ಟ, ಕೆಡಕು, ವೃದ್ಧಿ = ಏಳಿಗೆ-ಬೆಳೆಯೋಣ ಹೆಚ್ಚಾಗೋಣ,- ಜಯ = ಗೆಲವು, ಅಪಜಯ = ಸೋಲು ಏನು ಕೊಟ್ಟದ ಭುಂಜಿಸುತ = ಶ್ರೀಹರಿಯು ಯಾವ ಕಾಲಕ್ಕೆ ಏನು ಕೊಡುತ್ತಾನೊ, "ಇಟ್ಟಾಂಗೆ ಇರುವೆನೋ ಹರಿಯೇ" ಎಂಬ ಪುರಂದರದಾಸರ ವಚನದಂತೆ, ಭುಂಜಿಸುತ್ತ = ಭೋಜನಮಾಡುತ್ತ ಅನುಭೋಗಿಸುತ್ತ, ಲಕ್ಷ್ಮೀನಿವಾಸನ = ಶ್ರೀಬಿಂಬರೂಪನಾದ ಶ್ರಿಯಃಪ್ರದನಾದ - ಮೋಕ್ಷಾದಿ ಸಂಪತ್ತು ಕೊಡುವ, ಶ್ರೀರೂಪ ಹರಿಯ, ಕರುಣವನೆ ಸಂಪಾದಿಸು = ಶ್ರೀನಿಕೇತನನಾದ ಹರಿಯ ಪ್ರೀತಿ "ಏನಂ ಮೋಚಯಾಮಿ" ಎಂಬ ಕರುಣಾ ಸಂಪಾದನೆ ಮಾಡಬೇಕು. ಇದು ಸುಲಭ ಸಾಧ್ಯವಲ್ಲ. ಶ್ರೀಹರಿಯು ತಾನೆ ಭಕ್ತನ ಮೇಲೆ ಅನುಗ್ರಹಿಸಿ, ರಸಪೂರಿತವಾದ ಪ್ರಸಾದಮಯ ಕರುಣಾ ಮಾಡಬೇಕು. ಇದೇ ಹರಿಯ ಕರುಣಾ ಸಂಪಾದನೆ. ದಿನದಿನದಿ = ಪ್ರತಿನಿತ್ಯದಲ್ಲಿ ನಿತ್ಯವಾದ ಮೋಕ್ಷಾನಂದವು. ಸಹ ಶ್ರೀಹರಿಯ ಕರುಣವು ಬೇಕು. ಜ್ಞಾನ ಸುಖಮಯ ಜ್ಞಾನಾನಂದಾದಿ ಗುಣಪೂರ್ಣನಾದ ಹರಿಯು, ತನ್ನವರ = ಸ್ವಕೀಯರಾದ ನಿಜಭಕ್ತಿಯೋಗಿಗಳಾದ ತತ್ವೇಶರನ್ನು ಅಥವಾ ತನ್ನವರ ಶ್ರೀಹರಿಯೇ ಮುಖ್ಯ ಸ್ವತಂತ್ರ ನಿಯಾಮಕ; ಕರ್ತಾಕಾರಯಿತಾ ಎಂಬ ದಾರಢ್ಯದಿಂದ ತಿಳಿದ ಜ್ಞಾನ ಯೋಗಿಗಳನ್ನು ಮತ್ತು ಸಾಧನ ಸಂಪನ್ನರಾದ ಕರ್ಮಯೋಗಿಗಳನ್ನು ಪರಮ ಅನುರಾಗದಿ = ಬಹು ಪ್ರೀತಿಯುಳ್ಳವನಾಗಿ ಸ್ವೀಕರಿಸಿ ದೇಹಾನುಬಂಧಿಗಳಂತೆ ಸಲಹುವನು = ಲೋಕರೀತ್ಯಾ ದಾರಾಪುತ್ರ ಆಪ್ತೇಷ್ಟರು ವೃದ್ಧಾಪ್ಯಕಾಲದಿ ಅಥವಾ ಕಷ್ಟಕಾಲದಲ್ಲಿ ಹೇಗೆ ರಕ್ಷಣೆ ಮಾಡುತ್ತಾರೋ ಅದರಂತೆ ಸಕಲ ದೇಶ ಸಕಲ ಕಾಲದಲ್ಲಿ ಜೀವಾಂತರ್ಯಾಮಿ ದೇಹಾಂತರ್ಯಾಮಿ ಆಗಿದ್ದು, ಹೀಗೆ ಒಳಗೂ ಹೊರಗೂ ಆಪದ್‌ರಕ್ಷಕನಾಗಿ ಸಲಹುವನು = ಕಾಪಾಡುವನು. "ಅನನ್ಯಃ ಚಿಂತಯಂತೋಮಾಂ ಯೇಜನಾಃ ಪರ್ಯುಪಾಸತೇ ॥ ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ಎಂಬ ಗೀತೋಕ್ತಿಯಂತೆ ಇವರೇ ಹರಿಯ ನಿಜಭಕ್ತರು. ಶ್ರೀಹರಿಯು ಇಂಥವರನ್ನು ತನ್ನವರೆಂದು ಕಾಪಾಡುವನು.

**ದ್ರೌಪದೀಶಪತಿ ವಿಠಲರು:** ಹಾನಿವೃದ್ಧಿ.

**ಭಾವಸೂಚನ:** ಹಾನಿತಿ ॥ ೧೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹಾನಿ" ಇತಿ ॥ ಉಪಲಕ್ಷಣ ಹಾನಿ ಪದಮ್ ॥ ಪ್ರಕೃತದ್ವಂದ್ವ ಜಾತಾನಿ ॥ "ಭುಂಜಿಸು" – "ಸಮದುಃಖಸುಖೋ ಭವ ॥" "ತತ್ಕೃತೋ ತ್ರೇಕ ವಿಷಾದಶೂನ್ಯಃ ಸುಖೇ ದುಃಖೇ ಚ ವಿಷ್ಣುಭಕ್ತೌ ಸಮಃ" ಇತಿ ತಾತ್ಪರ್ಯಾದೌ "ಸಮದುಃಖ ಸುಖಂ ಧೀರಂ" ಇತಿ ಪದ್ಯಾರ್ಥವರ್ಣನಾತ್॥ ಏಕವಿಂಶಾಧ್ಯಾಯ ವಿಷ್ಣುರಹಸ್ಯೇ ಚ – "ಯದ್ಯದ್ ದುಃಖಮಯಂ ಕಾಲೇ ಪ್ರಾಪ್ನುವೀತ ತದೈವ ಹೀ ॥ ಭಾವಯೇತ್ ಭಕ್ತಿಮಾನ್ ವಿಷ್ಣೌ ಏತಸ್ಮಾತ್ ಅಧಿಕಂ ಮಮ ॥ ಭಯಂ ದುಃಖಂ ದಯಾಲುಃ ಮೇ ಭೋಜಯತ್ಯಲ್ಪಮೇವ ಹಿ ॥ ಅಪರಾಧ ಸಹಸ್ರಾಣಾಂ ಕರ್ತಾರಂ ದಯಯಾ ಹರಿಃ ॥ ಅಲ್ಪೀಕೃತ್ಯೈವ ದುಃಖಾನಿ ಭೋಜಯತ್ಯೇವ ನಾನ್ಯಥಾ ॥ ಇತ್ಥಂ ಮಹಾವಿಪನ್ಮಗ್ನಃ ನ ಚಲೇತ್ ಹರಿಭಕ್ತಿತಃ ॥ ಸ ಏವ ದೃಢಭಕ್ತಿಃ (ತ್ತಃ) ಸ್ಯಾತ್ ಪಾತ್ರಂ ಮುಕ್ತೇಃ ಸ ಏವ ಹಿ ॥ ದುಃಖೀ ದುಃಖಾದಿಕಾನ್ ಪಶ್ಯೇತ್ ನೈವ ಪಶ್ಯೇತ್ ಸುಖಾಧಿಕಾನ್ ॥ ಆತ್ಮಾನಂ ಮಾನ ಶೋಕಾಭ್ಯಾಂ ಸತತಂ ವಿನಿವರ್ತಯೇತ್" ಇತಿ ॥ ೧೬ ॥

### ಕನ್ನಡಾರ್ಥ

ಈ ಪದ್ಯದಲ್ಲಿರುವ "ಹಾನಿ" ಪದವು–ಸುಖದುಃಖ; ಮಾನಾಪಮಾನ; ಮುಂತಾದ ಸಕಲ ದ್ವಂದ್ವಗಳನ್ನೂ ಸಂಗ್ರಹಿಸಿ ಹೇಳುತ್ತದೆ. "ಭುಂಜಿಸು" ಎಂದರೆ ಅವುಗಳಿಂದಾಗುವ ಸುಖದುಃಖಗಳಲ್ಲಿ ಸಮತ್ವ ಬುದ್ಧಿಯುಳ್ಳವನಾಗು; ಅಂದರೆ ವೈಷಯಕ ದುಃಖವು ಹೇಗೆ ಬೇಡವೋ ಹಾಗೆಯೇ ಅದರಿಂದ ಕೂಡಿದುದೂ ಮತ್ತೆ ದುಃಖಕ್ಕೆ ಕಾರಣವೂ–ಅಲ್ಪ–ಅಸ್ಥಿರವೂ, ಮೋಕ್ಷಕ್ಕೆ ಪ್ರತಿಬಂಧಕವೂ ಆದುದರಿಂದ ವೈಷಯಕ ಸುಖವೂ ಸಹ "ಹೇಯ–ವರ್ಜನೀಯ"ವೆಂದು ತಿಳಿಯುವದು. ಅಥವಾ "ಸುಖದುಃಖಗಳ ಸಂಬಂಧದಿಂದ ಮನೋವಿಕಾರಗಳನ್ನು ಹೊಂದದಿರುವದು" ಎಂದು ತಿಳಿಯಬೇಕು. ತಾತ್ಪರ್ಯದಲ್ಲಿ "ಸಮದುಃಖ ಸುಖಂ ಧೀರಂ" ಎಂಬ ಶ್ಲೋಕವನ್ನು ವಿವರಿಸುವಾಗ "ಸುಖದುಃಖಗಳಿಂದಾಗುವ ಉತ್ಸಾಹ ವಿಷಾದಗಳನ್ನು ಸ್ತಂಭನ ಮಾಡುವದು;" ಎಂದು ಮುಂತಾಗಿ ನಿರೂಪಿಸಿರುತ್ತಾರೆ. ವಿಷ್ಣುರಹಸ್ಯದ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ "ಕಾಲಾನುಸಾರವಾಗಿ ಒದಗಿ ಬಂದಿರುವ

ಮುಂತಾದವುಗಳನ್ನು ಅನುಭವಿಸುವದಿತ್ತು. (ಬರುವವಿದ್ದವು.) ಶ್ರೀಹರಿಯು ಅವೆಲ್ಲ ದುಃಖ-ವಿಪತ್ತುಗಳನ್ನು ಕಡಿಮೆಮಾಡಿಸಿ ಸ್ವಲ್ಪೇ ದುಃಖವನ್ನು ತೋರಿಸಿರುತ್ತಾನೆ. ಇದು ಶ್ರೀಹರಿಯ ದಯೆಯು; ಇಲ್ಲದಿದ್ದರೆ ಎಷ್ಟೋ ಅನಂತ ಅಪರಾಧಗಳಿಗೆ ಯಾವ ಶಿಕ್ಷೆಯನ್ನು ಅನುಭವಿಸಬೇಕಾಗುತ್ತಿತ್ತೋ? ಸಹಸ್ರಾರು ಅಪರಾಧಗಳನ್ನು ಮಾಡಿದರೂ ಶ್ರೀಹರಿಯು ಭಕ್ತವತ್ಸಲ ಪರಮ ದಯಾಳುವಾದುದರಿಂದ ಅವೆಲ್ಲವುಗಳನ್ನು ಕ್ಷಮಿಸಿ ಕಿಂಚಿತ್ ಶಿಕ್ಷೆಯನ್ನು ವಿಧಿಸಿರುತ್ತಾನೆ" ಎಂದು ಶ್ರೀವಿಷ್ಣು ಭಕ್ತಿಯಿಂದ ಎಲ್ಲವನ್ನೂ ಭಾವಿಸಬೇಕು. ಎಂಥ ವಿಪತ್ತು ಬಂದರೂ ಅದನ್ನು ಈ ರೀತಿಯಾಗಿ ಭಾವಿಸಿ ವಿಷ್ಣುಭಕ್ತಿಯಿಂದ ಸ್ವಲ್ಪವೂ ಚಲಿಸಬಾರದು. ಹೀಗೆ ಮಹಾವಿಪತ್ತಿನಲ್ಲಿ ಮುಳುಗಿದ್ದರೂ ಸಹ ಅಚಲವಾದ ಭಕ್ತಿಯುಳ್ಳವನೇ ದೃಢಭಕ್ತನು; ಮುಕ್ತಿಗೆ ಪಾತ್ರನು-ಯೋಗ್ಯ ಅಧಿಕಾರಿ. ದುಃಖಿಯು ಅಧಿಕ ದುಃಖವನ್ನೇ ಕಾಣುತ್ತಾನೆ; ಸುಖಾಧಿಕ್ಯವನ್ನು ಕಾಣನು. ಆದುದರಿಂದ ಮಾನಾಪಮಾನ ಶೋಕ ಹರ್ಷಗಳಿಂದ ಮನಸ್ಸನ್ನು ಬಿಡಿಸಿ ಸಮವನ್ನು ಮಾಡಿ ಶ್ರೀಹರಿಯಲ್ಲಿ ಇಡಬೇಕು" ಎಂಬುದಾಗಿ ಹೇಳಲಾಗಿರುತ್ತದೆ ॥ ೨-೧೬ ॥

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ಹೇಳಿದ್ದನ್ನೇ ದೃಢೀಕರಿಸುತ್ತಾರೆ. ಸಕಲೇಂದ್ರಿಯುಗಳಲ್ಲಿ ವ್ಯಾಪಕನಾಗಿ ಹರಿಯು ಜೀವರಿಗೆ ವಿಷಯಾದಿಗಳ ಅನುಭವ ಮಾಡಿಸಿ ತನ್ನ ಶುಭಸಾರವನ್ನು ಸ್ವೀಕರಿಸುತ್ತಾ ಮುಂದರಿಗೆ ಈ ಮರ್ಮವನ್ನು ತಿಳಿಸದಂತೆ ನೆಲಸಿರುವನು ಎಂದು ಉಪದೇಶಿಸುತ್ತಾರೆ.




ಮೂಲ:

**ಆ ಪರಮ ಸಕಲೇಂದ್ರಿಯುಗಳೊಳು ।**
**ವ್ಯಾಪಕನು ತಾನಾಗಿ ವಿಷಯುವ ।**
**ತಾ ಪರಿಗ್ರಹಿಸುವನು ತಿಳಿಸದೆ ಸರ್ವ ಜೀವರೊಳು ॥**
**ಪಾಪರಹಿತ ಪುರಾಣಪುರುಷ ಸ ।**
**ಮೀಪದಲಿ ನೆಲಸಿದ್ದು ನಾನಾ ।**
**ರೂಪಧಾರಕ ತೋರಿಕೊಳ್ಳದೆ ಕರ್ಮಗಳ ಮಾಳ್ಪ ॥ ೧೭ ॥**

**ಪದ್ಯಾರ್ಥ:** ಆ ಪರಮ = ಆ ದೂರದಲ್ಲಿಪ್ಪ ಶ್ವೇತದ್ವೀಪ-ಅನಂತಾಸನ ವೈಕುಂಠ ನಿವಾಸಿಯಾದ ಬಿಂಬರೂಪಿ ಹರಿಯು, ಉತ್ತಮ ಶ್ರೇಷ್ಠನಾಗಿ ಜೀವರ

ಸಕಲ ಮನಾದಿ ಇಂದ್ರಿಯಗಳಲ್ಲಿ, ವ್ಯಾಪಕನು = ವಿಸ್ತರಿಸಿ ತುಂಬಿಕೊಂಡಿರುವನಾಗಿ, ವಿಷಯುವ ತಾ ಪರಿಗ್ರಹಿಸುವನು = ಸಕಲೇಂದ್ರಿಯದಿಂದ ಆಗುವ ಕ್ರಿಯೆಗಳನ್ನು ತಾನು ಮಾಡಿಸಿ, ಜೀವರಿಗೆ ತತ್ತತ್ಕರ್ಮ ವಿಷಯ ಅನುಭೋಗ ವಿತ್ತು, ತಾ ಪರಿಗ್ರಹಿಸುವನು = ತಾನು ತನ್ನ ಸ್ವಾಖ್ಯ ಶುಭರಸ ಸ್ವೀಕರಿಸುವನು. ಸರ್ವ ಜೀವರೊಳು ಇಂದ್ರಿಯ ವ್ಯಾಪಾರ ಮಾಡಿದರೂ ಶ್ರೀಹರಿಯು, ತಾ = ತನ್ನ ವ್ಯಾಪಾರವನ್ನು ಮಂದರಿಗೆ ತಿಳಿಸದಂತೆ ಇರುವನು. ಪಾಪರಹಿತ = ದೋಷ ದೂರ. ಪುರಾಣಪುರುಷ = ಸನಾತನ, ಅನಾದ್ಯನಂತ ಕಾಲದಿಂದ ಜೀವರ ಚಿದಾನಂದ ಶರೀರದಲ್ಲಿ ವಾಸಮಾಡಿ, ಸಮೀಪದಲಿ ನೆಲಸಿದ್ದು =ದೂರಾದ್ದೂರ ತರನಾದರೂ ಜೀವಾಂತರ್ಯಾಮಿಯಾಗಿ ಬಹು ಹತ್ತಿರನೇ ಇರುವನು ಮತ್ತು ಅಂತರ್ಯಾಮಿ ಪುರುಷರೂಪದಿಂದ ಒಬ್ಬನೇ ಇರುವನಾದರೂ ಬಹಿಃಕಾಲ ರೂಪನಾಗಿ, ನಾನಾ ರೂಪಧಾರಕನಾಗಿ = ಬಹು ರೂಪವನ್ನು ಧರಿಸಿ, ನಾನಾ ಕ್ರಿಯೆಗಳನ್ನು ಮಾಡಿಸುವ ಹರಿಯು, ತಾನು ತೋರಿಕೊಳ್ಳದೆ = ಕಾಣಿಸದೆ ತಿಳಿಸದೇ ಅನೇಕ ಕರ್ಮಗಳನ್ನು ತಾನೆ ಮಾಡಿ ತತ್ವಾಭಿಮಾನಿಗಳ ದ್ವಾರಾ, ಜೀವರಿಂದ ಮಾಡಿಸುವನು.

**ದ್ರಾಪ್ರದೀಶಪತಿ ವಿಠಲರು :** ಆ ಪರಮ.

**ಭಾವಸೂಚನ :** ಆ ಪರಮೇತಿ ॥ ೧೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆ ಪರಮ" ಇತಿ ॥ ೧೭ ॥

## ಕನ್ನಡಾರ್ಥ

"ದೇಹೇಂದ್ರಿಯಗಳಲ್ಲಿ ವ್ಯಾಪಕನಾಗಿ ವಿಷಯಾದಿಗಳನ್ನು ಸ್ವೀಕರಿಸುತ್ತ, ಸರ್ವಜೀವರಲ್ಲಿ ನೆಲಸಿ, ನಾನಾ ರೂಪಗಳಿಂದ ಕ್ರಿಯಾಕಲಾಪಗಳನ್ನು ಮಾಡಿ ಮಾಡಿಸುತ್ತಿದ್ದರೂ ಜೀವರಿಗೆ ತನ್ನ ಇರವನ್ನು ತಿಳಿಸಗೊಡನು" ಎಂದು ಹೇಳುತ್ತಾರೆ, "ಆ ಪರಮ" ಎಂಬ ಪದ್ಯದಿಂದ ॥ ೧೭ ॥

**ಅವತರಣಿಕಾ :** ಹಿಂದಿನ ಪದ್ಯಗಳಲ್ಲಿ-ಸರ್ವಜೀವರೊಳು ಎಂಬುದಕ್ಕೆ, ಯಾವ ಯಾವ ಜೀವರುಗಳಲ್ಲಿ ಹರಿ ವ್ಯಾಪಾರ ಮಾಡಿಸುತ್ತಾನೆಂದು ಖೇಚರರು ಎಂಬ ಪದ್ಯದಿಂದ ವಿಸ್ತಾರ ಮಾಡುತ್ತಾರೆ.

ಮೂಲ:

**ಖೇಚರರು ಭೂಚರರು ವಾರಿ ನಿ।**
**ಶಾಚರರೊಳಗಿದ್ದವರ ಕರ್ಮಗ।**
**ಳಾಚರಿಸುವನು ಘನಮಹಿಮ ಪರಮಾಲ್ಪನೋಪಾದಿ॥**
**ಗೋಚರಿಸನು (ಚರಿಸುವನು) ಬಹು ಪ್ರಕಾರಾ।**
**ಲೋಚನೆಯಮಾಡಿದರು ಮನಸಿಗೆ।**
**ಕೀಚಕಾರಿಪ್ರಿಯ ಕವಿಜನಗೇಯ ಮಹರಾಯ ॥೧೮॥**

ಎರಡೂ, ಮೂಲ ಪ್ರತಿಯಲ್ಲಿ (ಗೋಚರಿಸುವನು) ಎಂತ ಇದೆ. ಇದು ಸರಿಯಾದುದೆಂದು ತೋರುತ್ತದೆ.

**ಪದ್ಯಾರ್ಥ :** ಖೇಚರ = ಖೇ — ಆಕಾಶದಲ್ಲಿ ಅಟತೀತಿ = ಸಂಚರಿಸುವರಾದ ದೇವತೆಗಳು, ಭೂಚರರು = ಭೂ-ಪೃಥ್ವಿಯಲ್ಲಿ ಸಂಚರಿಸುವರು ಮಾನವಾದಿಗಳು, ವಾರಿಚರರು = ನೀರಿನಲ್ಲಿ ಸಂಚರಿಸುವ ಜಲಚರ ಪ್ರಾಣಿಗಳು, ನಿಶಾಚರರು = ನಿಶಾ — ರಾತ್ರಿಯಲ್ಲಿ ಚರಿಸುವ ದೈತ್ಯ ರಾಕ್ಷಸಾದಿಗಳು ಈ ನಾಲ್ಕು ವಿಧ ಜೀವರೊಳಗೆ ಇದ್ದು, ಅವರ ಕರ್ಮಗಳಾಚರಿಸುವನು = ಜೀವರ ಯೋಗ್ಯತೆಯಂತೆ ಉತ್ತಮ, ಮಧ್ಯಮ, ಅಧಮ ಕರ್ಮಗಳನ್ನು, ತಾನು ಘನಮಹಿಮ = ಶ್ರೇಷ್ಠವಾದ - ಮಹಾತ್ಮೆಯುಳ್ಳವನಾದರೂ, ಪರಮ ಅಲ್ಪನೋಪಾದಿ, ಆಚರಿಸುವನು = ಕೇವಲ ಅಲ್ಪ ಕೀಳು ಕನಿಷ್ಟನಂತೆ ಅವರವರ ಕ್ರಿಯಾಮಾಡಿಸಿ, ಆಚರಿಸುವನು = ಅವರಂತೆ ವ್ಯಾಪಾರಮಾಡುತ್ತಾನೆ. ಗೋಚರಿಸನು ಬಹುಪ್ರಕಾರಾಲೋಚನೆಯಮಾಡಿದರು ಮನಸಿಗೆ = ಬ್ರಹ್ಮಾದಿ ದೇವತೆಗಳು, ಅನಂತರ ವೇದಗಳಿಂದ ನಾನಾ ಬಗೆ ಧ್ಯಾನಗೈದು ಆಲೋಚಿಸಿದರೂ ಪೂರ್ಣವಾಗಿ ಮನಸ್ಸಿಗೆ ಗೋಚರಿಸನು = ಕಣ್ಣಿಗೆ ಕಾಣುವದಿಲ್ಲ. ಆದರೆ, ಬಹುಪ್ರಕಾರ ಆಲೋಚನೆಮಾಡಿದರೆ ಗೋಚರಿಸುವ = ವೇದಶಾಸ್ತ್ರ ವಿಹಿತವಾದ-ಧಾರಣ ಧ್ಯಾನಾದಿ ಯೋಗಗಳಿಂದ ತಪ-ಆಲೋಚನೆ, ವಿಚಾರ ಮಾಡಿದರೆ, ಅವರವರ ಯೋಗ್ಯತೆಯಂತೆ ಜ್ಞಾನಗಮ್ಯ = ಜ್ಞಾನಗೋಚರನಾಗಿ ಕಾಣಿಸಿಕೊಂಬುವನು. ಇದರಿಂದ ಪರಮಾತ್ಮ ಮಹಾಮಹಿಮನಾದರೂ, ಸ್ವಪ್ರಸಾದ ಕರುಣೆಯಿಂದ ಭಕ್ತರ ಯೋಗ್ಯತೆಯಂತೆ ಕಾಣಿಸಿಕೊಳ್ಳುವನೆಂದು ಅಭಿಪ್ರಾಯ. ಕೀಚಕಾರಿಪ್ರಿಯ = ದುಷ್ಟನಾದ ಅಜಿತೇಂ

ಪ್ರಿಯನಾದ ಕೀಚಕನೆಂಬ ದೈತ್ಯನನ್ನು ಸಂಹಾರಮಾಡಿದ ಭೀಮಸೇನಪ್ರಿಯ = "ವಾಯುರ್ಭೀಮೋ" ಎಂಬುವ ವಚನದಂತೆ ಜ್ಞಾನರೂಪರಾದ ವಾಯು ದೇವರ ಪ್ರಿಯನಾದುದರಿಂದ ವಾಯುದ್ವಾರಾ ವಾಯ್ವಂತರ್ಗತ ಶ್ರೀಹರಿಯನ್ನೇ ಭಜಿಸುವದೆಂದು ದಾಸರ ಹೃದಯ, ಕವಿಜನಗೇಯ = ಬ್ರಹ್ಮಾದಿ ಜ್ಞಾನಿಗಳಾದ ದೇವತೆಗಳಿಂದ ಹೊಗಳಿಸಿಕೊಳ್ಳುವ ಮಹರಾಯ = ಮಹ ಸರ್ವಶ್ರೇಷ್ಠ ರಾಯ = ರಾಜ, ರಾಜೇಶ್ವರ-ಏಕಚಕ್ರಾಧಿಪತಿ, ಸರ್ವೋತ್ತಮ ರಾಜ ರಾಜೇಶ್ವರನ ರೂಪ ಕೊಂಡಾಡುತ್ತಾರೆ.

**ದ್ರೌಪದೀಶಪತಿ ವಿಠಲರು :** ೧. ಖೇಚರರು = ದೇವತೆಗಳು; ೨. ಭೂಚರರು = ಮಾನವಾದಿ; ೩. ವಾರಿಚರರು = ಜಲಚರ ಪ್ರಾಣಿ; ೪. ನಿಶಾಚರರು = ದೈತ್ಯರು.

**ಭಾವಸೂಚನ :** ಖೇಚರೇತಿ || ದಿವಿಜಾ :

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಖೇಚರ" ಇತಿ || "ಖೇಚರಾಃ"—ದಿವಿಜಾಃ || "ಭೂಚರಾಃ"—ಮನುಜಾಃ || "ನಿಶಾಚರಾಃ" — ರಾಕ್ಷಸಾಃ || "ವಾರಿಚರಾಃ" — ಮಕರಾದಯಃ || ೧೮ ||

## ಕನ್ನಡಾರ್ಥ

"ದೇವ-ಮನುಷ್ಯ-ರಾಕ್ಷಸ-ಮಕರಿ-ಮೀನ ಮುಂತಾದ ಸಕಲ ಪ್ರಾಣಿಗಳಲ್ಲಿದ್ದು ಅವರವರಿಗೆ ವಿಹಿತವಾದ ಕರ್ಮಗಳನ್ನು ಮಾಡಿ-ಮಾಡಿಸುತ್ತಿದ್ದು ಜೀವರು ಎಷ್ಟು ಆಲೋಚನೆ ಮಾಡಿದರೂ ಗೋಚರಿಸದೇ ಇರುವನು" ಎಂದು ಹೇಳುತ್ತಾರೆ—"ಖೇಚರರು" ಎಂಬ ಪದ್ಯದಿಂದ.

"ಖೇಚರರು"—ದೇವತೆಗಳು, "ಭೂಚರರು"—ಭೂಮಿಯಲ್ಲಿ ಸಂಚರಿಸುವವರು-ಮನುಷ್ಯರು, "ನಿಶಾಚರರು"—ರಾತ್ರಿಯಲ್ಲಿ ಸಂಚರಿಸುವವರು-ರಾಕ್ಷಸರು, "ವಾರಿಚರ"—ನೀರಿನಲ್ಲಿ ಅಡ್ಡಾಡುವವುಗಳು-ಮೀನ ಮೊಸಳೆ ಮುಂತಾದವುಗಳು || ೧೮ ||

**ಅವತರಣಿಕಾ :** ಜೀವನೂ ಶ್ರೀಹರಿಯೂ ಸದಾ ಒಂದೇ ದೇಹದೊಳಗಿದ್ದರೂ ಶ್ರೀಹರಿಯು ನಿಂದ್ಯಾನಿಂದ್ಯ ಕರ್ಮ ಮಾಡಿಸಿ, ಈಶನು ಸ್ವತಂತ್ರನು ಸರ್ವೋತ್ತಮನು ಎಂದೂ, ಶ್ರೀಹರಿಯು ತಂದೆ ಸದಾ ಈಶನು, ಜೀವರು ಮಕ್ಕಳು ದಾಸರೆಂದೂ ತಂದೆ ಮಕ್ಕಳು ಸಂಬಂಧ್ಯಮಾಡುವ ದೃಷ್ಟಾಂತದಿಂದ ವಿಸ್ತರಿಸುತ್ತಾರೆ.

ಮೂಲ :

**ಒಂದೆ ಗೋತ್ರಪ್ರವರ ಸಂಧ್ಯಾ ।**
**ವಂದನೆಗಳನು ಮಾಡಿ ಪ್ರಾಂತಕೆ ।**
**ತಂದೆ ತನಯರು ಬೇರೆ ತಮ್ಮಯ ಪೆಸರುಗೊಂಬಂತೆ ॥**
**ಒಂದೆ ದೇಹದೊಳಿದ್ದು ನಿಂದ್ಯಾ ।**
**ನಿಂದ್ಯ ಕರ್ಮವ ಮಾಡಿ ಮಾಡಿಸಿ ।**
**ಇಂದಿರೇಶನು ಸರ್ವ ಜೀವರೊಳೀಶನೆನಿಸುವನು ॥ ೧೯ ॥**

**ಪದ್ಯಾರ್ಥ :** ತಂದೆ ಮಕ್ಕಳದು ಒಂದೇ ಗೋತ್ರವು. ಅವರ ಪ್ರವರ–ಆಶ್ವಲಾಯನ–ಆಪಸ್ತಂಭಾದಿ ಪ್ರವರ ಸೂತ್ರಗಳು ಒಂದೇ ಆದರೂ ಉಭಯರೂ ಸಂಧ್ಯಾವಂದನೆ ಮಾಡಿ ಒಂದೇ ಗೋತ್ರಪ್ರವರ ಉಚ್ಚಾರ ಮಾಡಿದರೂ, ಪ್ರಾಂತಕೆ = ಸಂಧ್ಯಾ ಕೊನೆಗೆ, ತಂದೆ ತನಯರು = ತಂದೆ ಮಕ್ಕಳು ತಮ ತಮ್ಮ, ಜನ್ಮನಾಮ = ರಾಮಶರ್ಮಾಹಂ ಗೋವಿಂದ ಶರ್ಮಾಹಂ ಇತ್ಯಾದಿ ಬೇರೆ ಪೆಸರುಗೊಂಬಂತೆ = ಬೇರೆ ಬೇರೆ ಹೆಸರು ಹೇಳುವಂತೆ, ಒಂದೇ ದೇಹದೊಳಿದ್ದು = ಜೀವ ಪರಮಾತ್ಮರು ಒಂದೇ ದೇಹದಲ್ಲಿದ್ದರೂ ಪರಮಾತ್ಮನು ಜೀವನಿಂದ, ನಿಂದ್ಯ = ಕೆಟ್ಟ, ಅನಿಂದ್ಯ = ಪುಣ್ಯ, ಕರ್ಮ = ಕೆಲಸಗಳನ್ನು ಹರಿಯು ತಾ ಮಾಡಿ ಜೀವನಿಂದ ಮಾಡಿಸುವನು. ಇಂದಿರೇಶ = ರಮಾದೇವಿಗೆ ಒಡೆಯನಾದ ಹರಿ, ಸರ್ವಜೀವರೊಳು = ಸರ್ವ ಜೀವರುಗಳಿಗೆ, ಈಶ = ಸ್ವಾಮಿ ಒಡೆಯ ತಂದೆ ಸ್ವತಂತ್ರನೆನಿಸುವನು, ಸ್ವತಂತ್ರನಾದ ದೋಷದೂರನಿಗೆ ಕರ್ಮ ಲೇಪವಿಲ್ಲೆಂತ ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ಒಂದೇ ಗೋತ್ರಪ್ರವರದ ತಂದೆ ಮಕ್ಕಳು ಸಂಧ್ಯಾವಂದನೆಯ ಕೊನೆಯಲ್ಲಿ ಬೇರೆ ಬೇರೆ ನಾಮ ಹೇಗೆ ತೆಗೆದು ಕೊಳ್ಳುತ್ತಾರೋ ಹಾಗೆ ಪಾಪ ಪುಣ್ಯ ಮಾಡಿಸಿದ ಮೇಲೆ ಸುಖದುಃಖ ಪರಮಾತ್ಮಗೆ ಬರಲಿ ಎಂದರೆ ಬರುವದಿಲ್ಲ. ಒಂದೇ ದೇಹದೊಳಗಿದ್ದ ಜೀವ ದಾಸ ಪರಮಾತ್ಮ ಈಶ.

**ಭಾವಸೂಚನ :** ವಂದೇತಿ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಒಂದೆ" ಇತಿ ॥ "ಪೆಸರು"–ಹೆಸರು । "ಸಕಾರಯೇತ್" ಇತ್ಯುಕಂ

ವ್ಯನಕ್ತಿ – "ಒಂದೆ" ಇತಿ ॥ ಏಕಾದಶತಾತ್ಪರ್ಯೇ ಚ – "ಸ ಏವ ಚ ಮಯಿ ಸ್ಥಿತ್ವಾ ನಿಂದ್ಯಾನಿಂದ್ಯೇ ಕರೋತ್ಯಜಃ ॥ ನಮೇ ದೋಷಃ ನ ಚ ಗುಣಃ ಕರ್ತೃತ್ವಾಭಾವತಃ ಸ್ಫುಟಮ್ ॥ ಸ್ವತಂತ್ರತ್ವಾತ್ ನಚೇಶಸ್ಯ ಯೇಽಜ್ಞಾಃ ತೇಷು ಭವೇದಪಿ॥ ಜ್ಞಾನೀತ್ವ ಕರ್ತೃತಾಮಾನಾತ್ ಈಶ ಕರ್ತೃತ್ವನಿಶ್ಚಯಾತ್॥ ಕಿಂತುಪೂರ್ಣಗುಣಾಯ್ಯೈವ ನತು ದೋಷಾಪನುತ್ತಯೇ ॥ ನಚಾಲ್ಪಗುಣ ಸಿಧ್ಯರ್ಥಂ ಬಾಲವತ್ ಕೃತನಿಶ್ಚಯಃ ॥" ಇತಿ ॥ ಪೂರ್ಣಗುಣಃ ಹರಿಃ ॥ ತತ್ಪ್ರೀತ್ಯರ್ಥಂ ತದಾಲಯ ಮುಕ್ತ್ಯರ್ಥಂ ವಾ ॥ "ಸ್ವರ್ಗಾದ್ಯಾಶ್ಚ ಗುಣಾಃ ಸರ್ವೇ ದೋಷಾಃ ಸರ್ವೇ ತಥೈವ ಚ ॥ ಆತ್ಮನಃ ಕರ್ತೃತಾ ಭ್ರಾಂತ್ಯಾ ಜಾಯಂತೇ ನಾತ್ರ ಸಂಶಯಃ ॥" ಇತಿ ಚ ॥ ಶ್ರೀಶ ಪ್ರತಿಪದಂ – ಇಂದಿರೇಶ ಪದಮ್" ಓಃ * ಯತ್ರಾ ಸೋಮಸ್ಯ ತೃಂಪಸಿ ಇಂದ್ರನೇದೀಯ, ಏದಿಹ ಮಿತಮೇದಾಭಿರೂತಿಭಿಃ ॥ ಆಶಂತಮಶಂತಮಾಭಿರಭಿಷ್ಟಿಭಿಃ ॥ ಓಂ * ॥ ಶ್ರೀಃ ಮೇಧಾಃ ಜ್ಞಾನಂ ತನ್ನಾಮ್ನೀ ರಮಾನಾಥಃ ॥ ೧೯ ॥

## ಕನ್ನಡಾರ್ಥ

"ಆ ಪರಮಾತ್ಮನೇ ಜೀವರಿಂದ ಕಾರ್ಯಗಳನ್ನು ಮಾಡಿಸುತ್ತಾನೆ" ಎಂಬುದನ್ನು ವಿವರಿಸುತ್ತಾರೆ. "ಒಂದೇ" ಎಂಬುದರಿಂದ. ಭಾಗವತ ಸ್ಕ ೧೧. ತಾತ್ಪರ್ಯದಲ್ಲಿ–"ಪರಮಾತ್ಮನೇ ನನ್ನಲ್ಲಿ ನಿಂತುಕೊಂಡು ಸದಸತ್ಕರ್ಮಗಳನ್ನು ಮಾಡಿ ಮಾಡಿಸುತ್ತಾನೆ. ನನಗೆ ಕರ್ತೃತ್ವವಿಲ್ಲದಿರುವದರಿಂದ ಗುಣದೋಷ ಗಳಿರುವದಿಲ್ಲ. ಪರಮಾತ್ಮನೇ ಸ್ವತಂತ್ರನಾದುದರಿಂದ, ಈಶನೇ ಮುಖ್ಯ ಕರ್ತೃವು. ಅಜ್ಞರು "ತಾವು ಕರ್ತೃ"ಗಳೆಂದು ತಿಳಿದುಕೊಳ್ಳುವದರಿಂದ ದೋಷ ಭಾಗಿಗಳಾಗಿರುತ್ತಾರೆ. ಜ್ಞಾನಿಗಳು ತಾವು ಕರ್ತೃಗಳಲ್ಲವೆಂದೂ – ಈಶನೇ ಕರ್ತನೆಂದೂ ನಿಶ್ಚಯವಾಗಿ ತಿಳಿದಿರುವದರಿಂದ ಅವರಿಗೆ ಈ ಗುಣ ದೋಷಗಳಿರುವದಿಲ್ಲ. ಪರಮಾತ್ಮನ ಪ್ರೀತಿಗಾಗಿ ಅಥವಾ ಅವನ ನಿಲಯವಾದ ಮುಕ್ತಿಸ್ಥಾನವನ್ನು ಹೊಂದಲು ಅವರು ಕರ್ಮಗಳನ್ನು ಮಾಡುತ್ತಾರೆ; ಸ್ವರ್ಗ ಮುಂತಾದವುಗಳನ್ನುದ್ದೇಶಿಸಿ ಮಾಡುವದಿಲ್ಲ. ಅಲ್ಪವಾದ ಸ್ವರ್ಗಾದಿಫಲಗಳನ್ನು ದ್ದೇಶಿಸಿ ಕರ್ಮಮಾಡುವವನು ಬಾಲಸ್ವಭಾವದವನು" ಎಂದು ನಿರೂಪಿ ಸಿರುತ್ತಾರೆ. ಗುಣಗಳು – ಸ್ವರ್ಗ ಮುಂತಾದವುಗಳು. "ನಾನೇ ಕರ್ತೃ" ಎಂಬ ಭ್ರಮಮೂಲಕವಾಗಿ ಮಾಡಿರುವ ಸದಸತ್ಕರ್ಮಗಳಿಂದ ಸ್ವರ್ಗ

ಮುಂತಾದವುಗಳಾಗುತ್ತವೆ ; ಇದರಲ್ಲಿ ಸಂಶಯವಿಲ್ಲ" ಎಂಬುದಾಗಿಯೂ ನಿರೂಪಿಸಿರುತ್ತಾರೆ.

"ಇಂದಿರೇಶ" ಪದವು "ಶ್ರೀಶ" ಎಂಬ ವಿಷ್ಣು ಸಹಸ್ರನಾಮದ ಸಮಾನಾರ್ಥಕವಾಗಿರುತ್ತದೆ.

"ಜ್ಞಾನ - ಮೇಧಸ್ಸುಗಳನ್ನು ಕೊಡಲು ನಿಯಾಮಕನು" ಎಂದು "ಶ್ರೀಶ" ನಾಮದ ಬೃಹತೀ ಮಂತ್ರದ ಅರ್ಥಸಾರ ॥ ೧೯ ॥

**ಅವತರಣಿಕಾ:** ಹಿಂದೆ ಹೇಳಿದಂತೆ ಸರ್ವದೇಹ ಇಂದ್ರಿಯನಿಯಾಮಕ ಶ್ರೀಹರಿಯು ಈಶನೆಂದು ಧ್ಯಾನಮಾಳ್ಪರಿಗೆ ಲಿಂಗ ಭಂಗಮಾಡಿ ತನ್ನ ಉದರದಿಂದ ಹೊರಮಾಡಿಸಿ ಶ್ವೇತದ್ವೀಪ ಮೂರ್ತಿ ಸಂದರ್ಶನಮಾಡಿಸಿ ಮೋಕ್ಷಾನಂದವನ್ನು ಕೊಡುವನು ಎಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ.

ಮೂಲ :

**ಕಿಟ್ಟಗಟ್ಟಿದ ಲೋಹ ಪಾವಕ ।**
**ಸುಟ್ಟು ವಿಂಗಡ ಮಾಡುವಂತೆ ಘ ।**
**ರಟ್ಟ ವ್ರಿಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ ॥**
**ವಿಠ್ಠಲಾನೆಂದೊಮ್ಮೆ ನೈಮರೆ ।**
**ದಟ್ಟಹಾಸದಿ ಕರೆಯೆ ದುರಿತಗ ।**
**ಳಟ್ಟುಳಿಯ ಬಿಡಿಸೆವನ ತನ್ನೊಳಗಿಟ್ಟು ಸಲಹುವನು ॥ ೨೦ ॥**

**ಪದ್ಯಾರ್ಥ :** ಕಿಟ್ಟಗಟ್ಟಿದ ಲೋಹ = ಕಬ್ಬಿಣಕ್ಕೆ, ಬಳಕೆ ಇಲ್ಲದೇ ಬಹುದಿವಸದಿಂದ ಕಿಟ್ಟ = ಜಂಗು ಹೊಲಸುಗಟ್ಟಿದ್ದರೆ, ಆ ಕಬ್ಬಿಣವನ್ನು ಬೆಂಕಿಯೊಳಗೆ ಹಾಕಿ ಕಾಸಿದರೆ, ಆ ಕಬ್ಬಿಣದ ಜಂಗು ಹೊಲಸು, ಪಾವಕ ಅಗ್ನಿಯು ಸುಟ್ಟು ವಿಂಗಡಮಾಡುವಂತೆ; ಆ ಕಿಟ್ಟವನ್ನು ಬೆಂಕಿ ಸುಟ್ಟು ಹೊಲಸು ಬೇರೆ ಮಾಡುತ್ತದೆ. ಅದರಂತೆ; ಮತ್ತು ಘರಟ್ಟ = ನೆಲ್ಲು ಒಡೆಯುವ ಕಟ್ಟಿಗೆಯ ಬೀಸುವ ಕಲ್ಲು, ಅಥವಾ ಘರಟ್ಟ = ಒನಿಕೆಯು, ವ್ರೀಹಿಗಳೊಳಿಪ್ಪ = ಭತ್ತ-ನೆಲ್ಲಿನಲ್ಲಿ ಇರುವ, ತಂಡುಲ = ಅಕ್ಕಿಯನ್ನು ಬೇರೆ ಮಾಡುವಂತೆ, ಅಂದರೆ ಕಟ್ಟಿಗೆ ಬೀಸುವ ಕಲ್ಲಿನಲ್ಲಿ ನೆಲ್ಲುಹಾಕಿ ಒಡೆದರೆ ಮೇಲಿನ ಹೊಟ್ಟು ಹೋಗುತ್ತದೆ, ಮತ್ತು ಒರಳಿನಲ್ಲಿ ಬತ್ತಹಾಕಿ ಒನಿಕೆಗಳಿಂದ ಥಳಿಸಿದರೆ, ಮೇಲಿನ ಹೊಟ್ಟು ಮುಂತಾದವು ಹ್ಯೋಗಿ ಸ್ವಚ್ಛವಾದ ಅಕ್ಕಿಯು

ಆಗುತ್ತದೆ. ಇದರಂತೆ ವಿಠ್ಠಲಾನೆಂದೊಮ್ಮೆ = ವಿಠ್ಠಲನಾಮಕ ಹರಿಯು ಅಜ್ಞಾನಿಗಳಿಗೆ ಜ್ಞಾನವನ್ನು ಕೊಟ್ಟು ರಕ್ಷಿಸುವ ಹರಿಯೇ ವಿಠ್ಠಲನೆಂಬ ನಾಮುವನ್ನು, ಮೈಮರೆದು = ಮೈಮೇಲಿನ ಎಚ್ಚರತಪ್ಪಿ, ಅಸಂಪ್ರಜ್ಞಾತ ಸಮಾಧಿ ಧಾರಣ ಧ್ಯಾನಯೋಗದಿಂದ - ವಿಠ್ಠಲ ವಿಠ್ಠಲನೆಂದು ಅಟ್ಟಹಾಸದಿ ಕರೆಯೆ = ಮೈಮರೆದು ಬಹು ಉತ್ಸಾಹ ಆನಂದಾದಿಗಳಿಂದ, ವಿಠ್ಠಲನೆಂದು ಕರೆಯಲು, ದುರಿತಗಳಟ್ಟುಳಿಯ ಬಿಡಿಸೆವನ = ಪಾಪವೆಂಬುವಂಥಾ, ಅಟ್ಟುಳಿಯ ಉಪದ್ರವವನ್ನು ಕೊಡುವ ಲಿಂಗವನ್ನು ಬಿಡಿಸಿ = ಲಿಂಗಭಂಗವನ್ನುಮಾಡಿ, ಅವನ = ಆ ಜೀವನನ್ನು, ತನ್ನೊಳಗಿಟ್ಟು = ತನ್ನ ಉದರದಲ್ಲಿಟ್ಟು ಸಲಹುವನು. ಶ್ರೀಹರಿಯು ಲಿಂಗಭಂಗಾನಂತರದಲ್ಲಿ, ತನ್ನ ಉದರದಿಂದ ಜೀವರನ್ನು ಹೊರಹೊರಡಿಸಿ ಶ್ವೇತದ್ವೀಪಗತನಾದ ಹರಿಯ ದರ್ಶನಮಾಡಿಸಿ, ವೈಕುಂಠಾದಿ ಮೋಕ್ಷಸ್ಥಾನದಲ್ಲಿಟ್ಟು ಆನಂದವನ್ನು ಕೊಡುತ್ತಾ ರಕ್ಷಿಸುತ್ತಾನೆಂದು ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ಕಿಟ್ಟಗಟ್ಟಿದ ಲೋಹ.

**ಭಾವಸೂಚನ :** ಕಿಟ್ಟೇತಿ ॥ ವಿಂಗಡ-ಭಿನ್ನ ॥ ೨೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಿಟ್ಟ" ಇತಿ ॥ "ವಿಂಗಡ"-ಬೇರೆಗೈಸು "ಘರಟ್ಟ"-ಬೀಸುವ ಕಲ್ಲು। ಅಥವಾ ವನಿಕೆ. "ಮೈಮರೆದು" - ಭಕ್ತಿಪರವಶಃ। "ವಿವಶಃ ಗೃಣನ್" ಇತಿ ಭಾಗವತೇ ॥ ತಾತ್ಪರ್ಯನಿರ್ಣಯೋಃ ತಥಾ ಅವಗಮಾತ್ ॥ "ಅಟ್ಟುಲೀ"- ವೇಗ ॥ ೨೦ ॥

## ಕನ್ನಡಾರ್ಥ

"ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶಃ ಗೃಣನ್ ॥

ತತಃ ಸದ್ಯೋ ವಿಮುಚ್ಯೇತ" "ಶೃಣ್ವನ್ ಗೃಣನ್" ಎಂದು ಮುಂತಾಗಿರುವ ಭಾಗವತ ಶ್ಲೋಕಗಳಿಂದ "ಪರಮಾತ್ಮನ ನಾಮುವನ್ನು ಭಕ್ತಿಪರವಶವಾದ ಅನನ್ಯಮನಸ್ಸಿನಿಂದ ನೆನೆನೆನೆದು ನುಡಿದರೆ ಘೋರ ಸಂಸಾರದ ಸಕಲ ವಿಪತ್ತುಗಳಿಂದ ಮುಕ್ತನಾಗುತ್ತಾನೆ" ಎಂದು ಉಕ್ತವಾದುದರಿಂದ "ವಿಠ್ಠಲ" ನಾಮೋಚ್ಚರಣವು ಸಕಲ ಪಾತಕಗಳಿಂದ ಶೋಧಿಸಿ ಪವಿತ್ರೀಕರಿಸಿ ಸಂರಕ್ಷಿಸುತ್ತದೆ" ಎಂದು ದಾಸರಾಯರು ನಿರೂಪಿಸಿರುತ್ತಾರೆ. ॥ ೨೦ ॥

**ಅವತರಣಿಕಾ:** ಮುಕ್ತಿದಾತನಾದ ವಾಸುದೇವ ಪರಮಾತ್ಮನ ಮಹಾ ಮಹಿಮೆಯನ್ನು ಜಲಧಿ ದೃಷ್ಟಾಂತಪೂರ್ವಕ ವರ್ಣಿಸಿ, ಭಗವನ್ ಮಹಾಮಹಿಮೆಯನ್ನು ಉಪಸಂಹಾರ ಗೈಯ್ಯುತ್ತಾರೆ.

ಮೂಲ :

**ಜಲಧಿಯೊಳು ಸ್ವೇಚ್ಛಾನುಸಾರದಿ ।**
**ಜಲಚರ ಪ್ರಾಣಿಗಳು ತತ್ತತ್ ।**
**ಸ್ಥಳಗಳಲಿ ಸಂತೋಷಬಡುತಲಿ ಸಂಚರಿಸುವಂತೆ ॥**
**ನಳಿನನಾಭನೊಳಬ್ಜಭವ ಮು ।**
**ಪ್ಪೊಳಲುರಿಗ ಮೈಗಣ್ಣ ಮೊದಲಾ ।**
**ದಲವ ಜೀವರ ಗಣವು ವರ್ತಿಸುತಿಹುದು ನಿತ್ಯದಲಿ ॥ ೨೧॥**

**ಪದ್ಯಾರ್ಥ :** ಜಲಧಿಯೊಳು =ಸಮುದ್ರದಲ್ಲಿ ಸ್ವೇಚ್ಛಾನುಸಾರದಿ ತಮತಮಗೆ ಇಚ್ಛಾಬಂದಂತೆ, ಜಲಚರ ಪ್ರಾಣಿಗಳು = ಜಲದಲ್ಲಿ ಸಂಚರಿಸುವ ಪ್ರಾಣಿಗಳು, ತತ್ತತ್ ಸ್ಥಳಗಳಲಿ = ಆಯಾ ತಮ್ಮ ಯೋಗ್ಯ ಸ್ಥಳಗಳಲ್ಲಿ ಸಂಚರಿಸುತ್ತಾ ಸಂತೋಷಪಡುವಂತೆ ಮುಕ್ತರಾದ ಜೀವರುಗಳು, ನಳಿನನಾಭನೊಳು = ಕಮಲವೇ ಹೊಕ್ಕುಳಾಗಿರುವ ಮಹಾ ಸಮುದ್ರಸದೃಶನಾದ ಶ್ರೀಹರಿಯ್ಲಲ್ಲಿ ಅಬ್ಜಭವ = ಕಮಲದ ಹೂವಿನಿಂದ ಹುಟ್ಟಿದ ಬ್ರಹ್ಮ, ಮುಪ್ಪೊಳಲುರಿಗ = ಮೂರು ಪಟ್ಟಣವನ್ನು ಸುಟ್ಟ ಮಹರುದ್ರದೇವರು, ಮೈಗಣ್ಣ = ಮೈಯೆಲ್ಲಾ ಕಣ್ಣುಳ್ಳ ಸಹಸ್ರಾಕ್ಷನಾದ ಇಂದ್ರದೇವರು ಮೊದಲಾದಲವಜೀವರ ಗಣವು, ಬ್ರಹ್ಮ–ಶೇಷ–ಗರುಡ–ಇಂದ್ರ ಮೊದಲಾದ ಅನೇಕ ಜೀವರ ಸಮುದಾಯವು, ನಿತ್ಯದಲ್ಲಿ= ನಿತ್ಯವಾದ ಮುಕ್ತಿಯಲ್ಲಿ, ವರ್ತಿಸುತಿಹುದು = ಸಂಚರಿಸುತ್ತ ತಿರುಗಾಡುತ್ತಲಿಹುದು.

**ದ್ರೌಪದೀಶಪತಿ ವಿಠಲರು :** ಜಲಧಿಯೊಳು.

**ಭಾವಸೂಚನ :** ಜಲಧೀತಿ ॥ ಮುಪ್ಪುರಿಗ = ಹರ ; ಮೈಗಣ್ಣ = ಇಂದ್ರ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

" ಮದ್ವಾರ್ತಾಯಾತಯಾಮಾನಾಂ " " ಅನಷ್ಟ ಭಗವತ್ ಸ್ಮರಣಃ ಸ್ಮರಣಃ ಬುಭುಜೇ ನಾತಿಲಂಪಟಃ " " ವಿರಕ್ತಃ ರಕ್ತವತ್ ಗೃಹೇಷು ಅತಿಥಿ

ವತ್" ನೋತ್ಸೇಕಂ ಪ್ರಾಪ್ನೋತಿ ನಶುಷ್ಯತಿ" ಇತ್ಯಾದ್ಯುಕ್ತ ಲಕ್ಷಣಾನ್ ಅಪರೋಕ್ಷಿಣಃ ಜೀವನ್ಮುಕ್ತಾನ್ ಪ್ರತಿಪಿಪಾದಯಿಷುಃ ತಾವತ್ "ಭಾನ ಮಸ್ತಿತ್ವಮಪಿ ಚೈವ ಆಸಮಂತಾತ್ ಯತಃ" ಇತ್ಯುಕ್ತಾರ್ಥಾಭಾಸಸೂತ್ರೋಕ್ತ ಪ್ರತಿಬಿಂಬತ್ವಂ ರಮಾದೀನಾಂ ದೃಷ್ಟಾಂತೇನಾಹ – "ಜಲಧಿ" ಇತಿ ॥ "ಪ್ರಯೋಗಯುಕ್ತ ಸಾದೃಶ್ಯಂ ಸಂಬಂಧೋವಾ" ಇತಿ ಬುದ್ಧ್ಯಾ ಭಾವಾನ್ವಿತ ಮಪಿ "ಅಬ್ಜ" ಪದಂ ಆಕೃಷ್ಯತೇ ॥ "ಅಬ್ಜ" ಸಮುದ್ರಜಾ ರಮಾ । ತದ್ಭವಃ ಅಜಃ ॥ ಯದ್ವಾ ನಳಿನೇತ್ಯಸ್ಯ ಆವೃತ್ತಿಃ ॥ ಅಕ್ಷರಶಬ್ದವತ್ ಅಯಂ ಘಟತೇ ॥ "ಪದ್ಮಪಾದಃ ಪದ್ಮನಾಭೇತಿ" (ಭಃ ಇತಿ) ಶಿಷ್ಟ ಪ್ರಯೋಗಾತ್ ॥ "ಮುಪ್ಪೊಳಲುರಿಗ"–ರುದ್ರಃ ॥ "ನೈಗಣ್ಣಃ"–ಸಹಸ್ರಾಕ್ಷಃ ॥ "ಅಲವ" ಸರ್ವ ॥ ೨೧ ॥

## ಕನ್ನಡಾರ್ಥ

"ಹರಿಯ ವಾರ್ತೆಯಿಂದಲೇ ರಾತ್ರಿಗಳ ಯಾಮುಗಳನ್ನು ಕಳೆಯುವರು" ಭಕ್ತಸ್ಮರಣದಲ್ಲಿ ಅತ್ಯಂತ ಜಾಗರೂಕನಾದವನು ವಿಷಯುಗಳಲ್ಲಿ ಆಶೆಯನ್ನು ತೊರೆದವನು; "ದಾರಾಗಾರಗಳಲ್ಲಿ ಆಸಕ್ತನಂತೆ ಇದ್ದರೂ ಅತಿ ವಿರಕ್ತ ನಾದವನು;" (ಅತಿಥಿಯಂತೆ) "ವಿಷಯುಗಳಿಂದ ಹರ್ಷವನ್ನೂ ವಿಷಾದವನ್ನೂ ಹೊಂದದವನು" ಎಂದು ಮುಂತಾಗಿ ಹೇಳಲ್ಪಟ್ಟ – ಜೀವನ್ಮುಕ್ತರೆನಿಸಿರುವ ಅಪರೋಕ್ಷಜ್ಞಾನಿಗಳ ಚರಿತೆಯನ್ನು ಪ್ರತಿಪಾದಿಸಲು ಇಚ್ಛಿಸುವವರಾಗಿ, ಶ್ರೀದಾಸರಾಯರು "ಆ" ಸರ್ವದೇಶ ಕಾಲಗಳಲ್ಲಿರುವ "ಭಾಸೇ" ಜ್ಞಾನ ಹಾಗೂ ಅಸ್ತಿತ್ವಗಳು ಪರಮಾತ್ಮಾಧೀನವಾಗಿ ಯಾರಿಗೆ ಇರುತ್ತವೆಯೋ ಅವನು "ಆಭಾಸನು" ಎಂದ ಹೇಳುವ "ಆಭಾವ ಏವಚ" ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಪ್ರತಿಬಿಂಬತ್ವವನ್ನು ರಮಾದಿಗಳ(ಳಿಗೆ) ದೃಷ್ಟಾಂತದಿಂದ ಹೇಳು ತ್ತಾರೆ — "ಜಲಧಿ" ಎಂಬ ಪದ್ಯದಿಂದ. "ಪ್ರಯೋಗಯುಕ್ತಸಾದೃಶ್ಯಂ" ಎಂದು ಅನುವ್ಯಾಖ್ಯಾನದಲ್ಲಿ ಹೇಳಿದುದನ್ನು ಮನಸ್ಸಿನಲ್ಲಿಟ್ಟು "ಅಬ್ಜ" ಪದವನ್ನು ಎರಡು ಸಲ ಯೋಚಿಸಿ "ಅಬ್ಜಾ–ಅಬ್ಜಭವ" ಎಂದು ಅರ್ಥಮಾಡ ಬೇಕು, ಅಥವಾ ನಳನ ಪದವನ್ನು ಎರಡುಸಲ ತಂತ್ರವೃತ್ತಿಮಾಡಿಕೊಂಡು ನಳಿನಭವಾ–ಅಬ್ಜಭವ ಎಂದು ಪದಗಳಿಂದ–ರಮಾ–ಬ್ರಹ್ಮರೆಂದು ಅರ್ಥಮಾಡಿ ಕೊಳ್ಳಬೇಕು. ಅಕ್ಷರಶಬ್ದವು ಪುಲ್ಲಿಂಗವಾಗಿರುವದೋ "ರಮಾ" ಎಂಬ

ಅರ್ಥದಲ್ಲಿರುವ ನಳಿನಭವ "ಅಬ್ಜ" ಎಂಬ ಪದಗಳು ಪುಲ್ಲಿಂಗದಲ್ಲಿರುವದು. ರಮಾದೇವಿಗೆ ಪುಲ್ಲಿಂಗ ಶಬ್ದಪ್ರಯೋಗವು ಶಾಸ್ತ್ರಸಿದ್ಧವಾದುದು. "ಮುಪ್ಪೊಳಲುರಿಗ"= ತ್ರಿಪುರಾಸುರದಾಹಕನಾದ ರುದ್ರ. "ಮೈಗಣ್ಣ"-ಸಾವಿರ ಕಣ್ಣುಗಳುಳ್ಳವನು-ಇಂದ್ರ. "ಅ ಲವ" ಸಕಲ ಸರ್ವ (ಪೂರ್ಣ) ॥ ೨೧ ॥

**ಅವತರಣಿಕಾ :** ಜಡಪ್ರಕೃತಿಯಲ್ಲಿ ಧ್ಯಾನಪ್ರಕ್ರಿಯೆ ತತ್ತದ್ಗತ ಭಗವತ್ಕಾರ್ಯ ಮಾಹಾತ್ಮೆ ಹೇಳಿ ಈಗ ಅನ್ವಯಪೂಜಾ ವಿವರ ಹೇಳುತ್ತಾರೆ.

ಮೂಲ :

**ವಾಸುದೇವನು ಒಳ ಹೊರಗೆ ಆ ।**
**ಭಾಸಕನು ತಾನಾಗಿ ಬಿಂಬ ಪ್ರ ।**
**ಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರ ॥**
**ಈ ಸಮನ್ವಯವೆಂದೆನಿಪ ಸದು ।**
**ಪಾಸನೆಯ ಗೈವವನು ಮೋಕ್ಷಾ ।**
**ನ್ವೇಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ॥ ೨೨ ॥**

**ಪದ್ಯಾರ್ಥ :** ವಾಸುದೇವನು = "ವಾಸನಾದ್ವಾಸು ದೇವೋಽಸಿ ವಾಸಿತಂತೇ ಜಗತ್ರಯಂ", ಈ ಜಗತ್ರಯದಲ್ಲಿ ಕಾಲರೂಪದಿಂದ ವಾಸಮಾಡುತ್ತಾನಾದಕಾರಣ ವಾಸುದೇವನೆಂತಲೂ ಅಥವಾ ವಾಸುದೇವ ಶಬ್ದಾರ್ಥ ಉಕ್ತಃ ಸೌಕರಾಯಣ ಶೃತೇಃ ॥ ವಾಸನಾಸ್ತೇ ದೇವನಾದ್ವಾಸುದೇವೋ ವಾಸಾದ್ಯುತೇಃ । ಛಾದನಾಕ್ರೀಡನಾಚ್ಚ ॥ ಬಲದಾತೃತ್ವಾದ್ರಾ ವೃತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ ಇತಿ ॥ ವಿಷ್ಣು ಸಹಸ್ರನಾಮ ಶ್ರೀ ವಿದ್ಯಾಧಿರಾಜೀಯ ಹೀಗೆ ಮುಕ್ತಿದಾಯಕನಾದ ವಾಸುದೇವನು, ಒಳ ಹೊರಗೆ = ಒಳ = ಸರ್ವ ಜೀವಾಂತರ್ಯಾಮಿಯಾಗಿ ಒಳಗೆ, ಹೊರಗೆ = ಲಿಂಗದೇಹಾರಂಭಿಸಿ ಅವ್ಯಕ್ತ, ಅನಿರುದ್ಧ ಮತ್ತು ಪ್ರಾಕೃತ ಸ್ಥೂಲ ಶರೀರದಲ್ಲಿ ಮತ್ತು ಸಕಲ ಬ್ರಹ್ಮಾಂಡದಲ್ಲಿ ಮತ್ತು ಬ್ರಹ್ಮಾಂಡದ ಹೊರಗೆ, ನವಾವರಣ ಅವ್ಯಾಕೃತಾಕಾಶದಲ್ಲಿ, ಆಭಾಸಕನು ತಾನಾಗಿ = ಪ್ರಕಾಶಮಾನನಾಗಿ ಸರ್ವರಲ್ಲಿಯೂ ಬಿಂಬರೂಪನಾಗಿಯೂ, ಅಂತರದಲ್ಲಿ ಹೊರಗೆ ತದ್ರೂಪ ತನ್ನಾಮದಲಿ ಆಭಾಸಕನು ತಾನಾಗಿ, ಪ್ರಕಾಶಿಸುವ = ಸರ್ವಜಗತ್ತಿನಲ್ಲಿ, ಸರ್ವ ಪದಾರ್ಥದಲ್ಲಿ, ಸರ್ವ ತತ್ವಾಭಿಮಾನಿ ದೇವತೆಗಳಲ್ಲಿ ಅವರಂತೆ ರೂಪ ತಾಳಿ,

ಅವರೋಪಾದಿ ತೋರುವದಕ್ಕೆ ಆಭಾಸಕನೆಂದು ಹೇಳುತ್ತಾರೆ. ಹೀಗೆ ಸಮಸ್ತ ಜಗತ್ ಜಡಚೇತನದಲ್ಲಿ ಕರಣ – ಕರ್ಮ – ಕರ್ತೃ ತದಭಿಮಾನಿ ದೇವತೆ ರಮಾದಿಯಲ್ಲಿಯೂ, ಬಿಂಬರೂಪನಾದ ಹರಿಯೊಬ್ಬನೇ ಕರ್ತೃರೂಪದಿಂದ ಸಕಲ ವ್ಯಾಪಾರ ಮಾಡುತ್ತಾನೆಂದು ತಿಳಿಯುವದೇ ಈ ಸಮನ್ವಯವೆಂದೆನಿಪದು. ಸಮೀಚೀನವಾಗಿ ಒಳ್ಳೇ ರೀತಿಯಿಂದ, ಅನ್ವಯ = ಅನ್ವೀಯತೆ ಇತಿ ಅನ್ವಯಃ ಅನುಲಕ್ಷಣೆಯಿಂದ ಸಕಲರಲ್ಲಿಪ್ಪ ಹರಿಯ ರೂಪಗಳನ್ನೂ ಅನ್ವಯಿಸುವದು = ಐಕ್ಯಚಿಂತನೆಮಾಡುವದೇ **ಅನ್ವಯಪೂಜಾ.** ಈ ಅನ್ವಯಪೂಜಾ ಎಂದೆನಿಪ ಸದುಪಾಸನೆಯಗೈವವನು = ಒಳ್ಳೇ ರೀತಿಯಿಂದ ಉಕ್ತವಾದ ಧ್ಯಾನಪ್ರಕಾರ ದಿಂದ, ಸಕಲ ರೂಪಗಳನ್ನು ಬಿಂಬನಲ್ಲಿ ಐಕ್ಯ ಚಿಂತಿಸುವದೇ ಸದುಪಾಸನೆ, ಇಂತಹ ಒಳ್ಳೇ ಉಪಾಸನೆ ಯಾವನು ಮಾಡುತ್ತಾನೋ ಅವನು ಮೋಕ್ಷಾನ್ವೇಷಿಗಳೊಳು ಉತ್ತಮನು = ಮುಕ್ತಿಪಥ ದಾರಿತೋರುವ ಶ್ರೀಹರಿಯ ಅನ್ವೇಷಿಗಳೊಳು = ಹುಡುಕುವವರಲ್ಲಿ ಧ್ಯಾನದಿಂದ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸುವವರಲ್ಲಿ ಶ್ರೇಷ್ಠನು, ಅವನೇ ಅವನಿಯೊಳು = ಪೃಥ್ವಿಯಲ್ಲಿ ಜೀವನ್ಮುಕ್ತನು = ಪ್ರಾಣಧಾರಕನಾಗಿ ಸಂಸಾರದಲ್ಲಿದ್ದಾಗ್ಯೂ ಸಂಸಾರ ಬಂಧನ ಗಳಿಂದ ಬಿಡುಗಡೆ ಹೊಂದಿದವನು. ಇದೇ ಸಮನ್ವಯ ಪೂಜಾ ಫಲ.

**ದ್ರೌಪದೀಶಪತಿ ವಿಠಲರು :** ವಾಸುದೇವನು = ಆಭಾಸಕ ಎಂದರೆ ೮೪ ಲಕ್ಷ ಜೀವರೋಪಾದಿಯಲಿ ತಾನು ನಟನಮಾಡಿ ಅಣಕಿಸಿದೋಪಾದಿ ಯಲಿ ಮಾಡುತ್ತಾನೆ. ಈ ಸಮನ್ವಯ ತದ್ರೂಪ ತನ್ನಾಮಕ.

**ಭಾವಸೂಚನ :** ವಾಸುದೇವೇತಿ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾಸುದೇವ" ಇತಿ ॥ ಓಂ* ವ(ವಿ) ವಕ್ಷಿಥವವಕ್ಷುರಸ್ಯ ಕೇತವಃ ಉತ ವಜ್ರೋ ಗಭಸ್ತ್ಯೋಃ ॥ ಯತ್ಸೂರ್ಯೋ ನ ರೋದಸೀ ಅವರ್ಧಯತ್ ॥ ಯದಿ ಪ್ರವೃದ್ಧ ಸತ್ಪತೇ ॥ *ಓಂ ॥ ಸ್ವತಾಂತ್ರ್ಯಾ ರೋದಸೀ ದ್ಯಾವಾ ಪೃಥಿವೀ ಆಚ್ಛಾದಯತಿ ಇತಿ ವಾಸುಃ । ದೇವಯತಿ ಭಕ್ತಾಭೀಷ್ಟಂ ಗಮಯತಿ ಇತಿ ದೇವಃ ॥ ಸ ಚಾಸೌ ತಥಾ ॥ "ಛಾದಯಾಮಿ ಜಗತ್ ವಿಶ್ವಂ ಭೂತ್ವಾ ಸೂರ್ಯ ಇವಾಂಶುಭಿಃ ॥" ಇತಿ ಭಗವದ್ವಚನಮ್ ॥ ತದರ್ಥಕಃ ಆಭಾಸಕಃ ಇತಿ ॥ ತದ್ವಿವರಣಂ "ಬಿಂಬ" ಇತಿ ॥ "ಈ ಸಮನ್ವಯ"–ಕರ್ಮಣಿ ಕರ್ತರಿ

ಅಪಭ್ರಷ್ಟೇ ತನ್ನಾಮಿದೇವೇ ತದಿಂದ್ರಿಯೇಷು ತನ್ನಾಮ್ನ್ಯತ್ತಮೇಷು ತದುತ್ತಮನು ರಮಾದೌಬಿಂಬಾತ್ಮನಾ ವಕ್ಷ್ಯಮಾಣರೀತ್ಯಾ ಕರ್ತೃರೂಪೈಃ ಆಸ್ತೇ ಕಮಲ ಲೋಚನಃ ಇತಿ ಉಕ್ತಲಕ್ಷಣಂ ದ್ವಾದಶಾಧ್ಯಾಯ ವಿಷ್ಣುರಹಸ್ಯೇ ಚ ಉಕ್ತಮ್ ॥ "ಜ್ಞಾನಯಜ್ಞೋಹಮೇವೋಕ್ತಃ ಮತ್ಕಥಾ ಶ್ರವಣ ಹಿಯತ್॥ ಮದ್ಭಕ್ತಾನಾಂ ತಥಾ ಬ್ರಹ್ಮನ್ ಯೇನ ಸ್ಯಾತ್ ಬ್ರಹ್ಮದರ್ಶನಮ್ ॥ ಯಮಾಂಶ್ಚ ನಿಯಮಾಂಶ್ಚಾಪಿ ಋತ್ವಿಜಃ ಪ್ರಾಪ್ಯಯತ್ನತಃ ॥ ಕಾಮ ಕ್ರೋಧಾದಿಕಾನ್ ಹತ್ವಾ ವಿರಕ್ತ್ಯಾ ವಜ್ರಕಲ್ಪಯಾ ॥ ಮಯ್ಯಗ್ನೌ ಜುಹು ಯಾತ್ ಆದೌ ಮನಃಸೋಮಂ ತತಃ ಪರಮ್ ॥ ಬುಧ್ಯೈವಾಧ್ವರ್ಯುಣಾ ಯುಕ್ತಃ ಸುನುಯಾತ್ ತದ್ವಿಚಕ್ಷಣಃ ॥ ವಿವೇಕೋಪಲಸಂಘೃಷ್ಟಂ ತತಃ ತ್ರಿಷವಣಂ ಮನಃ ॥ ರಸಂ ಮುಂಚತಿ ಸಂಶುದ್ಧಂ ಭಕ್ತ್ಯಾಖ್ಯಂ ಯದನುತ್ತ ಮಮ್ ॥ ಜುಹುಯಾತ್ ಮತ್ಪದೇಗ್ನೌ ತಂ ಶೇಷಂಪೀತ್ವಾ ಚ ಮಾದ್ಯತಿ ॥ ಆನಂದಾತ್ ಸಾಮಗಾನಾನಿ ಕೃತ್ವಾಕೃತ್ವಾ ಚ ಮೋದತೆ ॥ ಅನುಭೂಯಂ ತಮಾನಂದಂ ಹೃದ್ಯಾಲಂಗಿತಮತ್ತನುಃ ॥ ಬಾಹ್ಯಂ ಕಿಂಚಿನ್ನಜಾನಾತಿ ಸ್ವದೇಹ ಸ್ಯಾಪಿಚೇಷ್ಟಿತಮ್ ॥ ಆಯಾತೋಯಂ ಕಥಂ ಕದಾ ದೇಹಃ ಗತೋವಾಪಿ ಕಥಂ ಪುನಃ ॥ ಇತ್ಯೇವ ಮಪಿ ನೋ ವೇತ್ತಿ ಕಿಂ ಪುನಃ ಕ್ಷುದ್ರಚೇಷ್ಟಿತಮ್ ॥ ಏವಮಂತಃ ಸುಪಕ್ವೋಯಂ ಸರ್ವತ್ರಾಪಿ ಬಹಿಃ ಸದಾ ॥ ಸರ್ವವಸ್ತುಷು ಮಾಮೇವ ಪಶ್ಯತ್ಯೇವ ನ ಚಾನ್ಯಥಾ ॥ ಜೀವನ್ಮುಕ್ತಃ ಸ ಏವಾತ್ರ ಯಾವತ್ ಪ್ರಾರಬ್ಧ ಸಂಕ್ಷಯಃ ॥ ನಿವೃತ್ತಾಶೇಷಪಾಪ್ಮಾಸೌ ಕ್ರಿಯಮಾಣೈರಲೇಪಭುಕ್ ॥ ಭುಕ್ತಕರ್ಮಾ ಲಭೇನ್ಮುಕ್ತಿಂ ತತೋ ನಾ ವರ್ತತೇ ಪುನಃ ॥ " ಇತಿ ॥ ೨೨ ॥

## ಕನ್ನಡಾರ್ಥ

"ವಾಸುದೇವ" – ಈ ನಾಮವು ಶ್ರೀವಿಷ್ಣು ಸಹಸ್ರನಾಮಾಂತರ್ಗತ ವಾದುದು. ತನ್ನ ನಿರ್ಮಲ ಕಾಂತಿಯಿಂದ (ಅಚಿಂತ್ಯ ಶಕ್ತಿಯಿಂದ) ದ್ಯಾವಾ ಪೃಥಿವಿಗಳನ್ನು ಅಂದರೆ, ಸಕಲ ಲೋಕಗಳನ್ನೂ ಆಚ್ಛಾದಿಸುವವನು "ವಾಸು". ಭಕ್ತರಿಗೆ ಅಭೀಷ್ಟಗಳನ್ನು ಹೊಂದಿಸಿಕೊಡುವನು "ದೇವ". "ವಿಶ್ವವ್ಯಾಪಕ ನಾಗಿ ಸಮಸ್ತ ವಿಶ್ವವನ್ನೂ ಸೂರ್ಯನು ಕಿರಣಗಳಿಂದ ಆಚ್ಛಾದಿಸುವಂತೆ ನಾನು (ಕೃಷ್ಣನು) ಆಚ್ಛಾದಿಸುತ್ತೇನೆ" ಎಂಬ ಭಗವಂತನ ವಚನಾನುಸಾರವಾಗಿ ತನ್ನ ಕಾಂತಿಯಿಂದ ಜಗದ್ಭಾಸಕನೂ ಭಕ್ತರ ಇಷ್ಟಗಳನ್ನು ಪೂರೈಸುವವನೂ

ವಾಸುದೇವನು. ಇದೇ ಅರ್ಥವನ್ನೇ "ಒಳಹೊರಗೆ ಆಭಾಸಕನು" ಎಂಬ ಪದದಿಂದ ದಾಸವರ್ಯರು ಸೂಚಿಸುತ್ತಾರೆ (ಹೇಳಿರುತ್ತಾರೆ). ಇದರ ವಿವರಣ ರೂಪವೇ "ಬಿಂಬ ಪ್ರಕಾಶಿಸುವ" ಎಂಬುದು. **"ಈ ಸಮನ್ವಯು"**—"ಕರ್ಮ-ಕರ್ತೃ-ಕರಣ ಮುಂತಾದವುಗಳಲ್ಲಿಯೂ, ತದಭಿಮಾನಿ ದೇವತೆಗಳಲ್ಲಿಯೂ ಅವರಲ್ಲಿ ಉತ್ತಮರಾದ ರಮಾ ಮುಂತಾದವರಲ್ಲಿಯೂ ಪರಮಾತ್ಮನು ಬಿಂಬನಾಗಿ ಮುಂದೆ ಹೇಳಲ್ಪಡುವ ರೀತಿಯಂತೆ ಕರ್ತೃರೂಪಗಳಿಂದ ವ್ಯಾಪಾರಮಾಡುತ್ತ ಇರುತ್ತಾನೆ." ಹೀಗೆ ತಿಳಿಯುವದು ಸಮನ್ವಯವೆನಿಸುವದು.

ಇದೇ ಸಮನ್ವಯವನ್ನೇ ವಿಷ್ಣುರಹಸ್ಯ ಹನ್ನೆರಡನೆಯ ಅಧ್ಯಾಯದಲ್ಲಿ ನಿರೂಪಿಸಿರುತ್ತಾರೆ—

"ಜ್ಞಾನಯಜ್ಞವೆಂಬುದು ನನ್ನ ಪ್ರೀತಿಗಾಗಿ ನನ್ನಿಂದ ಪ್ರೇರಿತವೇ ಆದುದು. ಭಗವತ್ಕಥಾಶ್ರವಣವೇ ಜ್ಞಾನಯಜ್ಞ; ಇದರಿಂದಲೇ ರಮಾದಿ ಸಂಪನ್ನರಾದ ಅಧಿಕಾರಿಗಳು ಬ್ರಹ್ಮಜ್ಞಾನವನ್ನು ಹೊಂದಿ ತದ್ವಾರಾ ಮುಕ್ತಿ ಯನ್ನು ಹೊಂದುತ್ತಾರೆ. ಯಮ ನಿಯಮ ಋತ್ವಿಜರುಗಳನ್ನು ಹೊಂದಿ ಪ್ರಯತ್ನದಿಂದ ಕಾಮಕ್ರೋಧಗಳನ್ನು ಸಹ ವಜ್ರದಂತೆ ಅತಿ ದೃಢವಾದ ವೈರಾಗ್ಯ ಶಸ್ತ್ರದಿಂದ ಸಂಹರಿಸಿ, ಪರಮಾತ್ಮನೆಂಬ ಅಗ್ನಿಯಲ್ಲಿ ಅಗ್ನಿಶಬ್ದ ಮುಖ್ಯ ವಾಚ್ಯ ನಾದ ಹರಿಯಲ್ಲಿ ಬುದ್ಧಿಯೆಂಬ ಅಧ್ವರ್ಯುವಿನಿಂದ ಸಹಿತನಾಗಿ ಮನಸ್ಸೆಂಬ ಸೋಮವನ್ನು ಹಾಕಬೇಕು. ಅನಂತರ ವಿವೇಕದ ಒರೆಗಲ್ಲಿಗೆ ಹಚ್ಚಲ್ಪಟ್ಟ ಮನಸ್ಸು ಭಕ್ತಿಯೆಂಬ ಉತ್ತಮ ಪರಿಶುದ್ಧವಾದ ರಸವನ್ನು ಬಿಡುತ್ತದೆ (ಉಂಟು ಮಾಡುತ್ತದೆ). ಅದನ್ನೂ ಪರಮಾತ್ಮನ ಪಾದವೆಂಬ ಅಗ್ನಿಯಲ್ಲಿ ಸಮರ್ಪಿಸ ಬೇಕು. ಇಂಥ ಸೋಮಶೇಷವನ್ನು ಕುಡಿದು ಉತ್ಸಾಹಭರಿತರಾಗುತ್ತಾರೆ. ಆನಂದೋದ್ರೇಕದಿಂದ ಸಾಮಗಳನ್ನು (ಪರಮಾತ್ಮನ ಮಹಿಮೋಪಬೃಂಹಕ ಸ್ತುತಿಗಳನ್ನು) ಹಾಡಿ ಹಾಡಿ ಮೋದಪಡುತ್ತಾರೆ. ಆ ಅಭೂತಪೂರ್ವ ಆನಂದ ವನ್ನು ಅನುಭವಿಸಿ ಹೃದಯದಲ್ಲಿ ಭಗವನ್ಮೂರ್ತಿಯನ್ನು ಆಲಂಗಿಸಿ ದೇಹದ ಹೊರಗಣ ಯಾವ ವ್ಯಾಪಾರವನ್ನೂ ತಿಳಿಯುವದಿಲ್ಲ, ಇಷ್ಟೇ ಅಲ್ಲ; ತನ್ನ ದೇಹದಲ್ಲಿ ನಡೆಯುವ ಅವಯವ ವ್ಯಾಪಾರಗಳನ್ನೂ ತಿಳಿಯುವದಿಲ್ಲ. "ದೇಹವು ಎಲ್ಲಿಂದ ಹೇಗೆ ಯಾವಾಗ ಬಂದಿತು?" ಇತ್ಯಾದಿ ಯಾವ ಸಂಗತಿಯನ್ನೂ ತಿಳಿದುಕೊಳ್ಳುವದಿಲ್ಲ. ಹೀಗೆ ಭಗವಂತನ ಧ್ಯಾನಜನಿತ ಆನಂದ ಸಮುದ್ರದಲ್ಲಿ

ಮಿಂದು ಮುಳುಗಿ, ಒಳ ಹೊರಗೆ (ಅಂತರ್ಬಹಿಃ) ಯಾವಾಗಲೂ ಶುಚಿಯೂ ಪಕ್ವನೂ ಆಗಿ ಸರ್ವ ವಸ್ತುಗಳಲ್ಲಿ ಇರುವ ಪರಮಾತ್ಮನ ಅಂತರ್ಯಾಮಿ ಅಧಿಷ್ಠಾನ ವಿಭೂತಿ ಅಂಶಾವೇಶ ಮುಂತಾದ ರೂಪಗಳನ್ನು ಯಥಾಸ್ಥಿತವಾಗಿ ಪ್ರತ್ಯಕ್ಷ ನೋಡುತ್ತ ಇರುವವನು. ಮಹಾ ಅಪರೋಕ್ಷ ಜ್ಞಾನಿಯು ಜೀವನ್ಮುಕ್ತನು. ಅವನು ಪ್ರಾರಬ್ಧಕರ್ಮ ಕ್ಷಯವಾಗುವವರೆಗೆ ದೇಹಭೋಗಗಳನ್ನು ಅನುಭವಿಸುತ್ತ ತನ್ನ ಕರ್ಮಗಳನ್ನು ಮಾಡಿದರೂ ಪೂರ್ವೋತ್ತರ ಕರ್ಮಗಳಿಂದ ಅಲಿಪ್ತನಾಗಿ ಅಶೇಷ ಪಾಪಗಳನ್ನು ಕಳೆದುಕೊಂಡು ಪ್ರಾರಬ್ಧನಾಶಾ ನಂತರ ಮುಕ್ತಿಯನ್ನು ಹೊಂದುತ್ತಾನೆ. ತಿರುಗಿ ಜನನ ಮರಣ ರೂಪವಾದ ಸಂಸಾರ ವನ್ನು ಹೊಂದುವದಿಲ್ಲ." ಹೀಗೆ ಜೀವನ್ಮುಕ್ತನ ಚರಿತ್ರವು ವಿಷ್ಣು ರಹಸ್ಯದಲ್ಲಿ ನಿರೂಪಿತವಾಗಿರುತ್ತದೆ. ॥ ೨೨ ॥

**ಅವತರಣಿಕಾ :** ಹಿಂದೆ ಹೇಳಿದ ಅನ್ವಯಪೂಜಾ ವಿಧಾನವನ್ನು ಬೇರೆ ಬೇರೆ ರೀತಿ ಯಿಂದ ವಿಸ್ತರಿಸಿ ಉಪದೇಶಿಸುತ್ತಾರೆ. ಸಕಲ ಭೋಗ್ಯ ವಸ್ತುಗಳಲ್ಲಿ ಸಮನಾಗಿಪ್ಪ ಹರಿಯ ಗುಣರೂಪಕ್ರಿಯಾ, ಬಿಂಬೈಕ್ಯ ಚಿಂತಿಸುವದೆ ಸಮನ್ವಯ ಪೂಜಾ.



**ಮೂಲ :**

**ಭೋಗ್ಯ ವಸ್ತುಗಳೊಳಗೆ ಯೋಗ್ಯಾ ।**
**ಯೋಗ್ಯರಸಗಳನರಿತು ಯೋಗ್ಯಾ ।**
**ಯೋಗ್ಯರಲಿ ನೆಲೆಸಿಪ್ಪ ಹರಿಗೆ ಸಮರ್ಪಿಸನುದಿನದಿ ।**
**ಭಾಗ್ಯ ಬಡತನ ಬರಲು ಹಿಗ್ಗದೆ ।**
**ಕುಗ್ಗಿ ಸೊರಗದೆ ಸದ್ಭಕುತಿ ವೈ ।**
**ರಾಗ್ಯಗಳನೇಮಾಡು ನೀ ನಿರ್ಭಾಗ್ಯನೆನಿಸದಲೆ ॥ ೨೩ ॥**

(ಮೂಲಪ್ರತಿ :—ರಾಗ್ಯಗಳ ನೀ ಮಾಡು ನಿರ್ಭಾಗ್ಯರನುಸರಿಸದಲೆ ॥ ೨೩ ॥)

**ಪದ್ಯಾರ್ಥ :** ಭೋಗ್ಯ ವಸ್ತುಗಳೊಳಗೆ = ಸಕಲ ಜೀವರು ಅನು ಭೋಗ ಭುಂಜಿಸುವ ಪದಾರ್ಥಗಳಲ್ಲಿ, ಅಂದರೆ ತ್ರಿವಿಧ ಜೀವರು ತಮತಮಗೆ ಯೋಗ್ಯವಾದ ಸತ್ವ-ರಜೋತಮ ಗುಣವುಳ್ಳ ಪದಾರ್ಥಗಳಲ್ಲಿ ಯೋಗ್ಯ ಯಾವ ಜೀವರಿಗೆ ಯಾವ ಪದಾರ್ಥ ತಕ್ಕವಾದುದೋ ಮತ್ತು ಅಯೋಗ್ಯ = ಯಾವ ಪದಾರ್ಥವು ರಜತಮಗುಣ ವಿಶಿಷ್ಟವಾದುದೋ, ರಸಗಳನರಿತು = ಸತ್ವ ಶುಭ ರಸ, ರಜ = ಮಧ್ಯಮರಸ, ತಮರಸ ॥ ದೈತ್ಯಾದಿಗಳ ರಸ, ವಿಭಾಗಗಳನ್ನು

ಗುರುಗಳಿಂದ ಚನ್ನಾಗಿ, ಅರಿತು = ತಿಳಿದು, ಯೋಗ್ಯರು = ಮುಕ್ತಿಯೋಗ್ಯರಾರಂಭಿಸಿ ಸಕಲ ದೇವತೆಗಳು, ಅಯೋಗ್ಯರು, ನಿತ್ಯ ಸಂಸಾರಿಗಳು, ಮತ್ಯಾರ್ಧಮರಾರಂಭಿಸಿ-ಸಕಲ ಕಲ್ಯಾದಿ ದೈತ್ಯರು, ಇವರಲ್ಲಿ ನೆಲೆಸಿಪ್ಪ = ಬಿಂಬನಾಗಿ ತ್ರಿವಿಧರಿಗೆ ಗತಿಕೊಡುವ ಹರಿಗೆ ಯೋಗ್ಯರಸಗಳನ್ನೂ (ಯೋಗ್ಯರ ಬಿಂಬನಿಗೆ) ಅಯೋಗ್ಯ ರಸವನ್ನು, ಅಯೋಗ್ಯರಲ್ಲಿಪ್ಪ ಹರಿಗೆ, ಅನುದಿನ ನಿತ್ಯದಲ್ಲಿ ಸಮರ್ಪಿಸು. ( ಹರಿಗೆ ಹರಿಗೆ ಐಕ್ಯಾ ಶಿರಿಗೆ ಶಿರಿಗೆ ಐಕ್ಯಾ ಶ್ರೀ ವಿಜಯದಾಸರ ಸುಳಾದಿ ನೋಡುವದು). ಭಾಗ್ಯ ಬರಲು ಹಿಗ್ಗದೆ = ಸಂಪತ್ತು ಬಂದಾಗ್ಗೆ ಅತಿರೇಕ ಸಂತೋಷಬಡದೇ, ಬಡತನ ಬರಲು ಕುಗ್ಗಿ ಸೊರಗದೆ= ನೊಂದುಕೊಂಡು ದೇಹವನ್ನು ಕೃಶಮಾಡಿಕೊಳ್ಳದೇ, ಭಾಗ್ಯ ಬಡತನಕೊಟ್ಟ ಹರಿಯೊಬ್ಬನೆಂದು ತಿಳಿದು, ಸದ್ಭಕುತಿ ವೈರಾಗ್ಯಗಳ ನೀಮಾಡು = ಅಧೀರನಾಗದೇ ಶ್ರೀಹರಿಯಲ್ಲಿ ಸಮೀಚೀನವಾದ ಭಕ್ತಿ-ಶ್ರೀಹರಿಯು ಯಾವ ಕಾಲದಲ್ಲಿ ಏನು ಕೊಡುವನೋ ಅದನ್ನೇ ಸುಖವಾಗಿ ಭುಂಜಿಸು, ಜ್ಞಾನ ವೈರಾಗ್ಯಗಳನ್ನು ಮಾಡು, ನೀ ನಿರ್ಭಾಗ್ಯನೆನಿಸದಲೆ = ನೀನು ಅಸಂತುಷ್ಟ ಮನಸ್ಕನಾಗಿ ಅಧೀರನಾಗಿ, ಜ್ಞಾನರಹಿತನಾಗದೇ, ಬಡತನ - ದಾರಿದ್ರದಿಂದ ಭಾಗ್ಯಹೀನನೆಂದು, ಅನಿಸದಲೇ, ಹರಿಕರ್ತೃತ್ವಾನುಸಂಧಾನ ಮರೆಯದೆ ನಿರ್ಭಾಗ್ಯನೆನಿಸಬೇಡವೆಂದು ಉಪದೇಶಮಾಡುತ್ತಾರೆ. ಇದೆ ಸಕಲ ರಸಗಳಲ್ಲಿಪ್ಪ ಶುಭಸಾರ ಸ್ವಾಖ್ಯರಸವನ್ನು ಬಿಂಬನಾದ ಹರಿಗೆ ಸಮರ್ಪಿಸುವುದೇ ಅನ್ವಯಪೂಜಾ ಲಕ್ಷಣ.

**ದ್ರೌಪದೀಶಪತಿ ವಿಠಲರು :** ಭೋಗ್ಯವಸ್ತುಗ = ೧ ಮನುಷ್ಯಗೆ = ಅನ್ನಪಾನ ವಸನ, ೨ ಪಶುಗಳಿಗೆ ತೃಣ, ೩ ದೇವತೆಗಳಿಗೆ ಆಜ್ಯ.

**ಭಾವಸೂಚನ :** ಭೋಗ್ಯೇತಿ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭೋಗ್ಯ" ಇತಿ || "ಕುಗ್ಗಿ"-ನೊಂದಿ ! ವಿಷ್ಣುರಹಸ್ಯೇ ಚ - "ಶುಭೇಚೇತ್ ಅಶುಭಂ ಧ್ಯಾಯೇತ್ ವಿಪತ್ತಾವಪಿ ಧೀರಧೀಃ || ಅಧೀರಸ್ಯ ಶುಭಂ ನ ಸ್ಯಾತ್ ಇಹಲೋಕೇ ಪರತ್ರ ಚ ||" ಇತಿ || ೨೩ ||

## ಕನ್ನಡಾರ್ಥ

ಭೋಗ್ಯ ವಸ್ತುಗಳಲ್ಲಿರುವ ಯೋಗ್ಯಾಯೋಗ್ಯ ರಸಗಳನ್ನರಿತು ಅಲ್ಲಿರುವ ಭಗವದ್ರೂಪಗಳಿಗೆ ಅದನ್ನು ಸಮರ್ಪಿಸಿ ಸಂಸಾರದ ಬಡತನ ಭಾಗ್ಯಗಳನ್ನು

ಲಕ್ಷಿಸದೆ ಹರಿಭಕ್ತಿ ಜ್ಞಾನ ವೈರಾಗ್ಯ ಭಾಗ್ಯಗಳಿಂದ ಭಜಿಸುವದೇ ಪರಮ ಸಾಧನವೆಂದು ನಿರೂಪಿಸುತ್ತಾರೆ. "ಭೋಗ್ಯ ವಸ್ತುಗಳಲ್ಲಿ" ಎಂಬ ಪದ್ಯದಿಂದ "ಕುಗ್ಗಿ" – ನೊಂದು(ಕೊಂಡು) ವಿಷ್ಣುರಹಸ್ಯದಲ್ಲಿ – "ಸುಖದುಃಖ ಪ್ರಸಂಗಗಳಲ್ಲಿ ಧೈರ್ಯವನ್ನು ಬಿಡಬಾರದು. ಶುಭಾಶುಭಗಳಲ್ಲಿ – ಸಮಬುದ್ಧಿಯನ್ನು ಇಡಬೇಕು. ಸಂಪತ್ತು ವಿಪತ್ತುಗಳಲ್ಲಿ ಸಮಭಾವವಿಲ್ಲದ ಅಧೀರ ಪುರುಷನಿಗೆ ಇಹಪರಗಳೆರಡರಲ್ಲಿಯೂ ಸುಖವಾಗುವದಿಲ್ಲ" ಎಂದು ಹೇಳಲ್ಪಟ್ಟಿರುತ್ತದೆ. ॥ ೨೩ ॥

**ಅವತರಣಿಕಾ :** ಈ ಪದ್ಯದಿಂದ ಕೇವಲ ವ್ಯತಿರೇಕ ಪೂಜಾಲಕ್ಷಣ ಮತ್ತು ವಿಧಾನ ಹೇಳುತ್ತಾರೆ. "ತದ್ದತ್ತಸ್ಯತದ್ದಾನೇ ವ್ಯತಿರೇಕಪೂಜಾ."

ಮೂಲ :

**ಸ್ಥಳ ಜಲಾದ್ರಿಗಳಲ್ಲಿ ಜನಿಸುವ ।**
**ಫಲ ಸುಪುಷ್ಪಜ ಗಂಧರಸ ಶ್ರೀ ।**
**ತುಲಸಿ ಮೊದಲಾದಖಿಳ ಪೂಜಾಸಾಧನ ಪದಾರ್ಥ ॥**
**ಹಲವು ಬಗೆಯಿಂದರ್ಪಿಸುತ ಬಾಂ ।**
**ಬೊಳೆಯ ಜನಕೆಗೆ ನಿತ್ಯ ನಿತ್ಯದಿ ।**
**ತಿಳಿವುದಿದು ವ್ಯತಿರೇಕ ಪೂಜೆಗಳೆಂದು ಕೋವಿದರು ॥೨೪॥**

**ಪದ್ಯಾರ್ಥ :** ಸ್ಥಳ = ಭೂಮಿಯಲ್ಲಿ, ಜಲ = ನೀರಿನಲ್ಲಿ, ಅದ್ರಿಗಳಲ್ಲಿ = ಪರ್ವತಗಳಲ್ಲಿ – ಜನಿಸುವ = ಹುಟ್ಟುವ, ಫಲ = ಹಣ್ಣು ಕಾಯಿ ಮೊದಲಾದವು, ಪುಷ್ಪ = ಹೂವು ಹೂವಿನಲ್ಲಿರುವ, ಸುಗಂಧ, ಜಲದಲ್ಲಿಪ್ಪ ಒಳ್ಳೇ ರಸ–ಹಣ್ಣುಗಳಲ್ಲಿಪ್ಪ ಒಳ್ಳೇ ಸೀ ರಸ, ಶ್ರೀ ತುಲಸಿಯೇ ಮೊದಲಾದ, ಅಖಿಳ = ಎಲ್ಲ, ಪೂಜಾಸಾಧನ ಪದಾರ್ಥ = ಎಲ್ಲ ಪೂಜಾಮಾಡತಕ್ಕ ಯೋಗ್ಯವಾದ ಅಗ್ರೋದಕ, ಹೂ, ತುಳಸಿ, ಧೂಪದೀಪ, ನಿವೇದನಮಾಡತಕ್ಕ ಒಳ್ಳೇ ಪದಾರ್ಥಗಳನ್ನು ಹಲವು ಬಗೆಯಿಂದರ್ಪಿಸುತ = ಶ್ರೀ ವಿಜಯದಾಸರು, ನೈವೇದ್ಯ–ಸಮರ್ಪಣ ಮುಂತಾದ ಸುಳಾದಿಗಳಲ್ಲಿ ಪೇಳಿರುವಂತೆ ನಾನಾ ಪ್ರಕಾರದಿಂದ ಅರ್ಪಿಸುತ ಶ್ರೀಹರಿಗೆ ಅಭಿಷೇಕ, ಪಂಚಾಮೃತ ವಸನ ವಿಭೂಷಣ ಆಭರಣ, ತುಲಸಿ, ಪುಷ್ಪ, ಧೂಪದೀಪ, ನೈವೇದ್ಯ ಸಮರ್ಪಿಸುತ್ತ ಏಕಾರ್ತಿ, ಮಂಗಳಾರ್ತಿ, ಇತ್ಯಾದಿ ೧೬ ವಿಧ ಪೂಜಾಗಳಿಂದ ಬಹಿರ್

ಪೂಜಾದಿಂದ, ಬಾಂಬೊಳೆಯ ಜನಕಗೆ ನಿತ್ಯ ನಿತ್ಯದಿ = ಬಾನ್ = ಆಕಾಶ ಹೊಳೆ - ಗಂಗಾನದಿಯ ಜನಕನಿಗೆ ದಿನದಿನದಲ್ಲಿ ಅರ್ಪಿಸುತ್ತಾ ಪೂಜಿಸುವರ್ದೇ ಕೋವಿದರು = ಜ್ಞಾನಿಗಳು, ಇವೆಲ್ಲವೂ ವ್ಯತಿರೇಕ = ಭಿನ್ನ, ಭೇದ ಬೇರೆ ಪೂಜಾಗಳೆಂದು ತಿಳಿಯುತ್ತಾರೆ. ಈ ವ್ಯತಿರೇಕ ಪೂಜಾ ಲಕ್ಷಣ ಜ್ಞಾನಿಗಳಿಂದ ತಿಳಿಯುವದು.

**ದ್ರೌಪದೀಶಪತಿ ವಿಠಲರು :** ಸ್ಥಳಜಲಾದ್ರಿ–ಭೂಮಿ ಉದಕಪರ್ವತ ಅಲ್ಲಿ ಹುಟ್ಟಿದಂಥಾ ಪದಾರ್ಥ ಸಮರ್ಪಣಪೂಜೆ ವ್ಯತಿರೇಕ.

**ಭಾವಸೂಚನ :** ಸ್ಥಳಜೇತಿ ||

## ಶ್ರೀ.ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ಥಳ" ಇತಿ || "ಹಲವು ಬಗೆ" ಸರ್ವಪ್ರಕಾರೇಣ | ತದ್ದತ್ತಸ್ಯ ತದ್ದಾನೇ ವ್ಯತಿರೇಕಃ || ೨೪ ||

## ಕನ್ನಡಾರ್ಥ

ಈ ಪದ್ಯದಿಂದ ವ್ಯತಿರೇಕ ಪೂಜೆಯನ್ನು ನಿರೂಪಿಸುತ್ತಾರೆ. "ಹಲವು ಬಗೆಯಿಂದಲಿ" – ಸರ್ವಪ್ರಕಾರದಿಂದ ಪರಮಾತ್ಮನಿತ್ತುದನ್ನು ಪರಮಾತ್ಮನಿಗೆ ಸಮರ್ಪಿಸಿದರೆ ವ್ಯತಿರೇಕ ಪೂಜೆಯೆನಿಸುತ್ತದೆ. || ೨೪ ||

**ಅವತರಣಿಕಾ :** ಮೇಲೆ ಹೇಳಿದಂಥಾ ಅಗ್ರೋದಕತುಲಸ್ಯಾದಿ ಭಿನ್ನ ಪದಾರ್ಥಗಳಲ್ಲಿ ಇಪ್ಪ ಭಗವದ್ರೂಪಗಳಿಗೂ ಸರ್ವಜಗತ್ತು ಜೀವರಲ್ಲಿದ್ದ ಹರಿಗೂ, ಸ್ವಬಿಂಬನ ಗುಣರೂಪ ಕ್ರಿಯಾದಿಗಳಿಗೂ, ಏಕೀಭಾವ ತಿಳಿಯೋಣವೇ ಅನ್ವಯ ಪೂಜಾಯೆಂದು ಮತ್ತೂ ಹೇಳುತ್ತಾರೆ.

ಮೂಲ :

**ಶ್ರೀಕರನ ಸರ್ವತ್ರದಲಿ ಅವ |**
**ಲೋಕಿಸುತ ಗುಣರೂಪ ಕ್ರಿಯ ವ್ಯತಿ |**
**ರೇಕ ತಿಳಿಯದೆ ಅನ್ವಯಿಸು ಬಿಂಬನಲಿ ಮರೆಯದಲೆ ||**
**ಸ್ವೀಕರಿಸುವನು ಕರುಣದಿಂದ ನಿ |**
**ರಾಕರಿಸದೆ ಕೃಪಾಳು ಭಕ್ತರ |**
**ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವ || ೨೫ ||**

**ಪದ್ಯಾರ್ಥ :** ಶ್ರೀಕರನ = ಮಂಗಳಪ್ರದನ, ಮಂಗಳಕರವಾದ ಮೋಕ್ಷವನ್ನು ಕೊಡುವ, "ಶ್ರೀಯಂಕರೋತೀತಿ ಶ್ರೀಕರಃ = ಎಂದು ವಿಷ್ಣು ಸಹಸ್ರನಾಮ ವಿದ್ಯಾಧಿರಾಜೀಯ. ಮಂಗಳವನ್ನು ಕೊಡುವ ಹರಿಯನ್ನು ಸರ್ವತ್ರದಲಿ ಅವಲೋಕಿಸುತ ಸರ್ವ ಜಡಪದಾರ್ಥದಲಿ ಸರ್ವಚೇತನರು ಸರ್ವಜಗತ್ತಿನಲ್ಲಿಪ್ಪ ಹರಿಯನ್ನು, ಅವಲೋಕಿಸುತ = ನೋಡುತ್ತಾ, ಸರ್ವತ್ರದಲ್ಲಿಪ್ಪ ಹರಿಯ ಗುಣ = ಉತ್ಕರ್ಷವಾದ ಜ್ಞಾನಾನಂದಾದಿ ಗುಣಗಳು, ರೂಪಗಳು = ನಾನಾ ಪದಾರ್ಥದಲ್ಲಿ ನಾನಾ ರೂಪಗಳು, ನಾನಾ ಬಗೆಯ ಕ್ರಿಯೆ ವ್ಯಾಪಾರಗಳಿಗೂ, ವ್ಯತಿರೇಕ ತಿಳಿಯದೆ = ಶ್ರೀಹರಿಯ ಗುಣ-ರೂಪಕ್ರಿಯಾಗಳಿಗೆ ವ್ಯತಿರೇಕ = ಭೇದ-ಭಿನ್ನವೆಂದು ತಿಳಿಯದೇ "ನಾಮರೂಪಾ ಕ್ರೀಯಾಭೇದವಾನ್" ಎಂಬ ಶಾಸ್ತ್ರ ಮರ್ಯಾದೆಯಂತೆ ಸವಿಶೇಷಾಭೇದ ಚಿಂತಿಸುತ್ತ ಮರೆಯದಲೇ ಬಿಂಬನಲಿ ಅನ್ವಯಿಸು = ಸರ್ವಕಾಲದಲ್ಲಿ ವಿಸ್ಮರಿಸದೆ ಜ್ಞಾನಪೂರ್ವಕ, ಶ್ರೀಹರಿಯ ಕಾಲರೂಪಗಳ ಗುಣರೂಪ ಕ್ರೀಯೆಗಳಿಗೂ ಸ್ವಬಿಂಬನಾದ ಪುರುಷ ರೂಪೀ ಹರಿಯ ಗುಣ ರೂಪಕ್ರಿಯೆಗಳಲ್ಲಿ ಅನ್ವಯಿಸು, ಏಕೀಭಾವ ಐಕ್ಯ ಚಿಂತಿಸು. ಇದೇ **ಅನ್ವಯಪೂಜಾ** ಹೀಗೇ ಅನ್ವಯಪೂಜಾ ಮಾಡಿದರೆ, ಕರುಣದಿಂದ ಸ್ವೀಕರಿಸುವನು = ಪರಮ ಭಕ್ತವತ್ಸಲನು, ಭಕ್ತರ ಈ ಅನ್ವಯ ಪೂಜಾ ಬಹು ಪ್ರೀತಿಯಿಂದ ಸ್ವೀಕಾರಮಾಡುವನು. ಕರುಣಾಕರನು ಎಂದೆಂದೂ ನಿರಾಕರಿಸುವದಿಲ್ಲ - ಇಂಥ ಸಮನ್ವಯ ಪೂಜಾ ಬಿಡುವನಲ್ಲ. ಭಕ್ತರ ಶೋಕಗಳ ಪರಿಹರಿಸಿ = ತನ್ನ ನಿಜಭಕ್ತರುಗಳ ಶೋಕಗಳು = ದುಃಖಗಳು ಆಧಿವ್ಯಾಧಿ ತಾಪತ್ರಯಗಳು, ಕಿಂಬಹುನಾ ಶೋಕಕ್ಕೆ ಕಾರಣವಾದ ಲಿಂಗದೇಹವನ್ನು ಪರಿಹರಿಸಿ = ಭಂಗಮಾಡಿ ಅನವರತ, ಸುಖವಿತ್ತು ಪೊರೆವ = ನಿತ್ಯಾನಂದವಾದ ಮೋಕ್ಷಸುಖವನ್ನಿತ್ತು ರಕ್ಷಿಸುವನು.

**ದ್ರಾಪದೀಶಪತಿ ವಿಠಲರು:** ಶ್ರೀಕರೇತಿ ‖ ವ್ಯತಿರೇಕ ಅತಿಕ್ರಮಃ ‖ ೨೫ ‖

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಸಮನ್ವಯ ಪೂಜಾಂ ವಕ್ತಿ—"ಶ್ರೀಕರ" ಇತಿ ‖ ಓಂ* ಪೌರಾಸೋ ನಕ್ಷನ್ ಧೀತಿಭಿಃ । ನಕ್ಷಂತ ಇಂದ್ರಮವಸೇ ಸುಕೃತ್ಯಯಾ ಯೇಷಾಂ ಸುತೇಷು ಮಂದಸೇ ಯಥಾ ಸಂವರ್ತೇ ಅಮದಃ ‖ *ಓಂ ‖ ಶ್ರಯತೇ ಇತಿ ಶ್ರಿಯಾ

ಸುಕೃತ್ಯಾ ಜ್ಞಾನಂ ಕರೋತಿ ಇತಿ ತಥೋಕ್ತಃ ॥ "ಶುನಿಚೈವ" ಇತ್ಯುಕ್ತೇಃ । "ಬ್ರಹ್ಮಾದಿ ಸ್ಥಾವರಾಂತೇಷು ನ ವಿಶೇಷಃ ಹರೇಃ ಇತಿ" ಚ ॥ ೨೫ ॥

## ಕನ್ನಡಾರ್ಥ

ಸಮನ್ವಯ ಪೂಜೆಯನ್ನು ನಿರೂಪಿಸುತ್ತಾರೆ—"ಶ್ರೀಕರನ" ಎಂಬ ಪದ್ಯದಿಂದ. "ಶ್ರೀಕರ" ಇದು ವಿಷ್ಣು ಸಹಸ್ರನಾಮಾಂತರ್ಗತವಾದುದು. "ಸತ್ಕರ್ಮಗಳಿಂದ ಜ್ಞಾನವನ್ನು ಕೊಡುವವನು"; ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ. "ಶ್ವಾನ ಶ್ವಪಚ ಪಂಡಿತ" ಮುಂತಾದವುಗಳಲ್ಲಿ ಭೇದವಿಲ್ಲದೇ ಇರುವ ಪರಮಾತ್ಮನ "ಸಮ"ವೆಂಬ ರೂಪವನ್ನು ಸಂದರ್ಶಿಸುವವರು ಪಂಡಿತರು." "ಬ್ರಹ್ಮನನ್ನು ಆರಂಭಿಸಿ ಸ್ಥಾವರ ಪ್ರಾಣಿಗಳವರೆಗಿನ ಸಕಲ ವಸ್ತುಗಳಲ್ಲಿ ಇರುವ ಪರಮಾತ್ಮನ ರೂಪಗಳಿಗೆ ಪರಸ್ಪರ ಭೇದವಿರುವದಿಲ್ಲ" ಎಂದು ವಚನಗಳಿರುವದರಿಂದ "ಗುಣರೂಪಕ್ರಿಯ ವ್ಯತಿರೇಕ ತಿಳಿಯದಲೆ" ಎಂದು ದಾಸವರ್ಯರು ನಿರೂಪಿಸಿರುತ್ತಾರೆ ॥ ೨೫ ॥

**ಅವತರಣಿಕಾ :** ಹಿಂದೆ ಹೇಳಿದಂತೆ ಸದ್ಗುರುಗಳಿಂದ ವ್ಯತಿರೇಕ ಅನ್ವಯ ಪೂಜಾಗಳನ್ನು ತಿಳಿದು ಹರಿಯು ಪೂಜಿಸುವವನಿಗೆ, ಜನನ-ಸ್ಥಿತಿ ಮೃತಿಗಳನ್ನು ಪರಿಹರಿಸಿ ನಿಜಭಕ್ತರಾದ ತನ್ನ ಸೇವಕರಲ್ಲಿಟ್ಟು ಮುಕ್ತಿ ಸುಖವನ್ನು ಕೊಡುತ್ತಾನೆಂದು ಉಪದೇಶಿಸುತ್ತಾರೆ.

ಮೂಲ :

**ಇನಿತು ವ್ಯತಿರೇಕಾನ್ವಯುಗಳೆಂ ।**
**ದೆನಿಪ ಪೂಜಾವಿಧಿಗಳನೆ ತಿಳಿ ।**
**ದನಿಮಿಷೇಶನ ತೃಪ್ತಿಬಡಿಸುತಲಿರು ನಿರಂತರದಿ ॥**
**ಘನಮಹಿಮ ಕೈಕೊಂಡು ಸ್ಥಿತಿಮೃತಿ ।**
**ಜನುಮಗಳ ಪರಿಹರಿಸಿ ಸೇವಕ ।**
**ಜನರೊಳಿಟ್ಟಾನಂದಬಡಿಸುವ ಭಕ್ತವತ್ಸಲನು ॥ ೨೬ ॥**

**ಪದ್ಯಾರ್ಥ :** ಇನಿತು = ಈ ಪ್ರಕಾರವಾಗಿ, ವ್ಯತಿರೇಕ = ಭಿನ್ನ ಪದಾರ್ಥಗಳಿಂದ ಪೂಜೆ, ಅನ್ವಯ = ಸಕಲ ಜಡಚೇತನರಲ್ಲಿಪ್ಪ ಹರಿಯನ್ನು ಸ್ವಬಿಂಬನಲ್ಲಿ ಐಕ್ಯ ಚಿಂತಿಸೋಣವೆ, ಅನ್ವಯಪೂಜಾಗಳೆಂದೆನಿಪ = ವ್ಯತಿರೇಕ ಪೂಜಾ ವಿಧಾನಗಳನೆ ತಿಳಿದು = ಸದ್ಗುರುಗಳಿಂದ ವ್ಯತಿರೇಕ ಅನ್ವಯಪೂಜಾ

ವಿಧಾನಗಳನ್ನು ತಿಳಿದು ಅನಿಮಿಷೇಶ = ನಿಮಿಷ = ರೆಪ್ಪೆ, ಅನಿಮಿಷರು = ರೆಪ್ಪೆ ಬಡಿಯದ (ಅಂದರೆ ಮನುಷ್ಯರಂತೆ ರೆಪ್ಪೆಹಾಕದ) ನಿದ್ರಾರಹಿತರಾದ ದೇವತೆಗಳು "ಇಂದ್ರಿಯಾಣಾಂನತುಸ್ವಾಪಃ" ಇಂದ್ರಿಯಾಭಿಮಾನಿ ದೇವತೆಗಳು ಅಜ್ಞಾನ ರಹಿತರು ಎಂದು ಶ್ರೀಮದಾಚಾರ್ಯರ ವಚನದಂತೆ ತತ್ವಾಭಿಮಾನಿಗಳಿಗೆ ಈಶನಾದ ಶ್ರೀಹರಿಯನ್ನು ನಿರಂತರದಿ = ಸದಾ ಸರ್ವಕಾಲ ತೃಪ್ತಿಬಡಿಸುತ್ತ ಲಿರು. ನಿತ್ಯತೃಪ್ತನಾದ ಹರಿಗೆ ತೃಪ್ತಿ ಬಡಿಸೋದು ಹೇಗೆ? ಶ್ರೀಭಾಗವತ ಸಪ್ತಮದಲ್ಲಿ "ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ। ಮಾನಂಜ ನಾದ ವಿದುಷಃ ಕರುಣೋವೃಣೀತೇ॥ ಯದ್ಯಜ್ಜನೋ ಭಗವತೇ ವಿದಧೀತ ಮಾನಂ। ತಚ್ಚಾತ್ಮನೇ ಪ್ರತಿ ಮುಖಸ್ಯ ಯಥಾಮುಖಶ್ರೀಃ॥ ೭-೯-೧೧ ಸಾರಾಂಶವೇನೆಂದರೆ ಜ್ಞಾನಾನಂದ ಪೂರ್ಣನೂ ಸ್ವತಂತ್ರನೂ ಆದುದರಿಂದ ಪರಮಾತ್ಮನಿಗೆ ಜ್ಞಾನಿಗಳ ಪೂಜೆಯಿಂದ ಯಾವ ಪ್ರಯೋಜನವೂ ಇಲ್ಲ. ಜ್ಞಾನಿಗಳಾದರೂ ತಾವು ಮಾಡತಕ್ಕ ಪೂಜಾದಿಗಳಿಂದ ಪ್ರಾಪ್ತವಾದ ಭಗವತ್ಪ್ರ ಸನ್ನತೆಯಿಂದ ಆತ್ಮೋದ್ಧಾರವನ್ನು ಪಡೆಯುವರು. ಬಿಂಬವಾದ ಮುಖವನ್ನು ಅಲಂಕರಿಸಿದರೆ, ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬವಾದ ಮುಖವೂ ಶೋಭಿಸು ವಂತೆ, ಬಿಂಬನಾದ ಹರಿಯನ್ನು ಪೂಜಿಸಿದರೆ, ಪ್ರತಿಬಿಂಬನಾದ ಜೀವನಲ್ಲಿ ಆ ಪೂಜಾಫಲವು ಬಿಡದೆ ಮೂಡಿ ತೋರುವದು. ನಿತ್ಯತೃಪ್ತನಾದ ಶ್ರೀಹರಿಗೆ ನಾನಾ ವಿಧವಾಗಿ ಆದರದಿಂದ ಸೇವೆಮಾಡಿದರೆ ಕರುಣಾಸಮುದ್ರ ನಾದ ಹರಿಯು, ಶ್ರೀ ಲಕ್ಷ್ಮೀಪ್ರೀತಿಗೋಸುಗ ಸ್ವೀಕರಿಸುವನೆಂದು ಆದಿತ್ಯ ಪುರಾಣ ವೇಂಕಟೇಶಮಾಹಾತ್ಮ್ಯೆಯಲ್ಲಿಯೂ ಹೇಳಿದೆ. ಭೋಗ್ಯವಾದ ವಸ್ತು ಎರಡು ವಿಧ, ಭಗವದಾತ್ಮಕವಾದದ್ದು ಒಂದು. ಇತರ ಎರಡನೇದು, ಸರ್ವ ಸಾರಭೋಕ್ತ ಸದಾ ಭೋಗಿಸುತ್ತಾನೆಂಬುದು ನಿಜ; ರೂಪ ರಸಗಂಧಾತ್ಮಕ ಪೂಜಾದ್ರವ್ಯಗಳಲ್ಲಿರುವ ಭಗವದ್ರೂಪಗಳನ್ನು ಚಿಂತಿಸಿ, ಬಿಂಬನಲ್ಲಿ ಐಕ್ಯ ಚಿಂತಿಸಿ ಸ್ವರಮಣನೆಂಬ ಅನುಸಂಧಾನವೇ ಅನ್ವಯಪೂಜಾ ಶ್ರೇಷ್ಠವಾದುದು. ಹೀಗೆ ಪರಮಾತ್ಮನನ್ನು ತೃಪ್ತಿಬಡಿಸಬೇಕು. ನಿರಂತರದಿ = ನಿತ್ಯದಲ್ಲಿ ಘನ ಮಹಿಮ ಕೈಕೊಂಡು = ಮಹಾ ಮಹಿಮನು ಸ್ವೀಕರಿಸಿ, ಸ್ಥಿತಿ = ಇರುವಿಕೆ, ಮೃತಿ = ಮರಣ, ಜನುಮ = ಜನನಗಳನ್ನು, ಪರಿಹರಿಸಿ = ದೂರಮಾಡಿ, ಸೇವಕ ಜನರೊಳು = ತನ್ನ ಸ್ವಭಕ್ತರಾದ ನಿಷ್ಕಿಂಚಿನರ ಸಂಗದಲ್ಲಿಟ್ಟು, ಆನಂದ

ಬಡಿಸುವ ಸಂತೋಷಪಡಿಸುವನು, ಮುಕ್ತಿ ಸುಖವನ್ನು ಕೊಡುವನು, ಕಾರಣ ವೇನೆಂದರೆ ಭಕ್ತವತ್ಸಲ = ಭಕ್ತರನ್ನು ಕಾಪಾಡುವ ಕರುಣಾ ಸಮುದ್ರನು.

**ದ್ರೌಪದೀಶಪತಿ ವಿಠಲರು :** ಇನಿತು ವ್ಯತಿರೇಕಾನ್ವಯ ||

**ಭಾವಸೂಚನ :** ಇನಿತ್ವಿತಿ || ೨೬ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

" ಇನಿತು " ಇತಿ ||

**ಕನ್ನಡಾರ್ಥ**

ವ್ಯತಿರೇಕ ಅನ್ವಯ ಪೂಜೆಗಳಿಗೆ ಫಲವನ್ನು ಹೇಳಿ ಉಪಸಂಹರಿಸುತ್ತಾರೆ– " ಇನಿತು " ಎಂಬ ಪದ್ಯದಿಂದ || ೨೬ ||

**ಅವತರಣಿಕಾ :** ಶ್ರೀ ಪದ್ಮನಾಭಿ ಮೂಲರೂಪಿ ಹರಿಗೆ ಎರಡು ಪ್ರತಿಮಾಗಳು. ಜಡ ಮತ್ತು ಚೇತನಗಳು. ಚೇತನರೊಳಗೆ ಸ್ತ್ರೀ ಪುರುಷ ಭೇದದಿಂದ ಎರಡು ವಿಧ. ಜಡದೊಳಗೆ ಆಹಿತ ಸಹಜವೆಂದು ಎರಡು ವಿಧ. ಇದರಲ್ಲಿ ಗೋಳಕತ್ರಯ ಗೋಳಕ ಪಂಚ ವಿಧಾನವನ್ನು ಹೇಳುತ್ತಾರೆ.

ಮೂಲ :

**ಜಲಜನಾಭಗೆ ಎರಡು ಪ್ರತಿಮೆಗ |**
**ಳಿಳೆ(ಳಿ)ಯೊಳಗೆ ಜಡ ಚೇತನಾತ್ಮಕ |**
**ಚಲದೊಳೀರ್ವಗೆ ಸ್ತ್ರೀಪುರುಷ ಭೇದದಲಿ ಜಗದೊಳಗೆ ||**
**ತಿಳಿವದಾಹಿತ ವಿಗೆ ಸಹಜ ಜಡ |**
**ಚಲಗಳೆಂದೀ ಬಗೆ ಪ್ರತೀಕ ದಿ |**
**ಲಲಿತ ಪಂಚತ್ರಯ ಸುಗೋಳಕವರಿತು ಭಜಿಸುತಿರು || ೨೭ ||**

**ಪದ್ಯಾರ್ಥ :** ಜಲಜನಾಭಿ = ಕಮಲವೇ ಹೊಕ್ಕುಳಾಗಿ ಉಳ್ಳ, ಕಮಲ ನಾಭಿ ಪುರುಷರೂಪಿ ಪರಮಾತ್ಮಗೆ, ಇಳೆಯೊಳಗೆ = ಪೃಥ್ವಿಯಲ್ಲಿ ಕಿಂಬಹುನಾ ಸಕಲ ಬ್ರಹ್ಮಾಂಡದಲ್ಲಿ, ಎರಡು ವಿಧವಾದ ಪ್ರತಿಮೆಗಳುಂಟು. ಜಡ = ಕೇವಲ ಶುದ್ಧವಾದ ಪ್ರಕೃತ್ಯಾತ್ಮಕ ಜಡ, ಚೇತನಾತ್ಮಕ = ಚಲನೆಮಾಡತಕ್ಕ, ಉಸಿ ರಾಡಿಸತಕ್ಕ ಚೇತನ ಪ್ರತಿಮೆಗಳೆಂದು ಎರಡು ವಿಧವಾಗಿರುತ್ತವೆ. ಚಲದೊಳೀ ರ್ವಗೆ = ಚಲಿಸತಕ್ಕ ಪ್ರಾಣಿಗಳಲ್ಲಿ ಸ್ತ್ರೀಯರು, ಪುರುಷರು ಎಂದು ಎರಡು ವಿಧ. ಜಡದಲ್ಲಿ, ಅಹಿತ = ಪ್ರತಿಮಾ ಕಂಚು ಪಂಚಲೋಹಾದಿ ಕೃತ ಪ್ರತಿಮಾಗಳು,

ಸಹಜ = ತನ್ನಿಂದ ತಾನೆ ಪ್ರಾದುರ್ಭೂತ ಒಡಮೂಡುವ ಸ್ವಯಂವ್ಯಕ್ತ ಸಾಲಾಗ್ರಾಮಾದಿಗಳು ಸಹಜ ಜಡಪ್ರತಿಮಾ ಎಂದು ಜಡಚಲಗಳೆಂದೀ ಬಗೆ ಪ್ರತೀಕದಿ = ಚಲ ಪ್ರತಿಮಾಜೀವರುಗಳು, ಅಚಲಪ್ರತಿಮಾ, ಸಹಜ ಸಾಲಿಗ್ರಾಮ, ಆಹಿತ ಪ್ರತಿಮಾಲಲಿತ = ಸುಂದರವಾದ ಮನೋಹರ ಗೋಳಕ ಗುಡ್ಯತೇ ಇತಿ ಗೋಲಕಃ = ರಕ್ಷಣಮಾಡುವದ್ಯಾವುದೋ ಅದು ಗೋಳಕ, ಇಲ್ಲಿ ಸಹಜ ಪ್ರತಿಮಾಸಾಲಗ್ರಾಮದಲ್ಲಿ ವಿಶ್ವಕರ್ಮ ನಿರ್ಮಿತ ಜಡಗೋಳಕ ವಿಲ್ಲ. ಸಾಲಗ್ರಾಮ–ತದಂತಸ್ಥ ವಾಯು, ರಮಾಹರಿ, ಆಹಿತ ಪ್ರತಿಮಾ = ವಿಶ್ವಕರ್ಮನಿರ್ಮಿತ ಒಂದು ಗೋಳಕ, ರುದ್ರ, ವಾಯುರಮಾ, ಹರಿ ಹೀಗೆ ೫ ಗೋಳಕ, ಶ್ರೀಹರಿಯ ಆವಾಸಕ್ಕೆ ಸುತ್ತಲೂ ರಕ್ಷಿಸುವ ಪಂಚಸ್ಥಾನ ಮನೆ ಗೋಳಕ, ಈ ಪ್ರಕಾರ ತಿಳಿದು, ಭಜಿಸುತಿರು = ಪೂಜಿಸು ಸ್ತೋತ್ರಮಾಡುತ್ತ ಲಿರು, ಇದಾದರೂ ಮಂದ ದೃಷ್ಟ್ಯಾ, ಆದರೆ ಪ್ರತಿಯೊಂದು ಜಡ ಪ್ರತಿಮೆಗಳಲ್ಲಿ ೨೪ ತತ್ವಗಳು ಆವರಕವಾಗಿವೆ ಎಂದು ವಿಜಯದಾಸರಾಯರ ವಾಕ್ಯ. ತದಂತಸ್ಥ ತೇಜೋರೂಪವಾಯುರಮಾಹರಿ ಎಂದು ಚಿಂತನೆ.

**ದ್ರೌಪದೀಶಪತಿ ವಿಠಲರು:** ಜಲಜನಾಭಗೆ ಎರಡು ಪ್ರತಿಮಾ.

೧. ಜಡ—ಈ ಜಡದಲ್ಲಿ ೧. ಆಹಿತಾ; ೨. ಸಹಜಾ

೨. ಚೇತನದಲ್ಲಿ—೧. ಸ್ತ್ರೀ; ೨. ಪುರುಷ

| ಆಹಿತಜಡ ಪಂಚಗೋಳಕ | ಗೋಳಕತ್ರಯ ವಿವರ |
|---|---|
| ೧ ಪ್ರತಿಮಾಂತಸ್ಥಾಂ ಪ್ರತಿಮಾ | ಸಹಜ ಜಡ ಶಾಲಿಗ್ರಾಮ |
| ೨ ತದ್ಗತ ತತ್ವಾಭಿಮಾನಿ | ೧ ತದಂತರ್ಗತ ವಾಯು |
| ೩ ತದಂತರ್ಗತ ವಾಯು | ೨ ತದಂತರ್ಗತ ರಮಾದೇವಿ |
| ೪ ತದಂತರ್ಗತ ರಮಾ | ೩ ತದಂತರ್ಗತ ಸಾಕ್ಷಾತ್ |
| ೫ ತದಂತರ್ಗತ ನಾರಾಯಣ | ಶ್ರೀಹರಿ |
| ಶಿವಪ್ರತಿಮೆಯಲ್ಲಿ ಪಂಚಕ | ವಿಷ್ಣುಪ್ರತಿಮೆಯಲ್ಲಿ ತ್ರಯಾ |

**ಭಾವಸೂಚನ:** ಜಲಜೇತಿ ॥ "ವಾಸುದೇವಸ್ಯ ದ್ವೇರೂಪೇಚಲಂ ವಾಚಲ ಮೇವಚ ॥ ಚಲಂ ಸನ್ಯಾಸಿನಾಂ ರೂಪಂ ಅಚಲಂ ಪ್ರತಿಮಾದಿಕ ಮಿತಿ ॥ ಭಾಗವತ ತಾತ್ಪರ್ಯೆ ॥ ೨೭ ॥

**ವಿಶೇಷ ಸೂಚನೆ:** ಶ್ರೀ ಪುರಂದರದಾಸರ ಸುಳಾದಿ || "ವಿಶ್ವಕರ್ಮ ಕೃತ ಪ್ರತೀಕ ಒಂದು ರುದ್ರ | ವಿಶ್ವವ್ಯಾಪಕ ವಾಯು ಶ್ರೀವಿಷ್ಣು ಪಂಚ ತಿಳಿದು | ವಿಶ್ವಾಸಮಾಡಲಾಗ ರುದ್ರಾದಿ ಪ್ರತಿಮಾದಲ್ಲಿ | ಅಶ್ವವದನ ನಮ್ಮ **ಪುರಂದರವಿಠಲನು** ಹ್ರಸ್ವದೇಹೀನ ಬಿಡದೆ ಪರಮಾನುಗ್ರಹ ಮಾಳ್ಪ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜಲಜ" ಇತಿ || "ದ್ವೇ ವಾ ಬ್ರಹ್ಮಣಃ ರೂಪೇ ಆತ್ಮಾ ಚೈವ ಅನಾತ್ಮಾ ಚ" ಇತಿ ಶ್ರುತೇಃ || ಈರ್ಬಗೆ ಎರಡು ಪ್ರಕಾರ | "ಅಚಲಂ" ಪ್ರತೀಕಮ್ || ಸುಖತೀರ್ಥ ಶ್ರೀಮಚ್ಚರಣಾಸ್ತು – (ಚರಣಾಸ್ತು) – "ವಾಸುದೇವಸ್ಯ ದ್ವೇರೂಪೇ ಚಲಂ ಚಾಚಲಮೇವ ಚ || ಚಲಂ ಸನ್ಯಾಸಿನಾಂ ರೂಪಂ ಅಚಲಂ ಪ್ರತಿಮಾದಿಕಮ್" || ಇತಿ || "ಪಂಚತ್ರಯ" ಇತಿ | ಸಹಜಾತ್ರಯಂ ಆಹಿತ ಮೇಕಂ ಚಲಂ ಚೇತಿ ಸಹಜಾಹಿತೇ | ಚಲಂ ಚೇತಿ ತ್ರಯಂ ಚೈತಿ ವಿವಕ್ಷಾಭೇದೇನ || ದಶಮಾಧ್ಯಾಯೇ ವಿಷ್ಣುರಹಸ್ಯೇ – "ಚಲಾಚಲ ವಿಭೇದೇನ ಪ್ರತಿಮಾದ್ವಿತಯಂ ಮಮ || ಚಲಾ ತು ವೈಷ್ಣವಃ ವಿಪ್ರಃ ದ್ವಿವಿಧಾ ತ್ವಚಲಾ ಮಮ || ಸಹಜಾಹಿತ ಭೇದೇನ ಸಹಜಾಃ ತ್ರಿವಿಧಾಃ ಸ್ಮೃತಾಃ || ತೀರ್ಥಕ್ಷೇತ್ರ ಶಿಲಾಭೇದಾತ್ ಜಲಂ ತೀರ್ಥಮಿತಿ ಸ್ಮೃತಮ್ || ಭೂಭಾಗಃ ಕ್ಷೇತ್ರಮಿತ್ಯುಕ್ತಂ ಸಾಲಗ್ರಾಮಾದಿಕಾಃ ಶಿಲಾಃ || ಪ್ರಯಾಗಕಾಶೀ ಬದರೀ ಕುರುಕ್ಷೇತ್ರಾದಿಕಾನಿ ಚ || ಭೂಖಂಡಾನಿ ಚ ಸರ್ವಾಣಿ ಕ್ಷೇತ್ರಾಣಿ ಮಮ ಮೂರ್ತಯಃ || "ಗಂಗಾಪುಷ್ಕರ ಕೃಷ್ಣಾದ್ಯಾಃ ಮಮತಾಃ ತೀರ್ಥಮೂರ್ತಯಃ || ಇತಿ || ೨೭ ||

## ಕನ್ನಡಾರ್ಥ

"ಜಲಜನಾಭನಿಗೆ ಎರಡು ಪ್ರತಿಮೆಗಳು ಎಂಬಲ್ಲಿ "ಪರಮಾತ್ಮನಿಗೆ ಎರಡು ವಿಧ ರೂಪಗಳಿರುತ್ತವೆ.' ಒಂದು ಸ್ವರೂಪ ರೂಪ, ಮತ್ತೊಂದು ಪ್ರತಿಮಾರೂಪ, ಹೀಗಿರುವ ವಚನವು ಪ್ರಮಾಣವಾಗಿರುತ್ತದೆ.

ಶ್ರೀಮದಾನಂದತೀರ್ಥ ಭಗತ್ಪಾದರು ಹೇಳಿದ್ದೇನೆಂದರೆ "ವಾಸುದೇವನಿಗೆ ಎರಡು ಪ್ರತಿಮಾರೂಪಗಳಿರುತ್ತವೆ–"ಒಂದು ಚಲ, ಇನ್ನೊಂದು ಅಚಲ" ವೆಂಬುದಾಗಿ. ಸನ್ಯಾಸಿಗಳಲ್ಲಿರುವ ಭಗವದ್ರೂಪವು ಚಲರೂಪ, ಜಡ ಪ್ರತಿಮಾದಿಗಳು ಅಚಲರೂಪ ಎಂದು ಹೇಳಿರುತ್ತಾರೆ. "ಪಂಚತ್ರಯ" ವೆಂಬಲ್ಲಿ ವಿಶೇಷ

ಸಹಜಾ ಪ್ರತಿಮೆಗಳು ಮೂರು, ಆಹಿತ ಒಂದು, ಚಲ ಒಂದು ಹೀಗೆ ಪಂಚ || ಸಹಜಾಹಿತಗಳು ಎರಡು - ಒಂದು ಚಲ ಹೀಗೆ ಮೂರು. ಹೀಗೆ ವಿವಕ್ಷಾ ಭೇದದಿಂದ ತಿಳಿಯಬೇಕು. ವಿಷ್ಣುರಹಸ್ಯ ಹತ್ತನೆಯ ಅಧ್ಯಾಯದಲ್ಲಿ "ಪರಮಾತ್ಮನಿಗೆ ಚಲ - ಅಚಲವೆಂದು ಎರಡು ವಿಧ ಪ್ರತಿಮೆಗಳು. ವೈಷ್ಣವ ವಿಪ್ರನು ಚಲಪ್ರತಿಮೆಯು; ಅಚಲ ಪ್ರತಿಮೆಯಲ್ಲಿ ಎರಡು ವಿಧಗಳಿರುತ್ತವೆ. "ಸಹಜ" "ಆಹಿತ" ವೆಂಬುದಾಗಿ. ಸಹಜಗಳಲ್ಲಿ ಮೂರು ತರಹ "ತೀರ್ಥ ಕ್ಷೇತ್ರ ಶಿಲಾ" ಎಂಬುದಾಗಿ, ಜಲವು ತೀರ್ಥವೆನಿಸುತ್ತದೆ, ಭೂಭಾಗವು ಕ್ಷೇತ್ರ ವೆನಿಸಿರುತ್ತದೆ, ಸಾಲಗ್ರಾಮ ಮುಂತಾದವುಗಳು ಶಿಲಾಗಳೆನಿಸಿರುತ್ತವೆ. ಪ್ರಯಾಗ ಕಾಶೀ ಬದರೀ ಕುರುಕ್ಷೇತ್ರ ಮುಂತಾದವುಗಳು ಭೂಪ್ರದೇಶ ವಿಶೇಷಗಳು ಕ್ಷೇತ್ರಗಳೆಂದು ಪ್ರಸಿದ್ಧವಾಗಿವೆ. ಗಂಗಾ ಪುಷ್ಕರ ಕೃಷ್ಣಾ ಮುಂತಾದವುಗಳು ತೀರ್ಥಮೂರ್ತಿಗಳೆಂದು ಪ್ರಸಿದ್ಧವೇ ಇವೆ" ಎಂದು ನಿರೂಪಿಸಲಾಗಿರುತ್ತದೆ. || ೨೭ ||

**ಅವತರಣಿಕಾ :** ಚಲಪ್ರತಿಮೆಗಳಾದ ಪುರುಷರ ಕಳೇವರ-ದೇಹದಲ್ಲಿ ಬ್ರಹ್ಮಾದಿ ಸಕಲ ತತ್ವೇಶರು ಶರೀರಮಾನಿಗಳಾಗಿ ಶ್ರೀಹರಿಯ ಆಜ್ಞೆಯಿಂದ ಸಕಲ ಕಾರ್ಯ ಹರಿ ಮಾಡಿಸಿದಂತೆ ಮಾಡಿ ಶ್ರೀಹರಿಯ ಭಜಿಸುತ್ತ ಸುಖಕೊಡುತ್ತಾರೆಂದು ಉಪದೇಶಿಸುತ್ತಾರೆ.




ಮೂಲ :

**ವಾರಿಜಾಸನ ವಾಯು ವೀಂದ್ರ ಉ |**
**ಮಾರಮಣನಾಕೇಶ ಸ್ಮರಹಂ |**
**ಕಾರಿಕ ಪ್ರಾಣಾದಿಗಳು ಪುರುಷರ ಕಳೇವರದಿ ||**
**ತೋರಿಕೊಳದನಿರುದ್ಧ ದೋಷವಿ |**
**ದೂರ ನಾರಾಯಣನ ರೂಪ ಶ |**
**ರೀರ ಮಾನಿಗಳಾಗಿ ಭಜಿಸುತ ಸುಖವ ಕೊಡುತಿಹರು ||೨೮||**

**ಪದ್ಯಾರ್ಥ :** ವಾರಿಜಾಸನ = ವಾರಿಜ = ಕಮಲ, ಆಸನ = ಪೀಠ ಕಮಲದಲ್ಲಿ ಕುಳಿತ ಬ್ರಹ್ಮದೇವರು, ವಾಯು = ವಾಯುದೇವರು, ವೀಂದ್ರ = ಗರುಡದೇವರು, ಉಮಾರಮಣ = ಉಮಾದೇವಿ ಪತಿ ರುದ್ರದೇವರು, ನಾಕೇಶ = ಸ್ವರ್ಗಾಧಿಪತಿ ಇಂದ್ರ, ಸ್ಮರ = ಕಾಮ, ಅಹಂಕಾರಿಕ ಪ್ರಾಣಾದಿಗಳು

= ಸ್ಥೂಲ ಶರೀರಾಭಿಮಾನಿ ಅಹಂಕಾರಿಕ ಪ್ರಾಣದೇವರೇ ಮೊದಲಾಗಿ ಉಳ್ಳ ಸಕಲ ತತ್ವೇಶರು, ಪುರುಷರ ಕಳೇವರದಿ = ಗಂಡಸರುಗಳ ದೇಹದಲ್ಲಿ, ಶರೀರ ಮಾನಿಗಳಾಗಿ = ಸ್ಥೂಲ ಶರೀರಕ್ಕೆ ಅಭಿಮಾನಿಗಳಾಗಿ, ತಾವು ತೋರಿ ಕೊಳ್ಳದೆ = ದೇಹದಲ್ಲಿದ್ದರೂ ಅಜ್ಞರಿಗೆ ತೋರಿಕೊಳ್ಳದೆ = ಕಾಣಿಸದೇ, ದೋಷ ವಿದೂರನಾದ, ಅನಿರುದ್ಧ ನಾರಾಯಣನ ಎರಡು ರೂಪಗಳನ್ನು ಭಜಿಸುತ = ಭಜನೆ-ಸ್ತೋತ್ರಮಾಡುತ್ತ, ಜೀವರುಗಳಿಗೆ ಸುಖವ ಕೊಡುತಿಹರು = ತತ್ಕಾಲ ಕ್ರಿಯೆಗಳನ್ನು ಮಾಡಿಸುತ್ತ ಆನಂದವನ್ನು ಕೊಡುತ್ತಲಿರುವರು.

**ದ್ರೌಪದೀಶಪತಿ ವಿಠಲರು :** ಪುರುಷ ಕಳೇವರದಿ ೧ ಬ್ರಹ್ಮ, ೨ ವಾಯು, ೩ ಗರುಡ, ೪ ರುದ್ರ, ೫ ಇಂದ್ರ, ೬ ಕಾಮ, ೭ ಅಹಂಕಾರಿಕ ಪ್ರಾಣ; ಇವರಂತರ್ಗತ ಅನಿರುದ್ಧ ನಾರಾಯಣ.

**ಭಾವಸೂಚನ :** ವಾರಿಜಾಸನೇತಿ ॥ ೨೮ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವಾರಿಜ" ಇತಿ ॥ "ವಾರಿಜಾಸನ" – ಬ್ರಹ್ಮಾ ॥ "ವೀಂದ್ರಃ" – ಗರುಡಃ । "ನಾಕೇಶಃ" – ಇಂದ್ರಃ ॥ ದೋಷೇತಿ ನಾರಾಯಣ ಪದಾರ್ಥಃ ॥ ವಿಶೇಷ ವಿವಕ್ಷಯಾ ಏವಮ್ ॥ ೨೮ ॥

**ಕನ್ನಡಾರ್ಥ**

ಪುರುಷರಲ್ಲಿ ಚಿಂತಿಸಬೇಕಾದ ವಿಷಯಗಳನ್ನು ತಿಳಿಸುತ್ತಾರೆ – "ವಾರಿ ಜಾಸನ" ಎಂಬ ಪದ್ಯದಿಂದ. "ವಾರಿಜಾಸನ" ಚತುರ್ಮುಖ ಬ್ರಹ್ಮದೇವ "ವೀಂದ್ರಃ" – ಪಕ್ಷಿರಾಜನಾದ ಗರುಡ, "ನಾಕೇಶಃ" – ಸ್ವರ್ಗಾಧಿಪನಾದ ದೇವೇಂದ್ರ, "ದೋಷವಿದೂರ" ಎಂಬ ಪದವು ನಾರಾಯಣ ಶಬ್ದದ ಅರ್ಥವೇ ಆಗಿರುತ್ತದೆ. ಅರ = ದೋಷ, ಇವುಗಳಿಗೆ ಆಶ್ರಯನಾಗದವನು – ನಾರಾಯ ಣನು, ದೋಷವಿದೂರನು ; ಆ ನಾರಾಯಣನ ರೂಪವಿಶೇಷವನ್ನು ಉಪಾಸಿ ಸುತ್ತಲಿರುತ್ತಾರೆ. ॥ ೨೮ ॥

**ಅವತರಣಿಕಾ :** ಇನ್ನು ಜಲಪ್ರತಿಮಾ ಸ್ತ್ರೀಯರ ಶರೀರದಲ್ಲಿ ಲಕ್ಷ್ಮೀದೇವಿ, ಸರಸ್ವತಿ, ಭಾರತೀ, ಸೌಪರಣಿ, ವಾರುಣಿ, ಪಾರ್ವತೀ ಮೊದಲಾದವರು ಸ್ತ್ರೀಯರುಗಳು ಶರೀರಕ್ಕೆ ಅಭಿಮಾನಿಗಳಾಗಿ ಇದ್ದು, ಸಂಕರ್ಷಣ ಪ್ರದ್ಯುಮ್ನ ರೂಪಗಳನ್ನು ನಿರಂತರ ಆನಂದದಿಂದ ಉಪಾಸನೆ ಗೈಯ್ಯುತ್ತಾರೆಂದು ಉಪದೇಶಿಸುತ್ತಾರೆ.

ಮೂಲ :

**ಸಿರಿ ಸರಸ್ವತಿ ಭಾರತೀ ಸೌ ।**
**ಪರಣಿ ವಾರುಣಿ ಪಾರ್ವತೀ ಮುಖ ।**
**ರಿರುತಿಹರು ಸ್ತ್ರೀಯರೊಳಗಭಿಮಾನಿಗಳು ತಾವೆನಿಸಿ ॥**
**ಅರುಣ ವರ್ಣನಿಭಾಂಗ ಶ್ರೀಸಂ ।**
**ಕರುಷಣ ಪ್ರದ್ಯುಮ್ನ ರೂಪಗ ।**
**ಇರಳು ಹಗಲು ಉಪಾಸನೆಯಗೈಯುತಲೆ ಮೋದದಲಿ ॥೨೯॥**

**ಪದ್ಯಾರ್ಥ :** ಸಿರಿ = ಲಕ್ಷ್ಮೀದೇವಿ, ಸರಸ್ವತಿ = ಬ್ರಹ್ಮಪತ್ನಿ, ಭಾರತೀ = ವಾಯುಪತ್ನಿ, ಸೌಪರಣಿ = ಗರುಡಪತ್ನಿ, ವಾರುಣಿ = ಶೇಷಪತ್ನಿ, ಪಾರ್ವತೀ = ರುದ್ರಪತ್ನಿ, ಮುಖ = ಮೊದಲಾದವರು, ಸ್ತ್ರೀ ಶರೀರದೊಳಗಭಿಮಾನಿಗಳು ತಾವೆನಿಸಿ ಇರುತಿಹರು — ಸ್ತ್ರೀಯರ ಶರೀರಕ್ಕೆ ಅಭಿಮಾನಿಗಳಾಗಿ = ಮಹಾ ಗೌರವಯುಕ್ತ ಪ್ರೀತಿಯುಳ್ಳವರಾಗಿ ಅಂದರೆ ಸ್ತ್ರೀಶರೀರ ತಮ್ಮದೆಂದು ಪ್ರೀತಿ ಮಮತೆಯುಳ್ಳವರಾಗಿದ್ದು, ಅರುಣವರ್ಣನಿಭಾಂಗ = ಉದಿತ ಸೂರ್ಯನಂತೆ ಪ್ರಕಾಶಮಾನವಾದ ದೇಹವುಳ್ಳ — ಶ್ರೀ = ಸಂಪತ್ಕರನಾದ ಸಂಕರ್ಷಣ, ಪ್ರದ್ಯುಮ್ನ ಈ ಎರಡು ರೂಪಗಳನ್ನು, ಮೋದದಲ್ಲಿ = ಆನಂದದಿಂದ, ಇರುಳು ಹಗಲು = ರಾತ್ರಿ ದಿವಸ ಅಂದರೆ ನಿರಂತರ, ಉಪಾಸನೆ ಗೈಯ್ಯುತಲೆ = ಧ್ಯಾನೋಪಾಸನೆ ಮಾಡುತ್ತ ಇರುತ್ತಿಹರೆಂದು ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ೧ ಸರಸ್ವತೀ, ೨ ಭಾರತೀ, ೩ ಸೌಪರಣಿ, ೪ ವಾರುಣೀ, ೫ ಪಾರ್ವತೀ ಈ ಸ್ತ್ರೀಯರಲ್ಲಿ ಸಂಕರ್ಷಣ—ಪ್ರದ್ಯುಮ್ನ ರೂಪ.

**ಭಾವಸೂಚನ :** ಸಿರಿ ಇತಿ ॥ ೨೯ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

" ಶಿರಿ " ಇತಿ ॥ " ವಾರುಣೀ "–ಶೇಷಜಾಯಾ ॥ " ಅರುಣ "–ಪಿಂಗಳಃ । " ಸ್ವರ್ಣ " – ಹರಿದ್ವರ್ಣಃ । ಸಾಂಕರ್ಷಣಂ ಪಿಂಗಲಂ ಚ ॥ " " ಪ್ರದ್ಯುಮ್ನಂ ಹರಿತಂ ಸ್ಮೃತಮ್ " ಇತಿ ಬೃಹದ್ಭಾಷ್ಯೇ ॥ " ಸುವರ್ಣ ವರ್ಣ ನಿಭಾಂಗ " ಇತಿ ಸುವರ್ಣವರ್ಣ " ಪ್ರತಿಪದಮ್ ॥ ಓಂ * ಇಂದ್ರ ಶವಿಷ್ಠ ಸಪ್ತತರೇಹಯಂ ಗೃಣತ್ಸು ಧಾರಯಶ್ರವಃ । ಸೂರಿಭ್ಯೋ ಅಮೃತಂ ವಸು ತ್ವನಂ ಹವೇ ತ್ವಾ ಸೂರ ಉದಿತೇ ॥ ಓಂ ॥ * ॥ ಸುವರ್ಣಂ ದ್ರವ್ಯಂ ವೃಣೋತಿ ಭಕ್ತೇಭ್ಯಃ

ದಾತು ಮಿಚ್ಛತಿ ತದ್ವದ್ರೂಪಃ ಚ ಇತಿ ತಥೋಕ್ತಃ॥ "ಸಂಕರ್ಷಣಃ" – ಓಂ* ಚೋದಯ ಯೇ ದದತಿ ಪ್ರಿಯಾ ವಸು ತವಪ್ರಣೀತೀ ಹರ್ಯಶ್ವ ಸೂರಿ ಭಿರ್ವಿಶ್ವಾ ತರೇಮ ದುರಿತಾ ತದವೇದಿಂದ್ರ ॥ * ಓಂ ॥ ದುರಿತಾನಿ ಭಕ್ತೇಭ್ಯಃ ಕರ್ಷತಿ ಇತಿ ತಥೋಕ್ತಃ ॥ "ಪ್ರದ್ಯುಮ್ನಃ" – ಓಂ * ಸೋಮ ಪ್ರೀತಯೇ ಧಿಯಾ ಶವಿಷ್ಠ ಆಗಮತ್ । ತಂ (ತೆ) ಹಿ ಸ್ವರಾಜಂ ವೃಷಭಂ ತಮೋಜಸೇ ಧಿಷಣೇ ನಿಷ್ಟತಕ್ಷತುಃ ॥ ಓಂ * ॥ ದ್ಯುಮ್ನಂ ಸ್ತುತಿಃ ಬಲಂ ಪ್ರಕರ್ಷೇಣ ಅಸ್ಯ ಅಸ್ತಿ ಇತಿ ತಥೋಕ್ತಃ ॥ ೨೯ ॥

## ಕನ್ನಡಾರ್ಥ

ಸ್ತ್ರೀಯರಲ್ಲಿ ಚಿಂತಿಸಬೇಕಾದುದನ್ನು ನಿರೂಪಿಸುತ್ತಾರೆ – "ಶಿರಿ" ಎಂಬ ಪದ್ಯದಿಂದ. ಶೇಷದೇವರ ಪತ್ನಿಯವರಿಗೆ "ವಾರುಣೀ" ಎಂದು ಹೆಸರು. "ಅರುಣ" – ಪಿಂಗಲಬಣ್ಣ, "ಸ್ವರ್ಣ" – ಹರಿದ್ವರ್ಣ, ಸಂಕರ್ಷಣರೂಪೀ ಹರಿಯ ವರ್ಣವು ಪಿಂಗಲ; ಪ್ರದ್ಯುಮ್ನನ ರೂಪವು ಹರಿದ್ವರ್ಣ ವಿಶಿಷ್ಟ ವಾದುದು" ಎಂದು ಪ್ರಸಿದ್ಧವದೆ, ಎಂದು ಬೃಹದಾರಣ್ಯ ಭಾಷ್ಯವಚನವಿರುವ ದರಿಂದ ಹೀಗೆ ಅರ್ಥಹೇಳಬೇಕು. "ಅರುಣವರ್ಣ" ವೆಂಬ ಪದವು "ಸುವರ್ಣ ವರ್ಣ" ವೆಂಬ ನಾಮ ಸಮಾನವಾಗಿರುತ್ತದೆ. "ಭಕ್ತರಿಗೆ ಸುವರ್ಣ ಮುಂತಾದ ದ್ರವ್ಯಗಳನ್ನು ಕೊಡಲಿಚ್ಛಿಸುವವನು ಮತ್ತು ಸುವರ್ಣದಂತೆ ಶರೀರಕಾಂತಿಯುಳ್ಳವನು;" ಎಂದು ಅರ್ಥ. "ಸಂಕರ್ಷಣ"–"ಭಕ್ತರ ದುರಿತ ಗಳನ್ನು ಕಳೆಯುವವನು, ಎಂದು ಬೃಹತೀ ಮಂತ್ರಾನುಗುಣವಾದ ಅರ್ಥ. "ಪ್ರದ್ಯುಮ್ನ" – "ಅತಿಶಯವಾದ ಸ್ತುತಿ ಹಾಗೂ ಬಲಗಳುಳ್ಳವನು" ಎಂದು ಬೃಹತೀ ಮಂತ್ರಾನುಸಾರಿಯಾದ ಅರ್ಥ ॥ ೨೯ ॥

**ಅವತರಣಿಕಾ :** ಇನ್ನು ಆಹಿತ ಪ್ರತಿಮಾ—ಅಕ್ಕಸಾಲಿಗರಾದಿಗಳು ಮಾಡಿದ ಪ್ರತಿಮಾಗಳಲ್ಲಿ ಅಗ್ನಿವಾಯುವಾದಿ ಮುಖ್ಯ ದೇವತೆಗಳು ತಾವು ಅಭಿಮಾನಿಗಳಾಗಿದ್ದು ಟಂಕಿನಾಮಕಹರಿ ಪರಶುರಾಮ ರೂಪಗಳನ್ನು ಪೂಜಿಸುತ್ತಾರೆ. ಪ್ರತಿಮಾಗಳಿಗೆ ಗಂಧ ಅಕ್ಷತಾ ತುಲಸ್ಯಾದಿಗಳಿಂದ ವ್ಯತಿರೇಕ ಪೂಜಾಮಾಡುವ ಭಕ್ತರಿಗೆ ಪುರುಷಾರ್ಥ ಕೊಡುವರೆಂದು ಹೇಳುವರು,

ಮೂಲ :

**ಕೃತಪ್ರತೀಕದಿ ಟಂಕಿ ಭಾರ್ಗವ ।**
**ಹುತವಹಾನಿಲ ಮುಖ್ಯ ದಿವಿಜರು ।**
**ತುತಿಸಿಕೊಳುತಭಿಮಾನಿಗಳು ತಾವಾಗಿ ನೆಲಸಿದ್ದು ॥**
**ಪ್ರತಿದಿವಸ ಶ್ರೀತುಳಸಿ ಗಂಧಾ ।**
**ಕ್ಷತೆ ಕುಸುಮ ಫಲದೀಪ ಪಂಚಾ ।**
**ನೃತದಿ ಪೂಜಿಪ ಭಕತ(ಭಜ)ರಿಗೆ ಕೊಡುತಿಹರು**
**ಪುರುಷಾರ್ಥ ॥೩೦॥**

**ಪದ್ಯಾರ್ಥ :** ಕೃತಪ್ರತೀಕ = ಅಕ್ಕಸಾಲಿಗರು ಮಾಡಿದ ಪಂಚಲೋಹಾದಿ ಪ್ರತಿಮಾ, ಬಡಗಿಯು ಮಾಡಿದ ದಾರುಪ್ರತಿಮಾ, ಶಿಲ್ಪಿಗರು ಮಾಡಿದ ಶಿಲಾದಿ ಪ್ರತಿಮಾಗಳಲ್ಲಿ, ಟಂಕಿ = ಅಜಾದಿ ಮೂರ್ತಿಗಳಲ್ಲಿಪ್ಪ, ಟಂಕ = ಶಿಲಾ ಒಡೆಯುವ ಆಯುಧವನ್ನು ಧರಿಸಿದ ಟಂಕಿಮೂರ್ತಿ, ಭಾರ್ಗವ = ಭೃಗು ಕುಲೋದ್ಭೂತ ಪರಶುರಾಮರು ಇರುವರು. ಹುತವಹ = ಅಗ್ನಿ, ಅನಿಲ ವಾಯುವೇ ಮೊದಲಾಗಿ ಮುಖ್ಯ ದಿವಿಜರು = ದೇವತೆಗಳು ತಾವು ಅಭಿಮಾನಿಗಳಾಗಿ ನೆಲಸಿದ್ದು = ಈ ಪ್ರತಿಮಾಗಳಿಗೆ ಅಭಿಮಾನಿಗಳಾಗಿ ಪ್ರತಿಮಾಗಳಲ್ಲಿದ್ದು ಟಂಕಿ ಭಾರ್ಗವ ರೂಪಗಳನ್ನು ತುತಿಸಿಕೊಳುತ = ಸ್ತೋತ್ರ ಮಾಡುತ್ತಲಿಹರು. ಈ ಜ್ಞಾನಪೂರ್ವಕ, ಪ್ರತಿದಿವಸ = ನಿತ್ಯನಿತ್ಯದಲ್ಲಿ, ಶ್ರೀ ತುಳಸಿಪತ್ರ, ಗಂಧ ಅಕ್ಷತೆ ಕುಸುಮ = ಹೂವು, ಫಲ, ಹಣ್ಣುಕಾಯಿ, ದೀಪ, ಪಂಚಾಮೃತ ಅಭೀಷೇಕಾದಿಗಳಿಂದ ಪೂಜಿಪ ಭಕುತರಿಗೆ = ಪೂಜಾ ಮಾಡತಕ್ಕ ಭಕ್ತರಿಗೆ ಪುರುಷಾರ್ಥ ಕೊಡುತಿಹರು = ಧರ್ಮ–ಅರ್ಥ–ಕಾಮ–ಮೋಕ್ಷ — ಇದರಲ್ಲಿ ಉತ್ತಮ—ಇಂಥ ವ್ಯತಿರೇಕ ಪೂಜಾದಿಗಳಿಂದ ಜ್ಞಾನವನ್ನು ಕೊಟ್ಟು ಮೋಕ್ಷವನ್ನು ಕೊಡುತಿಹರು. ಕಲ್ಲುಕಟೆದು ಮೂರ್ತಿಮಾಡುವ ಶಿಲಾಪ್ರತಿಮಾದಲ್ಲಿ ಟಂಕಿ ಪಂಚಲೋಹಾದಿ ಪ್ರತೀಕಾ, ಅಗ್ನಿ ವಾಯು ಪುಟದಿಂದ ಮಾಡುವ ಪ್ರತಿಮಾಗಳಲ್ಲಿ, ಅಗ್ನ್ಯಂತರ್ಗತ ಪರಶುರಾಮಮೂರ್ತಿ ಧ್ಯಾನಮಾಡುವದೆಂದು ದಾಸರ ನಿಜ ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ಕೃತಪ್ರತೀಕದಿ ॥ ಅಗ್ನಿಯಲ್ಲಿ ಭಾರ್ಗವ, ವಾಯುವಿನಲ್ಲಿ ಟಂಕಿ. ಇವೇ ಚಲಪ್ರತೀಕಾ.

**ಭಾವಸೂಚನ**: ಕೃತೇತಿ ತದ್ರೂಪ ಪ್ರತೀಕಾ ॥ ೩೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕೃತ" ಇತಿ ॥ "ಕೃತಪ್ರತೀಕೇ ಟಂಕೀ ಚ ರೇಣುಕಾತ್ಮಜಃ ಹರಿಃ" ಇತ್ಯುಕ್ತೇಃ ॥ ೩೦ ॥

**ಕನ್ನಡಾರ್ಥ**

ನಿರ್ಮಿತವಾದ ಲೋಹ ಮುಂತಾದ ಪ್ರತಿಮೆಗಳಲ್ಲಿ "ಟಂಕಿ" "ಪರಶುರಾಮ" ಇವರು ಇರುತ್ತಾರೆ" ಎಂದು ವಚನಗಳಿರುವವು ॥ ೩೦ ॥

**ಅವತರಣಿಕಾ**: ಇನ್ನು ಜಡವಾದ ಸಹಜ ಸಾಲಿಗ್ರಾಮಾದಿಗಳಲ್ಲಿ ಇರುವ ದೇವತೆಗಳು, ವಾಸುದೇವನಾಮಕ ಹರಿಯನ್ನು ಪೂಜಿಪರಿಗೆ ಇಂಥ ಜ್ಞಾನವನ್ನು ಕೊಟ್ಟು ಸಂಸಾರದಿಂದ ಮುಕ್ತರನ್ನು ಮಾಡುವರೆಂದು ಹೇಳುತ್ತಾರೆ.

ಮೂಲ :

**ನಗಗಳಭಿಮಾನಿಗಳೆನಿಪ ಸುರ |**
**ರುಗಳು ಸಹಜಾಚಲಗಳಿಗೆ ಮಾ |**
**ನಿಗಳೆನಿಸಿ ಶ್ರೀವಾಸುದೇವನ ಪೂಜಿಸುತಲಿಹರು ||**
**ಸ್ವಗತ ಭೇದ ವಿವರ್ಜಿತನ ನಾ |**
**ಲ್ಬಗೆ ಪ್ರತೀಕದಿ ತಿಳಿದು ಪೂಜಿಸೆ |**
**ಇಗಡ ಸಂಸಾರಾಬ್ಧಿ ದಾಟಿಸಿ ಮುಕ್ತರನುಮಾಳ್ಪ || ೩೧ ||**

**ಪದ್ಯಾರ್ಥ** : ನಗಗಳಿಗೆ = ಮೇರು ಪರ್ವತ ಮಂದಾರ, ಆನಂದ-ಹಿಮಾಚಲ ಮೊದಲಾದ ಪರ್ವತಗಳಿಗೆ ಅಭಿಮಾನಿಗಳಾದ ಆಯಾ ಪರ್ವತಕ್ಕೆ ಅಭಿಮಾನಿಗಳೆನಿಸಿದ, ಸುರರುಗಳು = ದೇವತೆಗಳು, ಸಹಜಾಚಲಗಳಿಗೆ = ತಮ್ಮಿಂದ ತಾವೇ ಹುಟ್ಟಿದ ಶಾಲಿಗ್ರಾಮ ಸ್ವಯಂ ವ್ಯಕ್ತಾದಿಗಳಿಗೆ, ಅಭಿಮಾನಿಗಳಾಗಿದ್ದು, ತದಂತರ್ಗತ ವಾಸುದೇವನ ಪೂಜಿಸುತಲಿಹರು. ಸಕಲ ಜಗತ್ತಿನಲ್ಲಿ ವಾಸಮಾಡಿದ ಮುಕ್ತಿ ಪ್ರದಾತೃನಾದ ಹರಿಯನ್ನು ಪೂಜಾಮಾಡುತ್ತಾ ಇರುವರು. ಇಂತಹ ಜಗತ್ತು ಮತ್ತು ಜೀವರಲ್ಲಿ, ಮತ್ತು ನಗಗಳಲ್ಲಿ, ಶಾಲಿಗ್ರಾಮ ಸ್ವಯಂ ವ್ಯಕ್ತಾದಿಗಳಲ್ಲಿಪ್ಪ ಶ್ರೀಹರಿಯು, ಸ್ವಗತ ಭೇದ ವಿವರ್ಜಿತ = ತನ್ನಲ್ಲಿ ತನಗೆ ಭೇದವಿಲ್ಲದೇ ಒಬ್ಬನೇಯಾಗಿ ಇರುವ ಶ್ರೀಹರಿಯನ್ನು ನಾಲ್ಬಗೆ ಪ್ರತೀಕದಿ = ನಾಲ್ಕು ವಿಧವಾದ ಪ್ರತಿಮಾ ಅಂದರೆ

೧ ಪುರುಷ, ೨ ಸ್ತ್ರೀ, ೩ ಆಹಿತ ಪ್ರತೀಕಾಕೃತ ಪ್ರತಿಮಾ, ೪ ಶಾಲಿಗ್ರಾಮ ಸಹಜ ಪ್ರತಿಮಾ, ಇವುಗಳಲ್ಲಿಪ್ಪ ಅಭಿಮಾನಿ ದೇವತೆಗಳು ಶ್ರೀಹರಿಯನ್ನು, ತಿಳಿದು ಪೂಜಿಸೆ, ಅನಿರುದ್ಧ ನಾರಾಯಣ, ಸಂಕರ್ಷಣ ಪ್ರದ್ಯುಮ್ನ, ಟಂಕಿ ಭಾರ್ಗವ ವಾಸುದೇವ ಈ ರೂಪಗಳನ್ನು ಅರಿತು ಪೂಜಾ ಮಾಡಿದರೆ, ಇಗಡ = ಕಷ್ಟತರವಾದ ಸಂಸಾರಾಬ್ಧಿ ದಾಟಿಸಿ = ವಿರಜಾ ಸ್ನಾನದಿಂದ ಲಿಂಗಭಂಗ ಮಾಡಿ ಮುಕ್ತರನ್ನು ಮಾಡುತ್ತಾನೆಂದು ಧ್ಯಾನೋಪಾಸನೆ ಸಂಧಿಯ ಮುಖ್ಯ ಫಲಿತಾರ್ಥವನ್ನು ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ನಗಗಳಭಿಮಾನಿ = ಇದರೊಳಗೆ ಸಾಲಿಗ್ರಾಮ ಬಂತು. ಪರ್ವತಾಭಿಮಾನಿ ಸುರರು, ಸಹಜ = ಅಚಲ, ವಾಸುದೇವ.

**ಭಾವಸೂಚನ :** ನಗೇತಿ ॥ ಸಹಜಾ ಸಾಲಿಗ್ರಾಮ–ಅಚಲ ಪ್ರತಿಮಾ, ಸಾಲ್ಪಗೇತಿ ಸಹಜಾಚಲ ನೈಜ ನೀತಗಳು ॥ ೩೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ನಗ" ಇತಿ ॥ (ವಿಶ್ವ) । "ಇಗಡ" – ದುರ್ಘಟ ॥ ೩೧ ॥

**ಕನ್ನಡಾರ್ಥ**

ಆಹಿತಾಚಲಗಳಲ್ಲಿ ಚಿಂತನೆಯ ಕ್ರಮವನ್ನು ನಿರೂಪಿಸುತ್ತಾರೆ – "ನಗಗಳಭಿಮಾನಿ" ಎಂಬ ಪದ್ಯದಿಂದ, "ಇಗಡ" = ದುರ್ಘಟವಾದ – ಅಂದರೆ – ದಾಟಲು ದುಃಸಾಧ್ಯವಾದ ಎಂದು ಅರ್ಥ. ॥ ೩೧ ।

**ಅವತರಣಿಕಾ :** ಜ್ಞಾನಶೂನ್ಯನಾಗಿ ಧ್ಯಾನೋಪಾಸನೆ ಬಗೆಯನ್ನರಿಯದೇ ಪ್ರಕೃತಿತದ್ಗತತತ್ವ ಇಂದ್ರಿಯ ನಾಡಿಗತ ಭಗವನ್ ಮಾಹಾತ್ಮೆ ಅರಿಯದೇ ತೀರ್ಥಕ್ಷೇತ್ರ ಸ್ನಾನ, ಜಪತಪಹೋಮಾದಿಗಳನ್ನು ಏನುಮಾಡಿದರೂ ಫಲವಿಲ್ಲವೆಂದು ಉಪದೇಶಿಸುತ್ತಾ ಧ್ಯಾನಪ್ರಕ್ರಿಯಾ ಸಂಧಿ ಉಪಸಂಹಾರಗೈಯ್ಯುತ್ತಾರೆ.

ಮೂಲ :

**ಆವಕ್ಷೇತ್ರಕೆ ಪೋದರೇ ನಿ ।**
**ನ್ನಾವ ತೀರ್ಥದಿ ಮುಳುಗಲೇ ನಿ ।**
**ನ್ನಾವ ಜಪತಪ ಹೋಮದಾನವ ಮಾಡಿ ಫಲವೇನು ॥**
**ಶ್ರೀವರ ಜಗನ್ನಾಥ ವಿಠಲನ ।**
**ಈ ವಿಧದಿ ಜಂಗಮ (ವು) ಸ್ಥಾವರ ।**
**ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವನು ॥ ೩೨ ॥**

**ಪದ್ಯಾರ್ಥ :** ಆವಕ್ಷೇತ್ರಕೆ ಪೋದರೇನು = ಯಾವ ಕ್ಷೇತ್ರ ಶ್ರೀ ವೆಂಕಟಾದ್ರಿ ಕಾಶಿ, ಗಯಾ, ಪಂಢರಪುರ, ಉಡುಪಿ ಮುಂತಾದ ಯಾವ ಕ್ಷೇತ್ರಕ್ಕೆ ಪೋಗಿ ಈ ಸುಜ್ಞಾನವಿಲ್ಲದೇ ಮೂರ್ತಿ ಸಂದರುಶನಮಾಡಿದರೂ ಏನು ಫಲವಿಲ್ಲ. ಇನ್ನಾವ ತೀರ್ಥದಿ ಮುಳುಗಲೇನು = ಗಂಗಾದಿ ಯಾವ ತೀರ್ಥಗಳಲ್ಲಿ ಜ್ಞಾನವಿಲ್ಲದೇ ಮುಳುಗಲೇನು ? ಈ ಮುಳುಗು (ಮುಣುಗು) ಬಹು ಸ್ವಾರಸ್ಯವಿಟ್ಟಿರುವರು. ಸ್ನಾನ ಮರ್ಮವರಿಯದೇ ತದ್ಗತ ದೇವತೆ ಭಗದ್ರೂಪಗಳನ್ನರಿಯದೇ-ಸ್ನಾನಮಾಡಿದರೆ ನೀರಿನಲ್ಲಿ ಹರಿ ಮುಳುಗಿಸಿಯೇ ಬಿಡುತ್ತಾನೆ ಎಂಬ ಸೂಚನೆ ದಾಸಾರ್ಯರು ಹೇಳಿದ್ದಾರೆ. ಇನ್ನು ಆವ ಜಪ - ಮಂತ್ರವರ್ಣ ದೇವತೆಗಳನ್ನು ತಿಳಿಯದೇ ಮಂತ್ರಾರ್ಥ ವಿಚಾರಮಾಡಿದೇ, ಮಣಿಯಿಂದ ಮಣಿ ಎಣಿಸಿ ಜಪಮಾಡಿದರೆ ಏನೂ ಫಲವಿಲ್ಲ. ತಪ = ಭಗವನ್ನಾಮ ಮಾಹಾತ್ಮ್ಯ ಶಾಸ್ತ್ರಾಲೋಚನೆ ರೂಪವಾದ ತಪಸ್ಸುಮಾಡದೇ, ಕೇವಲ ಬಿಸಿಲಿನಲ್ಲಿ ಪಂಚಾಗ್ನಿ ಹಾಕಿಕೊಂಡು ತಪಸ್ಸುಮಾಡಿದರೇನೂ ಫಲವಿಲ್ಲ. ಹೋಮ = ಪಂಚಾಗ್ನಿಗತನಾದ ಭಾರ್ಗವಾದಿ ರೂಪಗಳ ಕಾರ್ಯ ಯಜ್ಞ ಆ ಯಜ್ಞಾಭಿಮಾನಿಗಳು ವಾಯುಹರಿಯ ರೂಪ ತತ್ತತ್ಕಾರ್ಯವನ್ನರಿಯದೆ ಅನೇಕ ಆಜ್ಯಚರು ಇವುಗಳಿಂದ ಆಹುತಿಗಳನ್ನು ಕೊಟ್ಟು ಹೋಮಮಾಡಿದರೆ ಏನೂ ಫಲವಿಲ್ಲ. ದಾನವಮಾಡಿ ಫಲವೇನು ? = ಕನ್ಯಾದಾನ ಗೋದಾನ, ಭೂದಾನ ಹಿರಣ್ಯಾದಿ ದಾನಗಳಲ್ಲಿ ದಾನ ಪ್ರತಿಗ್ರಹ ವಿವರವನ್ನರಿಯದೇ ದಾನ ಪದಾರ್ಥ ದಾನಕೊಡುವರು. ತೆಗೆದುಕೊಂಬುವರಲ್ಲಿ ಅಭಿಮಾನಿ ದೇವತೆಗಳು ತದ್ಗತ ಹರಿರೂಪವರಿಯದೇ ಹರಿಯ ವಿಸ್ಮರಣೆಯಿಂದ ಏನೇನೋ ಮಹತ್ವ ಕಾರ್ಯ ಮಾಡಿದರೂ, ಫಲವೇನು? = ಫಲವಿಲ್ಲ. ಆಯಾ ಫಲಗಳು ಜಡಕಾರ್ಯಗಳಿಂದ ಆಗುವದಿಲ್ಲ. ಕಾರಣ - ಶ್ರೀವರ ಜಗನ್ನಾಥವಿಠ್ಠಲ = ಶ್ರೀ ಸಂಪತ್ಕರಳಾದ ಲಕ್ಷ್ಮಿದೇವಿಗೆ ಶ್ರೇಷ್ಠನಾದ ಮತ್ತು ಸಕಲ ಜಗತ್ತಿಗೆ ನಾಥ ಒಡೆಯಸ್ವಾಮಿಯಾದ ವಿಠಲ = ಜ್ಞಾನಶೂನ್ಯರನ್ನು ಜ್ಞಾನಮಾರ್ಗಕ್ಕೆ ಹಚ್ಚುವ ವಿಠ್ಠಲ ನಾಮಕ ಹರಿಯು, ಈ ವಿಧದಿ = ಮೇಲೆ ಈ ೧೧ನೇ ಸಂಧಿಯಲ್ಲಿ ಪೇಳಿದ ಪ್ರಕಾರ, ಜಂಗಮ = ಚಲಿಸತಕ್ಕ ಪಶುಪಕ್ಷ್ಯಾದಿ ಮಾನವಾದಿ ಜೀವರಲ್ಲಿ, ಸ್ಥಾವರ = ಚಲಿಸದೇ ಇರುವ ತೃಣಲತಾ, ವೃಕ್ಷಲತಾದಿ ಜೀವರುಗಳಲ್ಲಿ, ಮತ್ತು ಜಡಗಳಲ್ಲಿ, ಪರಿಪೂರ್ಣನೆಂದರಿಯದ ಮಾನವನು = " ಪೂರ್ಣಸ್ಯ ಪೂರ್ಣ

ಮಾದಾಯ ಪೂರ್ಣಾತ್ಪೂರ್ಣಮುದುಚ್ಯತೇ" ಎಂಬಂತೆ ವ್ಯಾಪಕನು, ವ್ಯಾಪ್ಯನು ಪ್ರೇರಕ ಪ್ರೇರ್ಯ ಜ್ಞಾನಾನಂದ ಗುಣಪೂರ್ಣ ಸರ್ವಕರ್ತಾ ಕಾರಯಿತಾ ಎಂದು ತಿಳಿಯದಿದ್ದ, ಮಾನವನು = ಮನುಷ್ಯನು ಅಜ್ಞಾನಿಯು. ಆವಕ್ಷೇತ್ರಕೆ ಪೋದರೇನೆಂದು ಸಮನ್ವಯ ಮಾಡಬೇಕು. ಶ್ರೀಹರಿಗುರುಗಳು ಪ್ರೇರಿಸಿದಂತೆ ೧೧ನೇ ಸಂಧಿ ಪದ್ಯಾರ್ಥ ದಾಸರು ಬರೆದು ಬರೆಸಿದುದು ಶ್ರೀದಾಸರಂತರ್ಯಾಮಿ ಸಕಲ ತತ್ವೇಶ ವಾಯು ಅಂತರ್ಗತ ಶ್ರೀಕೃಷ್ಣನ ಅಡಿದಾವರೆಗಳಿಗೆ ಸಮರ್ಪಣ

ಶ್ರೀಮಧ್ವೇಶಾರ್ಪಣಮಸ್ತು

**ದ್ರೌಪದೀಶಪತಿ ವಿಠಲರು :** ಆವಕ್ಷೇತ್ರಕೆ. ಮಧ್ವೇಶಾರ್ಪಣಮಸ್ತು.

**ಭಾವಸೂಚನ :** ಸಂಧ್ಯರ್ಥಮಾಹ ಆವೇತಿ ॥ ೩೨

ಇತಿ ಶ್ರೀಮಜ್ಜಗನ್ನಾಥದಾಸಾರ್ಯಕೃತ ಹರಿಕಥಾಮೃತಸಾರಸ್ಯ ಭಾವ ಸೂಚನಾ ವ್ಯಾಖ್ಯಾನೇ ಧ್ಯಾನಪ್ರಕ್ರಿಯಾಸಂಧಿ ಸಮಾಪ್ತ ಶ್ರೀಮಧ್ವೇಶಾರ್ಪಣ ಮಸ್ತು ॥ ೧೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆವ" ಇತಿ ॥ "ಜ್ಞಾನಂ" ತಜ್ಜನಕ ತೀರ್ಥಾಭಿಧಸತ್ಸಂಗತಿಂ ವಾ ವಿನಾ ಯಾವಜ್ಜೀವಮ್ ಅನುಷ್ಠಿತೇನ ತೀರ್ಥಾಟನೇನ ಕಿಂ ಶ್ರೇಯಃ ಸ್ಯಾತ್ ಇತಿ ಭಾವಃ ॥ "ತೇ ಪುನಂತಿ ಉರಕಾಲೇನ" ಇತ್ಯಸ್ಯ ವ್ಯಾವರ್ತ್ಯಚೋದ್ಯಂ ಚೈವಮೇವ ಪ್ರಕಾಶಿಕಾಚಾರ್ಯೈಃ ಪ್ರಾದರ್ಶಿ ॥ ನನು "ಸರ್ವಶೋಧ ಕತ್ವಾತ್" ಇತ್ಯಾದಿನಾ ಹರೇಃ ಏವ ತೀರ್ಥಾಖ್ಯಾ ಶ್ರೂಯತೇ । ನ ಸತ್ಸಂ ಗತೇಃ ॥ ಇತಿ ಚೇತ್ ಅಸ್ತಿ ಮಾನಮತ್ರ । "ತೀರ್ಯತೇ ಯೇನ ತತ್ತೀರ್ಥಂ ತೀರ್ಯತೇ ಸಾಧು ಸಂಗತಃ ॥ ಅತಃ ತತ್ಪರಮಂ ತೀರ್ಥಂ ನ ಜಲಂ ತೀರ್ಥ ಮುಚ್ಯತೇ ॥ ವಾಪೀ ಕೂಪತಟಾಕಾದೌ ಯತ್ರ ಕುತ್ರ ಜಲಾಶಯೇ ॥ ಬಹಿರ್ಮಲ ವಿಶುದ್ಧಿಃ ಸ್ಯಾತ್ ನಾಂತರ್ಮಲ ವಿಶೋಧನಮ್ ॥ ಗಂಗಾದಿ ಪುಣ್ಯತೀರ್ಥಾನಿ ಕಾಲೇ ಚೈವಪುನಂತಿ ಹಿ ॥ ಅದೃಷ್ಟದ್ವಾರತಃ ತಸ್ಮಾತ್ ತತ್ತೀರ್ಥಂ ಸಾಧು ಸಂಗತಿಃ ॥ ಇತಿ ವಿಷ್ಣುರಹಸ್ಯೋಕ್ತಾ ದಶಾಧ್ಯಾಯ ವಚನಮ್ ॥ ಅಧಿಕ ವಿಚಾರಸ್ತು – ದಶಮಪ್ರಕಾಶಿಕಾಯಾಂ ಬೋಧ್ಯಃ ॥ ೩೨ ॥

ಓಮ್ ಇತಿ ಶ್ರೀಮಜ್ಜಗನ್ನಾಥ ದಾಸಕೃತ ಹರಿಕಥಾಮೃತಸಾರ

ಟೀಕಾಯಾಂ ಸೋದೇಶಾನುಗೃಹೀತ ಜಂಬುಖಂಡಿ ಶ್ರೀನಿವಾಸಾಚಾರ್ಯ ತನೂಜ ವಾದಿರಾಜಾಚಾರ್ಯ ವಿರಚಿತಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಧ್ಯಾನಪ್ರಕ್ರಿಯಾಸಂಧಿಃ ಸಮಾಪ್ತಃ ॥ ೧೧ ॥

## ಕನ್ನಡಾರ್ಥ

"ಶ್ರೀವರ ಜಗನ್ನಾಥವಿಠಲನ ಈ ವಿಧದಿ ಸ್ಥಾವರ ಜಂಗಮಗಳೊಳು ಪರಿಪೂರ್ಣನೆಂದರಿಯದಿಹ ಮಾನವನು ಆವಕ್ಷೇತ್ರಕೆ ಪೋದರೇನು ?" ಎಂಬ ಶ್ರೀ ದಾಸವರ್ಯರ ವಚನವು "ಭಗವಂತನ ಜ್ಞಾನ ಅದನ್ನು ಹುಟ್ಟಿಸುವ ಜ್ಞಾನಿಗಳ ಸಂಗತಿಯಿಲ್ಲದೇ ಮಾಡಿರುವ ಜೀವನಾವಧಿ ತೀರ್ಥಯಾತ್ರಾದಿಗಳಿಂದೇನು ಶ್ರೇಯಸ್ಸು ದೊರೆಯುತ್ತದೆ? ಯಾವದೂ ಇಲ್ಲ" ಎಂಬ ಭಾವವನ್ನು ಹೇಳುತ್ತದೆ. "ತೇ ಪುನಂತ್ಯುರುಕಾಲೇನ" ಎಂಬ ಭಾಗವತ ಶ್ಲೋಕವನ್ನು ವಿವರಿಸುವಾಗ ಪ್ರಕಾಶಕಾರರು ಹೀಗೆಯೇ ಅಭಿಪ್ರಾಯವನ್ನು ತೋರಿಸಿರುತ್ತಾರೆ.



ಸರ್ವಶೋಧಕನು – ಶುದ್ಧೀಕರಿಸುವವನು ಹರಿಯೇ ಆಗಿರುವದರಿಂದ ಹರಿಯೇ ತೀರ್ಥವೆಂದೆನಿಸಿಕೊಳ್ಳುತ್ತಾನೆ; ಸತ್ಸಂಗತಿಗೆ ತೀರ್ಥವೆಂದು ಕರೆದಿರುವದಿಲ್ಲ. ಆದುದರಿಂದ ಈ ವ್ಯಾಖ್ಯಾನವು ಹೇಗೆ ಯುಕ್ತ ? ಎಂದು ಶಂಕಿಸಿದರೆ ಸಮಾಧಾನವನ್ನು ಹೇಳುತ್ತೇವೆ.

"ಯಾವುದರಿಂದ ಪಾಪವನ್ನು ದಾಟುತ್ತಾನೋ ಅದು ತೀರ್ಥ; ಸಾಧುಸಂಗದಿಂದ ಪಾಪವನ್ನು ದಾಟುತ್ತಾನೆ. ಆದುದರಿಂದ ಸಾಧು ಸಹವಾಸವು ತೀರ್ಥವೆನ್ನಿಸಿಕೊಳ್ಳುತ್ತದೆ. ಸತ್ಸಂಗತಿಯೇ ಮುಖ್ಯ ತೀರ್ಥ ; ಕೇವಲ ನೀರು ತೀರ್ಥವೆನಿಸದು. ಬಾವಿ - ಕೆರೆ ಮುಂತಾದ ಜಲಾಶಯಗಳಲ್ಲಿ ಮಿಂದರೆ ಹೊರಗಿನ ಕೊಳೆಯು ಮಾತ್ರ ಹೋಗುತ್ತದೆ; ಒಳಗಿನ ಮಲವು ಹೋಗುವದಿಲ್ಲ. ಗಂಗಾದಿ ಪುಣ್ಯತೀರ್ಥಗಳು ಕಾಲ ವಿಶೇಷದಲ್ಲಿ ಪವಿತ್ರಿಸುತ್ತವೆ–ಅಂದರೆ ಗಂಗಾದಿ ತೀರ್ಥಸ್ನಾನದಿಂದ ಅದೃಷ್ಟವುಂಟಾಗಿ ಅದರಿಂದ ಪಾವಿತ್ರ್ಯವು ಬರುತ್ತದೆ. ಸಾಧು ಸಂಗತಿಯು ಜ್ಞಾನವನ್ನು ನಿಮಿತ್ತಮಾಡಿ ತತ್ಕಾಲದಲ್ಲಿ ಅಜ್ಞಾನ ಮುಂತಾದ ಮಲಗಳನ್ನು ಕಳೆದು ಪವಿತ್ರಗೊಳಿಸುವದು. ಆದುದರಿಂದ ಸತ್ಸಂಗತಿಯು ತೀರ್ಥವೆನಿಸಿಕೊಳ್ಳುತ್ತದೆ" ಎಂದು ವಿಷ್ಣುರಹಸ್ಯದ ೧೮ನೆಯ

ಅಧ್ಯಾಯದಲ್ಲಿ ನಿರೂಪಿಸಲಾಗಿರುತ್ತದೆ. ಹೆಚ್ಚಿನ ವಿಚಾರವನ್ನು ದಶಮಸ್ಕಂಧ ಪ್ರಕಾಶಿಕೆಯಲ್ಲಿ ತಿಳಿಯಬೇಕು. ॥ ೩೨ ॥

ಶ್ರೀ ಹರಿಕಥಾಮೃತಸಾರಟೀಕಾ ವ್ಯಾಸದಾಸ ಸಿದ್ಧಾಂತ ಕೌಮುದೀ
ಕನ್ನಡಾರ್ಥಾನುವಾದದಲ್ಲಿ ೧೧ನೆಯ ಧ್ಯಾನಪ್ರಕ್ರಿಯಾಸಂಧಿಯು
ಮುಗಿದುದು.

ಶ್ರೀಮಧ್ವೇಶ ಕೃಷ್ಣಾರ್ಪಿತವಾಗಲಿ



ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ

ಶ್ರೀಗುರುರಾಜೋವಿಜಯತೆ

# ೧೨ ನಾಡೀಪ್ರಕರಣ ಸಂಧಿಯ ಸಾರ

ಶ್ರೀ ಅಪರೋಕ್ಷ ಜ್ಞಾನಿಗಳಾದ ದಾಸಾರ್ಯರು ಹಿಂದಿನ ೧೧ನೇ ಸಂಧಿಯಲ್ಲಿ, ಜಡಪ್ರಕೃತಿ ಲಕ್ಷಣ ಜಡಪ್ರಕೃತಿ ಶ್ರೀಹರಿಯಾಧೀನವಾಗಿ ಜೀವರನ್ನು ಬಂಧಿಸುವ ವಿವರ, ಬಂಧಮೋಚನಕ್ಕೆ ಪ್ರಕೃತಿಯಲ್ಲಿ ನಿಯಮನಮಾಡತಕ್ಕ ಶ್ರೀಹರಿಯ ರೂಪಗುಣಗಳ ಧ್ಯಾನೋಪಾಸನಾ ಇವುಗಳನ್ನು ಸ್ಥೂಲವಾಗಿ ಹೇಳಿ, ಈಗ ಈ ೧೨ನೇ ನಾಡೀ ಪ್ರಕರಣಸಂಧಿಯಲ್ಲಿ ಪ್ರಕೃತಿ ಬಂಧಮೋಚನಕ್ಕೆ ಕಾರಣವಾದ ತೇಜೋಮಯ ಅತೀಂದ್ರಿಯವಾದ ನಾಡಿಗಳು ದೇಹದಲ್ಲಿರತಕ್ಕ ಕ್ರಮ ಬಹಿರಂಗ ತೀರ್ಥಗಳಿದ್ದಂತೆ ಅಂತರಂಗ ನಾಡಿಗಳಲ್ಲಿ ನದನದಿಗಳಿರುವ ಕ್ರಮ, ತೀರ್ಥಸ್ನಾನ, ಸ್ನಾನದಿಂದ ಶುಚಿಯಾಗಿ ಸುಷುಮ್ನಾನಾಡಿ ೩೨ ಕಮಲಗತ ರೂಪಧ್ಯಾನ ಅದರಲ್ಲಿ ಹೃದಯಾಷ್ಟದಳದಲ್ಲಿಪ್ಪ ಬಿಂಬೋಪಾಸನೆ ಕ್ರಮ, ಹಿಂದಿನ (೯)ನೇ ಸಂಧಿಯಲ್ಲಿ ಹೇಳಿದ್ದಾಗ್ಯಾದರೂ, ಈ ಸೂಕ್ಷ್ಮವಾದ ನಾಡಿ ಕಮಲಗಳಲ್ಲಿಯೇ ಸ್ಥೂಲ ದೇಹ ಕ್ಷೇತ್ರದಲ್ಲಿಯೇ ಬಿಂಬನಾದ ಶ್ರೀಹರಿ ಸಂದರುಶನ, ಬಿಂಬೋಪಾಸನ ವಿಧಾನ ಸಮನ್ವಯಾದಿ ಕ್ರಮ ಹೇಳಲು, ನಾಡೀ = ನಾಡಯತೀತಿ ನಾಡೀ = ಊರ್ಧ್ವಕ್ಕೆ ಗಮನಮಾಡುತ್ತವೆ ಕಾರಣ ನಾಡಿ ಎಂತಲೂ, ಈ ತೇಜೋಮಯ ಅತೀಂದ್ರಿಯವಾದ ನಾಡಿಗಳಾದರೂ, ಜಡ, ಇವುಗಳಿಗೆ ಗಮನಶಕ್ತಿ ಕೊಡುವ ವಾಯುರೂಪಗಳು, ತದಂತಸ್ಥ ಶ್ರೀಹರಿ ರೂಪಗಳನ್ನು ಧ್ಯಾನಿಪ ಮಾರ್ಗವು ನಾಡೀದ್ವಾರವೇ ಮುಖ್ಯ.

ಕಾರಣ ಮೊದಲಿಗೆ ಶ್ರೀ ವಿಜಯದಾಸಾರ್ಯರು ರಚಿಸಿದ ಎರಡು ನಾಡೀ ಪ್ರಕರಣ ಸುಳಾದಿ ಚನ್ನಾಗಿ ಮನಮುಟ್ಟಿ ಪಠಿಸಿ–ಗಟ್ಟಿಯಾಗಿ ಒಲಿಸಿ ಬಾಯಿ ಪಾಠಮಾಡಿ, ಸದ್ಗುರುಗಳಿಂದ ಇದರ ವಿವರ ತಿಳಿದರೆ ಈ ನಾಡೀ ಪ್ರಕರಣ ಸಂಧಿಯ ಅರ್ಥವಾಗುತ್ತದೆ. ಕಾರಣ ಇಲ್ಲಿ ಶ್ರೀ ವಿಜಯದಾಸರ ಎರಡು ಸುಳಾದಿ ಕೊಟ್ಟಿದೆ. ಬೇಸರದೆ ಮನಮುಟ್ಟಿ ಪಠಿಸಿ ತಿಳಿದರೆ ಈ ದಾಸನ ಸೇವೆ ಪೂರೈಸಿತೆಂಬ ಆಶೆ ಪೂರೈಸೆ ದಾಸರ ಪಾದವೆ ಗತಿ.

ಸೃಷ್ಟಿಪ್ರಕರಣ ಸುಳಾದಿ ೪೨ - ಪಾನು ೨೭೫

ಸುಳಾದಿ ೪೨ - ರಾಗ ಭೈರವಿ - ಧ್ರುವತಾಳ

ಎಪ್ಪತ್ತೆರಡುಸಾವಿರನಾಡಿ ಅತೀಂದ್ರಿಯ । ಇಪ್ಪವು ದೇಹದೊಳಗೆ ನಾಭಿ ಮೂಲದಲ್ಲಿ । ಒಪ್ಪುತಿವೆ ಕೇಳಿ ಎರಡು ವಿಧವಾಗಿ । ಅಪ್ಪಸವ್ಯಾಸವ್ಯ । ಅರ್ಧರ್ಧಾ ಲೆಖ್ಖದಲ್ಲಿ । ಅಪ್ಪಾರಮಹಿಮನು ಪುರುಷಾಯುಷ ಪ್ರಮಾಣ । ಸ್ತ್ರೀಪುರುಷ ರೂಪದಲ್ಲಿ ಮೆರೆವುತಿಹ । ಇಪ್ಪತ್ತೊಂದುಸಾವಿರ ಆರುನೂರು ಮಂತ್ರ ಜಪಿಸುವ । ಅಪ್ರತಿ ಸೂತ್ರ ವಾಯು ಸತತ ಲಕುಮಿಪತಿಯ । ಅಪ್ಪಣೆ ಯಿಂದಲಿ ಜೀವನ ಕೈಯಿಂದ । ಸುಪುಣ್ಯಮಾಡಿಸುವ ದಾಸೋಹಂ ಎಂದ ನುಡಿಗೆ । ಸಫಲವಾಗುವದು ಒಂದೊಂದು ಕಾಸು ಕೊಟ್ಟರೆ । ಕೊಪ್ಪರಿಗೆ ಧನ ಮಾಡಿ ಉಣಿಸುವ ಜಗದ್ಗುರು । **ಇಪ್ಪತ್ತುನಾಲ್ಕು ನಾಡಿ** ಮೊದಲಾದ ನಾಡಿಯೊಳು । ತಾ ಪ್ರಧಾನವಾಗಿ ಇಪ್ಪವು ಇದರೊಳು । ತಪ್ಪದೇ **ನಾಲ್ಕು ನಾಡಿ ಬಲಗಡೆ ಪೊಂದಿಪ್ಪವು** । ಒಪ್ಪದಿಂದಲಿ ನೋಡಿ ಉಳಿದ ನಾಡಿಗಳು । **ಇಪ್ಪತ್ತು ಇವೆ ಊರ್ಧ್ವವಧೋಮುಖ ವರ್ಧವರ್ಧ** । ಗಪ್ಪನೆ ಮೇಲು ಗಡೆ ಹಬ್ಬಿದ ಹತ್ತು ನಾಡಿ । ಯಪ್ಪೆಸರು ಲಾಲಿಸುವುದು ಶ್ರುತಿ ಸ್ಮೃತಿ ಸಮ್ಮತ । ಅಪ್ರಧಾನನಾಡಿ ಸರ್ವವು ಇದರೊಳು । ಇಪ್ಪದು **ಸುಷುಮ್ನನಾಡಿ** ಶ್ರೇಷ್ಠ । ಅಪ್ಪಡಿಯಾದಿದೆ **ಧ್ಯಾನಕ್ಕೆ ಶ್ರೀಹರಿ । ಬಪ್ಪಸ್ಥಾನವೆ ತಿಳಿದು** ನೋಳ್ಪರಿಗೆ । ಸರ್ಪವೈರಿಕೇತನ ವಿಜಯ ವಿಠ್ಠಲಹರಿಯ । ಆಪನ್ನನಾಗುವನು ತಿಳಿದರೆ(ಯದೆ) ಗತಿಯಿಲ್ಲ ॥ ೧ ॥

॥ ಮಟ್ಟ ತಾಳ ॥ (ಸುಷಾಮ್ನಾ ಸಹ ಹತ್ತು ಇಂದ್ರಿಯಗಳಲ್ಲಿಪ್ಪನಾಡಿ) ೧ ಪಿಂಗಳ, ೨ ಗಾಂಧಾರಿ, ೩ ಲಂಬುಸ(ಶಿಖ) ೪ ಪೂಂಸ, ಹಿಂಗದೆ, ೫ ಹಸ್ತಿನಿ, ೬ ಕುಹ, ೮ ಶಂಕಿನಿ, ೯ ಶಾರದೀ, ೧೦ ಇಡಾ । ಗಂಗೆ ಎನಿಸಿಕೊಂಬ ೧೧ ಬ್ರಹ್ಮನಾಡಿಸಹಿತ । ಅಂಗವಾಗಿ ಇದ್ದ ಹತ್ತು ನಾಡಿಯು ಕಾಣೋ । ಪಿಂಗಳ ಬಲಭಾಗ ಎಡಭಾಗಕ್ಕೆ ಇಡಾ । ಸಂಗತಿಯಾದಂತೆ ಮೂಗಿನಲಿ ಸಂಚಾರ । ತಿಂಗಳ ಸೂರ್ಯಸ್ವರಗಳೆನಿಸುವವು । ಮಂಗಳರಮಣನ್ನ ಚರಣ ಕಾಣುವ ಜ । ನಂಗಳು ಜ್ಞಾನದಲಿ ಸ್ವರಭೇದ ಗ್ರಹಿಸುವದು । ಅಂಗ ಜಪಿತ ಸಮ್ಮ ವಿಜಯವಿಠ್ಠಲ ಅಂತರಂಗದೊಳಗೆ ಇದ್ದು ತನ್ನ ತೋರಿಸಿ ಕೊಡುವ ॥ ೨ ॥

**ತ್ರಿವಿಡಿತಾಳ**

ನಾಸಿಕದಲಿ ಇಡಾ ಪಿಂಗಳಾನಾಡಿಗಳು । ಪೂಂಸ ಲಂಬುಶಿಖಾ ಎರಡು ಕಣ್ಣಿನಲಿ । ಲೇಸು, ಗಾಂಧಾರಿ – ಹಸ್ತಿನಿಯೊಂಬೋನಾಡಿ ಪ್ರ । ಕಾಶವಾಗಿವೆ ನೋಡಿ ಕರ್ಣದಲ್ಲಿ । ಆ ಶಾರದ ಜಿಂಹ್ವೆಯಲ್ಲಿಪ್ಪದು । ಭೂಷಣವಾಗಿದ್ದ ಕುಹವೆ ಗುದದಲ್ಲಿ । ಮೋಸವಿಲ್ಲದೆ ಲಿಂಗದಲ್ಲಿ ಶಂಕಿನಿ ನಾಡಿ ಈ ಸುನಾಡಿಗಳು ಅಲ್ಲೆ ಲಿಪ್ಪವು । ಸುಷುಮ್ನಾನಾಡಿ ಮೂಲಾಧಾರವಿಡಿದು । ಶಾಶಿ ಇಲ್ಲದೆ ಮೂರ್ಧ್ನಿ ತನಕೆ । ಶ್ವಾಸ ಅಲ್ಲಿಂದ ಪೋದವಗೆ ಪೂರ್ಣಜ್ಞಾನ । ಮಿಾಸಲಪದವಿಗೆ ಅರ್ಹ ನಯ್ಯಾ । **ಈ ಸಮಸ್ತ ನಾಡಿಗಳಲ್ಲಿ ಶಿವಪುತ್ರರು । ದಾಸಪ್ರಾಣರು ಮತ್ತೆ ಮುಖ್ಯ ಪ್ರಾಣ ।** ಶ್ರೀಶನ ಸೇವೆಗೋಸುಗಧಿಷ್ಠಾನರಾಗಿ । ಈ ಶರೀರದ ಸ್ಥಿತಿ ನಡೆಸುವರು । ದೇಶಕಾಲ ಬಿಡದೆ ಆವಾವ ಕರ್ಮಗಳು । ಲೇಶ ತಪ್ಪದಂತೆ ಪ್ರೇರಿಪರೋ । **ಲೇಶಿಗೆ ಇವರಯ್ಯಾ ಹೊಲ್ಲಿಗೆ ಇದೆ ನಾಮ ।** ಆಸುರೀ ಜನರಲ್ಲಿ ಮಾಡಿಸುವರು । ಈ ಶುಂಠರಿಗೆ ಮುಖ್ಯ ಕಲಿಪ್ರೇರಕನಾಹ । ವಾಸುದೇವನೆ ಅವಗೆ ಶಿಕ್ಷಕನು । ದೇಶ ಕಾಲ ವ್ಯಾಪ್ತ ವಿಜಯವಿಠ್ಠಲ ಹರಿಯ । ದಾಸರೊಳಗೆ ಮುಖ್ಯ ಪ್ರಾಣಬಲ್ಲಿದ ಕಾಣೊ ॥ ೩ ॥

**ಅಟ್ಟತಾಳ** (ಪ್ರಾಣರೂಪಗಳ ಕಾರ್ಯ)

೧ ಪ್ರಾಣಹೃದಯ ಶ್ವಾಸಕಾರಣ, ೨ ಅ । ಪಾನನು ಮಲಮೂತ್ರ ಬಿಡಿಸುವ ಅಧೋದಿಂದ । ೩ ವ್ಯಾನಕಂಠದಲ್ಲಿ ತೃಷ್ಣೆಯಮಾಳ್ಪ, ೪ ಉ । ದಾನ ತಾಲುಸ್ಥಾನದಲ್ಲಿ ಆಹಾರ । ವಾನು ಭುಂಜಿಸುವ ಆಕಳಿಸುವ । ಈ ನಾಭಿಯಲ್ಲಿ, ೫ ಸಮಾನವಾಯು । ಕೃಶಾನುವಿಗೆ ಬೀಸಿ ದೀಪನಮಾಡುವ । ಏನಂಬೆ ಸಮಸ್ತ ಸೂಕ್ಷ್ಮನಾಡಿಯಲ್ಲಿ । ತಾನಿದ್ದು, ೬ ನಾಗನು ಆಹಾರವ ಕೊಡುತಿಪ್ಪ । ಏಣಿಸಿ (ಎಣಿಸಿ) ಗುಣಿಸದು ಇವ ಇವರಿದ್ಧಂಥ । ಸ್ಥಾನಂಗಳು ಅಲ್ಲಿ ಮಾಡುವ ವ್ಯಾಪಾರ । ಜ್ಞಾನಾಂಬುಧಿ ನಮ್ಮ ವಿಜಯವಿಠ್ಠಲ ಬಲು । ಜಾಣನು ಕಾಣೋ ಜಗದೊಳಗಾಡುವ ॥ ೪ ॥

**ಆದಿತಾಳ**

ಕಣ್ಣಿನಲಿ (೭) ಕೂರ್ಮ ರೆಪ್ಪೆ ಹಾಕಿಸುವ ಮುಚ್ಚಿಸುವ । ಮುನ್ನೆ (೮) ಕೃಕಲ ವಾಯುನಾಶಿಕದಲ್ಲಿ ವಾ । ಸನ್ನೆ ತೆಗೆದುಕೊಂಬ ನಾನಾ ವಿಚಿತ್ರ ನಾದ । (೯) –ದನ್ನಂ (ಧನಂಜಯ)ಯೆಂಬುವದು ಎಂಟು ದಿಕ್ಕಿನ ಶಬ್ದ ।

ಕರ್ಣದಲಿ ಶುಭಾಶುಭ ಕೇಳಿಸುವದು ಬಿನ್ನಣ (೧೦) ದೇವದತ್ತನು ಜಿಂಹ್ವೆಯಲಿ । ಚನ್ನಾಗಿ ವಾಕ್ಯಗಳ ನುಡಿಸುವ ಕೊಡಿಸುವ । ಬನ್ನಬಡಿಸುವರು ಇವರೆ ದೈತ್ಯರೊಳಿದ್ದು । ಗುಣ್ಣಿಸೆ **ದಶವಾಯು** ಪ್ರವರ್ತಿಸುವರು । ಅನ್ನಂತ ಬಗೆಯಲ್ಲಿ ಸಾಧನಮಾಡುತ್ತ । ಅನ್ನಂತ ಜೀವರಾಶಿಯೊಳಗೆ ವಾಸವಾಗಿ । ಭಿನ್ನ ಭಿನ್ನ ಚೇಷ್ಟೆಮಾಡಿಸುವರು ನಿಂದು । **ಇನ್ನು ಇವರಿಗೆ ಅಧಿಷ್ಠಾನ ಮುಖ್ಯ ಪ್ರಾಣ** । ತನ್ನೊಳಗೆ ಸಿರಿಹರಿ ಸಹಿತಾ ಇದ್ದಾ । ಗಣ್ಯವಿಲ್ಲದ ಕರ್ಮ ಮಾಡಿ ಮಾಡಿಸುತಿಪ್ಪನು । ಅನ್ಯದೈವವೆ ಇಲ್ಲ ಈತನೆ ಮುಖ್ಯಕರ್ತ । ಮುನ್ನುಜ ಈ ಪರಿ ತಿಳಿದು ತನ್ನ ಗುರು । ವಿನ್ನ ಮೊದಲು ಮಾಡಿ ಮುಖ್ಯ ಪ್ರಾಣಾಂತರ್ಯಾಮಿ । ಸನ್ಮತಿಯಿಂದ ಸಮರ್ಪಣೆ ಮಾಡಿದರೆ ಪಾ । ವನ್ನನಾಗುವ ತನ್ನ ಕುಲಕೋಟಿ ಕೂಡಿಕೊಂಡು । ಬೆಣ್ಣೆಗಳ್ಳ ನಮ್ಮ ವಿಜಯವಿಠ್ಠಲನ ಕಾ । ರುಣ್ಯ ಪಡೆದು ಮಹಾ ಧನ್ಯರೆನಿಸುವದು ॥೫॥ **ಜತೆ** ॥ ತಿಳಿದು ಈ ಬಗೆಯಿಂದ ಧ್ಯಾನವ ಮಾಡಿರೋ । ಒಲಿವನು ವಿಜಯವಿಠ್ಠಲ ನಾಡಿಯೊಳು ಪೊಳೆವ ॥೬॥

ಇಂತು ಎಪ್ಪತ್ತೆರಡು ಸಾವಿರ ಅತೀಂದ್ರಿಯ ನಾಡಿಗೆ ಮುಖ್ಯ ಮೂಲ ಸುಷುಮ್ನಾಕ್ಕೆ ೧೦ ವಿಭಾಗ ಆಗಿ ದಶೇಂದ್ರಿಯಗಳಲ್ಲಿಪ್ಪ ನಾಡಿಗಳು ೨೪ ತತ್ವ ನಾಡಿಗಳು, ಎಡಬಲ ಸವ್ಯ ಸವ್ಯಾಪಸವ್ಯ ನಾಡಿಗಳು ತದ್ಗತ ಪ್ರಾಣರೂಪಗಳು ೧೦ ವಿಧವಾದ ಕಾರ್ಯ ಮಾಡಿಸುತ್ತಾರೆ. ಇದಕ್ಕೆ ಪ್ರಾಣಾಂತರ್ಯಾಮಿ ಹರಿಯೇ ಮುಖ್ಯ ಕಾರಣ — ಈ ಬಗೆ ನಾಡಿಯಲ್ಲಿ ತಿಳಿದು ಉಪಾಸನೆ ಮಾಡಿದರೆ ಶ್ರೀ ವಿಜಯವಿಠ್ಠಲ ನಾಮಕ ಹರಿಯು ಸುಪ್ರೀತನಾಗಿ ಒಲಿದು, ನಾಡಿಯೊಳಗೆ ಪೊಳೆವನು ಎಂದು ಉಪದೇಶಿಸಿದ್ದಾರೆ. ಮುಂದಿನ ಸುಳಾದಿಯಲ್ಲಿ ಎಪ್ಪತ್ತೆರಡು ಸಾವಿರ ನಾಡಿಯ ವಿಭಾಗ ಹೇಳುತ್ತಾರೆ.

ಸೈ–ಪ್ರ. ಸುಳಾದಿ ಪಾನ ೨೭೯.

ಸುಳಾದಿ ೪೩—ರಾಗ ಮಾರವಿ **ಧ್ರುವತಾಳ**

ಹತ್ತೈದು ವಿಂಶತಿ—ಪ್ಪ್ಯಾಲೆರಡು ಸಾವಿರ । ೧೦ × ೫ = ೫೦+೨೦+೨ = ೭೨) ಮತ್ತೆ ನೂರೊಂದು ನಾಡಿ ದೇಹದೊಳಗೆ । (೭೨೧೦೧) ತಥ್ಯಳಿಸುತ್ತಿಪ್ಪದು ಬಲ ಸವ್ಯವಿಡಿದು ಯಿ । ನ್ನಿತ್ತು ಕೇಳುವದು ನಾಡಿಗಳ ಶಾಖಾ । ಹತ್ತು ಹತ್ತೊಂದು ಮುಖ್ಯ ನಾಡಿಯು ನೂರರಿಂದ । ಬಿತ್ತರಿಸಿ ಗಣಿಸೆ. ಅಯುತಾ ನೂರು । ಸತ್ಯವಾಯಿತು ನೋಡಿ ಇದಕೆ ವಿವರವುಂಟು । ಉತ್ತುಮ ಗುಣದವರು

ತಿಳಿಯಬೇಕು । ಹತ್ತು ಹತ್ತು ಗುಣಿಸಿ ಅದರನ್ನು ಅಷ್ಟರಿಂದ । ಜತ್ತಾಗಿ ಹೆಚ್ಚಿಸಲು ಸಾವಿರವಹದು । ಇತ್ತ ಮುಂದಕೆ ನೂರು ಇಟ್ಟುಕೊಂಡು ಒಂ। ಭತ್ತರಿಂದಲಿ ಗುಣಿಸೆ ಒಂಭತ್ತು ನೂರು । ಸುತ್ತದಿರಿ ಇನ್ನು ತ್ರಯನೂರು ಎಂಟರಿಂದ । ಚಿತ್ತದಲ್ಲಿ ಗುಣಿಸೆ ಆದಾದಿದಕೋಯಿ । ಇಪ್ಪತ್ತುನಾಲ್ಕು ನೂರು ಆ ತರುವಾಯ ಒಂ । ಭತ್ತುಸಾವಿರದ ಆರುನೂರು । ಅರ್ಥಿಯಿಂದಲೆ ಇದೆ ಆರಾರಿಂದ ಗುಣಿಸೆ । ಹತ್ತೈದು ಯೇಳುಸಾವಿರಾರು ನೂರು । ಇತ್ತಂಡದಿಂದ ಪೂರ್ವೋತ್ತರ ನೋಡೆ ಅರ । ವತ್ತೊಂದು ಸಾವಿರೆಂಟೊಂದು ನೂರು । ಮತ್ತೆ ಇದರ ಕೆಳಗೆ ಮ್ಯಾಲಿನ ಅಯುತಾನೂರು । ಇತ್ತರೆ ಸಪ್ತೆರಡು ಅಯುತ ನಾಡಿಯು । ನಿತ್ಯವೆ. ಸರಿ ಇದಕೆ ನೂರೊಂದು ಮುಖ್ಯ ನಾಡಿ । ತತ್ರಳ ಗೊಳ್ಳದೇ ಕೂಡಿಸಲು । ಮತ್ತೆ ವುಳ್ಳದಕೆ ಹೆಚ್ಚು ವಾದಿಷ್ಟೆ ನಾಡಿಗಳು । ಮರ್ತ್ಯಲೋಕದ ಜನರು ಗುಣಿಸಿದರು । ಅತ್ಯಂತ ಮಹಿಮಾ ನಮ್ಮ ವಿಜಯ ವಿಠ್ಠಲರೇಯ । ಸ್ತೋತ್ರ ಮಾಡಿದವರ ಮನಕೆ ಇಂತು ಪೊಳೆವ ॥ ೧॥

## ಮಟ್ಟತಾಳ

ಇನಿತು ನಾಡಿಯ ಶಾಖಾ ಭೇದವನ್ನೆ ತಿಳಿದು । ಗುಣಿಸುವದು ನಿತ್ಯ ಸಕಲರು ಮನದಲ್ಲಿ । ಇನಿತರೊಳಗೆ ಮುಖ್ಯ ನೂರೊಂದು ನಾಡಿ । ಅನಿತರ ಮಧ್ಯದಲಿ ಕೇವಲ ಪೆಸರಾಗಿ । ಮಿನಗುತಿಪ್ಪವು ದ್ವಾದಶನಾಡಿಗಳಲ್ಲಿ । ಕೊನೆ ಮೊದಲೊಂದಾಗಿ ನವದ್ವಾರವೆವಿಡಿದು । ಘನನಾಡಿವೊಂದೇ ಅಡಿ ಅಂಬರ ವ್ಯಾಪ್ತಿ । ತನುವು ವ್ಯಾಪಿಸಿಕೊಂಡದು ವಂದುನಾಡಿ । ಯನು ತಿಳಿವದು ವಂದಿ ನಾಡಿಯು ವಂದೇಶಾ । ವಿನಲಿ ಪೊಂದಿಪ್ಪದು ತಿಳಿದರೆ ಬಲುಸುಲಭ । ಕ್ಷಣ ಬಿಡದಲೆಕಾವ ವಿಜಯವಿಠ್ಠಲರೇಯ । ಚಿನುಮಯನಾಗಿ ಕಾಣಿಸುವನು ವೊಂದರಲ್ಲಿ ॥ ೨॥

## ತ್ರಿವಿಡಿತಾಳ

ಒಂದೊಂದು ನಾಡಿಯಲಿ ಒಂದೊಂದು ನದಿಗಳು । ಕುಂದದೆ ಉಂಟು ಹನ್ನೆರಡರಲ್ಲಿ । ೧ ಮಂದಾಕಿನಿ ಇಡಾನಾಡಿಯಲ್ಲಿ ೨ ಭಾನು । ನಂದನೆ ಪಿಂಗಳಾ ನಾಡಿಯಲ್ಲಿ । ೩ ಗಾಂಧಾರಿಯಲಿ ಉಂಟು ಕಾವೇರಿ ೪ ಹಸ್ತಿನಿಗೆ । ಸಿಂಧುನದಿ ಯೆನ್ನಿ ೫ ತಾಮ್ರಪರ್ಣಿ । ಸಂದಿದೆ ಬಹುಬಗೆ ಲಂಬುಶಿನಾಡಿಯಲ್ಲಿ । ೬ ಛಂದು ಳ್ಳಗೋಮತಿ ಮಧ್ಯನಾಡಿ । ಯಿಂದ ೭ ಗಂಡಿಕೆನೋಡಿ ಸರಸ್ವತೀನಾಡಿಯಲ್ಲಿ ।

೮ ನಂದಕೃಷ್ಣವೇಣಿ ಕುಹದಿ ೯ ಸೋಮ । ನಂದನೆ ತಪತಿ ೧೦ ಶಂಖಿನಿ ನಾಡಿಯಲ್ಲಿ । ವಾಸವೆಂದು ತಿಳಿಯೊ ೧೧ ಗೋದೆ ವಾರುಣಿನಾಡಿಯಲ್ಲಿ । ಅಂದವಾದ ಪೂರ್ಣ ೧೨ ಪೂರ್ಣಪಯಸ್ವಿನಿ । ಯಿಂದ ಪುಟ್ಟಿಸದು ಅಲ್ಲಿಗಲ್ಲಿ । ಪೊಂದಿಕೊಂಡಿಪ್ಪವು ಜ್ಞಾನಿಗಳು ತುತಿಸಿ । ಮಿಂದು ಪರಮಪದವಿಯ ಪಡಕೊಂಬುವರೊ । ವೃಂದಾರಕವಂದ್ಯ ವಿಜಯವಿಠ್ಠಲರೇಯನ । ಸಂದರುಶನಮಾಳ್ಪ ಮಾಹಾತ್ಮ ಬಲ್ಲನು ॥ ೩ ॥

**ಅಟ್ಟತಾಳ**

ಮಹತ್ತತ್ವಾತ್ಮಕ ಬಲಭಾಗದ ನಾಡಿ । ಮಹದೇವತತ್ವಾತ್ಮಕ ಎಡಗಡೆ ನಾಡಿ । ಇಹದನು ನೋಡಿ ಇವಕಿವಕೆ ಮಾನಿಗಳುಂಟು । ಆ ಹಿರಣ್ಯೋದರ ವಾಯು ಇವರ ಪತ್ನಿ । ಮಹಕೇಶಸರ್ಪ ಖಗೇಶ್ವರ ತರುವಾಯ । ರೋಹಿಣಿ ನೀಲ ಮೊದಲಾದ ಸತಿಯರು । ಶ್ರೀಹರಿಗೆ ಹೆಂಡರು ಕಾಣೋ ತಿಳಿವುದು । ಗುಹನ ಜನನಿ ವಾರುಣಿ ಸೌಪರಣಿಯು । ಮೋಹದಿಂದಲಿನಾಡಿ ನಾಡಿಯಲ್ಲಿಪ್ಪರು ರಹಸ್ಯವಿದು ಬಿಚ್ಚಿಬಿಸಾಟದಿರು । ಕುಹಕರಿಗೆ ಪೇಳಿದರೆ ಫಲಿಸದು । ಮೋಹನ್ನ ಮೂರುತಿ ನಮ್ಮ ವಿಜಯವಿಠ್ಠಲರೇಯಾ । ಇಹನೊ ಜ್ಞಾನಾನಂದಮಯನಾಗಿ ॥ ೪ ॥

**ಆದಿತಾಳ**

ಪೊಕ್ಕಳ ಭಾವದಿಂದ ನಾಡಿಗಳೊಂದೊಂದು । ದಿಕ್ಕಿಗೆ ಪೋಗಿಪ್ಪವು ಶೋಧಿಸಿ ನೋಡುವದು । ಮುಕ್ಕಣ್ಣನುತವಾಯು ನಿತ್ಯಜೀವಿಗಳ । ತಕ್ಕ ವ್ಯಾಪಾರವಮಾಡುವ ಬಿಡದೆ ದೇ । ವಕ್ಕಳ ಕೂಡ ತಾನೆ ಹರಿ ಪ್ರೇರಣೆಯಿಂದ । ಭಕ್ತಿ ಭುಕ್ತಿಯಕೊಡುವ ವಂದನೇಕರೂಪನಾಗಿ । ಸಿಕ್ಕಗೊಡನು ತನ್ನ ಭಕ್ತರ ನರಕದಲ್ಲಿ । ರಕ್ಕಸಗಣಕೆ ಕುವೃತ್ತಿಯ ಪ್ರೇರಿಸಿ । ಕಕ್ಕಸಗತಿಯಲ್ಲಿ ಸೇರಿಸುವ ಹರುಷದಲ್ಲಿ । ಸೊಕ್ಕಿದವರ ಗಂಡ ವಿಜಯವಿಠ್ಠಲರೇಯ । ವಕ್ಕುವ ಇದರಂತೆ ಧೇನಿಪ ಸುಜನರಿಗೆ ॥ ೫ ॥

**ಜತೆ**

ನಾಡಿಪ್ರಕರಣವನು ತಿಳಿದು ಕೊಂಡಾಡಲು । ಗೂಡಿನೊಳಗಿದ್ದಂಥ ವಿಜಯವಿಠಲ ಪೊಳಿವ (ನಿಲ್ಪ) ॥ ೬ ॥

ಈ ಎರಡು ಸುಳಾದಿಗಳ ಸಾರಾರ್ಥವನ್ನೇ ಮಥಿಸಿ, ಶ್ರೀ ಜಗನ್ನಾಥ

ದಾಸಾರ್ಯರು, ಐತರೇಯ ತೈತ್ತರೇಯ ಷಟ್ಪ್ರಶ್ನ ಮುಂತಾದ ಉಪನಿಷತ್ತು ಗಳಿಂದ ಕೂಡಿದ ಈ ನಾಡೀಪ್ರಕರಣ ಸಂಧಿಯನ್ನು ಪ್ರಾರಂಭಿಸಿದ್ದಾರೆ.

ಮೊದಲಿಗೆ ಮಂಗಳರೂಪವಾಗಿ ಮುಕ್ತಿಪ್ರದನಾದ ಸರ್ವತ್ರ ವ್ಯಾಪ್ತನಾದ ಶ್ರೀವಾಸುದೇವನು ಬ್ರಹ್ಮವಾಯು ಮೊದಲಾದ ತತ್ವೇಶರಿಂದ ಸೇವೆ ಕೈಕೊಳ್ಳುತ್ತಾ ಈ ಶರೀರದೊಳಗಿರುವ ಮೂವತ್ತಾರು ಸಾವಿರ ನಾಡಿಗಳಲ್ಲಿರುವನು. ಪರೇಶ ಉತ್ತಮನಾದ ನಿರ್ದುಷ್ಟವಾದ ಜ್ಞಾನಾನಂದ ಮೂರ್ತಿಗಳನ್ನು, ಧ್ಯಾನಗೈದು ಉಪಾಸನೆಮಾಡುತ್ತ ಹರಿಮೂರ್ತಿಗಳನ್ನು ನೋಡಿ ಹಿಗ್ಗಿ ಆನಂದಪಡುತ್ತಲಿರು ಎಂದು ಉಪದೇಶವನ್ನು ಮಾಡಿದ್ದಾರೆ. ೭೨ ಸಾವಿರ ನಾಡಿಗಳು ದೇಹದಲ್ಲಿರುವ ವಿವರ ಹೇಳುತ್ತಾರೆ. ಚರಣ ಪಾದಗಳಲ್ಲಿ ೧೨೦೦೦, ಮಧ್ಯ ದೇಹದಲ್ಲಿ ೧೪೦೦೦, ಬಾಹುಗಳಲ್ಲಿ ಈರೆರಡು ೪೦೦೦ ಸಾವಿರ, ಶಿರದೊಳಗೆ ೬೦೦೦ ಒಟ್ಟಗೆ ೩೬೦೦೦ ಸಹಸ್ರ ಬಲಭಾಗ ಪುರುಷ ನಾಡಿಗಳು ಇದರಂತೆ ಎಡಭಾಗಕ್ಕೆ ೩೬೦೦೦ ಸ್ತ್ರೀನಾಡಿಗಳು. ಹೀಗೆ ೭೨ ಸಾವಿರ ನಾಡಿಗಳುಂಟು. ಬಲಭಾಗದಲ್ಲಿಪ್ಪನಾಡಿಗೆ ಹಗಲು ಅಭಿಮಾನಿ ದೇವತೆಗಳು (ಪ್ರಾಣ). ಎಡಗಡೆ ಇಪ್ಪ, ನಾಡಿಗಳಿಗೆ ರಾತ್ರಿ ಅಭಿಮಾನಿದೇವತೆಗಳು(ರಯಿ) ಇರುವರು. ಈ ಮರ್ಮವನ್ನರಿತು ಉಪಾಸನೆಮಾಡುವದು. ಸ್ವರ್ಗವಾಸಿಗಳಾದ ದೇವತೆಗಳು ಬೃಹತಿ = "ಬ್ರಹಂತೋಽಯಸ್ಮಿನ್‌ಗುಣಾಃವೃದ್ಧಿ" ಎಂಬುವಂತೆ ಅನಂತ ಗುಣಪರಿಪೂರ್ಣ ವಾಸುದೇವನೋಪಾಸನೆಮಾಡುವರು. ಈ ವಾಸುದೇವನು ಪುರುಷರೂಪಿ ಆನಂದಮಯನಾದರೂ, ೩೬ ಸಾವಿರ ವಿಜ್ಞಾನಮಯ ಶ್ರೀರೂಪ–ಲಕ್ಷ್ಮಿಬಿಂಬರೂಪಕ್ಕೆ ಶ್ರೀರೂಪ ಎಂತ ಪ್ರಕಾಶ ಸಂಹಿತೆ. ಹೀಗೆ ಸ್ತ್ರೀರೂಪಗಳನ್ನು ಧರಿಸಿ ೩೬ ಸಾವಿರ ಪುರುಷ ೩೬ ಸಹಸ್ರ ಸ್ತ್ರೀರೂಪ ಅರ್ಧನರ ಅರ್ಧನಾರೀ ವೇಷದಿಂದ ೭೨ ಸಾವಿರ ನಾಡಿಗಳೊಳಗಿದ್ದು ದ್ರುಹಿಣ = ಬ್ರಹ್ಮನೇ ಮೊದಲಾಗಿ ಸರ್ವ ಜೀವರನ್ನು ಸಂತೈಸುವನು. ಏಕಂ ಸಂತಂ ಬಹುಧಾಕಲ್ಪಯಂತೀ ಎಂಬ ಪ್ರಮಾಣವನುಸರಿಸಿ ಒಬ್ಬ ಬ್ರಾಹ್ಮಣನ ದೇಹದಲ್ಲಿ ೭೨ ಸಾವಿರ ನಾಡಿಯಲ್ಲಿ ೩೬ ಸಾವಿರ ಪುರುಷರೂಪ ೩೬ ಸಾವಿರ ಸ್ತ್ರೀರೂಪದಿಂದ ಹರಿಯು ಇದ್ದಾನೆಂದು ಚಿಂತಿಸಿ, ಬ್ರಾಹ್ಮಣನ ಪೂಜಾಮಾಡಿ ಆ ಜ್ಞಾನಿಯ ಭೋಜನಮಾಡಿಸಿದರೆ ಪ್ರತಿದಿನದಲ್ಲಿ ೩೬ ಸಾವಿರ ದಂಪತಿಗಳ ಭೋಜನಮಾಡಿಸಿದಷ್ಟು ಪುಣ್ಯ ಬರುತ್ತದೆ. ಪ್ರತಿನಾಡಿಗಳು, ಇರುವ ವಿವರ

ನೂರು ವರುಷಕ್ಕೆ ೩೬ ಸಾವಿರ ದಿವಸಗಳಾಗುತ್ತವೆ. ಇದರಂತೆ ದೇಹದಲ್ಲಿರುವವು. ಅಲ್ಲಿ ಶ್ರೀ ಲಕ್ಷ್ಮೀಸಹಿತ ಹರಿಯು ಇಹನೆಂಬ ಸಮೀಚೀನ ಜ್ಞಾನದಿಂದ ಭೋಜನವಿತ್ತರೆ ೩೬೦೦೦ ದಂಪತಿಗಳರ್ಚನ ಫಲ ಬರುತ್ತದೆ. ಜ್ಞಾನದ ಮಹಿಮೆ ಇನಿತು. “ಜ್ಞಾನಿಗಳೊದನದಿ ಕವಳೊಂದೀಯಲು ನಾನಾಗೋತ್ರ ಗಳುದ್ಧರವು || ಪಾನೀಯಧರುದಕವನು ಶುಕ್ತಿಗೆ ತಾನೆರದಂತೆ ನೋಡಾ ಫಲವು” (ಶ್ರೀಪ್ರಾಣೇಶ ವಿಠ್ಠಲರು) ಜ್ಞಾನವೇ ಅನಂತವಾಗುವದು.

ಇನ್ನು ನಾಡಿಯಲ್ಲಿ ೨೪ ತತ್ವಗಳು, ೨೪ ತತ್ವಾಭಿಮಾನಿ ದೇವತೆಗಳಿರುವರು. ಅವರ ಅಂತರ್ಗತ ಶ್ರೀ ಲಕ್ಷ್ಮೀನಾರಾಯಣನ ರೂಪಗಳನ್ನು ದೇವತೆಗಳು ನೋಡಿ ಆನಂದಪಡುತ್ತಾರೆಂಬ ಸುಜ್ಞಾನವೇ ನಮ್ಮಗಳಿಗೆ ತಾರಕ. ಇಲ್ಲಿ ತಿಳಿಯುವ ಸೂಕ್ಷ್ಮ ವಿಚಾರ ೨೪ ತತ್ವ, ೨೪ ತತ್ವಾಭಿಮಾನಿ ದೇವತೆಗಳಲ್ಲಿ ೨೪ ಕೇಶವಾದಿ ಭಗವದ್ರೂಪಗಳಿಂದ ಹೆಚ್ಚಿಸಿದರೆ, ೭೨ ಸಾವಿರ ನಾಡಿಗಳಲ್ಲಿ ೧೭,೨೮,೦೦೦ ರೂಪ, ಚಿತ್ರಾಕೃತಿಯಾದ ರಮಾಂತರ್ಗತ ರೂಪಗಳು ೧೭,೨೮,೦೦೦ ಕೂಡಿ ೩೪,೫೬,೦೦೦ ರೂಪಗಳನ್ನು ದೇವತೆಗಳು ನೋಡಿ ಸುಖಿಸುವರು. ಮಂಗಳಕರನಾದ ಶ್ರೀಹರಿಯು ಇಷ್ಟು ರೂಪಗಳಿಂದ ವಿಹರಿಪನೆಂದು ತುತಿಸಿದರೆ ಭಕ್ತರ ತೆತ್ತಿಗನಾಗುವನು.

ಮಾಲಾಗತವಾದ ಎಲ್ಲ ಮಣಿಗಳಿಗೆ ಸೂತ್ರದ ದಾರವು ಆಧಾರವಾಗಿರುವಂತೆ ಮಹಾಮಹಿಮನಾದ ಹರಿಯು ಅಣುಮಹದ್ರೂಪಿಯಾಗಿ ಸರ್ವಾಧಾರನಾಗಿ ವಿಹಾರಮಾಳ್ಪನು. ಓಂಕಾರ ಪ್ರತಿಪಾದ್ಯನಾದ ಶ್ರೀಹರಿಯ ಮಹಾ ಮಾಹಾತ್ಮೆ ಇಂತಿದೆ.

ಈ ಸುಷುಮ್ನಾದಿ ಎಲ್ಲ ನಾಡಿಗಳಿಗೆ (ತುಂದಿ) ವೃಷಣಾಸನವೇ ಗಡ್ಡೆಯಾಗಿರುವದು. ಅಲ್ಲಿಂದಲೇ ಸುಷುಮ್ನ ಒಂದೇ ಪಂಚಪ್ರಕಾರದಿಂದ ಒಂದೇ ನಾಡಿಯೆಂದು ಕರೆಸುತ್ತಾ ಅತಿ ಸೂಕ್ಷ್ಮ ರೂಪದಿಂದ ಶಿರಃಪರಿಯಂತರವಾಗಿ ಧಾರಾಳವಾಗಿರುವದು. ಈ ಸುಷುಮ್ನ ಐದು ಭೇದವುಳ್ಳ ಒಂದೇ ನಾಡಿಗೆ ೪ ಪ್ರಭೇದವಾದ ಶಾಖಾ ನಾಡಿಗಳು—೧) ಇಡಾ, ೨) ಪಿಂಗಳಾ, ೩) ಧಾರುಣೀ ೪ ವಜ್ರಿಕಾ; ಇದರಲ್ಲಿ ಇಡಾಂಶಗಳು ೫೦೦ ನಾಡಿಗಳು, ಪಿಂಗಳಾಂಶ ೫೦೦ ನಾಡಿಗಳೇ ಮುಂದೆ ಶಾಖಾ ಬೆಳೆದು ೭೨,೦೦೦ ವಾಗಿರುವವು. ಶ್ರೀ

ವಿಜಯದಾಸರ ಸುಳಾದಿ ಅಧ್ಯಾತ್ಮಮಾಲಾಕಾರರ ವಚನದಂತೆ ಮುಂದೆ ಇದೇ ಸಂಧಿ ಪದ್ಯ (೧೨) ರಲ್ಲಿ ಇದರ ಲೆಕ್ಕವಿಚಾರ ಸವಿಸ್ತರವಾಗಿ ಬರೆದಿದೆ.

ಬಹಿರಂಗದಲ್ಲಿಪ್ಪ ಸುಪ್ರಸಿದ್ಧ ಭಾಗೀರಥ್ಯಾದಿ ನದಿಗಳೇ ದೇವಪೂಜಾ ಕಲಶಾರ್ಚನೆಯಲ್ಲಿ ಗಂಗಾನದಿಗಳ ಅಭಿಮಾನಿ ದೇವತೆಗಳಾಗಿ ತದಂತಸ್ಥ ವಾಯ್ವಂತರ್ಗತ ೧೦೧ ಭಗವದ್ರೂಪಗಳು ಇರುವಂತೆ ಸುಷುಮ್ನಾದಿ ೧೦೧ ಪ್ರಧಾನ ನಾಡಿಗಳಲ್ಲಿ ೧೦೧ ಪ್ರಧಾನ ನದಿಗಳು ಇರುವವು. ಅಲ್ಲಿ ೧೦೧ ಭಗವನ್ಮೂರ್ತಿಗಳಿರುವವು. "ಇಡಾ ಭಾಗೀರಥೀ ಪ್ರೋಕ್ತಾ, ಪಿಂಗಳಾಯ ಮುನಾಸ್ಮೃತಾ ॥ ತಯೋರ್ಮಧ್ಯಗತಾ ನಾಡಿ ಸುಷುಮ್ನಾಖ್ಯಾ ಸರಸ್ವತೀ ॥" ಎಂಬುವ ಪ್ರಮಾಣಾನುಸಾರ ನಾಡಿಗಳಲ್ಲಿ ನದಿಗಳು ಭಗವದ್ರೂಪ ಚಿಂತಿಸಿ, ಈ ರಹಸ್ಯವನ್ನು ಅಲ್ಪ ಜನರಿಗೆ ಪೇಳದೆ ಜ್ಞಾನಿಗಳು ನಾಡಿನದಿಗಳಲ್ಲಿ ಮಿಂದು ಶುಚಿಯಾಗಿ ಹರಿಯನ್ನು ಧ್ಯಾನಮಾಡುವದೆಂದು ವಾಮನಪುರಾಣ ಮಾನಸೀಕ ತೀರ್ಥಸ್ನಾನ ಮಾಹಾತ್ಮೆಯಲ್ಲಿ ಹೇಳಿದ್ದಾರೆ.

ಸ್ಥೂಲದೇಹದಲ್ಲಿ ಮೇಲೆ ಕಾಣಿಸುವ ನರಗಳು ನಾಡಿಗಳಲ್ಲ. ತೇಜೋಮಯವಾಗಿ (ಅತೀಂದ್ರಿಯ) ಕಣ್ಣಿಗೆ ಕಾಣದಂತಿಪ್ಪವು. ಬಲಭಾಗದ ನಾಡಿಗಳು ಮಹತ್ವಾತ್ಮಕವಾದವು. ಎಡಭಾಗದ ನಾಡಿಗಳು ಅಹಂಕಾರ ತತ್ವಾತ್ಮಕವಾದವು. ಬಲಭಾಗದಲ್ಲಿ ಬ್ರಹ್ಮ-ವಾಯು-ವಾಣೀ-ಭಾರತೀದೇವಿಯರು ಋಜುಗಳು. ಎಡಭಾಗದಲ್ಲಿ ಗರುಡ-ಶೇಷ-ರುದ್ರ-ಷಣ್ಮಹಿಷಿಯರು, ಸೌಪರಣೀ-ವಾರುಣೀ-ಪಾರ್ವತೀ ಇಂದ್ರಕಾಮಾದ್ಯರು ಋಜುಪತ್ನಿಯರು ನೆಲಸಿರುವರು. ಸುಷುಮ್ನ ನಾಡಿ ಋಜುವಾಗಿ ಹೋಗಿದೆ ಮತ್ತು ಪೊಕ್ಕಳಿಂದ ಇಡಾ, ಪಿಂಗಳಾ ನಾಡಿಗಳು—ಇಡಾಂಶ ಎಡಭಾಗದಿಂದ ಬಲಕ್ಕೆ ಹೊರಳಿ ಬಲದ ಕಿವಿಯವರೆಗೆ. ಪಿಂಗಳಾಂಶ — ಬಲಭಾಗದಿಂದ ಎಡಭಾಗಕ್ಕೆ ಹೊರಳಿ ಎಡದ ಕಿವಿಯವರೆಗೆ (೪ ಅಂಕಿಯಂತೆ) ಕತ್ತರಿಯೋಪಾದಿಯಲ್ಲಿ ಪಸರಿಸಿ ೧೧ ಇಂದ್ರಿಯಗಳಿಗೆ ಸಂಬಂಧವಾಗಿ ತೇಜೋರೂಪವಾಗಿರುವವು.

ಇಲ್ಲಿ ಶ್ರೀಹರಿಯು ಲಕ್ಷ್ಮೀಸಹಿತನಾಗಿ ವಿಹರಿಸುವನು. ಇದು ಜ್ಞಾನಿಗಳಿಗೆ ಗೋಚರವೇ ಹೊರ್ತಾಗಿ, ಅಜ್ಞಾನಿಗಳಿಂದ ತಿಳಿಯಲು ಶಕ್ಯವಿಲ್ಲ. ಹೇಗೆಂದರೆ ಕುರುಡನು ಚಂದ್ರನ ಸೊಬಗು - ನೋಡಿ, ಸುಖಬಡಬಲ್ಲನೆ? ಎಂದಿಗೂ ಇಲ್ಲ. ಅಜ್ಞಾನಿಗಳಾದ ಕುರುಡ ಸದೃಶರಿಗೆ ಈ ರಹಸ್ಯವಾದ ಶ್ರೀ

ಹರಿಕಥಾಮೃತಸಾರ ಭೋಜನದ ಸುಖ ದೊರಕಲಾರದು. ಜ್ಞಾನಿಗಳಾದ ಭಕ್ತರೆ ಹರಿಕಥಾಮೃತಸಾರ ಉಂಡು ಸುಖಿಸುವರು.

ಸುಷುಮ್ನಾ ನಾಡಿಯಲ್ಲಿ ಮಾತ್ರ ದೈತ್ಯರ ಪ್ರವೇಶವಿಲ್ಲ. ದೈತ್ಯಾದಿಗಳ ಉಪಟಳ ಬಾರದಂತೆ ಉದಾನನಾಮಕ ವಾಯು ಕಾದುಕೊಂಡು, ಸಂಧಾತ ನಾಮಕ ಹರಿಯನ್ನು ಪೂಜಿಸುತ್ತಿರುವನು. ಈ ಸುಷುಮ್ನಾ ನಾಡಿಯಲ್ಲಿಯೇ ಸಪ್ತ ಕಮಲಗಳು ಅಲ್ಲಿಪ್ಪ ಹರಿಯ ಮೂರ್ತಿಗಳುಂಟು. ಹೃದಯಾಷ್ಟದಳ ಕಮಲದಲ್ಲಿ ಅಗ್ರೇಶ ಮೂಲೇಶ ಪ್ರಾದೇಶ ಬಿಂಬೋಪಾಸನೆ ಕ್ರಮ ತಿಳುಹಿಸಲು ನಾಡಿಗಳ ಸವಿಸ್ತರ ತದ್ಗುಣಕಥನ ಹೇಳಿ, ಮುಂದೆ—

ಮಾನವಾದಿ ದೇಹಗಳಲ್ಲಿ ೭೨ ಸಾವಿರ ನಾಡಿಗಳು ಪ್ರಚುರವಾಗಿದ್ದಂತೆ ಇತರ ಪ್ರಾಣಿಗಳಲ್ಲಿ ನಾಡಿಗಳು ಅಪ್ರಚುರವಾಗಿವೆ. ಜಲಟ ಕುಕ್ಕುಟ–ಖೇಟ್ರ, ಜಲಚರಪ್ರಾಣಿ, ತತ್ತಿಯಲ್ಲಿ ಪುಟ್ಟುವ ಅಂಡಜಪ್ರಾಣಿ. ಜರಾಯುಜ–ಸ್ವೇದಜ–ಅಂಡಜ ವೃಕ್ಷಾದಿಗಳು ಉದ್ಭಿಜ ಈ ಜೀವರುಗಳ ಶರೀರದಲ್ಲಿ ಇಷ್ಟು ನಾಡಿಗಳಿದ್ದು ತೇಜೋರೂಪವಾದವು ಕಾಣಿಸಿಕೊಳ್ಳದೆ ಇರುವವು. ಅಲ್ಲಿಯು ಕಮಲೇಕ್ಷಣನಾದ ಶ್ರೀಹರಿಯು ತತ್ವಪತಿಗಳಿಂದ ಕೂಡಿ ಕರ್ಮಗಳನಾಚರಿಸುತ್ತ ತತ್ಫಲಗಳನ್ನುಣ್ಣದೇ ನಿತ್ಯ ಸುಖಪೂರ್ಣನು ಸಂಚರಿಸುವನು. ಈ ಪ್ರಕಾರ ಖೇಚರೋಪಾಸನೆ, ಭೂಚರೋಪಾಸನೆ, ಜಲಚರೋಪಾಸನೆ, ತ್ರಿವಿಧೋಪಾಸನೆ ಮಾಡುತ್ತಲಿರಬೇಕು. ದುರ್ಜನರಿಗೆ ಮಲಿನ ಮಂದಮತಿಯಂತೆ ತೋರುತ್ತಲಿರಬೇಕು. ಮತ್ತು ಜ್ಞಾನಿಗಳನ್ನು ನಿಂದಿಸದೇ ನಾನು ತಿಳಿದವನೆಂದು ಜ್ಞಾನಿಗಳಲ್ಲಿ ಗರ್ವಿಸದೆ ನಮ್ರವಾಗಿದ್ದು, ಜ್ಞಾನಿಗಳಿಂದ ಹೆಚ್ಚಿನ ವಿಷಯಗಳನ್ನು ತಿಳಿಯಬೇಕು.

ಶೀತೋಷ್ಣ ನಿಂದ್ಯಾನಿಂದ್ಯ–ಲಾಭಾಲಾಭಗಳನ್ನು ಸಹಿಸುತ್ತ ದ್ವಂದ್ವಾತೀತನಾಗಿ ಶ್ರೀಹರಿಯನ್ನು ಧೇನಿಸುತ್ತ ಇತರ ಆಲೋಚನೆಗೊಳಗಾಗದೆ ಮದವೇರಿದ ಆನೆಯಂತೆ ನಿರ್ಭಯವಾಗಿ ಸಂಚರಿಸಬೇಕು. ಕಾನನ ಗ್ರಾಮಾದಿಗಳಲ್ಲಿರುವ ಸರ್ವ ಪ್ರಾಣಿಗಳು ಏನೇನು ಕರ್ಮಗಳನ್ನು ಮಾಡುವರೋ ಅವುಗಳೆಲ್ಲ ಶ್ರೀಹರಿಯೆ ಮಾಡಿಸುವನೆಂದು ಮರೆಯದೇ, ಆ ಕ್ರಿಯಾಗಳೆಲ್ಲ ಬಿಂಬಾರ್ಪಣೆ ಮಾಡುವದು. ಹೀಗೆ ಪೂಜಿಸುತ್ತ ಪವನಾಂತರ್ಯಾಮಿ ಶ್ರೀಹರಿಗೆ ಅರ್ಪಿಸಬೇಕು. ಶ್ರೀಹರಿಯು ಸಕಲ ಜೀವರಲ್ಲಿ ಅನಂತ ಕರ್ಮಗಳನ್ನು

ಮಾಡಿದರೂ ಆ ಕರ್ಮಲೇಪ ಹರಿಗೆ ಇಲ್ಲ. "ನಕರ್ಮಣಾ ವರ್ಧತೇ ನೋ ಕನೀಯಾ" ಈ ಶ್ರುತ್ಯರ್ಥ ಗುರುಗಳಿಂದ ತಿಳಿಯಬೇಕು; ಯಾವನಿಗೆ ಕರ್ಮ ಮಾಡುವದರಿಂದ ತ್ರಿವಿಧ ಕರ್ಮಗಳು ವೃದ್ಧಿಯಾಗಿ ಕರ್ಮಬದ್ಧನನ್ನಾಗಿ ಮಾಡುವದಿಲ್ಲವೋ ಅವನು ನೋಕನೀಯಾ = ಕನಿಷ್ಟನಲ್ಲ, ಸರ್ವೋತ್ತಮ. ಇಂತು ಉತ್ತಮನಾದ ಶ್ರೀಹರಿಯೊಬ್ಬನೇ ಶುನಿಸೂಕರಾದಿಗಳಲ್ಲಿದ್ದರೂ ಎಲ್ಲರಲ್ಲೂ ಸಮನಾಗಿದ್ದು ಏಕಮೇವಾದ್ವಿತಿಯನು. ಬಹು ರೂಪದಿಂದ ತಾನು ಕರೆಸುತ್ತ ಅವರವರೊಳಗಿದ್ದು ತಿಳಿಸದಲೇ ರಮಾಬ್ರಹ್ಮಾದಿಗಳ ಸೇವೆ ಕೈಕೊಂಡು ನಿತ್ಯದಲ್ಲಿ ಪೊರೆವನು. ಸಕಲವೂ ಶ್ರೀಹರಿಯ ಪೂಜೆಯೆಂದು ಸ್ಮರಿಸುತ್ತ ಸುಜ್ಞಾನ ಸಂಪಾದಿಸಿ, ಶ್ರೀಹರಿಯ ಬಿಂಬೋಪಾಸನೆಯೇ ಮುಖ್ಯವಾದುದು ಎಂದು ತಿಳಿದು ಮಾಡಲೇಬೇಕು.

ಭೋಗ್ಯವಸ್ತುಗಳು—ಸಕಲ ಜೀವರು ಭುಂಜಿಸತಕ್ಕ ವಸ್ತುಗಳಲ್ಲಿ ತದಾಕಾರ ತಚ್ಛಬ್ದವಾಚ್ಯನಾಗಿ ಇರುವನಲ್ಲದೇ ತಾನೇ ಭೋಗ್ಯಭೋಕ್ತನಾಗಿಯೂ ಭೋಗ್ಯರಸ ಸಾತ್ವಿಕರಸ ಮುಕ್ತಿಯೋಗ್ಯರಿಗೆ ಕೊಟ್ಟು ತಾನು ತನ್ನ ಶುಭ ರಸವನ್ನು ಭುಂಜಿಸುವನು. ರಜತಮೋರಸವಿಭಾಗ ಅಯೋಗ್ಯರಾದ ದೈತ್ಯರಿಗೆ ಕೊಡುವನು. ಅಂದರೆ ಭಾಗ್ಯನಿಧಿಯಾದ ಹರಿಯು ಯೋಗ್ಯರಿಗೆ ವೈರಾಗ್ಯ ಭಕ್ತಿ ಜ್ಞಾನವೀಯುವನು. ಅಯೋಗ್ಯರಾದ ನಿತ್ಯ ಸಂಸಾರಿ ದೈತ್ಯಾದಿಗಳಿಗೆ ಸಂಶಯಜ್ಞಾನ, ವಿಪರೀತಜ್ಞಾನ, ಮಿಥ್ಯಾಜ್ಞಾನವನ್ನಿತ್ತು ತನ್ನಲ್ಲಿ ತನ್ನ ಭಕ್ತರಲ್ಲಿ ದ್ವೇಷಾದಿಗಳನ್ನು ಕೊಡುವನು. ಶ್ರೀಹರಿಯು ವಂಚಕ ಎಂದರೆ ಕಪಟಿಯಲ್ಲ. ಜೀವರ ಯೋಗ್ಯತೆಯಂತೆ ಫಲವೀವನು. ಈ ಚರಾಚರಾತ್ಮಕ ಜಗತ್ತಿನಲ್ಲಿ ನೆಲೆಸಿರುವನು. ಇಂದ್ರಪದವಿಗೆ ಈ ಕಲ್ಪದಲ್ಲಿ ಅನಧಿಕಾರಿಯಾದ ಬಲಿಚಕ್ರವರ್ತಿ ಯಜ್ಞಕ್ಕೆ ವಟುವಾಗಿ ಹರಿಯು ಪೋಗಿ, ಬಲಿಯನ್ನು ವಂಚಿಸಿ ಮೂರು ಪಾದ ಭೂದಾನ ಬೇಡಿದನು. ದಾನ ತೆಗೆದುಕೊಂಬವರಲ್ಲಿ ವಾಮನನು ದಾನ ಕೊಡುವವರಲ್ಲಿ ಮರೀಚಿದಮನ ಶ್ರೀರಾಮನು ಇದ್ದು, ಸುಹಂಸ = ಶುದ್ಧನಾದ ದೋಷದೂರನಾದ ಹರಿಯು ಪ್ರೇರಿಸುವನಾಗಿ ಅವರವರ ಯೋಗ್ಯತೆಯಂತೆ ಜನರ ಅಭಿಲಾಷೆಯನ್ನು ಪೂರೈಸುವನು.

ಇನ್ನು ಅಂತರಂಗದಲ್ಲಿಪ್ಪ ಸರ್ವನಾಡಿಗಳಿಗೆ ವ್ಯಾನವಾಯುದ್ವಾರಾ ಸರ್ವ ರಸಗಳನ್ನೂ ಶ್ರೀಹರಿಯು ಮಾಡುತ್ತಾನೆಂದು ಹೇಳುತ್ತಾರೆ. ಏಕೆಂದರೆ

ಬಹಿರಂಗ ರಸದಿಂದ ನಾಡಿಗಳದ್ವಾರಾ ದೇಹಕ್ಕೆ ಉಪಚಯುವಾದರೆ ದೇಹಧರ್ಮ ನಡೆದು ಸಾಧನೆಗೆ ಕಾರಣವಾಗುವುದು. ಇದೇ ಮುಖ್ಯವೆಂದು ಈ ಮರ್ಮ ವಿವರಿಸುತ್ತಾರೆ. ಈ ರಸವಿಭಾಗ ೪ನೇ ಸಂಧಿಯಲ್ಲಿ ವಿಸ್ತಾರವಾಗಿ ಹೇಳಿದ್ದರೂ ಇಲ್ಲಿ ನಾಡೀ ವಿಚಾರ ಸಮಯದಲ್ಲಿ ಸಂಕ್ಷೇಪವಾಗಿ ದಿಗ್‌ದರ್ಶನಮಾಡಿರುತ್ತಾರೆ. "ಸೃಷ್ಟಿ ಪ್ರಾರಂಭದಲ್ಲಿ ಸರ್ವರಸಂಗಳು । ಸೃಷ್ಟಾ ನಿನ್ನಿಂದಲಿ ನಿರ್ಮಾಣ ಮಾಡಿದನೆಂದು । ಅಷ್ಟರೊಳಗೆ ತಾತ್ವಿಕ ದೇವತೆಗಳ । ಇಟ್ಟು ಇಪ್ಪನೆಂದು ಅಲ್ಲೇ ನೀನೆವಾಸ । ಎಷ್ಟು ಶುಭರಸಾಯನ ಉಳ್ಳ ಪದಾರ್ಥದಲಿ । ತುಷ್ಟನಾಹ ಹರಿ ನಿತ್ಯತೃಪ್ತನೆಂದು" ಶ್ರೀವಿಜಯದಾಸಾರ್ಯರು ರಸವಿಭಾಗ ವಿಚಾರ ಹೇಳಿರುತ್ತಾರೆ. ಇಂತು ನಾಡಿಗಳದ್ವಾರಾ ವರಾಹರೂಪಿಯು ರಸವಿಭಾಗಗಳನ್ನು ಮಾಡಿ ಮುಟ್ಟಿಸುತ್ತ ಶ್ರೀಹರಿಯು, ಅನ್ನ = ಅನ್ನಸ್ವರೂಪ, ಅನ್ನಾದ = ಅನ್ನ ಕೊಡುವವ, ಅನ್ನದ = ಅದ ಭಕ್ಷಣ ಇತಿಧಾತೋ ಅನ್ನ ಉಂಬುವ ಹೀಗೆ ಮೂವರಲ್ಲಿಯೂ ತನ್ಮಯ ತದಾಕಾರ ತದ್ರೂಪ ತಚ್ಛಬ್ದ ವಾಚ್ಯನಾಗಿ, ಅನಿರುದ್ಧ ರೂಪದಿಂದ ಬ್ರಹ್ಮಾದಿಗಳಿಗೆ ಅನ್ನನಾಗಿ, ಹಿರಣ್ಯ ಗರ್ಭನಲ್ಲಿ ನಿಂತು ಸೃಷ್ಟಿಸುವ ವಿಷ್ಣು ಸ್ವಯಂ ತಾನು ಪಾಲಿಸುವ ರುದ್ರನಾಮಕ ನಾಗಿ ಸಂಹರಿಸುವ ಈ ಹರಿಯೆ ಗಾಯತ್ರಿ ಪ್ರತಿಪಾದ್ಯನು. ತ್ರಿಪದ ತ್ರಿದ ಶಾಧ್ಯಕ್ಷ = ಗಾಯತ್ರಿ ಮೂರು ಪಾದಗಳಲ್ಲಿಪ್ಪ ೨೪ ವರ್ಣಾಭಿಮಾನಿಗಳಿಗೆ ಅಧ್ಯಕ್ಷನಾದ ಹರಿಯು, ಅಥವಾ ಸ್ವರ್ಗದಲ್ಲಿಪ್ಪ ದೇವತೆಗಳಿಗೆ ಒಡೆಯನಾದ ವನು. ತ್ರಿಸ್ಥ = ಭೂಃ, ಭುವಃ, ಸ್ವಹಃ ವ್ಯಾಹೃತಿಯಲ್ಲಿಪ್ಪನು ಅಥವಾ ತ್ರಿಸ್ಥ = ಶ್ವೇತದ್ವೀಪ ಅನಂತಾಸನ, ವೈಕುಂಠದಲ್ಲಿರುವ ಹರಿಯೇ, ತ್ರಿಸ್ಥ = ದಕ್ಷಿಣಾಕ್ಷಿ, ಕಂಠ, ಹೃದಯ ಮೂರು ಸ್ಥಾನದಲ್ಲಿರುವ ಅಥವಾ ಜೀವಾಂತ ರ್ಯಾಮಿ, ದೇಹಾಂತರ್ಯಾಮಿ, ಹೊರಗೆ ಸರ್ವತ್ರ ಬ್ರಹ್ಮಾಂಡ ಬಹಿಃ ಬ್ರಹ್ಮಾಂಡ ಅವ್ಯಾಕೃತಾಕಾಶ ಅದಕ್ಕೂ ಮೀರಿ, ಅಪರಿಮಿತವಾದ ಅಣುಮಹ ದ್ರೂಪನೆಂದು ಶ್ರೀಹರಿಯ ಸ್ತೋತ್ರಮಾಡುತ್ತ ಈ ಹರಿಯೇ ತ್ರಿಪಥಗಾಮಿ ನಿಪಿತ = ಗಂಗಾ, ಯಮುನಾ, ಸರಸ್ವತೀ ಮೂರು ಸಂಗಮವಾಗಿ ಪ್ರಯಾಗ ಕ್ಷೇತ್ರದಲ್ಲಿ ಹರಿಯುವ ಮೂರು ನದಿಗಳಿಗೆ ಜನಕನಾಗಿರುವನೇ, ಹೃದಯ ದಲ್ಲಿಪ್ಪ ಇಡಾನಾಡಿಯಲ್ಲಿ ಗಂಗಾ, ಪಿಂಗಳಾನಾಡಿಯಲ್ಲಿ ಯಮುನಾ, ಮಧ್ಯ ದಲ್ಲಿರುವ ಸುಷುಮ್ನಾನಾಡಿಯಲ್ಲಿ ಸರಸ್ವತೀ, ಈ ಮೂರು ನಾಡಿಗಳಲ್ಲಿಪ್ಪನೇ–

ತ್ರಿವಿಕ್ರಮ ರೂಪದಿಂದ ಮೂರು ಲೋಕ ವ್ಯಾಪಿಸಿದನೇ, ಋಕ್‌ಯುಜುಃ ಸಾಮ ಮೂರು ವೇದಗಳಿಂದ ವೇದ್ಯನೇ ಸ್ತುತ್ಯನೇ ಎಂದು ಈ ರಹಸ್ಯಗಳ ನ್ನರಿತು ನಾಡಿಗತರೂಪ ಧ್ಯಾನೋಪಾಸನೆ ಮಾಡುವರನ್ನು ಸಂತತವಾಗಿ ಸುಜ್ಞಾನವಿತ್ತು ಪೊರೆಯುವನು. ಬಿಂಬರೂಪನು ಹೊಳೆದು ಮೋಕ್ಷಾನಂದ ವನ್ನು ಕೊಡುವನು.

ಹೀಗೆ ಅನಂತರೂಪಗಳಿಂದ ಶ್ರೀಹರಿಯು, ತನ್ಮಯ ತದಾಕಾರನಾಗಿ ವ್ಯಾಪ್ತನಾಗಿರುವನು. ಹೇಗೆಂದರೆ, ನೀರಿನಲ್ಲಿ ಉಪ್ಪುಹಾಕಲು ಏಕವೇಳ್ಯೆ ಎಲ್ಲವೂ ಕರಗಿ, ಜಲದೊಳಗೆ ನೀರಿನ ಆಕಾರವಾಗಿರುವಂತೆ, ಉಪ್ಪು, ನೀರು, ಬೇರೆ ಬೇರೆ ಪದಾರ್ಥಗಳಿದ್ದರೂ, ಉಪ್ಪುನೀರಿನಿಂದ ಬೇರೆ ಮಾಡುವದು ಹೇಗೆ ಶಕ್ಯವಿಲ್ಲವೋ ಹಾಗೆಯೆ, ಶ್ರೀಹರಿಯ ರೂಪಗಳು ಓತಪ್ರೋತವಾಗಿ ವ್ಯಾಪಿಸಿರುವವು. ಸಾಕಲ್ಯದಿಂದ ತಿಳಿಯಲು ಶಕ್ಯವಿಲ್ಲ. ಹೀಗೆ ಸರ್ವಜೀವರಲ್ಲಿ ವ್ಯಾಪ್ಯ ವ್ಯಾಪಕನಾಗಿರುವನೆಂದು ಅರಿದು, ಅವನ ಎಲ್ಲ ಕ್ರಿಯಗಳು ಆ ಶ್ರೀಶ ನಂಘ್ರಿಗೆ ಸಮರ್ಪಿಸಬೇಕು.

ದೋಷಗಂಧ ಲೇಶವಿಲ್ಲದವನು, ನಾನಾ ವೇಷಧಾರಕನು, ಜೀವರು ಗಳಂತೆ, ಜಡದಂತೆ ಜಡಾಕಾರನಾಗಿ, ಅನಂತ ವೇಷಧಾರಕನೂ, ಜೀವರ ಸ್ವರೂಪದಂತೆ ತಾನು ಬಿಂಬನಾಗಿ "ಚಿದ್ದೇಹಾಕಾರದಿ ಆನಂದಮ್ಮಯನಾ ಗಿಯೂ, ಶ್ರೀಶಾಂಘ್ರಿಸೇವಿತನಾಗಿ ಭಕ್ತ್ಯೈಕಲಭ್ಯ ಪುರಾತನ ಪುರುಷ ದೇವ ದೈತ್ಯರೊಳಿದ್ದು ಅವರಂತೆ ಆಚರಿಸುವನು. ಕಮಲಬಾಂಧವನಾದ ಸೂರ್ಯನು ಆಕಾಶದಲ್ಲಿ ಉದಿಸಲು, ವೃಕ್ಷಂಗಳ ನೆಳಲು ಪಸರಿಸಿ ಹೇಗೆ ಹಬ್ಬುವವೋ, ಸೂರ್ಯಾಸ್ತಮಾಗಲು ಅಲ್ಲಲ್ಲೇ ನೆಳಲು ಹೇಗೆ ಲೀನವಾಗುವದೋ ಹಾಗೆಯೇ ಶ್ವಸನ ಮುಖ್ಯರಾದ ದೇವತೆಗಳ ಸಹ ಜಗತ್ರಯ ತನ್ನೊಶದೊಳಿಪ್ಪದನ್ನು ತನ್ನ ಉದರದಲ್ಲಿಟ್ಟುಕೊಂಡು ತಾನು ತನ್ನ ಕ್ರಿಯೆಗಳನ್ನು ತೋರ್ಪನು. ಶ್ರೀ ಭೂ ದುರ್ಗೆಯರಿಂದ ಸೇವಿತ ಪಾದಪದ್ಮನು ಪೂರ್ಣಮಹಿಮನು. ಸದ್ಭಕ್ತ್ಯೈಕ ಲಭ್ಯನೂ, ಬ್ರಹ್ಮಾದಿ ಅಮರಗಣದಿಂದ ಪೂಜಿತನಾದ ಪಾದ ಕಮಲಗಳುಳ್ಳ ವನು. ವಾಮನ ಅತಿ ಸುಂದರನು, ಶ್ರೇಷ್ಠನು, ವಾಮನ = ವಟುರೂಪಿ ಹರಿಯು ದಾನವ ತೆಗೆದುಕೊಳ್ಳುವವನು. ರಾಮ = ರಮಂತೆ ಯಸ್ಮಿನ್ ಯೋಗಿನಃ ಯಾವಾತನಲ್ಲಿ ಯೋಗಿಗಳು ರಮಣಮಾಡಿ ಸುಖಿಸುತ್ತಾರೋ

ಇಂಥ ರಾಮ ದಾನ ತೆಗೆದುಕೊಂಬುವರಲ್ಲಿ ರಾಮನು. ಸಂಸಾರಾಮಯಕ್ಕೆ ಔಷಧಿರೂಪಿಯಾದ ಧನ್ವಂತರಿ ಹರಿಯೇ ಮಮಕುಲ ಸ್ವಾಮಿ ಸರ್ವರಿಗೆ ಸ್ವಾಮಿ ಒಡೆಯನೆಂದು ಆತ್ಮೋಪಾಸನೆ ಮಾಡಿ, ಹೇ ಕರುಣಾಳೋ ಸ್ವಾಮಿ ಸಂತೈಸೆನಲು ತನ್ನವರಿದ್ದೆಡೆಗೆ ಬಂದೊದಗುವನು. ದನುಜರೂ ಮತ್ತು ದೇವತೆಗಳೊಳಗಿದ್ದು ಅವರವರ ಅನುಚಿತ ಉಚಿತ ಕರ್ಮಗಳನು ಅವರವರನನುಸರಿಸಿ ಮಾಡುವನು. ಹೇ ಶೇಷವರಪರಿಯಂಕಶಯನ, ಹೇ ವಿಭೀಷಣ ಪ್ರಿಯ (ದೈತ್ಯರಲ್ಲಿ ಭಕ್ತ) ಹೇ ವಿಜಯಸಖ ಎಂದು ಕರೆಯುವ ಜನರಿಗೆ ಇಷ್ಟಾರ್ಥವನ್ನು ಕೊಟ್ಟು ಪೂರೈಸುವನು. ಇಂಥ ಹರಿಯು ಜನನ ಮರಣಾದ್ಯಖಿಳ ದೂರನಾದರೂ, "ಜನಿತೋಥ ವಿಷ್ಣು" ಎಂಬ ಶ್ರುತಿ ಪ್ರತಿಪಾದ್ಯನಾದ ಹರಿಯು ನಮ್ಮ ಸ್ಥೂಲದೇಹದೊಡನೆ ಜನಿಸುವನು. ಆತನ ಪ್ರಾದುರ್ಭಾವ ರೂಪವೆಂದು "ಶ್ರೀವಿಷ್ಣುತೀರ್ಥ"ರ ವಾಕ್ಯ. ನಮ್ಮ ಸಂಗಡವೇ ಜನನ – ಅವತಾರ ಮಾಡಿ, ನಮ್ಮ ರಕ್ಷಣೆಗೋಸುಗ ನಮ್ಮಂತೆ ಜೀವಿಸುವನು ಮತ್ತು ಸಂರಕ್ಷಣೆಯ ಮಾಡುವನು. ಎಲ್ಲ ಕಾಲವಲ್ಲಿಯೂ ಧನವನ್ನು ಸ್ವಾರ್ಥರಹಿತವಾಗಿ ಕಾಯುವ ಸರ್ಪದಂತೆ ಶ್ರೀಹರಿಯು ಅನಿಮಿತ್ತ ಬಾಂಧವನಾಗಿ ರಕ್ಷಿಸುವನು. ತ್ರಿಭುವನೈಕ ಆರಾಧ್ಯ ಶ್ರೀ ಭೂದೇವಿಯರ ಭುಜಗಳಿಂದ ಆಲಿಂಗಿತ ಅಂಗವುಳ್ಳವನಾದರೂ, ಸ್ವಭು = ಅಪರಾಧೀನ ಸತ್ತಾ ಉಳ್ಳವನೆಂದರೆ ಸ್ವತಂತ್ರನೂ ಸುಖಪೂರ್ಣನೂ ಸುವರ್ಣ ವರ್ಣದಂತೆ ಕಾದ ಕಾಂಚನ ವರ್ಣದಿಂದ ಶೋಭಿಸುವವನೂ ಗರುಡಾರೂಢನೂ, ಸಮಸ್ತ ಪ್ರಾಣಿಗಳಿಗೆ ಅವರವರ ಬೇಡಿದಿಷ್ಟಾರ್ಥವನ್ನು ಕೊಡುವವನೂ, ಅನಂತ ಸೂರ್ಯಕೋಟಿ ಪ್ರಕಾಶನೂ, ಚಂದ್ರಕೋಟಿ ಶೀತಲನೂ ಇಂತಹ ಪ್ರಕಾಶಮಾನನಾದರೂ ಚಂದ್ರನಂತೆ ಆನಂದ ಕೊಡುವನು. ಜ್ಞಾನಾನಂದಮೂರ್ತಿ ನಿರಂಜನನೂ ಎಂದು ಸ್ತೋತ್ರಮಾಡಿ ನಮಿಸಿದ ಭಕ್ತರಿಗೆ ಸರ್ವಾಭೀಷ್ಟಗಳನ್ನು ಕೊಡುವನೆಂದು ಹರಿಯ ಅನಂತ ಗುಣಗಳ ಸ್ತೋತ್ರಮಾಡಿ ಮೈಮರೆಮ ಹರುಷಬಟ್ಟ ದಾಸರ ಕರುಣಾದೃಷ್ಟಿ ನಮ್ಮಗಳಲ್ಲಿ ಬಿದ್ದು ಉದ್ಧರಿಸಲಿ.

• ಹೀಗೆ ಅನಂತ ಗುಣೋತ್ಕರ್ಷದಿಂದ ಸ್ತೋತ್ರಗೈದು, ಮುಂದೆ ಪುರುಷಾಯುಷ ನೂರು ವರ್ಷಕಾಲ ನಾಡಿಗಳು ೭೨,೧೦೧ ಇರುವವು. ಇಷ್ಟು ಕಾಲದಲ್ಲಿ ಸಾಧನಮಾಡಿ, ಯಜ್ಞತ್ರಯೀನ ಸಮರ್ಪಣ ಮಾಡುವವೆಂದು ನಿರೂಪಿಸುತ್ತಾರೆ. ಪ್ರತಿನಿತ್ಯ ಪ್ರಾತಃ ೨ ಮಾಧ್ಯಂದಿನ, ೩ ಸಾಯಂಸವನವೆಂದು ಪ್ರಸಿದ್ಧ

ಯಜ್ಞಗಳು ಅಥವಾ ತ್ರಿಕಾಲ ಸಂಧ್ಯೋಪಾಸನೆಯೇ ಹೇಗೆ ಭಗವತ್ ಯಜ್ಞವೋ ಹಾಗೆ ಶತಾಯುವುಳ್ಳ ಪುರುಷನ ಆಯುವನ್ನು ಶ್ರೀಹರಿಗೆ ಸಮರ್ಪಿಸುವದು. ಪ್ರಾತಃ ಸವನದಲ್ಲಿ ೨೪ ವರ್ಷ ಆಯುಸ್ಸು ಮಾಧ್ಯಂದಿನದಲ್ಲಿ ೪೪ ವರ್ಷ, ಸಾಯಂಸವನದಲ್ಲಿ ೪೮ ವರ್ಷ ಹೀಗೆ ೧೧೬ ವರ್ಷ ಆಯುಃಪರಿಗಣನೆ ಮಾಡಿದ್ದಾರೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಈ ಪರಿಗಣನೆ ನಿಯಮ ಜನ್ಮಾರಭ್ಯವಾಗಿ ಚಾಂದ್ರಮಾನ ನಕ್ಷತ್ರ ಮಾನದಂತೆ ವರ್ಷಕ್ಕೆ ೧೦ ತಿಂಗಳು ೧೦ ದಿವಸ ೨೦ ಘಳಿಗೆ ೮ ಪಳವಾಗುತ್ತದೆ. ಇದರಂತೆ ೧೦೦ ವರ್ಷಕ್ಕೆ ೧೧೬ ವರ್ಷ ಆಗುತ್ತದೆ. ಇದೆ ಚಾಂದ್ರಮಾನಾಬ್ದಗಳು ಗ್ರಾಹ್ಯವೆಂಬುದು ಉಪನಿಷತ್ ವಾಕ್ಯ. ಈ ಲೆಕ್ಕ ಹೀಗೆ ಏಕೆಂಬುದು ಪ್ರಮಾಣಗಳು ಸಿಕ್ಕಿಲ್ಲ. ಕಾರಣ ೧೧೬ ವರ್ಷವೇ ಮುಖ್ಯವಾಗಿ ಇಟ್ಟುಕೊಂಡು—

೧ **ಪ್ರಾತಃಸವನ—** ಜನನಾರಭ್ಯ ೨೪ ವರ್ಷ, ಇಲ್ಲಿ ೮ ಜನ ವಸುಗಳಲ್ಲಿ ಅಹಂಕಾರತ್ರಯದಿಂದ ೮ × ೩ = ೨೪ ವಾಯ್ವಂತರ್ಗತ.

ಗಾಯತ್ರಿಛಂದಸ್ಸು ೨೪ ಪ್ರದ್ಯುಮ್ನ ರೂಪ.

೨ **ಮಾಧ್ಯಂದಿನಸವನ—** ೪೪ ವರುಷ, ೨೫ ರಿಂದ ೬೮ ವರ್ಷಪೂರ್ತಿ. ಇಲ್ಲಿ ರುದ್ರಾಂತರ್ಗತ ವಾಯ್ವಂತರ್ಗತ ಸಂಕರ್ಷಣ ರೂಪ.

ಛಂದಸ್ಸು ೪೪ ಸಂಕರ್ಷಣ ರೂಪ.

೩ **ಸಾಯಂಸವನ —** ೬೯ನೇ ವರ್ಷದಿಂದ ೧೧೬ ವರ್ಷದವರೆಗೆ ೪೮ ವರ್ಷ. ಇಲ್ಲಿ ಆದಿತ್ಯಾಂತರ್ಗತ ವಾಯ್ವಸ್ಥ ವಾಸುದೇವರೂಪ ಚಿಂತಿಸಬೇಕು.

ಹೀಗೆ ೨೪ + ೪೪ + ೪೮ = ೧೧೬ ವರ್ಷ ಆಯುಸ್ಸು ಯಜ್ಞತ್ವೇನ ಶ್ರೀಹರಿಗೆ ಸಮರ್ಪಿಸಬೇಕೆಂದು ದಾಸರಾಯರು ಹೇಳಿದ್ದಾರೆ. ಹೀಗೆ ೧೧೬ ವರ್ಷಗಳಲ್ಲಿ ೧೧೬ ರೂಪಗಳಿಂದ ವಸು ರುದ್ರ—ಆದಿತ್ಯರಲ್ಲಿ ಕ್ರೀಡಿಸುವನೆಂದು ಭಗವಂತನಿಗೆ ಯಜ್ಞಸಮರ್ಪಣಾರೂಪ ಉಪಾಸನೆ ಮಾಡಿದರೆ ಅಂತಹ ಸಜ್ಜನರು ಅಪಮೃತ್ಯಾದಿ ದೋಷ ಪರಿಹರಿಸಿಕೊಂಡು ಪೂರ್ಣಾಯು ಪರಿಮಿತನಾಗಿ ಬದುಕಿ ಸಾಧನಮಾಡಿ ಮುಕ್ತಿ ಐದಿದರೆಂದು ಹಿಂದಿನ ಇತಿಹಾಸಗಳಿವೆ. ಒಟ್ಟಿಗೆ ೧೧೬ ವರ್ಷಗಳಿಗೆ ಪ್ರತಿವರ್ಷ ೩೬೦ ದಿವಸಗಳಂತೆ ೧೧೬ × ೩೬೦ ಗುಣಿಸಲು, ೪೧೭೬೦ ಇಷ್ಟು ಹಗಲು, ಇಷ್ಟೆ ೪೧೭೬೦ ರಾತ್ರಿ ರೂಪಗಳು ಒಟ್ಟಿಗೆ ೮೩೫೨೦ ಶ್ರೀಹರಿಯ ರೂಪಗಳು ದೇವತೆಗಳು ಧ್ಯಾನಗೈದು ರೂಪಸಂದರ್ಶಿ

ಸುತ್ತಾರೆಂಬ ಈ ಸುಜ್ಞಾನವು ಮನುಜರಿಗೆ ತಾರಕವಾಗಿರುವುದು. ಭಾರತೀ ಪ್ರಾಣರೊಳಗಿದ್ದು ಭಕ್ತರ ದುರಿತಗಳನ್ನು ಪರಿಹರಿಸುತ್ತಾ, ಹಿಂಕಾರ ನಿಧನ ಸಾಮಗತನಾದ ಹರಿಯು ಪ್ರಥಮ ರೂಪದಿ ವಾಸುದೇವ ಪಿತೃಗಳನ್ನು ಪ್ರೇರೆವ ನೆಂದು ಹೇಳಿದ್ದಾರೆ. ಈ ವಿಷಯ ಶ್ರೀ ಅಡವಿಸ್ವಾಮಿಗಳು-ವಿಷ್ಣುತೀರ್ಥರು ರಚಿಸಿದ ಚತುರ್ದಶಿ ೩ನೇ ಪ್ರಕರಣದಲ್ಲಿ ವಿಸ್ತಾರವಾಗಿದೆ. ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರೂ ವಿಶದವಾಗಿ ಬರೆದಿದ್ದಾರೆ. ಮುಂದೆ ನೋಡು ವದು—

ಹೀಗೆ ಪದ್ಮನಾಭರೂಪಿ ಹರಿಯು ಸರ್ವ ಜೀವಗಳೊಳಿದ್ದು ಕಾರ್ಯ ಮಾಡಿಸುವನಾಗಿದ್ದರೂ ಗುಣತ್ರಯ ವಿವರ್ಜಿತನಾದ ಹರಿಗೆ ಯಾವ ತ್ರಿಗುಣವೂ ಲೇಪವಾಗುವುದಿಲ್ಲ. ಹೇಗೆಂದರೆ ಶುದ್ಧವಾದ ಉಣ್ಣೆಯ ಶಹಲು ಕೆಸರಿನಲ್ಲಿ ಅದ್ದಿ ಚನ್ನಾಗಿ ಮುಣುಗಿಸಿ, ಮೇಲೆ ತೆಗೆದು ಝಾಡಿಸಲು ಕೆಸರು ಹೇಗೆ ಆ ಊರ್ಣಾಂಬರಕ್ಕೆ ಲೇಪವಾಗದೇ ಇರುವದೋ ಹಾಗೆ ಬುದ್ಧಿಪೂರ್ವಕ ತಿಳಿದು ಹರಿಗೆ ಏನು ದೋಷ ಲೇಪವಿಲ್ಲ. ಚಿನ್ಮಯ ನಿತ್ಯ ಸುಖಾತ್ಮನಿಗೆ ಯಾವ ಬಂಧನವೂ ಇಲ್ಲ. ಇಂತು ಶ್ರೀಹರಿ ಸಕಲ ದೋಷದೂರನು. ಶಶಿ ಪಾವಕ ಸೂರ್ಯರ ಅನಂತಾನಂತ ಸಹಸ್ರ ತೇಜಕ್ಕೂ ಮೀರಿದ ಪ್ರಖರವಾದ ತೇಜೋ ಮಯ ಗಾತ್ರನು. ಬ್ರಹ್ಮಾಂಡದೊಳಗಿರುವ ಅಖಿಳ ಚೇತನ ಗಣಕೆ ಸದಾ ತಾನೇ ಸಖ-ಮಿತ್ರನೆಂದೆನಿಸುತ್ತ ಕೌಟಿಲ್ಯರಹಿತನಾಗಿ ಜೀವರ ಸ್ವಭಾವ ಯೋಗ್ಯತೆಯಂತೆ ಅವರಲ್ಲಿರುವನು. ಹೇಗಿರುವನೆಂದರೆ ದೃಷ್ಟಾಂತ ಹೇಳು ತ್ತಾರೆ. ದೇಶಭೇದಗಳಲ್ಲಿರುವ ಘಟ, ಮಠ, ನದಿ, ಸಮುದ್ರ, ವನ, ಮನೆ ಮುಂತಾದವುಗಳಲ್ಲಿ ಆಕಾಶವು ಹೇಗೆ ವ್ಯಾಪಿಸಿರುವದೋ ಅದರಂತೆ ವ್ಯವಧಾನ ವಿಲ್ಲದೆ ಶ್ರೀಹರಿಯು ನಿತ್ಯದಲ್ಲಿ ಶ್ರೀಸಮೇತನಾಗಿ ನಿರವಕಾಶನಾಗಿ-ನಿರಾಶೆಯಿಂದ ಒಂದೂ ಅಪೇಕ್ಷ ಇಲ್ಲದೇ ಸುಖವನ್ನು ಕೊಡುತ್ತ ಸರ್ವಾತ್ಮಕನಾಗಿ ಶೋಭಿಸು ವನು. ಮತ್ತು ಹರೇ ನೀನು ಎಂಥ ಮಹಾತ್ಮನೋ! ಶ್ರೀ ವಿರಂಚಾದಿ ಅಮರ ಗಣದಿಂದ ಸೇವೆಗೊಳ್ಳುವ ಪಾದಪದ್ಮವುಳ್ಳವನಪ್ಪಾ! ಇಂತಹ ಮಹಾತ್ಮನಾದರೂ ಈ ಜಡ ಜೀವರಾಶಿಯಲ್ಲಿ ನೆಲೆಸಿದ್ದು ನಿರವಕಾಶನಾದರೂ ಅವರವರ ಯೋಗ್ಯತೆ ಯಂತೆ ಸಾವಕಾಶನು ಎನಿಸಿ, ನೀನು ನಿನ್ನ ಕಳೇವರ-ದೇಹದಲ್ಲಿ ಇಂಬಿಟ್ಟು ಸಕಲ ತತ್ವೇಶರಿಗೆ ಆಯಾಸ್ಥಾನದಲ್ಲಿ ಇಂಬುಕೊಟ್ಟು, ಸಕಲ ಚೇತನರನ್ನೂ

ಉದರದಲ್ಲಿ ಸಲಹುತ್ತೀಯಪ್ಪಾ! ನೀನು ಕ್ರೀಡಾದಿ ಗುಣವಿಶಿಷ್ಟನು = ಲಕ್ಷ್ಮೀ ದೇವಿಗೆ ರಮಣದಿಂದ ಆನಂದ ಕೊಡುವವನು. ದಾನವ ದೈತ್ಯಾದಿಗಳನ್ನು ಹರಣ ಮಾಡುವ ಪ್ರಭುವೇ, ನೀನು ಜಿತ ಮರಣ, ಮೃತ್ಯುವಿಗೆ ಮೃತ್ಯುವೆನಿಸಿದ ಶ್ರೀ ನಾರಸಿಂಹರೂಪಿ ಹರಿಯೇ ನಿನಗೆ ನಮೋನಮಃ ಎಂದೆಂಬುದಾಗಿ ಮಹಾ ಸ್ತೋತ್ರಗೈದ ಅಪರೋಕ್ಷ ಜ್ಞಾನಿಗಳಿವರು. ದೇಶದಲ್ಲಿ ವ್ಯಾಪ್ತನಾದ ಹರಿಯರೂಪ ಗಳಿಂದ ಅತ್ಯಂತಾಭೇದ ಚಿಂತಿಸಿ, ಇನ್ನು ಕಾಲರೂಪಿ ಪರಮಾತ್ಮನ ಹರಿಯ ರೂಪಗಳನ್ನು ಶ್ವಾಸರೂಪ ಹಂಸಮಂತ್ರಗಳನ್ನು ಪ್ರಾಣದೇವರ ದ್ವಾರಾ ೧೧೬ ವರುಷಗಳಲ್ಲಿ ಎಷ್ಟು ಮಾಡಿಸುತ್ತಾರೆಂಬುದನ್ನೂ ಆಯಾ ಭಗವದ್ರೂಪಗಳ ವಿವರ ವನ್ನೂ ತದುಪಾಸನೆಯ ಕ್ರಮವನ್ನೂ ವಿಶದವಾಗಿ ಮುಂದೆ ೧೫ನೇ ಸಂಧಿಯಲ್ಲಿ ಹೇಳುವರಾದರೂ ಇಲ್ಲಿ ಹರಿಯು ಹಂಸರೂಪಿ ಶ್ವಾಸಮಂತ್ರಗಳನ್ನು ಬಿಂಬನಿಗೆ ಅರ್ಪಿಸುವ ಕ್ರಮ, ದೇಹ ನಾಲ್ಕರಲ್ಲಿ ಬಿಡದೇ ಶ್ವಾಸಮಂತ್ರಗಳ ಕಾಲರೂಪ ಗಳಲ್ಲಿ ಹೇಳಿ ಸಂಧಿಯನ್ನು ಉಪಸಂಹಾರಗೈಯ್ಯುತ್ತಾರೆ. ಒಟ್ಟನಮೇಲೆ ನಾಡಿಗಳಲ್ಲಿಪ್ಪ ನದಿಗಳು ಭಗವದ್ರೂಪ ಕಮಲಗತ ಬಿಂಬೋಪಾಸನೆ ನಾಡಿ ಗಳಿಗೆ ರಸವಿಭಾಗಗೈವ ಅನ್ನರೂಪ, ದೇಶಕಾಲಗಳಲ್ಲಿಪ್ಪ ಹರಿಯ ಸದುಪಾಸನೆ ಪೇಳಿದ್ದಾರೆ. ಶ್ರೀಲಕ್ಷ್ಮೀಪತಿಯಾದ, ಜಗತ್ತಿಗೆ ನಾಥನಾದ, ಜಗತ್ತಿನಲ್ಲಿ ವ್ಯಾಪಿಸಿದ, ಜಗನ್ನಾಥವಿಠಲ ಬಿಂಬರೂಪಿ ಹರಿಯು ತಾನೇ ದಯಮಾಡಿ ಅನುಗ್ರಹಿಸಿ, ವದನದೊಳು ನೆಲೆಸಿದ್ದು ಶ್ರೀಹರಿಯು ನುಡಿಸಿದಂತೆ ನಾನು ನುಡಿದೆನು. ಬುಧ ಜನರು ಕೇಳಿ ಆನಂದ ಪಡೆಯಿರಿ. ಹರಿಯೇ ವಕ್ತಾ, ಇದರಲ್ಲಿ ಸಾಧುಲಿಂಗ ಪ್ರದರ್ಶಕರು ಎಂದರೆ ಜ್ಞಾನಿಗಳಂತೆ ವೇಷ ಹಾಕಿದವರು ದುರ್ಜನರು ನಿಷೇಧಮಾಡಿದರೆ ಮಾಡಲಿ. ಹರಿ ನುಡಿಸಿದಂತೆ ನುಡಿದಮೇಲೆ ಎನ್ನ ಅಪರಾಧವೇನಿರುವದು ? ಜ್ಞಾನಿಗಳೇ ವಿಚಾರಿಸಿ ಪೇಳಿರಿ" ಎಂದು ಸಂತರನ್ನು ಮೊರೆಪೊಕ್ಕ ಕರುಣಾಳುಗಳಾದ ದಾಸರು ಸಂಧಿಸಾರವನ್ನು ಬರೆದು ಬರೆಸಿದರು.

ಶ್ರೀಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು

॥ ಶ್ರೀ ರಾಘವೇಂದ್ರಗುರು, ಶ್ರೀ ವರದೇಂದ್ರಗುರು ॥

# ೧೨ ನಾಡೀಪ್ರಕರಣ ಸಂಧಿ

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ಮೂಲ :

**ವಾಸುದೇವನು ಪ್ರಾಣಮುಖ ತ ।**
**ತ್ವೇಶರಿಂದಲಿ ಸೇವೆ ಕೈಕೊಳು ।**
**ತೀ ಶರೀರದೊಳಿಪ್ಪ ಮೂವತ್ತಾರು ಸಾಹಸ್ರ ॥**
**ಈಸು ನಾಡಿಗಳೊಳಗೆ ಶ್ರೀ ಭೂ ।**
**ವಿಾಸಮೇತ ವಿಹಾರಗೈಪ ಪ ।**
**ರೇಶನಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು ॥ ೧ ॥**

**ಅವತರಣಿಕಾ :** ಹಿಂದೆ ೧೧ನೇ ಸಂಧಿಯಲ್ಲಿ ಪ್ರಕೃತಿಗುಣ ತದ್ಧರ್ಮ ಪ್ರವರ್ತಕ ಶ್ರೀಹರಿಯೇ ತಾನು ಅಷ್ಟಪ್ರಕೃತಿಗಳನ್ನು ತನ್ನಾಧೀನದಲ್ಲಿಟ್ಟುಕೊಂಡು ಆಯಾ ರೂಪಗಳಿಂದ ಕಾರ್ಯಮಾಡಿ ಮಾಡಿಸುವನೆಂಬ ಧ್ಯಾನೋಪಾಸನೆ ಹೇಳಿದರು. ಪ್ರಾಕೃತವಾದ ಸ್ಥೂಲದೇಹದಲ್ಲಿ ತೇಜೋಮಯವಾದ ಪ್ರಾಕೃತ ನಾಡಿಗಳೇನು; ನಾಡಿಗಳಿಂದಲೇ ಸ್ಥೂಲ ದೇಹಕ್ಕೆ ವ್ಯಾಸನಾಮಕ ಪ್ರಾಣ, ರಸವಿಭಾಗಮಾಡಿ ಪುಷ್ಟಿ ತಂದೀವನು ಈ ನಾಡಿಗಳಲ್ಲಿಪ್ಪ ನದಿಗಳು ಅಲ್ಲಿಪ್ಪ ಕಮಲಗಳು (೩೨) ಅಲ್ಲಿಪ್ಪ ಹರಿಮೂರ್ತಿಗಳ ಧ್ಯಾನ ವಿಚಾರ ಹಿಂದೆ ೯ನೇ ಸಂಧಿಯಲ್ಲಿ ಹೇಳಿದಾಗ್ಯೂ ಈಗ ಅದನ್ನು ವಿಸ್ತರಿಸುತ್ತಾರೆ.

**ಪದ್ಯಾರ್ಥ :** ವಾಸುದೇವನು = ಸಮಸ್ತ ಜಗತ್ತಿನಲ್ಲಿ ವ್ಯಾಪಿಸಿದ - ಮುಕ್ತಿಪ್ರದನಾದ ಹರಿಯು, ಪ್ರಾಣಮುಖ ತತ್ವೇಶರಿಂದ = ಮಹತ್ತತ್ವಾಭಿಮಾನಿ ಪ್ರಾಣದೇವರೆ ಮೊದಲಾಗಿ ೨೪ ತತ್ತ್ವ ಅಧಿಪತಿಗಳಿಂದ ಸೇವೆ, ಕೈಕೊಳುತ = ಸೇವಾ ಮಾಡಿಸಿಕೊಳ್ಳುತ್ತಾ, ಈ ಶರೀರದೊಳಿಪ್ಪ = ಈ ಅಂದರೆ ಇದೇ ಸ್ಥೂಲ ಶರೀರ - ದೇಹದೊಳಗಿರುವ ಮೂವತ್ತಾರು ಸಹಸ್ರ ನಾಡಿಗಳೊಳಗೆ, ನಾಡಿ = ನಾಡಯತೀತಿ ನಾಡೀ = ಯಾವದು ಗಮನ ಮಾಡಿಸುತ್ತದೊ, ಗಮನ ಮಾಡುತ್ತದೆಯೋ ಅದಕ್ಕೆ ನಾಡೀ ಎಂದು ವಿಗ್ರಹ. ಕೋಶ. ದೇಹಕ್ಕೆ ಸಕಲ ರಸಗಳಿಂದ ಗಮನಿಸಿ ಆಯಾ ಇಂದ್ರಿಯಗಳಿಗೆ

ಪುಷ್ಟಿಮಾಡುವದರಿಂದ ನಾಡೀ ಎಂದು ಹೆಸರು. ಇವು ಪ್ರಾಕೃತವಾದರೂ ತೇಜೋಮಯವು, ಕಣ್ಣಿಗೆ ಕಾಣುವದಿಲ್ಲ. ದೇಹದಲ್ಲಿ ೭೬ ಸಾವಿರ ನಾಡಿಗಳುಂಟು. ಪುರುಷ ನಾಡಿಗಳಲ್ಲಿ ವಾಸುದೇವನು ಶ್ರೀ ಭೂದೇವಿಯರಿಂದ ಕೂಡಿಕೊಂಡು, ವಿಹಾರಗೈಪ = ಸಂತೋಷದಿಂದ ಕ್ರೀಡಾ ಮಾಡುತ್ತಾನೆ. ಪರೇಶ = ಪರ ಉತ್ತಮಳಾದ ಲಕ್ಷ್ಮೀದೇವಿಯರಿಗೆ ಒಡೆಯ. ಇಂಥ ಪರೇಶನು ಅಮಲ = ನಿರ್ದುಷ್ಟ ಸ್ವಚ್ಛ ದೋಷರಹಿತವಾದ, ಸುಮೂರ್ತಿಗಳ = ಸಮಿಚೀನವಾದ ಸಚ್ಚಿದಾನಂದ ವಿಗ್ರಹ ಮೂರ್ತಿಗಳ ನಾಡಿಗತ ರೂಪಗಳ, ಚಿಂತಿಸುತ ಹಿಗ್ಗುತಿರು = ಚಿಂತನೆ ಧ್ಯಾನಮಾಡುತ್ತ ಸಂತೋಷಪಡುತ್ತಿರು. ನಾಡಿಗತ ಕಮಲಗಳಲ್ಲಿಯೇ ಭಗವಂತನ ಇರುವಿಕೆ, ಭಗವಧ್ಯಾನ ಮುಖ್ಯವೆಂದು ಹೇಳಿದಂತಾಯಿತು.

**ದ್ರೌಪದೀಶಪತಿ ವಿಠಲರು :** ವಾಸುದೇವನು.

**ಭಾವಸೂಚನ :** ಇದಾನೀಂ ಸ್ವೋತ್ತಮ ಶರೀರನಾಡಿ ತದ್ಗತ ಶ್ರೀ ಮುಕುಂದ ಮನೋರಮ ರೂಪಾಣ್ಯನುವರ್ಗಯನ್ ನಾಡೀಪ್ರಕರಣ ಸಂಧಿಮಾರಭ್ಯತೇ ॥ ವಾಸುದೇವೇತಿ ॥ ತದುಕ್ತಂ ಮಂಜೂಷಾಯಾಂ ॥ ಭಾವಿನಿ.

ಮೂಲ :

**ನಾಡಿಗತ ನದನದಿಗಳಲಿ ಮನೆ ।**
**ಮಾಡಿಕೊಂಡಿಹ ಹರಿಯ ರೂಪದ ।**
**ಜಾಡುಗಳ ಸನ್ಮನದಿ ಸ್ಮರಿಸುತ ಪಾಡಲಾಕ್ಷಣದೀ ॥**
**ರೂಢಿಯೊಳಗಿಹ ನಿಖಿಳ ನದಿಯಲಿ ।**
**ಗಾಢ ಸ್ನಾತಿಯ ನೆನಿಸಿ ಪರಮನ ।**
**ನೋಡುವದಕವಕಾಶ ಕೊಡುತಲಿ ತನ್ನೆ ನೀಡುವನು ॥೧೨॥**

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಯದ್ ಭೋಜನಸಂಧಿಮುಖೇ ಶ್ರೀರಮಣೋದ್ಭೂತಲೀಲಾ ಅರ್ಧನಾರೀನರಾತ್ಮನಾ ದ್ವಾಸಪ್ತತಿ ಸಹಸ್ರ ನಾಡ್ಯವಚ್ಛೇದೇನ ಕೀರ್ತಿತಾ ತತ್ಪ್ರಕ್ರಿಯಾಂ ವಿವರಿತುಂ ಏತತ್‌ಸಂಧಿಂ ಉಪಕ್ರಮತೇ – **"ವಾಸುದೇವನು"** ಇತಿ ॥ ಶ್ರುತ್ಯಾ ಅಹರಭಿಪ್ರಾಯೇಣ ಯಾವತಾಮುಕ್ತಿಃ ತದಭಿಪ್ರಾಯೇಣೋಕ್ತಮ್ "ಈಶರೀರ" ಇತಿ ॥೧॥

## ಕನ್ನಡಾರ್ಥ

ಭೋಜನಸಂಧಿಯ ಆರಂಭದಲ್ಲಿ ಶ್ರೀಹರಿಯು ಅರ್ಧನಾರೀನರಾತ್ಮಕ ರೂಪದಿಂದ ೭೨೦೦೦ ನಾಡಿಗಳಲ್ಲಿದ್ದು ಮಾಡುವ ಲೀಲೆಯು ಹೇಳಲ್ಪಟ್ಟಿರುತ್ತದೆ. ನಾಡಿಗಳಲ್ಲಿದ್ದು ವಿಹಾರಮಾಡುವ ನಾಡೀಗತ ಭಗವದ್ರೂಪ ಪ್ರಕ್ರಿಯೆಯನ್ನು ವಿಶದವಾಗಿ ನಿರೂಪಿಸಲು ದಾಸರಾಯರು ಈ ಸಂಧಿಯನ್ನು ಉಪಕ್ರಮಿಸುತ್ತಾರೆ—"ವಾಸುದೇವನು" ಎಂಬ ಪದ್ಯದಿಂದ.

"ಈ ಶರೀರದಲ್ಲಿ ೩೬೦೦೦ ನಾಡಿಗಳಿರುವವು; ಅವುಗಳಲ್ಲಿ ಶ್ರೀಹರಿಯು ಶ್ರೀ ಭೂದೇವಿಯರಿಂದ ಸಮೇತನಾಗಿ ಇರುತ್ತಾನೆ" ಎಂದು ಹೇಳಿರುತ್ತಾರೆ. ಇಲ್ಲಿ ಈ ಶರೀರದಲ್ಲಿ ಬಲಭಾಗದಲ್ಲಿ ಅಹರಭಿಮಾನಿಗಳೆಂದು (ಅಹಃ ಎಂದು) ಪ್ರಸಿದ್ಧವಾದ ನಾಡಿಗಳು ೩೬೦೦೦ ಎಂದು ಅರ್ಥಮಾಡಿಕೊಳ್ಳಬೇಕು. ಇಲ್ಲದಿದ್ದರೆ– ಈ ಶರೀರದಲ್ಲಿರುವ ಎಡ ಬಲ ಭಾಗಗಳಲ್ಲಿರುವ ರಾತ್ರಿ ಅಹ ಮಾನಿಗಳಾದ ನಾಡಿಗಳು ಒಟ್ಟು ೭೨೦೦೦ ಗಳಾಗುವದರಿಂದ ೩೬೦೦೦ ಎಂದು ಒಟ್ಟು ಸಂಖ್ಯೆಯನ್ನು ನಿಗಮಿಸಿ ಹೇಳುವುದು ಸರಿಯೆನಿಸಲಾರದು. ಬಲಪಾರ್ಶ್ವದ ಅಹರ್ಮಾನಿ ನಾಡಿಗಳ ಸಂಖ್ಯೆಯು "೩೬೦೦೦" ಎಂದು ಅರ್ಥಮಾಡಿಕೊಂಡರೆ ವಿರೋಧದ ಸಂಭವವೇ ಇರುವದಿಲ್ಲ ॥೧॥

**ಅವತರಣಿಕಾ :** ದೇಹಗಳ ಆಯಾ ಅವಯವಗಳಲ್ಲಿ ನಾಡಿಗಳು ಎಷ್ಟೆಷ್ಟು ಇರುವವೆಂಬ ವಿವರವು, ಆ ನಾಡಿಗಳಲ್ಲಿಪ್ಪ ರಾತ್ರಿ ಹಗಲಿಗೆ ಅಭಿಮಾನಿಗಳಾಗಿರುವ ದೇವತೆಗಳನ್ನು ತದಂತರ್ಗತ ಹರಿಯ ರೂಪಗಳನ್ನರಿತು ಉಪಾಸನೆಗೈವರು ದೇವತೆಗಳ ಸ್ಥಾನವೈದುವರೆಂದು ವಿವರಿಸುತ್ತಾರೆ.

ಮೂಲ :

**ಚರಣಗಳೊಳಿಹ ನಾಡಿಗಳು ಹ ।**
**ನ್ನೆರಡುಸಾವಿರ ಮಧ್ಯದೇಹದೊ ।**
**ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರೆರಡು ॥**
**ಶಿರದೊಳಾರು ಸಹಸ್ರ ಚಿಂತಿಸಿ ।**
**ಇರಳು ಹಗಲಭಿಮಾನಿದಿವಿಜರ ।**
**ನರಿತುಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು ॥ ೨ ॥**

**ಪದ್ಯಾರ್ಥ :** ಈ ಸ್ಥೂಲ ದೇಹದ ಚರಣಗಳೊಳು = ಕಟ್ಯಾರಂಭಿಸಿ

ಪಾದದವರೆಗೆ ೧೨೦೦೦ ಸಾವಿರ, ಮಧ್ಯದೇಹ = ನಾಭಿ ಆರಂಭಿಸಿ ಕಂಠಪರಿಯಂತರ ೧೪೦೦೦ ಸಾವಿರ, ಎರಡೂ ಬಾಹು-ತೋಳುಗಳಲ್ಲಿ ಎರಡೆರಡು ಸಹಸ್ರದಂತೆ ೪೦೦೦, ಶಿರದೊಳಾರು ಸಹಸ್ರ-ಮೂರ್ಧ್ನಿಯಲ್ಲಿ ೬೦೦೦ ಸಾವಿರ, ಹೀಗೆ ಒಟ್ಟಿಗೆ ೩೬೦೦೦ ಸಾವಿರ ನಾಡಿಗಳಲ್ಲಿ, ಇರಳು ಹಗಲಭಿಮಾನಿ ದೇವತೆಗಳನರಿತು = ಇರಳು = ರಾತ್ರಿಗೆ ರಿಯಿ = ಭಾರತೀದೇವಿಯರು ಅಭಿಮಾನಿಗಳು, ಹಗಲಿಗೆ ಪ್ರಾಣದೇವರು, ಹೀಗೆ ಬಲಭಾಗ ೩೬೦೦೦ ನಾಡಿಗಳು, ಪುರುಷಾತ್ಮಕ ನಾಡಿಗಳಲ್ಲಿ ಆನಂದಮಯ ಪುರುಷರೂಪ, ಎಡಗಡೆ ರಾತ್ರಿ ಅಭಿಮಾನಿದೇವತೆಗಳ ನಾಡಿಗಳ ಭಾರತ್ಯಂತರ್ಗತ ಸ್ತ್ರೀರೂಪ. ಹರಿಯ ಶ್ರೀರೂಪ ವಿಜ್ಞಾನಮಯ ರೂಪ, ಇವುಗಳನರಿತುಪಾಸನೆಗೈವರು = ತಿಳಿದು ಧ್ಯಾನಪೂರ್ವಕ ಉಪಾಸನೆ ಮಾಡುವರು, ಇಳೆಯೊಳು = ಸಾಧನ ಭೂಭಾಗ ಭರತಖಂಡದೊಳಿದ್ದರೂ, ಸ್ವರ್ಗವಾಸಿಗಳು = ಸ್ವರ್ಗದಲ್ಲಿರತಕ್ಕ ದೇವತೆಗಳಿಗೆ ಸಮಾನರು, ದೇವತಾ ಜ್ಞಾನಸಂಪನ್ನರೆಂದು ಫಲಿತಾರ್ಥ.

**ದ್ರೌಪದೀಶಪತಿ ವಿಠಲರು :** ಚರಣ ೧೨೦೦೦, ಮಧ್ಯದೇಹ ೧೪೦೦೦, ಬಾಹು ೪೦೦೦, ಶೀರ್ಷ ೬೦೦೦—ಹೀಗೆ ಪುರುಷ ೩೬೦೦೦ ಹಗಲು ಅಭಿಮಾನಿ ಸ್ತ್ರೀ ೩೬೦೦೦ ರಾತ್ರಿ ಅಭಿಮಾನಿ, ಪರಮಾತ್ಮ ಧಾರಣಮಾಡಿ ೭೨೦೦೦ ರೂಪದಿಂದ ಇರುತ್ತಾನೆಂದು ತಿಳಿದವ ಸ್ವರ್ಗವಾಸಿ ॥ ೨ ॥

**ಭಾವಸೂಚನ :** ಚರಣೇತಿ ॥ ತದುಕ್ತಂ ವಾಯುಪುರಾಣೆ ॥ ಪಾದೌದ್ವಿಷಟ್ ಸಹಸ್ರಂತು ಮಧ್ಯೈಚೈವ ಚತುರ್ದಶಾ ॥ ಬಾಹ್ವೌಚತುಃ ಸಹಸ್ರಂತು ಮೂರ್ಧ್ನಿವೈಷಟ್ ಪ್ರಕೀರ್ತಿತಾಃ ಇತಿ ॥ ೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಕ್ತಂ ವಿವೃಣೋತಿ "ಚರಣದೊಳು" ಇತಿ ॥ ಪದೋಃ ದ್ವಿಷಟ್ ಸಹಸ್ರಂತು ಮಧ್ಯೇ ಚೈವ ಚತುರ್ದಶ ಬಾಹೌ ಚತುಃಸಹಸ್ರಂ ತು ಷಟ್ ಸಹಸ್ರಂ ತು ಮೂರ್ಧನಿ ॥ "ಇರಳು ಹಗಲು" ಇತಿ ॥ "ಇರಳು" – ರಾತ್ರ್ಯಭಿಮಾನೀ ॥ ಪ್ರಾಣಾದ್ಯಾಃ ಭಾರತ್ಯಾದ್ಯಾಃ ಚ ॥ ಷಟ್‌ಪ್ರಶ್ನೇ ಚ "ಪ್ರಾಣೋಽಹನ್ಯಥ ವಾಜ್ ಶಿಶಿ" ॥ ಇತಿ ॥ "ಅತ್ರೈವ ನರಕಃ ಸ್ವರ್ಗಃ" ಇತ್ಯುಕ್ತೇಃ ಆಹ ೧ ಸ್ವರ್ಗ" ಇತಿ ॥ ೨ ॥

## ಕನ್ನಡಾರ್ಥ

ಹಿಂದೆ ಹೇಳಿದ ನಾಡಿಗಳ ಸಂಖ್ಯೆಯನ್ನು ವಿಂಗಡವಾಗಿ ವಿವರಿಸುತ್ತಾರೆ– "ಚರಣದೊಳು" ಎಂಬ ಪದ್ಯದಿಂದ. ಕಾಲಿನಲ್ಲಿ ೧೨೦೦೦, ಮಧ್ಯದೇಹದಲ್ಲಿ ೧೪೦೦೦, ಬಾಹುಗಳಲ್ಲಿ ೪೦೦೦, ಶಿರಸ್ಸಿನಲ್ಲಿ ೬೦೦೦, ಹೀಗೆ ನಾಡಿಗಳಿರುತ್ತವೆ. ಈ ವಿಷಯದಲ್ಲಿ "ಪಾದಗಳಲ್ಲಿ ೧೨, ದೇಹ ಮಧ್ಯದಲ್ಲಿ ೧೪, ಬಾಹುಗಳಲ್ಲಿ ೪, ಶಿರಸ್ಸಿನಲ್ಲಿ ೬ ಸಹಸ್ರನಾಡಿಗಳಿರುತ್ತವೆ" ಎಂದು ಹೇಳುವ "ಪದೋಃ ದ್ವಿಷಟ್ ಸಹಸ್ರಂತು" ಎಂಬ ಪ್ರಮಾಣವಿರುತ್ತದೆ. "ಇರಳು" ರಾತ್ರಿ, ಹಗಲು ರಾತ್ರಿಗಳ ಅಭಿಮಾನಿಗಳೂ ಈ ನಾಡಿಗಳಲ್ಲಿ ಇರುತ್ತಾರೆ. "ಪ್ರಾಣ – ಭಾರತೀ" ಮುಂತಾದವರು ಹಗಲು ರಾತ್ರಿಗಳ ಅಭಿಮಾನಿಗಳು, ಐತರೇಯ ಭಾಷ್ಯದಲ್ಲಿ "ಪ್ರಾಣನು ಹಗಲಿಗೂ, ಭಾರತಿಯು ರಾತ್ರಿಗೂ ದೇವತೆಗಳು" ಎಂದು ನಿರೂಪಿಸಲಾಗಿರುತ್ತದೆ. "ಇಲ್ಲಿಯೇ ಸ್ವರ್ಗ ನರಕಗಳು" ಎಂದು ಹೇಳಿರುವದರಿಂದ "ಹೀಗೆ ಅರಿತು ಉಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು" ಎಂದು ದಾಸವರ್ಯರು ನಿರೂಪಿಸುತ್ತಾರೆ ಎಂಬುದಾಗಿ ತಿಳಿಯಬೇಕು. ॥ ೨ ॥

**ಅವತರಣಿಕಾ :** ಪರಿಪೂರ್ಣನಾದ ಬೃಹತೀನಾಮಕ ವಾಸುದೇವನು ತಾನೆ ಸ್ತ್ರೀ ರೂಪಗಳ ತೆಗೆದುಕೊಂಡು ಎಡಭಾಗದ ಅರ್ಧನಾರೀರೂಪದಿಂದ, ಬಲಭಾಗದಿ ಪುರುಷ ರೂಪ ಹೀಗೆ ೭೨ ಸಾವಿರ ನಾಡಿಗಳಲ್ಲಿದ್ದು ಸರ್ವ ಪ್ರಾಣಿಗಳ ಸಲಹುವನೆಂದು ಉಪದೇಶಿಸುತ್ತಾರೆ. ಇದು ಐತರೇಯ ರಹಸ್ಯ.

ಮೂಲ :

**ಬೃಹತಿನಾಮಕ ವಾಸುದೇವನು ।**
**ವಹಿಸಿ ಸ್ತ್ರೀರೂಪಗಳ ದೋಷ ವಿ ।**
**ರಹಿತ ಎಪ್ಪತ್ತೆರಡು ಸಾವಿರ ನಾಡಿಗಳೊಳಗಿದ್ದು ॥**
**ದ್ರುಹಿಣ ಮೊದಲಾದಮರಗಣ ಸ ।**
**ನ್ಮಹಿತ ಸರ್ವಪ್ರಾಣಿಗಳ ಮಹ ।**
**ಮಹಿಮ ಸಂತೈಸುವನು ಸಂತತ ಪರಮ ಕರುಣಾಳು ॥ ೩ ॥**

**ಪದ್ಯಾರ್ಥ :** ಬೃಹತಿ = ಬೃಹತ್ವಾತ್ ಪೂರ್ಣತ್ವಾತ್ = ಪೂರ್ಣನಾದುದರಿಂದ ಬೃಹತೀ ಶಬ್ದದಿಂದ ಕರೆಸುವ, ವಾಸುದೇವನು = ಮಾಯಾಪತಿ ಮುಕ್ತಿಪ್ರದಾತ ವಾಸುದೇವನು ಎಂದು ಪದ್ಯ ೧ರಲ್ಲಿಯೂ ಹೇಳಿದ್ದಾರೆ.

ವಾಸುದೇವ ರೂಪವನ್ನೇ ಇಲ್ಲಿ ಏಕೆ ಹೇಳಿದ್ದಾರೆಂಬ ವಿಷಯವು ಬಹು ರಹಸ್ಯವಾದುದು, ಸದ್ಗುರುಗಳಿಂದ ತಿಳಿಯುವದು. ಸ್ತ್ರೀರೂಪಗಳ ವಹಿಸಿ = ಸ್ತ್ರೀರೂಪಗಳನ್ನು ಧಾರಣಮಾಡಿದಾಗ್ಯ್ಯಾದರೂ ದೋಷವಿರಹಿತ = ದೋಷವಿರಹಿತನು, ವಿಜ್ಞಾನಮಯ ಶ್ರೀರೂಪಿಯು, ಸ್ವರಮಣನಾದುದರಿಂದ ಅರವಿದೂರ. ಹೀಗೆ ಎಡಭಾಗ ೩೬ ಸಾವಿರ ನಾಡಿಗಳಲ್ಲಿ ೩೬೦೦೦ ಸ್ತ್ರಿರೂಪಗಳಿಂದ ವಾಸುದೇವ ಬಲಭಾಗ ಪುರುಷರೂಪದಿಂದ ಹೀಗೆ ಎಪ್ಪತ್ತೆರಡು ಸಾಹಸ್ರ ನಾಡಿಗಳೊಳಗಿದ್ದು, ದ್ರುಹಿಣ = ಬ್ರಹ್ಮದೇವರೆ ಮೊದಲಾದ ಅಮರಗಣ = ಬ್ರಹ್ಮದೇವರೆ ಮೊದಲಾದ ದೇವತೆಗಳ ಸಮೂಹದಿಂದ, ಸನ್ಮಹಿತ = ಪೂಜಿತನಾಗಿ, ಸರ್ವಪ್ರಾಣಿಗಳ = ದೇಹಧಾರಣಮಾಡಿದ ಸಕಲಪ್ರಾಣಿ = ಚೇತನರನ್ನು, ಮಹಮಹಿಮ = ಮಹಂತೋಽಯಸ್ಮಿನ್‌ಗುಣಾ, ಯಾವ ಹರಿಯು ರಮಾ ಬ್ರಹ್ಮಾದಿಗಳಿಂದ ಪೂರ್ಣವಾಗಿ ತಿಳಿಯದ ಅನಂತ ಗುಣಕ್ರಿಯಾ ರೂಪನಾದುದರಿಂದ, ಮಹಾಮಾಹಾತ್ಮ್ಯೆಯುಳ್ಳ ವಾಸುದೇವನು ಪರಮ ಕರುಣಾಳುವಾದುದರಿಂದ, ಸಂತತ = ನಿರಂತರ, ಮುಕ್ತಿಯಲ್ಲಿಯೂ ಸಹ, ಸಂತೈಸುವನು = ಸಮಾಧಾನಮಾಡುವನು-ರಕ್ಷಿಸುವನು, ಆನಂದವನ್ನು ಕೊಡುವನು.

**ದ್ರೌಪದೀಶಪತಿ ವಿಠಲರು :** ಬೃಹತೀನಾಮಕ ಸ್ತ್ರೀರೂಪ ೩೬೦೦೦ ಪುರುಷರೂಪ ೩೬೦೦೦ ಒಟ್ಟಿಗೆ ೭೨೦೦೦ ರೂಪದಿಂದ ಇರುತ್ತಾನೆ ‖ ೩ ‖

**ಭಾವಸೂಚನ :** ಬೃಹತೀತಿ ಪೂರ್ಣತ್ವಾತ್ ಬೃಹ ವೃದ್ಧಾವಿತಿಧಾತೌ "ದ್ವಾಸಪ್ತತಿ ಸಹಸ್ರಾಣೀ ರೂಪಾಣ್ಯೇವಂ ರಮಾಪತೇರಿತಿ ಐತರೇಯ ವಚನಾತ್ ‖ ೩ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಬೃಹತಿ" ಇತಿ ‖ ಬೃಹತ್ವಾತ್ ಪೂರ್ಣತ್ವಾತ್ ಇತಿ ಯಾವತ್ ‖ ಸ್ತ್ರೀಮಾನಂ ತು ಉಕ್ತಮ್ ‖ "ಎಪ್ಪತ್ತೆರಡು" ಇತಿ ‖ "ದ್ವಾಸಪ್ತತಿ ಸಹಸ್ರಾಣಿ ನಾಡ್ಯೋಽನ್ಯಾಸ್ತು ಪ್ರಧಾನತಃ" ‖ ಇತಿ ಸಾರಸಂಗ್ರಹೇ ‖ ತತ್ಕ್ರಮಃ ಉದಾಹೃತಃ ನಾಡೀಕಲ್ಪಲತಾಯಾಮ್ ‖ "ಏಕೋತ್ತರಶತಂ ನಾಡ್ಯಃ ಶರೀರೇಽಸ್ಮಿನ್ ಸಮೀಮಾಹಿತಾಃ ‖ ತಾಸು ಪಂಚ ಪ್ರಧಾನಾಃಹಿ ಪಿಂಗಳೇಡಾಚ ನಂದಿನೀ ‖ ಸುಷುಮ್ನಾ ವಜ್ರಿಕಾ ತತ್ರಚತುಸ್ರಃ ದಿಕ್ಷು ಸಂಸ್ಥಿತಾಃ ‖ ಸುಷುಮ್ನಾಯಾಃ ಚತುರ್ದಿಕ್ಷು" ‖ ಇತಿ ಸಂಗ್ರಹೇ ‖ ಅತ್ರಾಪಿ – "ಚತಸ್ರಾಷು

ಸ್ಥಿತಾ ಮಧ್ಯೇ ಸುಷುಮ್ನೈಕಾ ಪ್ರಧಾನತಃ ॥ ತಾಸಾಂ ಶತಂ ಶತಂ ಶಾಖಾಃ ಏಕೈಕಸ್ಯಾಃ ಪ್ರಕೀರ್ತಿತಾಃ ॥ ತತ್ರ ಸೌಷುಮ್ನ ಶಾಖಾನಾಂ ಪ್ರತಿಶಾಖಾ ದಶಾಂತಿಮಾ ॥ ನವಶಾಖಾಃ ಚತಸ್ರೃಣಾಂ ಅಷ್ಟಶಾಖಾಃ ಷಡೇವ ತು ॥ ಶಿಷ್ಟ ಷಣ್ಣವತೀನಾಂ ತು ಪ್ರತಿಶಾಖಾಃ ಇಮಾಃ ಮತಾಃ" ॥ ದ್ವಾಸಪ್ತತಿ ಸಹಸ್ರಾಣಾಂ ನಾಡೀನಾಂ ದೇವತತ್ವತಾ ॥ ಸ ಏವ ಭಿಷಜಾಂ ಶ್ರೇಷ್ಠಃ ಲಕ್ಷಣಾನಿ ಬು (ನಿ) ಬೋಧವೇ ॥ (ಯಃ)" ॥ ಇತಿ ॥ "ದ್ರುಹಿಣ" – ಬ್ರಹ್ಮ ॥ ೩ ॥

## ಕನ್ನಡಾರ್ಥ

ಪರಿಪೂರ್ಣನಾದುದರಿಂದ ಪರಮಾತ್ಮನಿಗೆ "ಬೃಹತಿ–ಪೂರ್ಣ" ನೆಂದು ಕರೆಯುತ್ತಾರೆ. ಸ್ತ್ರೀರೂಪಗಳ ಸಂಖ್ಯೆಯನ್ನೂ ಹೇಳಲಾಗಿರುತ್ತದೆ. ತಂತ್ರ ಸಾರಸಂಗ್ರಹದಲ್ಲಿ "ದ್ವಾಸಪ್ತತಿ ಸಹಸ್ರಾಣಿ" ಎಂಬುದಾಗಿ ೭೨೦೦೦ ಪ್ರಧಾನ ನಾಡಿಗಳಿರುತ್ತವೆ" ಎಂದು ನಿರೂಪಿಸಿರುತ್ತಾರೆ. ೭೨೦೦೦ ನಾಡಿಗಳು ಹೇಗೆ ಆಗುವವು ? ಅವುಗಳ ಕ್ರಮವು "ನಾಡೀಕಲ್ಪಲತಾ" ಎಂಬ ಗ್ರಂಥದಲ್ಲಿ ಹೇಳಲಾಗಿರುತ್ತದೆ. "ಈ ಶರೀರದಲ್ಲಿ ೧೦೧ ನಾಡಿಗಳಿರುತ್ತವೆ. ಅವುಗಳಲ್ಲಿ ಐದು ನಾಡಿಗಳು ಪ್ರಧಾನಗಳಾಗಿರುತ್ತವೆ. "ಪಿಂಗಳಾ–ಇಡಾ–ನಂದಿನೀ–ಸುಷುಮ್ನಾ –ವಜ್ರಿಕಾ" ಎಂದು. ಇವುಗಳಲ್ಲಿ ಪಿಂಗಳ ಇಡಾ ಮುಂತಾದ ನಾಲ್ಕು ನಾಡಿಗಳು ಸುಷುಮ್ನಾನಾಡಿಯ ನಾಲ್ಕು ದಿಕ್ಕುಗಳಲ್ಲಿ ಇರುತ್ತವೆ" ಎಂದು ತಂತ್ರಸಾರದಲ್ಲಿ ಉಕ್ತವಾಗಿದೆ. ನಾಡೀಕಲ್ಪಲತೆಯೆಂಬ ಗ್ರಂಥದಲ್ಲಿ ನಾಡಿಗಳ ಅವಾಂತರ ಪ್ರಭೇದಗಳನ್ನು ಹೇಳಿ, ೭೨೦೦೦ ನಾಡಿಗಳಲ್ಲಿರುವ ದೇವತೆಗಳನ್ನು ತಿಳಿದವನೇ ಉತ್ತಮ ವೈದ್ಯನು" ಎಂದು ಪ್ರತಿಪಾದಿಸಲಾಗಿರುತ್ತದೆ. ॥ ೩ ॥

**ಅವತರಣಿಕಾ :** ಹಿಂದೆ ಹೇಳಿದ ೭೨ ಸಾವಿರ ರೂಪ ಹೇಗೆಂದರೆ ಮನುಷ್ಯಮಾನದಿಂದ, ಒಂದು ವರುಷಕ್ಕೆ ೩೬೦ ದಿವಸ, ೩೬೦ ರಾತ್ರಿ, ೧೦೦ ವರ್ಷಕ್ಕೆ ೩೬೦೦೦ ಹಗಲು ೩೬೦೦೦ ರಾತ್ರಿ, ಹೀಗೆ ೩೬೦೦೦ ಸಾವಿರ ದ್ವಿಗುಣಿತಮಾಡಿದರೆ ೭೨೦೦೦ ಸಾವಿರ ನಾಡಿಗಳಾಗುವವು. ಹೀಗೆ ದಿವಸ ಒಂದಕ್ಕೆ ಈ ತೆರದಿ ಚಿಂತಿಸಿ ಜ್ಞಾನಿಗಳನ್ನು ಸತ್ಕಾರಮಾಡಿ ಭೋಜನಮಾಡಿಸಲು ೩೬೦೦೦ ದಂಪತಿಗಳ ಅರ್ಚನೆಮಾಡಿದ ಫಲ ಬರುವದೆಂದು ಉಪದೇಶಗೈಯ್ಯುತ್ತಾರೆ.

ಮೂಲ :

**ನೂರು ವರುಷಕೆ ದಿವಸ ಮೂವ ।**
**ತ್ತಾರು ಸಾವಿರವಹವು ನಾಡಿ ಶ ।**
**ರೀರದೊಳಗಿನಿತಿಹವು ಎಂದರಿತೊಂದು.ದಿವಸದಲಿ ॥**
**ಸೂರಿಗಳ ಸತ್ಕರಿಸಿದವ ಪ್ರತಿ ।**
**ವಾರದಲಿ ದಂಪತಿಗಳರ್ಚನೆ ।**
**ತಾರಚಿಸಿದವ ಸತ್ಯ ಸಂಶಯುವಿಲ್ಲವೆಂದೆಂದು ॥ ೪ ॥**

**ಪದ್ಯಾರ್ಥ** : ನೂರು ವರುಷಕೆ = ಮನುಜ ಮಾನದಿಂದ ನೂರು ವರ್ಷಕ್ಕೆ, ದಿವಸ = ದಿವಸಗಳು ಮೂವತ್ತಾರು ಸಾವಿರವಾಗುವವು. ನಾಡಿ ಶರೀರದೊಳಗಿನಿತಿಹವು = ಇಷ್ಟೇ ನಾಡಿಗಳು ಶರೀರದೊಳಗಿರುವವು, ಎಂದು ಅರಿತು ಒಂದು ದಿವಸದಲಿ = ಹೀಗೆ ತಿಳಿದು, ಒಂದು ದಿನದಲ್ಲಿ ಸೂರಿಗಳ ಸತ್ಕರಿಸಿದವ = ಜ್ಞಾನಿಗಳನ್ನು ಆದರದಿಂದ ಭೋಜನಮಾಡಿಸಿದವ, ಹೀಗೆ ಜ್ಞಾನವುಳ್ಳವನಾಗಿ, ಪ್ರತಿವಾರದಲಿ = ಪ್ರತಿವಾರ, ದಿವಸ–ಅದ್ಯ ಸೂರ್ಯೋದಯದಿಂದ ಮುಂದಿನ ಸೂರ್ಯೋದಯ ಪರ್ಯಂತರಕ್ಕೆ ೧ ವಾರವೆಂದು ದಿವಸವೆಂದು ಜ್ಞಾನಿಗಳ ವಚನ. ಒಂದು ಹಗಲು ರಾತ್ರಿ ಕೂಡಿದರೆ ದಿವಸ ಆಗುತ್ತದೆ. ಹೀಗೆ ಜ್ಞಾನಿಗಳಲ್ಲಿ ಬೃಹತೀನಾಮಕ ಭಾರತೀಶನಂತರ್ಗತ ಶ್ರೀವಾಸದೇವನ ಪುಂಸ್ತ್ರೀರೂಪಗಳಲ್ಲಿ ನೆಲಸಿರ್ದ ೩೬೦೦೦ ದಂಪತಿಗಳರ್ಚನೆ = ಬ್ರಾಹ್ಮಣ–ಮುತ್ತೈದೆಯರ ಭೋಜನಮಾಡಿಸಿದಷ್ಟು, ತಾರಚಿಸಿದವ = ತಾನು ಜ್ಞಾನಿಯನ್ನು ಪೂಜಿಸಿ ಭೋಜನಮಾಡಿಸಿದವನಿಗೆ ಪುಣ್ಯ ಬರುತ್ತದೆ. ಸತ್ಯ = ನಿಜವಾಗಿಯೂ ಬರುತ್ತದೆ. ಸಂಶಯವಿಲ್ಲವೆಂದೆಂದು = ಇದರಲ್ಲಿ ಯಾವ ಕಾಲಕ್ಕೂ ಲೇಶವಾದರೂ ಸಂದೇಹವಿಲ್ಲ ಎಂದು ಉಪದೇಶಗೈದಿದ್ದಾರೆ. ಇಂಥ ಜ್ಞಾನಯಜ್ಞವು ಎಷ್ಟು ಸುಲಭ ನೋಡಿ ? ದಾಸರೇ ಅನುಗ್ರಹಿಸಬೇಕು.

**ದ್ರೌಪದೀಶಪತಿ ವಿಠಲರು :** ನೂರು ವರುಷಕೆ.

**ಭಾವಸೂಚನ :** ನೂರೇತಿ ॥ ಉಕ್ತಂಚ ಐತರೇಯಭಾಷ್ಯೆ॥ ಶತಾಬ್ದಾನಾಮಹೋಯತ್ರ ದೈವತಾನ್ಯತ್ರಮಾನಿಚ ॥ ಬ್ರಹತೀ ಸಹಸ್ರವರ್ಣಾನಾಮಪಿಧ್ಯಾತ್ವಾಖಿಲಾನ್ಯಪಿ ॥" ಶತವರ್ಷ ಹರಿಧ್ಯಾನ ಫಲಮಾಪ್ನೋತಿ ಪೂರುಷ ಇತಿ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೂರು" ಇತಿ ॥ ತಾವಂತಿ ಶತಸಂವತ್ಸರಸ್ಯ ಅಹ್ನಾಂ ಸಹಸ್ರಾಣಿ ಭವಂತಿ" ಇತಿ ಶ್ರುತೇಃ ॥ "ಅನಿತು" – ಅಷ್ಟು ॥ ೪ ॥

## ಕನ್ನಡಾರ್ಥ

"ಪುರುಷಾಯುಷ್ಯದ ಒಂದುನೂರು ವರ್ಷಗಳಲ್ಲಿ ೩೬೦೦೦ ಹಗಲುಗಳು ಹಾಗೂ ೩೬೦೦೦ ರಾತ್ರಿಗಳು ಆಗುವವು" ಎಂದು ಹೇಳುವ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ. "ಅನಿತು" ಎಂದರೆ "ಅಷ್ಟು" ಎಂದು ಅರ್ಥ. ॥ ೪ ॥

**ಅವತರಣಿಕಾ :** ಶ್ರೀ ವಿಜಯದಾಸರ ನಾಡೀಪ್ರಕರಣ ಸುಳಾದಿಯಂತೆ ಚತುರ ವಿಂಶತಿತತ್ವ ತತ್ಪತಿಗಳಾದ ಬ್ರಹ್ಮಾದಿ ದೇವತೆಗಳು ನಿತ್ಯದಲ್ಲಿ ಪ್ರತಿ ಪ್ರತಿ ನಾಡಿಗಳೊಳಗೆ ಶ್ರೀಹರಿಯು ಇದ್ದುದನ್ನೂ ಮತ್ತು ಹದಿನಾಲ್ಕು ಲೋಕದಲ್ಲಿಪ್ಪ ಸಕಲರನ್ನೂ ರಕ್ಷಿಸುವ ತತ್ತಸ್ಥಾನ ಹರಿಯರೂಪ ನೋಡುತ್ತಾ ಆನಂದಪಡುತ್ತಾರೆಂದು ಉಪದೇಶಿಸುತ್ತಾರೆ.

ಮೂಲ :

**ಚತುರವಿಂಶತಿ ತತ್ವಗಳ ತ ।**
**ತ್ಪತಿಗಳೆನಿಸುವ ಬ್ರಹ್ಮ ಮುಖದೇ ।**
**ವತೆಗಳನುದಿನ ಪ್ರತಿ ಪ್ರತೀ ನಾಡಿಗಳೊಳಿರುತಿದ್ದೂ ॥**
**ಚತುರದಶಲೋಕದೊಳು ಜೀವ ।**
**ಪ್ರತತಿಗಳ ಸಂರಕ್ಷಿಸುವ ಶಾ ।**
**ಶ್ವತನ ತತ್ತತ್ಸ್ಥಾನದಲಿ ನೋಡುತಲಿ ಮೋದಿಪರು ॥ ೫ ॥**

**ಪದ್ಯಾರ್ಥ :** ಚತುರವಿಂಶತಿ ತತ್ವಗಳ = ಅವ್ಯಕ್ತಾದಿ – ಪೃಥಿವ್ಯಾಂತ ೨೪ ತತ್ವಗಳು, ತತ್ಪಗಳೆನಿಸುವ = ಆಯಾ ತತ್ವಕ್ಕೆ ಒಡೆಯರಾದ ಬ್ರಹ್ಮಾದಿ ದೇವತೆಗಳು, ಬ್ರಹ್ಮದೇವರೆ ಮೊದಲಾಗಿ ಧರಾಶನೇಶ್ವರ ಪರಿಯಂತರ, ಅನುದಿನ = ನಿತ್ಯದಲ್ಲಿ, ಪ್ರತಿ ಪ್ರತಿನಾಡಿಯೊಳಗೆ = ಒಂದೊಂದು ನಾಡಿಯಲ್ಲಿ ತಾವು ಇರುತಿದ್ದು = ಇರುವರಾಗಿ, ಚತುರ ದಶಲೋಕದೊಳು = ಹದಿನಾಲ್ಕು ಲೋಕಗಳಲ್ಲಿ, ಜೀವ ಪ್ರತತಿಗಳ = ಜೀವರ ಸಮೂಹವನ್ನು, ಸಂರಕ್ಷಿಸುವ = ಕಾಪಾಡುವನು, ಶಾಶ್ವತನು = ಶಶ್ವದೇಕ ಪ್ರಕಾರನಾಗಿ ಆಯಾನಾಡಿ, ತತ್ವ

ತತ್ವಾಧಿಪರಲಿ ಇರುವನು, ತತ್ತತ್‌ಸ್ಥಾನದಲಿ = ಆಯಾ ಸ್ಥಾನದಲ್ಲಿ ತತ್ವಾಭಿಮಾನಿ ದೇವತೆಗಳು ಭಗವಂತನ ವ್ಯಾಪಾರಗಳನ್ನು ನೋಡುತಲಿ ಮೋದಿಪರು = ಭಗವಂತನಿಂದ ಆಗುವ ವ್ಯಾಪಾರ ನೋಡುತ್ತಾ, ಮೋದಿಪರು = ಆನಂದ ಪಡುತ್ತಲಿರುವರು.

**ದ್ರೌಪದೀಶಪತಿ ವಿಠಲರು :** ಚತುರವಿಂಶತಿ || ೨೪ ತತ್ತ್ವ ೨೪ ಅಭಿಮಾನಿ ದೇವತೆಗಳು ಇದ್ದಾರೆ.

**ಭಾವಸೂಚನ :** ಚತುರೇತಿ || ೫ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಚತುರ" ಇತಿ || "ಶಾಶ್ವತಃ" – || ಓಂ* ವೃತ್ರೇಷು ವಜ್ರಿಣಂ ಸನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾ ವೃಧಿ || ಅಸ್ಮಭ್ಯಮಪ್ರತಿಷ್ಕುತಃ ತುಂಜೇ ತುಂಜೇ ಯ ಉತ್ತರೇ || ಓಂ || * || ಕಾಲತ್ರಯೇಪಿ ಶಶ್ವದೇಕ ಪ್ರಕಾರೇಣ ವರ್ತತೇ ಕಾಲಪರಿಣಾಮರಹಿತಃ || ೫ ||

## ಕನ್ನಡಾರ್ಥ

ನಾಡಿಗಳಲ್ಲಿ ತತ್ವಪತಿಗಳಿರುವರು–ಅವರನ್ನೂ ಅವರಲ್ಲಿ ನಿಯಾಮಕರಾದ ವಾಯುದೇವರು ಹಾಗೂ ಪರಮಾತ್ಮನನ್ನೂ ಚಿಂತಿಸಬೇಕೆಂದು ಈ ಪದ್ಯದಿಂದ ತಿಳಿಸುತ್ತಾರೆ. "ಶಾಶ್ವತ" ಎಂಬುದು ವಿಷ್ಣು ಸಹಸ್ರನಾಮಾಂತರ್ಗತವಾದುದು. "ತ್ರಿಕಾಲಗಳಲ್ಲಿಯೂ ಒಂದೇ ರೀತಿಯಾಗಿ ಇರುವನು ಅಂದರೆ ಕಾಲನಿಮಿತ್ತಕವಾಗಿ ಆಗುವ ಯಾವದೇ ವಿಕಾರ ಪರಿಣಾಮುಗಳಿಲ್ಲದವನು" ಎಂದು ಬೃಹತೀ ಮಂತ್ರಾನುಗುಣವಾದ ಈ ನಾಮದ ಅರ್ಥ. || ೫ ||

**ಅವತರಣಿಕಾ :** ತತ್ವ, ತತ್ವಾಭಿಮಾನಿ ದೇವತೆಗಳಿಂದಲೂ ೭೨೦೦೦ ಸಾವಿರ ನಾಡಿಗಳಲ್ಲಿ ಚಿತ್ರಕೃತಿಯಾದ ರಮಾದೇವಿಯಿಂದಲೂ ಒಡಗೂಡಿ ಇರುವ ಭಗದ್ರೂಪಗಳ ವಿವರ ಹೇಳುತ್ತಾರೆ.

ಮೂಲ :

**ಸತ್ಯಸಂಕಲ್ಪನು ಸದಾ ಎ |**
**ಪ್ಪತ್ತೆರೆಡು ಸಾಹಸ್ರದೊಳು ಮೂ |**
**ವತ್ತುನಾಲಕು ಲಕ್ಷ ದೈವತ್ತಾರು ಸಾಹಸ್ರಾ ||**

**ಚಿತ್ರಕೃತಿಯೊಡಗೂಡಿ ಪರಮ(ಸು)ನು ।**
**ನಿತ್ಯಮಂಗಳ ಮೂರ್ತಿ ಭಕ್ತರ ।**
**ತೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಪ ॥ ೬ ॥**

**ಪದ್ಯಾರ್ಥ :** ಸತ್ಯಸಂಕಲ್ಪನ = ನಿಜ-ಖರೆ ಸಂಕಲ್ಪ = ಸಮ್ಯಕ್ ಕಲ್ಪತೇನೇನೇತಿ ಸಂಕಲ್ಪಃ, ಉತ್ತಮ ಪ್ರಕಾರದಿಂದ ಮನಸಾವ್ಯಾಪಾರ ವಿಶೇಷವು ಸದಾ ಶಕ್ತಿಮಾನ್ ಆಗಿರುವನು. ತನ್ನ ಸ್ವೇಚ್ಛೆಯಿಂದ ಒಂದೇ ರೀತಿ ಸೃಷ್ಟ್ಯಾರಂಭದಲ್ಲಿ ಸರ್ವ ಜೀವರ ಯೋಗ್ಯ ಗುಣಾನುಭವ ತಂದುಕೊಡುವ ಋತಸತ್ಯ ಪ್ರತಿಜ್ಞನಾದ ವಾಸುದೇವನು, ಸದಾ = ನಿರಂತರ ಎಪ್ಪತ್ತೆರಡು ಸಾಹಸ್ರದೊಳು = ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಚಿತ್ರಕೃತಿಯೊಡಗೂಡಿ = ಶ್ರೀ ರಮಾದೇವಿಯಿಂದ ಕೂಡಿಕೊಂಡು, ಮೂವತ್ತುನಾಲ್ಕು ಲಕ್ಷದಾ ಐವತ್ತಾರು ಸಹಸ್ರ ರೂಪಗಳಾಗುತ್ತವೆ. ಹೇಗೆಂದರೆ, ಪ್ರತಿ ನಾಡಿಗಳಲ್ಲಿ ೨೪ ತತ್ವಗಳು. ೨೪ ಜನ ತತ್ವಾಭಿದೇವತೆಗಳು ಕೂಡಿ ೨೪ ಕೇಶವಾದಿ, ರಮಾ ೨೪ ರೂಪ = ೪೮ ರೂಪಗಳು. ಈ ೪೮ರಿಂದ ೭೨೦೦೦ × ೪೮ ಗುಣಿಸಿದರೆ = ೩೪,೫೬,೦೦೦ ಒಟ್ಟಿಗೆ ನಾಡಿಗತ ಭಗವದ್ರೂಪಗಳಾಗುತ್ತವೆ. ಇಷ್ಟೇ ರಮಾರೂಪಗಳಿಂದ ಕೂಡಿದ ಶ್ರೀಹರಿಯು, ಪರಮನು = " ಅನನ್ಯಾಧೀನ ಸಂವಿದಾತ್ಮಯಾ ಪರಮಃ" ಎಂದು (ಶ್ರೀ ವಿದ್ಯಾಧಿರಾಜೀಯ ಸಹಸ್ರನಾಮ) ಅನ್ಯಾಧೀನನಾಗದೇ ಸ್ವತಂತ್ರನಾಗಿರುವನು ಪರಮನು = ಉತ್ತಮನು, ಶ್ರೇಷ್ಠನು. ನಿತ್ಯಮಂಗಳಮೂರ್ತಿ = ಸದಾ " ಮಂಗಳ ಸುಖರಾತೀತಿ ಮಂಗಳಂ " ಸದಾ ಸುಖವನ್ನು ತಂದುಕೊಂಡವನು, ಮಂಗಳಸ್ವರೂಪನು, ಸುಖರೂಪಿಯು " ಮಂಗಳಾನಾಂಚ ಮಂಗಳಂ " ಇಂತಹ ಮಂಗಳಮೂರ್ತಿ = ರೂಪನು, ಭಕ್ತರ ತೆತ್ತಿಗನು = ನಿಜಭಕ್ತರಾದ ತನ್ನನ್ನೇ ನಂಬಿಕೊಂಡಿರುವ ಭೃತ್ಯರಿಗೆ ತೆತ್ತಿಗ = ಸೇವಕ = ಭೃತ್ಯನು ತಾನಾಗಿ = ತಾನೇ ಆಗಿ, ಸರ್ವತ್ರದಲಿ ಸಂತೈಪ = ಸರ್ವ ದೇಶಕಾಲಗಳಲ್ಲಿ, ಕೊನೆಗೆ ಮುಕ್ತಿಯಲ್ಲಿ ಸಹ = ಸಂತೈಪ = ಸಮಾಧಾನವೀವ, ಆನಂದವನ್ನು ಕೊಟ್ಟು ರಕ್ಷಿಸುವನು. ರೂಪಗಳೆಲ್ಲ ದೇವತೆಗಳಿಗೆ ಗೋಚರವು.

**ದ್ರೌಪದೀಶಪತಿ ವಿಠಲರು :** ಸತ್ಯಸಂಕಲ್ಪನು ತದಂತರ್ಗತ ಭಗವದ್ರೂಪಕ್ಕೆ ಕೇಶವಾದಿ ೨೪ ರೂಪದಿಂದ ಹೆಚ್ಚಿಸಿದರೆ ೧೭ ಲಕ್ಷ ೨೮ ಸಾವಿರ

ರೂಪ — ಈ ಪ್ರಕಾರ ರಮಾರೂಪ ಇವೆ. ಇದೇ ಪ್ರಕಾರ ೭೨೦೦೦ ನಾಡಿಗಳೊಳಗೆ ೩೪ ಲಕ್ಷ ೫೬ ಸಹಸ್ರ ರೂಪದಿಂದ ಇದ್ದಾನೆ.

**ಭಾವಸೂಚನ :** ಸತ್ಯೇತಿ ತದುಕ್ತಂ ವಿಷ್ಣುರಹಸ್ಯೇ ಉತ್ತರಾರ್ಧೇ॥ "ನಾಡೀಗತೋ ಹರೇರ್ಗೇಯಃ ಜನ್ಯೈಃರಿಹ ವಿಶಾಂಪತೇ ॥ ಷಟ್‌ತ್ರಿಂಶದಧಿಕೈರ್ಲಕ್ಷೈರ್ಯುಃ ಚತುರ್ಭಿಶ್ಚ ಸ್ವರೂಪಕೈರಿತಿ ॥ ತೆತ್ತಿಗನು = ಅಧೀತನು ॥ ೬ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಸತ್ಯ" ಇತಿ॥ ರಮಾರೂಪಾಣಿ ಗೃಹೀತ್ವಾ ಗಣನಾ॥ "ತೆತ್ತಿಗ" – ಅನುಚರಃ ॥ ೬ ॥

**ಕನ್ನಡಾರ್ಥ**

ನಾಡೀಗತ ರೂಪಗಳಿಗೆ ಹೆಚ್ಚಿಸಬೇಕಾದ ರೂಪಗಳ ವಿಶೇಷವನ್ನು ವಿವರಿಸುತ್ತಾರೆ–"ಸತ್ಯಸಂಕಲ್ಪನು" ಎಂಬುದಾಗಿರುವ ಪದ್ಯದಿಂದ. "ಚಿತ್‌ಪ್ರಕೃತಿಯೊಡಗೂಡಿ" ಎಂದು ಹೇಳಿರುವದರಿಂದ ರಮಾರೂಪಗಳನ್ನು ಪರಿಗ್ರಹಿಸಿಯೇ ಗಣನೆಯಿರುವವೆಂದು ತಿಳಿಯಬೇಕು. "ತೆತ್ತಿಗ" ಎಂಬ ಪದಕ್ಕೆ "ಅನುಚರ" ಎಂದು ಅರ್ಥ. ॥ ೬ ॥

**ಅವತರಣಿಕಾ :** "ಮಯಿಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ" ಎಂಬ ಗೀತೋಕ್ತಿಯಂತೆ ಸೂತ್ರವು ಮಣಿಗಳಿಗೆ ಆಧಾರವಾಗಿದ್ದಂತೆ ಶ್ರೀಹರಿಯು ಸಕಲ ಚೇತನರಿಗೆ ಆಧಾರವಾಗಿರುವನೆಂದು ಹೇಳುತ್ತಾರೆ.

ಮೂಲ :

**ಮಣಿಗಳೊಳಗಿಹ ಸೂತ್ರದಂದದಿ ।**
**ಪ್ರಣವಪಾದ್ಯನು ಸರ್ವ ಚೇತನ ।**
**ಗಣದೊಳಿದ್ದನವರತ ಸಂತೈಸುವನು ತನ್ನವರ ॥**
**ಪ್ರಣತ ಕಾಮದ ಭಕ್ತ ಚಿಂತಾ ।**
**ಮಣಿ ಚಿದಾನಂದೈಕ ದೇಹನು ।**
**ಅಣುಮಹದ್ಗತ ಅಲ್ಪರೋಪಾದಿಯಲಿ ನೆಲೆಸಿಪ್ಪ ॥ ೭ ॥**

**ಪದ್ಯಾರ್ಥ :** ಮಣಿಗಳೊಳಗಿಹ = ಸಮಸ್ತ ಮಣಿ-ಜಪಮಣಿಗಳೊಳಗೆ ಸೂತ್ರವು–ದಾರವು, ಪೋಣಿಸಿದರೆ ಮಣಿಗಳೆಲ್ಲಕ್ಕೆ ನಿಲ್ಲಲು ಹೇಗೆ ಆಧಾರವಾಗಿದೆಯೋ ಅದರಂತೆಯೇ, ಪ್ರಣವಪಾದ್ಯನು = ಓಂಕಾರ ಪ್ರತಿಪಾದ್ಯ

ಸ್ತುತ್ಯನಾದ ಶ್ರೀಹರಿಯು, ಸರ್ವಚೇತನಗಣದೊಳಗೆ = ಸಕಲ ಚೇತನ ಚಲನ ಮಾಡತಕ್ಕ ಜೀವರ ಸಮೂಹದಲ್ಲಿದ್ದು ಸೂತ್ರದಂತೆ ಆಧಾರನಾಗಿರುವನು. ಅನವರತ = ನಿತ್ಯದಲ್ಲಿಯೂ, ತನ್ನವರ ಸಂತೈಸುವನು = ತನ್ನ ನಿಜಭಕ್ತರನ್ನು ರಕ್ಷಿಸುವನು, ಪ್ರಣತ ಕಾಮದ = ಆನತರಾಗಿ ಬಗ್ಗಿ ಭಕ್ತಿಯಿಂದ ನಮಸ್ಕರಿಸಿದ ಭಕ್ತರಿಗೆ, ಕಾಮದ = ಇಷ್ಟಾರ್ಥವನ್ನು ಕೊಡುವನು. ಭಕ್ತರಿಗೆ ಚಿಂತಾಮಣಿ = ಜಡವಾದ ಚಿಂತಾಮಣಿ ರತ್ನದಲ್ಲಿದ್ದು, ಭಕ್ತರ ಚಿಂತಿತ ಅರ್ಥವನ್ನು ಕೊಡುವನು, ಚಿದಾನಂದೈಕ ದೇಹನು = ಸಚ್ಚಿದಾನಂದ ಜ್ಞಾನಾತ್ಮಕ ಶರೀರವುಳ್ಳವನು, ಪ್ರಾಕೃತ ದೇಹಿಯಲ್ಲ, ಇಂತಹ ಚಿದಾನಂದ ರೂಪದಿಂದ, ಅಣುಮಹದ್ಗತ = ಅಣು = ಜೀವನ ಸ್ವರೂಪವೆ ಅಣು ಜೀವಾಂತರ್ಯಾಮಿಯಾಗಿ ಅತ್ಯಣುವಾಗಿಯೂ, ಮಹತ್ತಾದ ಬ್ರಹಾಂಡದಲ್ಲಿ ಮಹದ್ರೂಪ ಅಣು ಮಹದ್ರೂಪನಾದರೂ, ಅಲ್ಪರೋಪಾದಿ ನೆಲಸಿಪ್ಪ = ತಾನು ಮಹಾ ಶಕ್ತಿವಂತನಾದರೂ, ಜೀವರು ಅಣು ಅಲ್ಪಶಕ್ತಿಯುಳ್ಳವರಲ್ಲಿ, ತನ್ನ ಪೂರ್ಣ ಶಕ್ತಿ ತೋರದೆ, ಜೀವರ ಯೋಗ್ಯತೆ ಅಲ್ಪದಂತೆ ಅಲ್ಪಶಕ್ತಿಯುಳ್ಳವನಾಗಿಯೂ, ಮಹದಾಕಾರ ಇಪ್ಪ ಬ್ರಹ್ಮಾಂಡಬಹಿಃ ಬ್ರಹ್ಮಾಂಡಕ್ಕೂ ಮೀರಿ ಅವ್ಯಾಕೃತಾಕಾಶ ವ್ಯಾಪ್ತನಾದ ಹರಿಯು ಬ್ರಹ್ಮಾಂಡದಲ್ಲಿಯೂ ಬಹಿಯಲ್ಲಿಯೂ, ತನ್ನ ಪೂರ್ಣ ಶಕ್ತಿ ತೋರದೇ ಅನಂತ ಬ್ರಹ್ಮಾಂಡಗಳ ಅಲ್ಪತೆಯಂತೆ ಶಕ್ತಿ ವ್ಯಕ್ತಮಾಡುವ.

**ದ್ರೌಪದೀಶಪತಿ ವಿಠಲರು :** ಮಣಿಗಳೊಳಿಹ.

**ಭಾವಸೂಚನೆ :** ಮಣೀತಿ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಣಿ" ಇತಿ || "ಸೂತ್ರ" - ತಂತು || "ಪಾದ್ಯ" = ಪ್ರತಿಪಾದ್ಯಃ || ೭ ||

## ಕನ್ನಡಾರ್ಥ

ಸರ್ವತ್ರ ನೆಲಸಿದ ಪರಮಾತ್ಮನು - ತನ್ನವರಾದ ಭಕ್ತರನ್ನು ಅನುಚರರಂತೆ ವರ್ತಿಸುವದು ಅವನ ಘನತೆಗೆ ಕುಂದು ಅಲ್ಲ; ಉತ್ತಮ ಸ್ತುತ್ಯಗುಣವೆಂಬುದಾಗಿ ಈ ಪದ್ಯದಿಂದ ತಿಳಿಸುತ್ತಾರೆ.

"ಸೂತ್ರ" ಅಂದರೆ "ದಾರ". "ಪ್ರಣವಪಾದ್ಯನು" ಎಂಬುದಕ್ಕೆ ಓಂಕಾರ, ಪ್ರಣವ ಪ್ರತಿಪಾದ್ಯನು ಎಂದು ತಿಳಿಯಬೇಕು.

**ಅವತರಣಿಕಾ:** ಈ ಎಲ್ಲ ನಾಡಿಗಳ ಸಮೂಹಕ್ಕೆ ಮೂಲನಾಡಿ ಯಾವುದು? ದೇಹವಲ್ಲಿ ನಾಡಿಕೋಶ ಎಲ್ಲಿರುವದು, ಅಲ್ಲಿಪ್ಪ ಬ್ರಹ್ಮಾದಿ ದೇವತೆಗಳು ಮೂಲೇಶನ ಆನಂದಾದಿ ಗುಣಗಳನ್ನು ಹೇಗೆ ಸ್ತೋತ್ರಮಾಡುತ್ತ ಇರುವರು ಎಂದು ಉಪದೇಶಿಸುತ್ತಾರೆ.




ಮೂಲ:

**ಈ ಸುಷುಮ್ನಾದ್ಯಖಿಳನಾಡೀ ।**
**ಕೋಶ ನಾಭೀಮೂಲದಲಿ ವೃಷ ।**
**ಣಾಸನದ ಮಧ್ಯದಲಿ ಇಪ್ಪುದು ತುಂದಿನಾಮದಲಿ ॥**
**ಆ ಸರೋಜಾಸನ ಮುಖರು ಮೂ ।**
**ಲೇಶನಾನಂದಾದಿ ಸುಗುಣೋ ।**
**ಪಾಸನೆಯ ಗೈವುತಲಿ ದೇಹಗಳೊಳಗೆ ಇರುತಿಹರು ॥ ೮ ॥**

**ಪದ್ಯಾರ್ಥ:** ಈ ಸುಷುಮ್ನಾದ್ಯಖಿಳ = ಈ ಸ್ಥೂಲದೇಹದಲ್ಲಿ ಎಲ್ಲ ನಾಡಿಗಳಿಗೆ ಮೂಲವಾದುದು, ಸುಷುಮ್ನಾನಾಡಿಯು. ನಾಡೀಕೋಶ = ನಾಡಿಗಳ ಸಮೂಹವು, ನಾಭೀ ಮೂಲ = ಹೊಕ್ಕಳ ಅಡಿಯಲ್ಲಿ, ವೃಷಣಾ ಸನದ ಮಧ್ಯದಲಿ ಇಪ್ಪದು = ವೃಷಣಕ್ಕೂ-ಗುದಕ್ಕೂ ಮಧ್ಯದಲ್ಲಿ ಎರಡಂ ಗುಲ ಉನ್ನತ ಚತುರಂಗುಲ ವಿಸ್ತಾರಗಡ್ಡೆ ಇದೆ. ತುಂದಿ ನಾಮದಲಿ = ಈ ಮಾಂಸಗಡ್ಡೆ ಮೂಲಸ್ಥಾನಕ್ಕೆ ತುಂದಿ ಎಂತ ಹೆಸರು.

**ತುಂದಿ** = Gorbettied ; corputeat ; having a prominent Navel. ವೃಷಣಾಸನ.

ಆ ಸರೋಜಾಸನ ಮುಖರು, ಆ ಪದ್ಮನಾಭನ = ಹೊಕ್ಕಳು - ಕಮಲ ದಿಂದ ಪುಟ್ಟಿದ ಮಹತ್ತತ್ವಾತ್ಮಕ ಶರೀರವುಳ್ಳ ಕಮಲಪೀಠನಾದ ಬ್ರಹ್ಮದೇವರೇ ಮೊದಲಾದ ದೇವತೆಗಳು, ಈ ತುಂದಿಗೆ ಆಧಾರನಾಗಿರುವ, ಮೂಲೇಶ = ಮೂಲೇಶನಾಮಕ ಹರಿಯ, ಆನಂದಾದಿ ಸುಗುಣೋಪಾಸನೆಯ ಗೈವುತಲಿ = ಜ್ಞಾನ ಆನಂದಾದಿ ಗುಣಗಳ ಸುವಿಚಾರಸವಾದ - ಗುಣ = "ಉತ್ಕರ್ಷ ಪ್ರಯೋಜಕೋಧರ್ಮಃ ಗುಣಃ" ಇಂತಹ ಅನೇಕ ಗುಣಗಳನ್ನು ಉಪಾ ಸನೆಯ ಗೈವುತಲಿ, ಧ್ಯಾನೋಪಾಸನದಿಂದ ಚಿಂತಿಸುತ್ತ, ಈ ದೇಹದೊಳಗೆ, ಇರುತಿಹರು. ಈ ಸ್ಥೂಲದೇಹದೊಳಗೆ ಇರುವವರಾಗಿದ್ದಾರೆ.

**ದ್ರೌಪದೀಶಪತಿ ವಿಠಲರು:** ಈ ಸುಷುಮ್ನಾದ್ಯಖಿಳ ||

**ಭಾವಸೂಚನ:** ಈ ಸುಷುಮ್ನೇತಿ ||

ಸೂಚನೆ:—ಹಿಂದಿನ ಟೀಕಾಕಾರರು ನಾಡಿ ವಿಭಾಗ ವಿವರ ಈ ಎಂಟನೇ ಪದ್ಯದಡಿಯಲ್ಲೇ ಬರೆದಿರುವರು. ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಹಿಂದೆ ೩ನೇ ಪದ್ಯದಲ್ಲಿ ವಿವರಿಸಿರುವರು. ಶ್ರೀ ಜಗನ್ನಾಥದಾಸರಾಯರು ಮೂಲದಲ್ಲಿ ಪದ್ಯ ೧೨, ೧೩, ೧೪ರಲ್ಲಿ ನಾಡೀ ಶಾಖೆಗಳನ್ನು ಹೇಳಿದ್ದಾರೆ. ಮೂಲಕ್ಕನುಸರಿಸಿ ೧೪ನೇ ಪದ್ಯದಲ್ಲಿ ಉಪನಿಷತ್ ಮಾನಸಸ್ಮೃತಿ ಸುಳಾದಿ ವಿವರಗೈಸುತ್ತದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಈ ಸುಷುಮ್ನಾ" ಇತಿ || " ಕೋಶಃ " – ಸಮೂಹಃ || " ಇಪ್ಪುದು " ಇರುವದು. " ಮೂಲೇಶಃ " ಹೃತ್ಕಮಲೇ || ೮ ||

## ಕನ್ನಡಾರ್ಥ

" ನಾಡೀಕೋಶ " ಎಂದರೆ " ನಾಡೀ ಸಮೂಹ" ಎಂದು ಅರ್ಥ. "ಇಪ್ಪುದು" – ಇರುವದು. "ಮೂಲೇಶ" ನಾಮಕ ನಾರಾಯಣನು ಹೃದಯ ಕಮಲದಲ್ಲಿ ಇರುವನು; ಅವನನ್ನು ಬ್ರಹ್ಮ ಮುಂತಾದ ಸಕಲ ದೇವತೆಗಳೂ ಭಜಿಸುವರು; ಎಂದು ಭಾವ || ೮ ||

**ಅವತರಣಿಕಾ:** ಈ ನಾಡಿಗಳಲ್ಲಿ ಭಾಗೀರಥಿಯೇ ಮೊದಲಾದ ನದಿಗಳು ಇರುವವೆಂದು ಹೇಳುತ್ತಾರೆ. ನಾಡಿಗಳಲ್ಲಿ ನದಿಗಳಿರುವದು ಆಶ್ಚರ್ಯವಾದರೂ ಸೂರಿಜ್ಞಾನಿಗೋಚರವೆಂದು ಉಪದೇಶಿಸುತ್ತಾರೆ.

ಮೂಲ:

**ಸೂರಿಗಳು ಚಿತ್ತೈಸುವುದು ಭಾ |**
**ಗೀರಥಿಯೆ ಮೊದಲಾದ ತೀರ್ಥಗ |**
**ಳೀರಧಿಕ ಎಪ್ಪತ್ತುಸಾವಿರ ನಾಡಿಗಳೊಳಿಹವು ||**
**ಈ ರಹಸ್ಯವ ಅಲ್ಪ ಜನರಿಗೆ |**
**ತೋರಿ ಪೇಳದೆ ನಾಡಿ ನದಿಯೊಳು |**
**ಧೀರರನುದಿನ ಮಜ್ಜನವ ಮಾಡುತಲಿ ಸುಖಿಸುವರು || ೯ ||**

**ಪದ್ಯಾರ್ಥ:** ಸೂರಿಗಳು =ಜ್ಞಾನಿಗಳು, ಚಿತ್ತೈಸುವದು=ಆಲಿಸುವದು, ಕೇಳುವದು (ಚಿತ್ತವಧಾರಪರಾಕು ಚಿತ್ತೈಸುವದು) ಎಂಬ ಪದಪ್ರಯೋಗವು

ದೊಡ್ಡವರಲ್ಲಿ ವಿನಂತಿಮಾಡಲು ಪ್ರಯೋಗಿಸುತ್ತಾರೆ. ಭಾಗೀರಥಿಯೆ ಮೊದಲಾದಖಿಳ ತೀರ್ಥಗಳು = ಭಗೀರಥ ರಾಜನ ತಪಸ್ಸಿಗೊಲಿದು ಭೂತಳಕ್ಕೆ ಬಂದ ಗಂಗೆಯೆ, ಗಂಗಾ–ಗೋದಾ–ಕೃಷ್ಣಾ–ಸರಸ್ವತಿ ಮೊದಲಾದ ಸಮಸ್ತ ತೀರ್ಥಗಳು = ತೀರ್ಥಾಭಿಮಾನಿ ದೇವತೆಗಳು, ಈರಧಿಕ ಎಪ್ಪತ್ತುಸಾವಿರ ನಾಡಿಗಳೊಳಿಹವು = ಈರಧಿಕ = ಎರಡಧಿಕ ಎಪ್ಪತ್ತು, ೭೨ ಸಾವಿರ ನಾಡಿಗಳಲ್ಲಿ ತುಂಬಿಕೊಂಡಿಹರು. "ಇಡಾ ಭಾಗೀರಥೀ ಪ್ರೋಕ್ತಾ; ಪಿಂಗಳಾ ಯಮುನಾ ಸ್ಮೃತಾ ॥ ತಯೋರ್ಮಧ್ಯೇಗತಾನಾಡೀ ಸುಷುಮ್ನಾಖ್ಯಾ ಸರಸ್ವತೀ" ಇತ್ಯಾದಿ ಪ್ರಮಾಣಗಳಿಂದ ಇಡಾ ನಾಡಿಯಲ್ಲಿ ಭಾಗೀರಥಿ ನದಿ, ಪಿಂಗಳಾ ನಾಡಿಯಲ್ಲಿ ಯಮುನಾ, ಇಡಾ ಪಿಂಗಳ ಮಧ್ಯದಲ್ಲಿಪ್ಪ ಸುಷುಮ್ನಾ ನಾಡಿಯಲ್ಲಿ ಸರಸ್ವತೀ ನದಿ ಇರುವದೆಂದು ಇನ್ನು ಕೆಲವು ದಶೇಂದ್ರಿಯದಲ್ಲಿಪ್ಪ ನಾಡಿಗಳಲ್ಲಿ ನದಿಗಳ ವಿವರ ಸುಳಾದಿಯಲ್ಲಿ ಹೇಳಿದ್ದಾರೆ, ಹೊರ್ತಾಗಿ ೭೨ ಸಹಸ್ರ ನಾಡಿಯಲ್ಲಿರುವ ನದಿಗಳು. ನದ್ಯಾಭಿಮಾನಿಗಳು ಭಗವಂತನ ರೂಪಗಳು ಹೇಳಿದ ಪ್ರಮಾಣಗಳು ಸಿಕ್ಕಿಲ್ಲ. ಇದು ದೇವತಾರಹಸ್ಯವು "ರಹಸ್ಯತ್ವಾತ್ ನ ಕಥ್ಯತೇ" ಎಂದು ತಂತ್ರಸಾರ ವಚನದಂತೆ, ಈ ರಹಸ್ಯವ = ಈ ಪ್ರಮೇಯ ಗುಟ್ಟು, ಇಂಗಿತ ಅಲ್ಪಜನರಿಗೆ ತೋರಿ ಪೇಳದೆ = ಅಲ್ಪರು–ಭಗವದ್ಭಕ್ತಿ ವಿಹೀನರೂ, ತಾರತಮ್ಯ ಜ್ಞಾನಶೂನ್ಯರೂ ಮುಂತಾದ ಅಲ್ಪ ಜನರಿಗೆ ತೋರಿ ಹೇಳದೇ, ಧೀರರು ಅನುದಿನ = ಜ್ಞಾನಿಗಳಾದವರು ನಿರಂತರ "ವಾಮನ ಪುರಾಣ ಧ್ಯಾನಸ್ನಾನ ಮಾನಸಸ್ಮೃತ್ಯಾದಿ" ಗಳಲ್ಲಿ ಹೇಳಿರುವಂತೆ, ಮಜ್ಜನವ ಮಾಡುತಲಿ ಸುಖಿಸುವರು = ಧ್ಯಾನಸ್ನಾನವನ್ನು ಮಾಡುತ್ತ ಆನಂದಪಡುವರು. ಉಪಾಸನಾ ಭಾಗ ಸುಳಾದಿಲಿ ಧ್ಯಾನಸ್ನಾನ ವಿವರಣ ನೋಡುವದು.

**ದ್ರೌಪದೀಶಪತಿ ವಿಠಲರು :** ಸೂರಿಗಳು ಚಿತ್ತೈಸುವದು.

**ಭಾವಸೂಚನ :** ಸೂರೇತಿ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸೂರಿ" ಇತಿ ॥ ನಾಡೀಪ್ರಕರಣ ಸುಳಾದೀಮುಖೇನ ನದೀವಿಶೇಷಸ್ಯ ನಾಡೀ ವಿಶೇಷಃ ಅವಗಂತವ್ಯಃ ॥ "ಈರ" ಎರಡು.

ನಾಡಿಗಳಲ್ಲಿ ನದಿಗಳನ್ನೂ ಚಿಂತಿಸುವದೆಂಬುದಾಗಿ ಈ ಪದ್ಯದಿಂದ ತಿಳಿಸುತ್ತಾರೆ. ನಾಡೀಪ್ರಕರಣ ಸುಳಾದಿಗಳಿಂದ "ಯಾವ ನಾಡಿಗೆ ಯಾವ ನದಿ

ಯೆನ್ನಬೇಕು" ಇತ್ಯಾದಿ ವಿಷಯಗಳನ್ನು ತಿಳಿದುಕೊಳ್ಳಬೇಕು. "ಈರ—" ಎರಡು ॥ ೮ ॥

**ಅವತರಣಿಕಾ :** ಇನ್ನು ದೇಹದೊಳಗೆ ಇಪ್ಪ ಬಲಗಡೆಯ ಭಾಗ ಮಹತ್ತತ್ವಾತ್ಮಕ ನಾಡಿಗಳು ಎಡಗಡೆಯ ಭಾಗದಿ ಮಹದೇವತತ್ವಾತ್ಮಕ (ಅಹಂಕಾರತತ್ವ) ನಾಡಿಗಳಲ್ಲಿ ದೇವತೆಗಳು ಯಾರ್‍ಯಾರು ಇರುವರೆಂಬುದನ್ನು ವಿವರಿಸಿ ಹೇಳುತ್ತಾರೆ.

ಮೂಲ :

**ತಿಳಿವುದೀ ದೇಹದೊಳಗಿಹ ಯೆಡ ।**
**ಬಲದ ನಾಡಿಗಳೊಳಗೆ ದಿವಿಜರು ।**
**ಜಲಜ ಸಂಭವ ವಾಯು ವಾಣ್ಯಾದಿಗಳು ಬಲದಲ್ಲಿ ॥**
**ಎಲರುಣಿಗ ವಿಹಗೇಂದ್ರ ಚಳಿವೆ ।**
**ಟ್ಟಳಿಯ ಷಣ್ಮಹಿಷಿಯರು ವಾರುಣಿ ।**
**ಕುಲಿಶಧರ ಕಾಮಾದಿಗಳು ಎಡಭಾಗದೊಳಗಿಹರು ॥ ೧೦ ॥**

**ಪದ್ಯಾರ್ಥ :** ತಿಳವುದೀ ದೇಹದೊಳಗಿಹ = ಈ ದೇಹದೊಳಗೆ ಇರುವ ನಾಡವಿವರ ತಿಳಕೊಳ್ಳುವದು. ಎಡ ಬಲದ ನಾಡಿಗಳೊಳಗೆ = ಎಡ ಬಲ ಭಾಗದಲ್ಲಿ, ದಿವಿಜರು = ದೇವತೆಗಳು ಇರುವರು. ಬಲಭಾಗದಲ್ಲಿರುವವು ಮಹತ್ತತ್ವಾತ್ಮಕ ನಾಡಿಗಳಲ್ಲಿ ಜಲಜ ಸಂಭವ = ಕಮಲದಲ್ಲಿ ಪುಟ್ಟಿದ ಬ್ರಹ್ಮದೇವರು, ವಾಯುದೇವರು, ವಾಣ್ಯಾದಿಗಳು = ಸರಸ್ವತೀದೇವಿ ಭಾರತಿದೇವಿಯರು ಬಲಭಾಗದ ನಾಡಿಗಳಲ್ಲಿ ಮತ್ತು ಎಡಭಾಗದ ನಾಡಿಗಳಲ್ಲಿ, ಎಲರುಣಿಗ = ಗಾಳಿಯೆ ಆಹಾರವಾಗಿವುಳ್ಳ ಶೇಷ, ವಿಹಗೇಂದ್ರ = ಪಕ್ಷಿಗಳಿಗೆ ಶ್ರೇಷ್ಠನಾದ ಗರುಡದೇವರು, ಚಳಿವೆಟ್ಟಳಿಯ = ಹಿಮ ಮಂಜು, ಚಳಿ ಎಂತ, ವೆಟ್ಟ= ಬೆಟ್ಟ, ಹಿಮವತ್ಪರ್ವತಾಭಿಮಾನಿ ದೇವತೆಯ ಅಳಿಯ = ಮಗಳು-ಪಾರ್ವತಿದೇವಿಯ ಪತಿ ರುದ್ರ, ಷಣ್ಮಹಿಷಿಯರು = ಶ್ರೀ ಕೃಷ್ಣದೇವರ ಆರು ಜನ ಪತ್ನಿಯರು—ಜಾಂಬವತೀ, ಕಾಳಿಂದೀ, ನೀಲಾ, ಮಿತ್ರವಿಂದಾ, ಭದ್ರಾ, ಲಕ್ಷಣ ಈ ಆರು ಜನರು, ವಾರುಣೀ = ಶೇಷಪತ್ನಿ = ವಾರುಣಿ ಶಬ್ದದಿಂದ, ಇಲ್ಲಿ ಗರುಡ ರುದ್ರ ಪತ್ನಿ ಸೌಪರ್ಣಿ ಉಮಾದೇವಿಯರು, ಮತ್ತು ಕುಲಿಶಧರ = ವಜ್ರಾಯುಧ ಧರಿಸಿದ ಇಂದ್ರ, ಕಾಮಾದಿಗಳು = ಕಾಮದೇವರೇ ಮೊದಲಾದ ದೇವತೆಗಳು, ಎಡಭಾಗದೊಳಿಹರು = ಎಡಭಾಗದ ನಾಡಿಗಳಲ್ಲಿರುವರು.

**ದ್ರೌಪದೀಶಪತಿ ನಿಶಲರು :** ತಿಳಿವುದೀ ದೇಹ ||

**ಭಾವಸೂಚನ :** ತಿಳಿವುದೇತಿ || ಎಲರುಣಿಗ = ಸರ್ಪಾಧಿಪ, ಚಳಿವೆಟ್ಟಳಿಯ = ಹಿಮವಜ್ಜಾಮಾತ, ಕುಲಿಶಧರ ಇಂದ್ರ ||೧೦||

**ಸೂಚನೆ:** ಬಲಭಾಗದ ನಾಡಿಗಳಿಗೆ ಉತ್ತರಾಯಣದ ನಾಡಿಗಳೆಂತಲೂ ಎಡಭಾಗದ ನಾಡಿಗಳಿಗೆ ದಕ್ಷಿಣಾಯನದ ನಾಡಿಗಳೆಂತಲೂ ಸಂಜ್ಞಾ. ಶಾಸ್ತ್ರ ಸಮ್ಮತವಿದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತಿಳಿವುದು" ಇತಿ || ದಿವಿಜಾಃ ದೇವಾಃ || "ಯಲರುಣಿಗ" ಸರ್ಪಃ | "ವಿಹಗೇಂದ್ರಃ" ಗರುಡಃ | "ಚಳಿವೆಟ್ಟಃ" ಹಿಮಾಲಯಃ | ವಾರುಣೀ ಶೇಷಭಾರ್ಯಾ | ಅನೇನ ಸೌಪರ್ಣೀ ಪಾರ್ವತ್ಯೌ ಅಪಿ(ಚ)ಗ್ರಾಹ್ಯೇ || "ಕುಲಶಃ" ವಜ್ರಮ್ ||೧೦||

## ಕನ್ನಡಾರ್ಥ

ನಾಡಿಗಳಲ್ಲಿ ಇರುವ ದೇವತೆಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾರೆ— "ತಿಳಿವುದು" ಈ ಪದ್ಯದಿಂದ, "ದಿವಿಜರು" ಅಂದರೆ ದೇವತೆಗಳು. "ಯಲರುಣಿಗ" ನೆಂದರೆ ಗಾಳಿಯನ್ನು ತಿಂದು ಬದುಕುವ ಸರ್ಪ; ಅಂದರೆ "ಶೇಷ" ಎಂದು ತಿಳಿಯಬೇಕು. "ವಿಹಗೇಂದ್ರಃ" ಆಕಾಶದಲ್ಲಿ ಸಂಚರಿಸುವ ಪಕ್ಷಿಗಳಲ್ಲಿ ಶ್ರೇಷ್ಠ ರಾಜನಾದ ಗರುಡನು. "ಚಳಿವೆಟ್ಟ" ಚಳಿಯುಳ್ಳ ಬೆಟ್ಟ – ಹಿಮಾಲಯ. ಹಿಮವತ್ಪರ್ವತ ರಾಜನ ಅಳಿಯನು ಮಹಾರುದ್ರದೇವನು "ಚಳಿವೆಟ್ಟಳಿಯನು" ಎಂದು ತಿಳಿಯಬೇಕು. ಶೇಷಪತ್ನಿಗೆ "ವಾರುಣೀ" ಎಂದು ಹೆಸರು. ಇದರಿಂದ "ಪಾರ್ವತಿ ಸೌಪರ್ಣಿ–ರುದ್ರ–ಗರುಡ ಪತ್ನಿಯರು– ಇವರನ್ನೂ ಇಲ್ಲಿ ಪರಿಗಣಿಸತಕ್ಕದ್ದು" ಎಂದು ಸೂಚಿತವಾಗುತ್ತದೆ. "ಕುಲಿಶ" ಪಾಷಾಣ ||೧೦||

**ಅವತರಣಿಕಾ :** ಎಡಬಲದಲ್ಲಿಪ್ಪ ನಾಡಿಗಳಲ್ಲಿ ತತ್ತದ್ದೇವತೆಗಳಲ್ಲಿ ಗರುಡಾರೂಢನಾದ ಹರಿಯು ತಾನಿದ್ದು, ಜೀವರುಗಳ ಯೋಗ್ಯತೆಯಂತೆ ಅವರಿಂದ ತಕ್ಕ ಸಾಧನ ಮಾಡಿಸಿ ಸಂತೈಸುವನು ಎಂಬುದಾಗಿ ನಿರೂಪಿಸುತ್ತಾರೆ. ಪ್ರತಿಪದ್ಯ ಪ್ರಮೇಯಗಳಲ್ಲಿ ಪುನಃ ಪುನಃ ಭಗವಂತನ ಮಹಿಮೆ ಕೊಂಡಾಡಿ ಸ್ಥಿರಮನಸ್ಸು ಚಿತ್ತಕೊಡುವವೇ ಜ್ಞಾನಿಗಳ ಕರ್ತವ್ಯ.

ಮೂಲ :

**ಇಕ್ಕೆಲದೊಳಿಹ ನಾಡಿಯೊಳು ದೇ ।**
**ವರ್ಕಳಿಂದೊಡನಾಡುತಲಿ ಪೊಂ ।**
**ಬಕ್ಕಿದೇರನು ಜೀವರಧಿಕಾರಾನುಸಾರದಲಿ ॥**
**ತಕ್ಕ ಸಾಧನಮಾಡಿ ಮಾಡಿಸು ।**
**ತಕ್ಕರದಿ ಸಂತೈಪ ಭಕ್ತರ ।**
**ದಕ್ಕಗೊಡನಸುರರ್ಗೆ ಸತ್ಪುಣ್ಯಗಳನಪಹರಿಪ ॥ ೧೧ ॥**

**ಪದ್ಯಾರ್ಥ :** ಇಕ್ಕೆಲದ = ಎರಡೂ ಭಾಗದ ಅಂದರೆ ಎಡಬಲ ಭಾಗಗಳಲ್ಲಿರುವ, ನಾಡಿಯೊಳು = ನಾಡಿಗಳಲ್ಲಿ, ದೇವರ್ಕಳಿಂದೊಡಗೂಡಿ = ಹಿಂದಿನ ಪದ್ಯದಲ್ಲಿ ವಿವರಿಸಿದಂತೆ, ಎಡಬಲಭಾಗ ನಾಡಿಗಳಲ್ಲಿರುವ, ದೇವರ್ಕಳಿಂದೊಡನಾಡುತಲಿ = ದೇವತೆಗಳಿಂದ ಕೂಡಿಕೊಂಡು, ವಿಹಾರಮಾಡುತ್ತ- ಸಂಚಾರ ಮಾಡುತ್ತ ಪೊಂಬಕ್ಕಿದೇರನು = ಸುವರ್ಣವರ್ಣವೇ ಪಂಖಗರಿಯಾಗಿವುಳ್ಳ ಎಂದರೆ ಗರುಡನೇ ರಥವಾಗಿವುಳ್ಳ, ಗರುಡಾರೂಢನಾದ ಹರಿ ಶ್ರೀಕೃಷ್ಣ, (ನಾಡಿಗಳು ಗಮನಶೀಲವಾದವು, ಗರುಡದೇವರು ಗಮನೋತ್ಸುಕ್ಯವುಳ್ಳ ಹರಿ ವಾಹನನು, ಹರಿಯ ಧ್ಯಾನಕ್ಕೆ ಗರುಡದೇವರ ಪ್ರಸಾದ ಮುಖ್ಯಕಾರಣ. ಪೊಂಬಕ್ಕಿ ದೇರನು ಎಂಬ ಪದಪ್ರಯೋಗವು ಸಾರ್ಥಕವಾದದು. ಇದರಂತೆ ಎಲ್ಲ ಪದಗಳ ಸಾರ್ಥಕ ಅರ್ಥ ಗುರುಗಳು ತಿಳಿಸಬೇಕೆಂದು ಪ್ರಾರ್ಥನೆ) ಇಂತಹ ಗರುಡಾರೂಢನಾದ ಹರಿಯು, ನಾಡಿಗಳಲ್ಲಿ ವ್ಯಾಪಾರಮಾಡುತ್ತಾ ಜೀವರಧಿಕಾರಾನುಸಾರದಲಿ = ಜೀವರ ಯೋಗ್ಯತಾನುಗುಣವಾಗಿ, ತಕ್ಕ ಸಾಧನಮಾಡಿ ಮಾಡಿಸುತ್ತಾ = ಯೋಗ್ಯವಾದ ಸಾಧನಮಾಡಿ = ತಾನು ದೇವತೆಗಳಿಗೆ ಪ್ರೇರಣಾಮಾಡಿ, ಮಾಡಿಸುತ್ತ = ತತ್ವಾಭಿಮಾನಿ ದೇವತೆಗಳ ದ್ವಾರಾ, ಜೀವನಿಂದ ಸಾಧನಮಾಡಿಸುತ್ತಾ, ಅಕ್ಕರದಿ ಸಂತೈಪ, ಭಕ್ತರ ಬಹುಪ್ರೀತಿಯಿಂದ ಸಮಾಧಾನಮಾಡುತ್ತ--ಇಂತಹ ಸಮೀಚೀನ ಜ್ಞಾನವುಳ್ಳ ಭಕ್ತರನ್ನು ರಕ್ಷಿಸುವನು. ಸತ್ಪುಣ್ಯಗಳ ಅಸುರರಿಗೆ ದಕ್ಕಗೊಡ = ಸಮೀಚೀನವಾದ ಇಂಥ ಪುಣ್ಯಗಳನ್ನು ದೈತ್ಯಾದಿ ಸ್ವಭಾವವುಳ್ಳವರಿಗೆ ಎಂದಿಗೂ ದಕ್ಕಗೊಡ = ಜೀರ್ಣಿಸಿಕೊಳ್ಳಲಾರದಂತೆ ಮಾಡಿ, ಅವರ ಸತ್ಪುಣ್ಯಗಳನ್ನು ಅಪಹರಿಸುವನು.

**ದ್ರೌಪದೀಶಪತಿ ವಿಠಲರು :** ಇಕ್ಕೆಲದೊಳಿಹ ॥

**ಭಾವಸೂಚನ :** ಇಕ್ಕೆಲದೊಳಿರುವವು – ಪ್ಞೊಂಬಕ್ಕಿದೇರನು ಸ್ವರ್ಣ ವರ್ಣ ಗರುಡಾರೂಢ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಇಕ್ಕೆಲದ" ಇತಿ ॥ "ಇಕ್ಕೆಲದ" — ಎಡದ ॥ "ದೇವರ್ಕಳು" – ದೇವತೆಗಳು ॥ "ಪ್ಞೊಂಬಕ್ಕೆ"–ಗರುಡಃ ॥ "ಪಿತಶುಕ್ಲಾರುಣೋ ಹರಿಃ" ಇತ್ಯುಕ್ತೇಃ ॥ "ತಕ್ಕ" ಯೋಗ್ಯ ॥ "ಅಕ್ಕರ"–ಹರ್ಷ ॥ "ಪುಣ್ಯ"–ದೈತ್ಯಾನಾಮ್ ॥ ೧೧ ॥

**ಕನ್ನಡಾರ್ಥ**

ಪೀತ–ಶುಕ್ಲ–ಅರುಣ–ವರ್ಣಗಳಿಂದ ಒಪ್ಪುವ ಹರಿಯು ಗರುಡರಥಾರೂಢನಾಗಿರುತ್ತಾನೆ. ದೈತ್ಯರು ಮಾಡಿದ ಪುಣ್ಯಗಳನ್ನು ಅವರಿಗೆ ಯಾವದೊಂದನ್ನು ನಿಮಿತ್ತೀಕರಿಸಿ ಆ ದೇವತೆಗಳಿಗೆ ಕೊಡುವನೆಂದು ಈ ಪದ್ಯದಲ್ಲಿರುವ ಫಲಶ್ರುತಿ ॥

**ಅವತರಣಿಕಾ :** ಇನ್ನು ಮುಖ್ಯವಾಹ ಸುಷುಮ್ನಾ ನಾಡಿಯ ಇರುವಿಕೆ, ಇದಕ್ಕೆ ಇರುವ ಶಾಖಾಗಳ ವಿವರಗಳನ್ನು ೧೨, ೧೩, ೧೪ ಈ ಮೂರು ಪದ್ಯಗಳಿಂದ ವಿವೇಚಿಸುತ್ತಾರೆ. ಮೊದಲಿಗೆ ಇಲ್ಲಿ ಸುಷುಮ್ನಾ ನಾಡೀ ಪ್ರಭೇದ ಹೇಳುತ್ತಾರೆ.

ಮೂಲ :

**ತುಂದಿವಿಡಿದಾ ಶಿರದ ಪರಿಯಂ ।**
**ತೊಂದೆ ವ್ಯಾಪಿಸಿ ಇಹುದು ತಾವರೆ ।**
**ಗಂದ ನಿಹನದರೊಳಗೆ ಅದಕೀರೈದು ಶಾಖೆಗಳು ॥**
**ಒಂದಧಿಕ ದಶಕರಣದೊಳು ಸಂ ।**
**ಬಂಧಗೈದಿಹವಲ್ಲಿ ರವಿಶಶಿ ।**
**ಸಿಂಧು ನಾಸತ್ಯಾದಿಗಳು ನೆಲೆಗೊಂಡಿಹರು ಸತತ ॥ ೧೨ ॥**

**ಪದ್ಯಾರ್ಥ :** ತುಂದಿವಿಡದಾ ಶಿರದ ಪರಿಯಂತ = ಗುದಮೂಲ ಆರಂಭವಾಗಿ ಶಿರಸ್ಸಿನವರೆಗೂ, ಒಂದೆ ವ್ಯಾಪಿಸಿ ಇಹದು = ಸುಷುಮ್ನಾ ನಾಡಿಯು ಋಜುವಾಗಿ ನೆಟ್ಟಗೆ ಶಿರದವರೆಗೆ ಒಂದೆ ಸೂಕ್ಷ್ಮವಾಗಿ ಪಸರಿಸಿರುತ್ತದೆ. ಅದರೊಳಗೆ ತಾವರೆಗಂದನಿಹ (ಕಂದ) ಇದರಲ್ಲಿ ಕಮಲದಲ್ಲಿ ಹುಟ್ಟಿದ ಬ್ರಹ್ಮದೇವರು ಇರುವರು. ಮುಖ್ಯ ಬ್ರಹ್ಮದೇವರು ಅಭಿಮಾನಿಗಳು, ಅದಕೀರೈದು ಶಾಖೆಗಳು = ಆ ಸುಷುಮ್ನಾ ನಾಡಿಗೆ ಈರೈದು-ಹತ್ತು ಶಾಖೆ = ಟೊಂಗೆ ಎಸಳುಗಳು ೧೦

ಶಾಖಾ ನಾಡಿಗಳು, ಈ ೧೦ ಶಾಖಾ ನಾಡಿಗಳು ಒಂದಧಿಕ ದಶ ಕರಣದೊಳು ಸಮ್ಮಂಧಗೈದಿಹವು =ಮನಾದಿ ಹನ್ನೊಂದು ಇಂದ್ರಿಯಗಳಿಗೆ ಸಂಬಂಧವಾಗಿರುತ್ತವೆ. ತ್ರಿಕೋಣಮಂಡಲದಿ ಅಗ್ನಿ, ದ್ವಾದಶಮಂಡಲದಿ-ಸೂರ್ಯ, ವರ್ತುಲ ಮಂಡಲದಲ್ಲಿ ಚಂದ್ರ, ಶಿರಸ್ಸಿನಲ್ಲಿ ವರುಣ, ನಾಸತ್ಯಾದಿಗಳಿರುವರೆಂದು ತಂತ್ರ ಸಾರ ವಾಖ್ಯಾನದಂತೆ ಕಮಲಗತ ಮಂಡಲದಲ್ಲಿಪ್ಪ ರೂಪ ಹೇಳುತ್ತಾರೆ.

ಇದಕ್ಕೆ ವಿಜಯದಾಸರ ಸುಳಾದಿ-ಸೃ. ಪ್ರ. ಸು. ೪೨, ಪುಟ ೨೭೭ ತ್ರಿವಿಡಿತಾಳ. ನಾಶಿಕದಿ ೧) ಇಡಾ, ೨) ಪಿಂಗಳ ನಾಡಿಗಳು, ೩) ಪುಂಸಾ, ೪) ಲಂಬುಸಾ ಎರಡು ಕಂಣಿನಲಿ । ಲೇಸು ೫) ಗಾಂಧಾರಿ, ೬) ಹಸ್ತಿನಿ ಎಂಬೊ ನಾಡಿ ಪ್ರ । ಕಾಶವಾಗಿವೆ ನೋಡಿ ಕರ್ಣದಲಿ । ಆ ೭) ಶಾರದ ಜಿಂಹ್ವೆಯಲ್ಲಿಪ್ಪದು । ಭೂಷಣವಾಗಿದ್ದ ೮) ಕುಹೂ ಗುದದಲ್ಲಿ । ದೋಷವಿಲ್ಲದೆ ಲಿಂಗದಲ್ಲಿ ೯) ಶಂಕಿನಿ ನಾಡಿ ೧೦) ಸುಷುಮ್ನ ನಾಡಿ ಮೂಲಾಧಾರವಿಡಿದು । ಶಾಶಿನಿ ಇಲ್ಲದೆ ಮೂರ್ಧ್ನಿ ತನಕ । ಶ್ವಾಸ ಅಲ್ಲಿಂದ ಪೋದವಗೆ ಪೂರ್ಣಜ್ಞಾನ । ವಿಾಸಲ ಪದವಿಗೆ ಅರ್ಹ ನಯ್ಯಾ— ಈ ಸಮಸ್ತ ನಾಡಿಗಳಲ್ಲಿ ಶಿವಪುತ್ರರು । ದಾಸಪ್ರಾಣರು ಮತ್ತೆ ಮುಖ್ಯ ಪ್ರಾಣ । ಶ್ರೀಶನ ಸೇವೆಗೋಸುಗಾಧಿಷ್ಠಾನರಾಗಿ । ಈ ಶರೀರದ ಸ್ಥಿತಿ ನಡೆಸುವರು । ದೇಶ ಕಾಲ ಬಿಡದೆ ಆವಾವ ಕರ್ಮಗಳು । ಲೇಶ ತಪ್ಪದಂತೆ ಪ್ರೇರಿಪರೊ । ಲೇಶಿಗೆ ಇವರಯ್ಯಾ ಹೊಲ್ಲಿಗೆ ಇವೆ ನಾಮ । ಆಸುರೀ ಜನರಲ್ಲಿ ಮಾಡಿಸುವರು । ಈ ಶುಂಠರಿಗೆ ಮುಖ್ಯ ಕಲಿ ಪ್ರೇರಕನಾಹ । ವಾಸುದೇವನೆ ಅವಗೆ ಶಿಕ್ಷಕನು । ದೇಶಕಾಲ ವ್ಯಾಪ್ತ ವಿಜಯವಿಠ್ಠಲ ಹರಿಯು । ದಾಸರೊಳಗೆ ಮುಖ್ಯ ಪ್ರಾಣ ಬಲ್ಲಿದ ಕಾಣೊ ॥ ೩ ॥ ರವಿಶಶಿ = ಸೂರ್ಯ ಚಂದ್ರರು, ಸಿಂಧು = ವರುಣದೇವರು, ನಾಸತ್ಯಾದಿಗಳು = ನಾಸತ್ಯದಸ್ರ ಎಂಬ ಅಶ್ವಿನಿ ದೇವತೆಗಳೆ ಮೊದಲಾದ ಸುರರು, ಸತತ =ನಿರತ, ನೆಲೆಗೊಂಡಿಹರು, ಇರುವರು ಎಂದು ಇಷ್ಟೇ ಪದ್ಯಾರ್ಥ.

**ದ್ರೌಪದೀಶಪತಿ ವಿಠಲರು :** ತುಂದಿವಿಡಿದಾಶಿರ— ತಾವರೆಗಂದನಿಹನೆಂದರೆ = ಬ್ರಹ್ಮಾ ೧, ಒಂದು ಸುಷುಮ್ನಾ ನಾಡಿಗೆ ೧೦ ಶಾಖಾ ನಾಡಿ, ೧೧ ಇಂದ್ರಿಯಕ್ಕೆ ಸಾಧಿಸಿದೆ.

**ಭಾವಸೂಚನ :** ತುಂದೇತಿ ನಾಭ್ಯಧಃ ಪ್ರದೇಶಾ, ತಾವರೆಗಂದ-ಬ್ರಹ್ಮ ಈರೈದು = ಹತ್ತು, ನಾಸತ್ಯಾ = ಅಶ್ವಿನಿ ದೇವತೆಗಳು,

ಇಲ್ಲಿ ವಿಶೇಷ ವಿಚಾರ — ಶ್ರೀಮದಾಚಾರ್ಯರ ತಂತ್ರಸಾರ, ಮಾನಸ ಸ್ಮೃತಿ, ಶ್ರೀ ಪುರಂದರ, ಶ್ರೀ ವಿಜಯದಾಸರ ಸುಳಾದಿಗಳು, ಅಧ್ಯಾತ್ಮಮಾಲಾದಿ ಗ್ರಂಥಗಳ ಆಧಾರದ ಮೇಲಿಂದ ನಾಡಿ ವಿಭಾಗ ವಿಚಾರಮಾಡುತ್ತದೆ. ಶ್ರೀ ವಿಜಯದಾಸರ ಪಾದವೆ ಗತಿ ಎಂದು ಮೊದಲಿಗೆ ಸ್ಮರಿಸಿದರೆ ಸರ್ವವು ಸುಲಭ.

ಪದ್ಯ ೧೨.

**ನಾಡಿವಿಭಾಗ ವಿಚಾರ:** ಈ "ಮೂಲಾಧಾರಂ ಸಮಾರಭ್ಯತ್ವಾ ಮೂರ್ಧಾನಮೃಜುಸ್ಥಿತಾ ॥ ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಿಕಾ ಆರ್ಯಾ ಪ್ರಕಾಶಿನೀ ॥ ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚಪ್ರಭೇದಿನಿ" ॥ ೧೬೧ ॥ ಎಂದು ತಂತ್ರಸಾರವೇ ಇದಕ್ಕೆ ಮೂಲ. ಮೂಲಾಧಾರ ತುಂದಿ ಮೊದಲುಮಾಡಿಕೊಂಡು ಶಿರದ ಪರಿಯಂತವಾಗಿ ೧ ಕೂದಲು ೧೦೦ ವಿಭಾಗ ಸೀಳಿದರೆ ಎಷ್ಟು ಸಣ್ಣದೊ ಅಷ್ಟು ಬಹು ಸೂಕ್ಷ್ಮವಾಗಿ ಸೀದಾ–ನೆಟ್ಟಗೆ ಶಿರದ ಪರಿಯಂತ ಹೋಗಿದೆ. ಇದಕ್ಕೆ ಸುಷುಮ್ನಾ ಬ್ರಹ್ಮನಾಡಿ ಎಂತ ಅನ್ನುತ್ತಾರೆ. ಇದು ೫ ವಿಭಾಗವಿದೆ. ೧ ಮಧ್ಯದಲ್ಲಿ ಸುಷುಮ್ನಾ (ಬ್ರಹ್ಮನಾಡಿ) ಲೋಹಿತ ವರ್ಣ ನಾರಾಯಣ. ಪಶ್ಚಿಮಕ್ಕೆ ವಜ್ರಿಕಾನಾಡಿ, ಇಲ್ಲಿದಕ್ಕೆ ಹರಿತವರ್ಣ ಪ್ರದ್ಯುಮ್ನ. ೨ ಉತ್ತರಕ್ಕೆ ಆರ್ಯಾನಾಡೀ = ನೀಲವರ್ಣ ಅನಿರುದ್ಧ. ಪೂರ್ವಕ್ಕೆ ಪ್ರಕಾಶಿನಿನಾಡಿ = ಶುಭ್ರವರ್ಣ ವಾಸುದೇವ. ದಕ್ಷಿಣಕ್ಕೆ = ವೈದ್ಯುತಾ ಪಿಂಗಲವರ್ಣ ಸಂಕರುಷಣ. ಈ ಪ್ರಕಾರ ಐದು ವಿಭಾಗವಾದುದು ಒಂದೇ ಇದು ಸುಷುಮ್ನಾ ಬ್ರಹ್ಮನಾಡಿ ಎಂದು ಕರೆಸಿಕೊಳ್ಳುತ್ತದೆ. ಪ್ರಮಾಣ ತಂತ್ರ ಸಾರ. "ಪೃಷ್ಠವಾಮಾಗ್ರದಕ್ಷಾಂತ ಭೇದಾಸ್ತೇ ಚಕ್ರಮೇಣತು ಹರಿಃನ್ನೀರ ಲಸಿತಃಪಿಂಗಲೋಹಿತಶ್ಚಾತ್ರ ಕೇಶವಃ ॥ ೧೬೪ ॥ "ಏವಂ ಪಂಚಭೇದಪೇತಾ ಸುಷುಮ್ನಾಯಾಃ ಪರಿತಃ ಚತುಃ ದಿಕ್ಷು ವಿದ್ಯಮಾನಾಃ ಅನ್ನನಾಡೀರಾಹಃ ॥ "ಇಡಾಚ ಪಿಂಗಳಾಚೈವ ವಜ್ರಿಕಾ ಧರಣೀ ತಥಾ ॥ ಸುಷುಮ್ನಾಯಾಶ್ಚತುರ್ದಿಕ್ಷು ವಜ್ರಿಕಾದ್ಯಾಸು ತತ್ರಚ ॥ ೧೬೬ ॥ ಚತುರ್ಮೂರ್ತಿಃ ಸಭಗವಾನ್ ಹೃದಯೇ ಸುವ್ಯವಸ್ಥಿತಾಃ । ದ್ವಾಸಪ್ತತಿ ಸಹಸ್ರಾಣಿ ನಾಡ್ಯೋನಾಸ್ತು ಪ್ರಧಾನತಃ ॥೧೬೭॥ ಬೃಹತೀ ಸಹಸ್ರಸ್ಪರ್ಶಾನಾಂ ಋಚಾಂ ವಾಚ್ಯೋತ್ರಕೇಶವಃ ॥ **ರೂಪಾಣಾಂ ಲಕ್ಷಣಂತೇ ರಹಸ್ಯತ್ವಾನ್ನಕಥ್ಯತೇ** ॥ ೧೬೮ ॥ ಈ ತಂತ್ರಸಾರಕ್ಕೆ ಮೂಲಾಧಾರವಾದ—

**ಷಟ್‌ಪ್ರಶ್ನೋಪನಿಷತ್** ೩ನೇ ಪ್ರಶ್ನದಲ್ಲಿ ಉ. "ಅತ್ರೈತದೇಕಶತಾಂ ನಾಡೀನಾಂ। ತಾಸಾಂ ಶತಂಶತಮೇಕೈಕಸ್ಯಾಂ ದ್ವಾಸಪ್ತತಿಂ ಪ್ರತಿಶಾಖಾ ನಾಡೀ ಸಾಹಸ್ರಾಣ್ಯಾ – ಸುವ್ಯಾನಶ್ಚರತ್ಯಥೈಕಯೋರ್ಧ್ವಮುದಾನಃ ಪುಣ್ಯೇನ ಪುಣ್ಯಂಲೋಕಂನಯತಿ–ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಂ" ೬ನೇ ಮಂತ್ರಕ್ಕೆ ಭಾಷ್ಯಟೀಕಾನುಸರಿಸಿ **ಶ್ರೀಮಂತ್ರಾಲಯರಾಯರ ಖಂಡಾರ್ಥ.** ಅತ್ರಶರೀರೆ ಏತದೇಕಶತಂ ಏಕೋತ್ತರಶತಂ ನಾಡೀನಾಂ ಶಿರಾಣಾಂಭವತಿ। ತಾಸಾಂ ನಾಡೀನಾಂ ಮಧ್ಯೇ ಏಕೈಕಸ್ಯಾಂ ನಾಡ್ಯಾಂಶತಂ ಶತಂ ಪ್ರತಿಶಾಖಾನಾಡ್ಯೋಭವಂತಿ। ಪುನಃತಾಸಾಂ ಪ್ರತಿಶಾಖಾನಾಡ್ಯೋ ಭವಂ ತೀತಿವಕ್ತವ್ಯಂ ಏವಂಚಸಂಭೂಯ ಪ್ರತಿಶರೀರಂ ತಾಸಾಂ ಪ್ರತಿಶಾಖಾ ನಾಡೀನಾಂ ಸಹಸ್ರಾಣಿ ದ್ವಾಸಪ್ತತೀಯಂ ಜಾನೀಯಂ। ಪ್ರತಿ ಶಾಖಾನಾಡೀ ಸಹಸ್ರಾಣಾಂ ದ್ವಾಸಪ್ತತಿಮಿತಿ ದ್ವಿತೀಯಾಷಷ್ಟ್ಯರ್ಥೇಯೋಜನೀಯಾ॥

ಇದರಂತೆ ಮಾಂಕಾಲೀಯ ಟಿಪ್ಪಣಿಯೂ ಇದೆ. ಇದರ ಸಾರಾಂಶವೇನೆಂದರೆ, ಈ ದೇಹದಲ್ಲಿ ಮುಖ್ಯ ನೂರಾ ಒಂದು ನಾಡಿಗಳಿವೆ. ೧೦೧ಕ್ಕೆ ೧೦೦ ರಿಂದ ಗುಣಿಸಿದರೆ ೧೦೧೦೦ ಹತ್ತುಸಾವಿರದಾ ನೂರು ನಾಡಿಗಳಾಗುತ್ತವೆ. ಇವುಗಳ ಪೈಕಿ ೧೦೦೦೦ ಸಾವಿರ ನಾಡಿಗಳಿಗೆ ಒಂದೊಂದಕ್ಕೆ ೭೨ ಪ್ರಕಾರ ಗುಣಿಸಿದರೆ ೧೦೦೦೦ × ೭ = ೭೦೦೦೦ – ಎಪ್ಪತ್ತುಸಾವಿರ ಆದವು, ಉಳಿದ ೧೦೦ ಮುಖ್ಯ ನಾಡಿಗಳಿಗೆ ೨೦ ಪ್ರಕಾರ ಗುಣಿಸಿದರೆ ೨ ಸಾವಿರ, ಹೀಗೆ ಒಟ್ಟಿಗೆ ೭೨೦೦೦ ಸಾವಿರ ನಾಡಿಗಳಾಗುತ್ತವೆ. ಹೀಗೆ ಉಪನಿಷತ್ ವಾಕ್ಯ.

ಇದಕ್ಕೆ **ಶ್ರೀ ಪುರಂದರದಾಸರಾಯರು,** ಶ್ರೀ ವಿಜಯದಾಸಾರ್ಯರ ಸುಳಾದಿಗಳು ಪ್ರಮಾಣವಾಗಿವೆ. **ಸುಳಾದಿ** "ಕಂದಾದಿ ಪೊರಟಂಥ ಬ್ರಹ್ಮ ನಾಡಿಗೆ ಪೂರ್ವ। ಸುಂದರ ಪ್ರಕಾಶಿನೀ ವೈದ್ಯುತಾದಕ್ಷಣಕ್ಕೆ। ಪೊಂದಿದೆ ಪಶ್ಚಿಮಕ್ಕೆ ವಜ್ರಿಕಾನರವೈಯ್ಯ। ನಿಂದಿದೆ ಉತ್ತರಕೆ ಆರ್ಯಕವೆಂದು ತಿಳಿ। ಅಂದವಾಗಿಪ್ಪನಾಡಿ ಪಂಚಕ ಸೇರಿಕೊಂಡು। ವಂದೆ ಸುಷುಮ್ನವೆಂದು ಪೆಸರು ಪಡೆದಿಹದಯ್ಯಾ। ಸಂದೇಹಬಡದಿರು ನಿಶ್ಚಯವೆಂದು ತಿಳಿಯೊ। ಇಂದಿರಾಪತಿ ನಮ್ಮ ಪುರಂದರವಿಠಲನು। ಎಂದೆಂದಿಗೂ ಬಿಡದೇ ಸಲಹುವ ನಿನ ಎಂದು ॥೧॥ ಶ್ರೀಮದಾಚಾರ್ಯರ ತಂತ್ರವಾಕ್ಯದಂತೆ ಇದೆ. ಸೈವ ಪಂಚ ಪ್ರಭೇದಿನಿ ॥ ಸುಷುಮ್ನಾವೆ ೫ ಭೇದವಾಗಿದ್ದರೂ ಒಂದೇ ನಾಡಿಯೆಂದು ಕರೆಸುತ್ತದೆ.

ಇನ್ನು **ಶ್ರೀ ವಿಜಯದಾಸಾರ್ಯರು** — ಸೃಷ್ಟಿ ಪ್ರಕರಣ ಸು. ೪೩, ಪುಟ ೨೭೯–೨೮೦ ಧ್ರುವತಾಳ — ಹತ್ತೈದು ವಿಂಶತಿ, ಮ್ಯಾಲೆರಡು ಸಾವಿರ ಈ ಸುಳಾದಿ ಮೊದಲಿಗೆ ಕೊಟ್ಟಿದೆ. ಅವರು ಹೇಳಿದಂತೆ ಅಧ್ಯಾತ್ಮಮಾಲಾ ಕಾರರು ಹೇಳಿದ್ದಾರೆ. ಅದರ ಲೆಕ್ಕವನ್ನೆ ಕೆಳಗೆ ಕೊಟ್ಟಿದೆ.

## ಎಲ್ಲ ನಾಡಿಗೆ ಮೂಲಾಧಾರ

ತುಂದಿ ಮೂಲಾಧಾರವಿಡಿದು ಶಿರಃಪರಿಯಂತ ಬಹು ಸೂಕ್ಷ್ಮದಿಂದ ಋಜುವಾಗಿ (ನೆಟ್ಟಗೆ) ಒಂದೆ ನಾಡಿ ಹೋಗಿದೆ.

೧. ಇದೆ ಸುಷುಮ್ನಾ ಬ್ರಹ್ಮನಾಡಿಯು ಇದು ಪ್ರಭೇದವಾಗಿದೆ.

೧. ಪಶ್ಚಿಮಕ್ಕೆ—ವಜ್ರಿಕಾ–ಹರಿದ್ವರ್ಣ–ಪ್ರದ್ಯುಮ್ನ.
೨. ಉತ್ತರಕ್ಕೆ—ಆರ್ಯಾ–ನೀಲವರ್ಣ–ಅನಿರುದ್ಧ.
೩. ಪೂರ್ವಕ್ಕೆ—ಪ್ರಕಾಶಿನಿ–ಧವಳವರ್ಣ–ವಾಸುದೇವ.
೪. ದಕ್ಷಿಣಕ್ಕೆ—ವೈದ್ಯುತಾ–ಪಿಂಗಳವರ್ಣ–ಸಂಕರ್ಷಣ.
೫. ಮಧ್ಯೇ—ಬ್ರಹ್ಮನಾಡಿ–ಲೋಹಿತವರ್ಣ–ನಾರಾಯಣ.

ಈ ಐದು ವಿಭಾಗಗಳಾದರೂ ಸುಷುಮ್ನಾ ಎಂದು ಒಂದೆ ನಾಡಿ ಎನಿಸುತ್ತದೆ. ಈ ಸುಷುಮ್ನಾ ನಾಡಿಯಲ್ಲಿಯೇ ೩೨ ಕಮಲಗಳು, ಹೃದಯಾಷ್ಟದಳ ಕಮಲದಲ್ಲಿಯೇ ಬಿಂಬದರ್ಶನ. ಸುಷುಮ್ನಾ ನಾಡಿಯೆ ಪ್ರಧಾನ, ತಂತ್ರಸಾರದಲ್ಲೂ ಹೇಳಿದ್ದಾರೆ.

೨. ಈ ಸುಷುಮ್ನಾ ನಾಡಿಗೆ ಮುಖ್ಯ ನಾಲ್ಕು ಬೇರೆ ಪ್ರಧಾನ ನಾಡಿಗಳು—

೧. ಪೂರ್ವಕ್ಕೆ—ಧರಣಿ–ಶುಭ್ರವರ್ಣ–ವಾಸುದೇವ.
೨. ಪಶ್ಚಿಮಕ್ಕೆ—ವಜ್ರಿಕಾ–ಹರಿದ್ವರ್ಣ–ಪ್ರದ್ಯುಮ್ನ.
೩. ದಕ್ಷಿಣಕ್ಕೆ (ಬಲ)—ಪಿಂಗಳ–ಪಿಂಗಟ–ಸಂಕರ್ಷಣ.
೪. ಉತ್ತರಕ್ಕೆ (ಎಡ)—ಇಡಾನಾಡಿ–ನೀಲವರ್ಣ–ಅನಿರುದ್ಧ.

೩. ಇಡಾನಾಡಿಯು, ತುದಿಯಿಂದ ಎಡಭಾಗದಲ್ಲಿದ್ದು ಹೊಕ್ಕಳಿಂದಾಳ ಅಂಕಿಯಂತೆ ಬಲಭಾಗಕ್ಕೆ ಬೆಳೆದು ಬಲಕಿವಿಗೆ ಹೋಗಿದೆ (ಇಡಾನಾಡಿ) ಗಂಗಾನದಿ.

೪. ಪಿಂಗಳಾ ನಾಡಿಯು — ತುಂದಿ ಬಲಭಾಗದಲ್ಲಿಂದಾ ಹೊಕ್ಕಳಾ ರಂಭಿಸಿ ೪ ಅಂಕಿಯಂತೆ ಎಡಭಾಗಕ್ಕೆ ಬೆಳೆದು ಎಡ ಕಿವಿಗೆ ಹೋಗಿದೆ. ಇದು ಪಿಂಗಳಾ ನಾಡಿಲಿ ಯಮುನಾ ನದಿ.

| | |
|---|---|
| ಇಡಾಂಶಗಳು ಬಲಭಾಗಕ್ಕೆ | ೫೦ ಶಾಖಾಗಳು |
| ಪಿಂಗಳಾಂಶಗಳು ಎಡಪಾರ್ಶ್ವಕ್ಕೆ | ೫೦ ಶಾಖಾಗಳು |
| ಮೂಲ ಸುಷುಮ್ನಾ ನಾಡಿ | ೧ |
| ಹೀಗೆ | ೧೦೧ ಪ್ರಧಾನ ನಾಡಿಗಳು |

೧೦೧ ನಾಡಿ: ಇವು ದೇಹದಲ್ಲಿ ಇರತಕ್ಕ ವಿವರ—

| | | | |
|---|---|---|---|
| ಹೃದಯದಲ್ಲಿ | ೩೨ | ಲಿಂಗದಲ್ಲಿ | ೧ |
| ಶಿರಸ್ಸಿನಲ್ಲಿ | ೩೯ | ಗುದದಲ್ಲಿ | ೧ |
| ಕಣ್ಣಿನಲ್ಲಿ | ೨ | ಕೈ ಭುಜ ತೋಳು | ೧೦ |
| ಕಿವಿಯಲ್ಲಿ | ೨ | ಕಾಲು ತೊಡೆ | ೧೦ |
| ಬೆನ್ನಿನಲ್ಲಿ | ೨ | ಜಿಂಹ್ವೆಯಲ್ಲಿ | ೧ |

೧೦೦+೧ ಸುಷುಮ್ನಾ

ಹೀಗೆ ೧೦೧ ನಾಡಿಗಳು ಇರುವ ಕ್ರಮ. ಇವು ಪ್ರಧಾನ ನಾಡಿಗಳು. ಇದಕ್ಕೆ ಶ್ರೀ ಪುರಂದರದಾಸರ ಸುಳಾದಿ —

"ಮನವೆ ಲಾಲಿಸುವದು ಪಂಚಾಶದ್ದಳವುಳ್ಳ । ಘನವಾದ ಪಿಂಗಳವು ಬಲನಾಸಿಕದಿ ಉಂಟು । ಅನುವಾದ ಇಡಾನಾಡಿ ಪಂಚಾಶದಂಶದಿಂದ ವಾಮ ನಾಸಿಕಾದ್ಯುಂಟು । ಅಣುನಾಲಿಗಿಯಿಂದ ಎಡದವಡಿಯಲ್ಲಿ ವಜ್ರ । ಅನು ಮೇಯಿಸುವದು ನಂದೀನಿ ನರವನ್ನು ಬಲದವಡೀಯಲ್ಲೀ । ವಿನಯಾದಿ ತಿಳಿ ಕಂಡ್ಯಾ ಸುಷುಮ್ನಾನಾಡಿ ವಿವರ । ಎಣಿಸು ತೊಡೆಯಲ್ಲಿ ದಶಭುಜದೊಳು ದಶ । ಬೆನ್ನು ಕರ್ಣಾ ಕಣ್ಣುಗಳೊಳು ಎರಡೆರಡು । ಮಣಿದಿಪ್ಪದಯ್ಯಾ ಜಿಂಹಾಗುದ ಲಿಂಗದೊಂದೊಂದು । ನೆನಿಮೂರ್ಧಾನ್ನದಲ್ಲಿ ನರ - ಮೂವತ್ತರೊಂಭತ್ತು ಹೃದ ಯದಿ ಮೂವತ್ತೆರಡು । ನಿತ್ಯದಿ ತಿಳಿಕಂಡ್ಯಾ । ಇಸಿತು ಸುಷುಮ್ನಾ ಸೇರಿ

ನೂರೊಂದೆನಿಪದಯ್ಯಾ । ದಿನದಿನ ತಿಳಿಯುತ್ತ ಸ್ನಾನಾಮಾಳ್ಪವಂಗೆ । ಜನನ ವ ದೂರಾಮಾಳ್ಪಾ ಪುರಂದರವಿಠಲನು ॥ ೧ ॥

ಮತ್ತು ಅಧ್ಯಾತ್ಮಮಾಲಾ ಪ್ರಮಾಣ —

೫. ಈ ೧೦೧ ಕ್ಕೆ ಒಂದೊಂದಕ್ಕೆ
೧೦೦ ರಂತೆ ಶಾಖಾ ಬೆಳೆದು ಗುಣಿಸಿದರೆ

೧೦೧೦೦ ಹತ್ತು ಸಾವಿರ ನೂರು ನಾಡಿಗಳು.

ಇದರಲ್ಲಿ ೧೦೦ ಶಾಖಾನಾಡಿ ಸುಷುಮ್ನಾದವು
೫೦೦೦ ಶಾಖಾನಾಡಿ, ಪಿಂಗಳನಾಡಿವು
೫೦೦೦ ಶಾಖಾನಾಡಿ–ಇಡಾಂಶದವು

೧೦೧೦೦

೬. ಈ ೧೦೧೦೦ ಹತ್ತು ಸಾವಿರ ನೂರು ನಾಡಿಗೆ ೪ ವಿಭಾಗ ವಿವರ.

| | | | |
|---|---|---|---|
| ೧. | ೧೦೦ ನಾಡಿಗಳಿಗೆ | ೧೦ ಶಾಖೆಯಂತೆ .. | ೧೦೦೦ |
| ೨. | ೧೦೦ ನಾಡಿಗಳಿಗೆ | ೯ ಶಾಖೆಯಂತೆ .. | ೯೦೦ |
| ೩. | ೩೦೦ ನಾಡಿಗಳಿಗೆ | ೮ ಶಾಖೆಯಂತೆ .. | ೨೪೦೦ |
| ೪. | ೯೬೦೦ ನಾಡಿಗಳಿಗೆ | ೬ ಶಾಖೆಯಂತೆ .. | ೫೭೬೦೦ |
| | ೧೦೧೦೦ ಇವಕ್ಕೆ | | ೬೧೯೦೦ |
| | | ಮುಖ್ಯ ನಾಡಿಗಳ | ೧೦೧೦೦ |
| | | | ೭೨೦೦೦ ಒಟ್ಟಿಗೆ |

ಹೀಗೆ ಮಿಳಿತವಾದರೆ ೭೨೦೦೦ ನಾಡಿಗಳು
ಮೊದಲಿಗೆ ಪೇಳಿದ ಪ್ರಧಾನನಾಡಿ ೧೦೧

೭೨೧೦೧ ನಾಡಿಗಳಾಗುತ್ತವೆ.

ಇದಕ್ಕೆ ನಾಡಿಕಲ್ಪಲತಾ ಪ್ರಮಾಣ —

"ತಂತ್ರ ನಾಡೀಸುಶಾಖಾನಾಂ ಪ್ರತಿಶಾಖಾ ದಶಾಂತಿ ಮಾ ।
ನವ ಶಾಖಾಚ ತಿಸ್ರೇಣ ಅಷ್ಟೌ ಶಾಖಾ ಷಡ್ವೈವತು ॥
ಶಿಷ್ಟಷಣ್ಣವತೀನಾಂತು ದ್ವಾಸಪ್ತತಿ ಇನೋಮತಾಃ ।
ಇತಿ" ನಾಡೀಕಲ್ಪಲತಾಯಾಮಪಿ ಉಕ್ತಂ ॥

೭. ಚರಣದಲ್ಲಿ ೧೨೦೦೦
ಮಧ್ಯದೇಹದಿ ೧೪೦೦೦
ಬಾಹುವಿನಲ್ಲಿ ೪೦೦೦
ಶಿರಸಿನಲ್ಲಿ ೬೦೦೦

———

೩೬೦೦೦ ಈ ನಾಡಿಗಳು ಬಲಭಾಗಕ್ಕೆ ಪುರುಷ ರೂಪಿ ಹರಿಮಹತ್ತತ್ವಾತ್ಮಕ
೩೬೦೦೦ ನಾಡಿ ಎಡಭಾಗಕ್ಕೆ ಶ್ರೀರೂಪಿ ಹರಿ (ಅಹಂಕಾರ ತತ್ವಾತ್ಮಕ)

———

ಇಂತು ೭೨೦೦೦ ಎಪ್ಪತ್ತೆರಡು ಸಹಸ್ರ ನಾಡಿಗಳಿವೆ.

ಬೃಹತೀಸಹಸ್ರ ಛಂದಸ್ಸು ೩೬ + ೩೬ = ೭೨ ಸಾವಿರ ವ್ಯಂಜನಭೇದ ಗಳುಂಟು. ನೂರು ವರುಷ ಪುರುಷಾಯುಷ್ಯ ೧೦೦ × ೩೬೦ ದಿನಗಳಿಂದ

ಪೆಚ್ಚಿಸಲು ೩೬೦೦೦ ದಿವಸಗಳಾಗುತ್ತವೆ, ಹಗಲು ರಾತ್ರಿ
ದ್ವಿಗುಣಿತ ಆದರೆ ೭೨೦೦೦ ಸಾವಿರ
೧೦೦ ಹಿಂದೆ ಪೇಳಿದ ಸುಷುಮ್ನಾಂಶ
೧ ಸುಷುಮ್ನಾ

———

೭೨೧೦೧ ನಾಡಿ ವಿಭಾಗವೆಂದು ಹೇಳಿದ್ದಾರೆ.

ಇದಕ್ಕೆ ಪ್ರಮಾಣಗಳು ಮೇರ ಉದಹರಿಸಿದ ಸುಳಾದಿಗೂ, ಉಪನಿಷತ್ತಿನಲ್ಲಿ ಪೇಳಿದ ನಾಡೀಪ್ರಭೇದ ಮಾಡಿದ್ದಕ್ಕೂ ಸ್ವಲ್ಪ ವ್ಯತ್ಯಾಸ ಶಾಖಾಪ್ರಭೇದ ಕಂಡುಬರುತ್ತದೆ. ಈ ೧೦, ೯, ೮, ೬ — ೧೦೦ ಶಾಖಾ ಪ್ರಬೇಧಗಳು ಏನು

ಕಾರಣ ಆಗಿವೆ ಎಂಬುದು. ಮತ್ತು ಉಪನಿಷತ್ತಿನಲ್ಲಿ ೭ ಶಾಖಾ, ೨೦ ಶಾಖಾ ವಿಚಾರ ಪ್ರಭೇದವಾದರೂ ಬೇರೆ ವಿಧಾನವಿದೆ. ಈ ಎರಡೂ ವಿಧಾನ ಜ್ಞಾನಿಗಳಿಂದ ತಿಳಿಯುವದು.

**ನಾಡಿಗಳು ಉತ್ಪತ್ತಿ—** ಇದಕ್ಕೆ ವಿಸ್ತಾರವಾಗಿ ನಾಡಿಗಳು ಗರ್ಭಸ್ಥ ಜೀವನ ಪ್ರತಿಸ್ಥೂಲ ನಿರ್ಮಾಣ ಸಮಯದಲ್ಲಿ ೫ನೇ ಮಾಸದಲ್ಲಿ ನಾಡಿಗಳ ಉತ್ಪತ್ತಿ ಶ್ರೀಹರಿಯು ಮಾಡುವನು ಎಂದು ಶ್ರೀ ವಿಷ್ಣುತೀರ್ಥರು ಷೋಡಶೀ ಗ್ರಂಥ ೫ನೇ ಅಂಶ ಸ್ಥೂಲಶರೀರ ಸೃಷ್ಟಿಪ್ರಕರಣದಲ್ಲಿ ಹೇಳಿದ್ದಾರೆ. ನಾಡೀ ವಿಭಾಗಗಳೂ ಪೇಳಿರುವರು. ಜ್ಞಾನಿಗಳಿಂದ ತಿಳಿಯುವುದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತುಂದ" ಇತಿ ॥ ನಾಭ್ಯಧಃ "ಮೂಲಾಧಾರಂ ಸಮಾರಭ್ಯತ್ವಾ ಮೂರ್ಧಾನಂ ಋಜುಃಸ್ಮೃತಾ ॥ ಇತ್ಯುಕ್ತೇಃ ॥ "ಮೂಲಾಧಾರಂ ಗುದಂ ಸ್ಮೃತಮ್" ॥ "ತಾವರೆ" – ಕಮಲ ॥ "ಕಂದ" = ಮಗ – ಪುತ್ರಃ ॥ "ಈರೈದು" = ಹತ್ತು. ॥ ೨೧ ॥

## ಕನ್ನಡಾರ್ಥ

ನಾಭಿಯ ಕೆಳಭಾಗದಲ್ಲಿ ಇರುವ ನಾಡೀಕೋಶದ ಮೂಲಭಾಗಕ್ಕೆ "ತುಂದಿ" ಎಂದು ಹೆಸರು. ಮೂಲಾಧಾರದಿಂದ ಆರಂಭಿಸಿ ಮಸ್ತಕದವರೆಗೆ ಸರಳವಾಗಿ ಹೊರಟಿರುವ ನಾಡಿಯು "ಸುಷುಮ್ನಾನಾಡಿ" ಎಂದು ಪ್ರಮಾಣ ವಚನವಿರುತ್ತದೆ. ಗುದದ್ವಾರವು ಮೂಲಾಧಾರವೆಂದು ಪ್ರಸಿದ್ಧವಾಗಿರುತ್ತದೆ. "ತಾವರೆಕಂದ" ತಾವರೆ ಎಂದರೆ ಕಮಲ, ಕಮಲದಲ್ಲಿ ಜನಿಸಿದ್ದರಿಂದ ತಾವರೆ ಕಂದನೆಂದರೆ ಚತುರ್ಮುಖ-ಬ್ರಹ್ಮನು. "ಈರೈದು" ರೂಪಗಳು ಅಂದರೆ ಹತ್ತು ರೂಪಗಳು ಎಂದು ಅರ್ಥ ॥ ೨೧ ॥

**ಅವತರಣಿಕಾ:** ಇನ್ನು ಸುಷುಮ್ನಾನಾಡಿಯಲ್ಲಿ ಇತರರ ವ್ಯಾಪಾರವಿಲ್ಲ. ಉದಾನನಾಮಕ ವಾಯುದೇವರೆ ಸುಷುಮ್ನಾ ನಾಡಿಯಲ್ಲಿ ರಕ್ಕಸರನ್ನು ಒಳಹೋಗಗೊಡದೆ ಸುಷುಮ್ನಾ ನಾಡಿಗತ ಕಮಲಗಳಲ್ಲಿಪ್ಪ ಹರಿಯನ್ನು ಉಪಾಸನೆಮಾಡುವರಿಗೆ ಊರ್ಧ್ವಗತಿಯನ್ನು ಕೊಡುತ್ತಾನೆಂದು ಈ ಪದ್ಯದಿಂದ ಉಪದೇಶಗೈಯ್ಯುವರು.

**ಮೂಲ :**

**ಪೊಕ್ಕಳಡಿವಿಡಿದೊಂದೆ ನಾಡಿಯು ।**
**ಸುಕ್ಕದಲೆ ಧಾರಾಳರೂಪದಿ ।**
**ಸಿಕ್ಕಿಹುದು ಈ ದೇಹದೊಳಗೆ ಸುಷುಮ್ನನಾಮದಲಿ ॥**
**ರಕ್ಕಸರನೊಳಪೊಗಗೊಡದೆ ದಶ ।**
**ದಿಕ್ಕಿನೊಳಗೆ ಸಮಿೀರ ದೇವನು ।**
**ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು ॥ ೧೩ ॥**

**ಪದ್ಯಾರ್ಥ :** ಪೊಕ್ಕಳಡಿವಿಡಿದು = ಗುದದ ಅಧೋಭಾಗವಿಡಿದು, ಒಂದೇ ನಾಡಿಯು, ಸುಕ್ಕದಲೆ = ಮುದಡಿಕೊಳ್ಳದೇ – ಸಂಕೋಚಗೊಳ್ಳದೇ, ಬಾಡದಲೆ, ಧಾರಾಳರೂಪದಿ = ನೆಟ್ಟಗೆ–ಶೀದಾ ಡೊಂಕಾಗದೆ ಕುಗ್ಗದೇ, ಈ ದೇಹದೊಳು ಸಿಕ್ಕಿಹುದು = ಈ ನಡುದೇಹದಲ್ಲಿ ಇರುವದು, ಸುಷಮ್ನ ನಾಮದಲಿ = ಸುಷುಮ್ನಾನಾಮದಿಂದ ಕರೆಸಿಕೊಳ್ಳುವ ಮುಖ್ಯ ನಾಡಿಯು ೭೨೦೦೦ ನಾಡಿಗೆ ಆಧಾರವಾಗಿ ನಡುವೆ ಸಿಕ್ಕಿಕೊಂಡಿರುವುದು, ರಕ್ಕಸರನೊಳ ಪೊಗ ಗೊಡದೆ ದಶದಿಕ್ಕಿನೊಳಗೆ ಸಮೀರದೇವನು = ಈ ಸುಷುಮ್ನಾನಾಡಿಯಲ್ಲಿ ದೈತ್ಯಾದಿಗಳನ್ನು ಒಳಗೆ ಬಾರದಂತೆ ಹತ್ತೂ ದಿಕ್ಕಿನಲ್ಲಿ ಸಮೀರದೇವನು, ಉದಾನ ನಾಮಕ ವಾಯುದೇವರು ಕಾಯಿದುಕೊಂಡಿರುವನು. ಈ ವಾಯು ಮತ್ತೊಬ್ಬರನು ಲೆಕ್ಕಿಸನು, ಶ್ರೀಹರಿರಮೆಯ ಈಕ್ಷಣಾನಂದದಲ್ಲಿ ಶ್ರೀಹರಿಯು ಆಧೀನನಾಗಿ ಅನ್ಯರನ್ನು ಗಣನೆಗೆ ತಾರದೇ ನಿರ್ಭಯದಿಂದ ದೇಹದೊಳು ಸಂಚರಿಸುವನು ಎಂದು ಅಭಿಪ್ರಾಯ. “ಉದಾನಃ ಊರ್ಧ್ವ ಪುಣ್ಯೇನ ಪುಣ್ಯಲೋಕಂ ನಯತಿ ॥ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯ ಲೋಕಂ ॥ ಷಟ್‌ಪ್ರಶ್ನ. ಈ ಉದಾನನಾಮಕ ವಾಯುದೇವರು ಊರ್ಧ್ವಮುಖ ವಾಗಿ ಸಂಚಾರಮಾಡುತ್ತಾರೆ. ಜೀವನಿಂದ ಮಾಡಿಸಿದ ಪುಣ್ಯನಿಮಿತ್ಯವಾಗಿ ಊರ್ಧ್ವ ಲೋಕಗಳನ್ನು ಸೇರಿಸುತ್ತಾರೆ ಮತ್ತು ಅಧಮ ಜೀವರಿಂದ ಮಾಡಿ ಸಿದ ಪಾಪನಿಮಿತ್ಯ ನರಕಾದಿ ಅಂಧಃ ತಮಸ್ಸಿನಲ್ಲಿ ಸೇರಿಸುತ್ತಾರೆ. ಉಭಾಭ್ಯಾಂ = ಪುಣ್ಯಪಾಪ ಮಿಶ್ರರಾದ ನಿತ್ಯ ಸಂಸಾರಿಗಳಿಗೆ ಮನುಜ ಲೋಕ.

**ದ್ರೌಪದೀಶಪತಿ ವಿಠಲರು :** ಪೊಕ್ಕಳಡಿ.

**ಭಾವಸೂಚನ :** ಪೊಕ್ಕಳೀತಿ = ಸುಕ್ಕದಲೆ = ಒಣಗದಲೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪೊಕ್ಕಳ" ಇತಿ ॥ "ಪೊಕ್ಕಳ" – ಹೊಕ್ಕಳ ॥ "ಅಡಿ" = ಬುಡ ॥ "ಸುಕ್ಕದಲೆ" – ಶುಕ್ಲವಾಗದಲೆ ॥ "ಧಾರಾಳ" – ಅವಕ್ರ ॥ "ಲೆಕ್ಕಿಸದೆ" "ಲಕ್ಷಿಸದೆ" ॥ ೧೩ ॥

## ಕನ್ನಡಾರ್ಥ

"ಪೊಕ್ಕಳಡಿ" – ಹೊಕ್ಕಳ. "ಅಡಿ" – ಬುಡ. "ಸುಕ್ಕದಲೆ" – ಶುಕ್ಲವಾಗದಲೆ-(ಸೊಟ್ಟವಾಗದೇ) "ಧಾರಾಳ" ಸರಳ "ಲೆಕ್ಕಿಸದೆ" ಲಕ್ಷಿಸದೆ ಮೂಲಾಧಾರದಿಂದ ಹೊಕ್ಕಳ ಬುಡದಿಂದ, ನೇರವಾಗಿ ತುಸವೂ (ಬಾಗದೇ) ವಕ್ರವಾಗದೇ ಹೊರಟಿರುವ ಶಿರಃಪರ್ಯಂತವಾದ ಸುಷುಮ್ನಾನಾಡಿಯಲ್ಲಿ ಪ್ರಾಣದೇವರು ರಾಕ್ಷಸರನ್ನು ಒಳಗೆ ಬರದಂತೆ ಮಾಡುತ್ತ ದಶದಿಕ್ಕುಗಳಲ್ಲಿ ಸಂಚರಿಸುವರು" ಎಂದು ಈ ಪದ್ಯದ ಭಾವ ॥ ೧೩ ॥

**ಅವತರಣಿಕಾ :** ಹಿಂದೆ ಹೇಳಿದಂತೆ ೭೨೧೦೧ ನಾಡಿಗಳು, ಅವುಗಳ ಶಾಖೆಗಳು ದೇಹದಲ್ಲಿವೆ ಎಂದು ಅರಿತು ಹೃದಯಸ್ಥ ಹರಿಯೇ ಏಕಾತ್ಮ ಒಬ್ಬನೇ ೭೨೦೦೦ ರೂಪಗಳುಳ್ಳವನಾಗಿ ಹಗಲಿರುಳು ಶ್ರೀರಮಾಯಿಂದ ಜೀವರಲ್ಲಿ ವಿಹಾರಮಾಳ್ಪನೆಂಬ ಭಗವನ್ ಮಹಾತ್ಮ್ಯೆ ಹೇಳುತ್ತಾರೆ. (ಪದ್ಯ ೨೩ರವರೆಗೆ ೧೦ ಪದ್ಯದಲ್ಲಿ)



ಮೂಲ :

> ಇನಿತು ನಾಡೀ ಶಾಖೆ(ಖ)ಗಳು ತನು ।
> ವಿನೊಳಗಿಹವೆಂದರಿದು ಏಕಾ ।
> ತ್ಮನು ದ್ವಿಸಪ್ತತಿ ಸಾವಿರಾತ್ಮಕನಾಗಿ ನಾಡಿಯೊಳು ॥
> ವನಿತೆಯಿಂದೊಡಗೂಡಿ ನಾರಾ ।
> ಯಣ ದಿವಾರಾತ್ರಿಗಳಲೀಪರಿ ।
> ವನಜಜಾಂಡದೊಳಖಿಳ ಜೀವರೊಳಿದ್ದು ಮೋಹಿಸುವ ॥೧೪॥

**ಪದ್ಯಾರ್ಥ :** ಇನಿತು = ಹಿಂದೆ ಹೇಳಿದಂತೆ ಈ ಪ್ರಕಾರವಾಗಿ, ನಾಡೀ ಶಾಖೆಗಳು = ನಾಡಿಗಳ ಭೇದಗಳು-ಕವಲುಗಳು, ತನುವಿನಲಿ = ಈ ಸ್ಥೂಲ ದೇಹದೊಳಗೆ, ಇಹವೆಂದರಿದು = ಇರುವವೆಂದು ತಿಳಿದು, ಏಕಾತ್ಮನು = ಹೃದಯಸ್ಥಬಿಂಬನಾದ ಹರಿಯು, ಸುಷುಮ್ನಾನಾಡಿಯಲ್ಲಿ ಏಕಾತ್ಮ ಒಬ್ಬನೆ ಎಂದು ಕರೆಸುತ್ತಾ, ಏಕಾತ್ಮ = "ಏಕಾತ್ಮಾಹರಿರುದ್ದಿಷ್ಟಃ ಪ್ರಧಾನತ್ವಾತ್

ಸಮಸ್ತಶಃ ॥ ಇತಿ ವಚನಾದೇಕಾತ್ಮ" ವಿ. ಸ. ನಾ. ವಿದ್ಯಾಧಿರಾಜೀಯೆ ॥ ದ್ವಿಸಪ್ತತಿ ಸಾವಿರಾತ್ಮಕನಾಗಿ = ೨ + ೭೦ = ೭೨ಸಾವಿರ ರೂಪಗಳನ್ನು ಧರಿಸಿದವನಾಗಿ, ನಾರಾಯಣನು = ಏಕಾತ್ಮನಾದ ಮೂಲನಾರಾಯಣನು, ವನಿತೆಯಿಂದೊಡಗೂಡಿ = ತನ್ನ ಪತ್ನಿಯಾದ ಶ್ರೀ ರಮಾದೇವಿಯಿಂದ ಕೂಡಿಕೊಂಡು, ನಾಡಿಯೊಳು = ನಾಡಿಗಳಲ್ಲಿ ವಿಹರಿಸುತ್ತಾ, ದಿವಾರಾತ್ರಿಗಳಲ್ಲಿ ಈ ಪರಿ = ಹಗಲು ಇರಳು ಬಿಡದೆ ಈ ಪ್ರಕಾರ ವನಿತೆಯಿಂದ ಕೂಡಿ, ವನಜಜಾಂಡದೊಳಖಿಳಜೀವರೊಳಿದ್ದು = ಬ್ರಹ್ಮಾಂಡದೊಳಗಿದ್ದ ಸಕಲ ಜೀವರಲ್ಲಿ ಇದ್ದು, ತಾನು ತನ್ನ ಇಷ್ಟರೂಪಗಳನ್ನು ತೋರಿಸದೇ ಮೋಹಿಸುವ = ಜೀವರನ್ನು ಭ್ರಾಂತಿಗೊಳಿಸುತ್ತಾನೆ. ಹಿಂದೆ ಹೇಳಿದಂತೆ ಆಯಾ ಇಂದ್ರಿಯಗಳಲ್ಲಿ ಆಯಾ ನಾಡಿಗಳಲ್ಲಿದ್ದು ಜೀವರಿಗೆ ವಿಷಯಾದಿಗಳಿಂದ ಮೋಹಗೊಳಿಸುತ್ತಾನೆ. (ವಿಜಯದಾಸರ ಸುಳಾದಿ ನೋಡಿ.)

**ದ್ರೌಪದೀಶಪತಿ ವಿಠಲರು :** ಇನಿತು ನಾಡಿಶಾಖೆ.

**ಭಾವಸೂಚನ :** ಇನಿತೇತಿ ॥ ಏಕಾತ್ಮೇತಿ ॥ ಏಕಾತ್ಮಾನೈಕ ಕರ್ಮಕೃತ್ ಇತ್ಯುಕ್ತೇ ॥ ಒಡಗೂಡಿ = ಯುಕ್ತನಾಗಿ ॥ ೧೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

" ಇನಿತು " ಇತಿ ॥ " ಇನಿತು " ಇಷ್ಟು ॥ " ವನಿತಾ " ರಮಾ ॥ ೧೪ ॥

16223

**ಕನ್ನಡಾರ್ಥ**

ಈ ಶರೀರದಲ್ಲಿ ನಾಡೀ ಶಾಖಾಗತ ಏಕಾತ್ಮರೂಪದಿಂದ ಹರಿಯು ಇರುವನೆಂದು ತಿಳಿಸುತ್ತಾರೆ. " ಇನಿತು " ಎಂಬ ಪದ್ಯದಿಂದ " ಇನಿತು " – ಇಷ್ಟು. ವನಿತೆಯೆಂದರೆ ಶ್ರೀ ರಮಾದೇವಿಯರು ॥ ೧೪ ॥

**ಅವತರಣಿಕಾ :** ಈ ಸದುಪಾಸನೆಯು ಭಕ್ತರಿಗೆ ಸೊಗಸುವದೇ ಹೊರತಾಗಿ, ಕುನರರುಗಳಾದ ಅನ್ಯಥಾ ಮತಿಗಳಿಗೆ ಸೊಗಯಿಸುವದಿಲ್ಲವೆಂತ ಉಪದೇಶಗೈಯ್ಯುತ್ತಾರೆ. (ದೃಷ್ಟಾಂತ ಪೂರ್ವಕವಾಗಿ)

ಮೂಲ :

**ದಿನದಿನದಿ ವರ್ಧಿಸುವ ಕುಮುದಾ ।**
**ಪ್ತನ ಮಯೂಖದ ಸೊಬಗು ಗತಲೋ ।**
**ಚನ ವಿಲೋಕಿಸಿ ನೋಡಬಲ್ಲನೆ ನಿರಂತರದಿ ॥**

**ಕುನರರಗೀ ಸುಕಥಾಮೃತದ ಭೋ ।**
**ಜನದ ಸುಖ ದೊರಕುವದೆ ಲಕ್ಷ್ಮೀ ।**
**ಮನೊಹರನ ಸದ್ಗುಣವ ಕೀರ್ತಿಪ ಭಕುತಗಲ್ಲದಲೆ ॥ ೧೫ ॥**

**ಪದ್ಯಾರ್ಥ :** ದಿನದಿನದಿ = ನಿತ್ಯ ನಿತ್ಯದಿ ಅಂದರೆ ಪ್ರತಿ ತಿಂಗಳ ಶುದ್ಧ ಪ್ರತಿಪದಾಮಾರಭ್ಯ ಪೌರ್ಣಮಿಯವರೆಗೆ, ವರ್ಧಿಸುವ = ಹೆಚ್ಚಾಗುವ ಬೆಳೆಯುವ, ಕುಮುದಾಪ್ತನ ಸೊಬಗು = ಕನ್ನೈದಿಲೆ, ನೀಲೋತ್ಪಲಕ್ಕೆ ಆಪ್ತಸಖ ಕುಮುದ ಪುಷ್ಪವು, ಚಂದ್ರೋದಯವಾದ ಕೂಡಲೇ ವಿಕಸಿತವಾಗುವವು. ಇಂಥ ಚಂದ್ರ ಮಯೂಖ = ತಂಪಾದ ಕಿರಣಗಳು. ಶೀತಲವಾಗಿ ಮನೋಹರವಾದವು. ಈ ಕಿರಣಗಳ ಸೊಬಗು = ಸುಂದರ ಚಂದ ಮನೋಲ್ಹಾದಕರವಾದುವು. ಇವುಗಳನ್ನು ಗತಲೋಚನ = ಹೋಗಲ್ಪಟ್ಟ ಕಣ್ಣುಗಳುಳ್ಳ - ಕುರುಡನೆಂದರೆ ದುಷ್ಟಜ್ಞಾನಶೂನ್ಯ ವಿಲೋಕಿಸಿ = ವಿಶೇಷವಾಗಿ ನೋಡುವಿಕೆ ಸರಿಯಾಗಿ ನೋಡಿ, ಮೋದ ಬಡಬಲ್ಲನೆ = ಕುರುಡನಿಗೆ ಕಣ್ಣು ಕಾಣಿಸುವುದಿಲ್ಲವೆಂದ ಮೇಲೆ ನೋಡುವ ಬಗೆ ಹೇಗೆ? ಮೋದ ಬಡಬಲ್ಲನೆ ನಿರಂತರದಿ = ಸಂತೋಷಪಡುವನೇ ಎಂದೆಂದಿಗೂ ಇಲ್ಲ. ಹೇಗೆ ಕುರುಡನು ಚಂದ್ರನ ಕಿರಣಗಳನ್ನು ನೋಡಲಾರನೋ ಹಾಗೆ ಕುನರರಿಗೀ ಕಥಾಮೃತ = ದುಷ್ಟ ಜನರಿಗೆ ದೈತ್ಯಾದಿಗಳಿಗೆ, ಜ್ಞಾನಶೂನ್ಯರಿಗೆ ಈ ಸುಕಥಾಮೃತದ ಭೋಜನದ ಸುಖ ದೊರಕುವದೇ = ಇಂತಹ ಸಮಿಾಚೀನವಾದ ಶ್ರೀಹರಿಯ ಲೀಲಾ ವ್ಯಾಪಾರವು ಕಥಾ = ವೇದಗಳು, ಆ ವೇದಗಳಲ್ಲಿ ಸಾರವಾದ ಉಪನಿಷತ್ ರಹಸ್ಯವಾದ ಸಾರ ಅಮೃತವನ್ನು ಉಂಡು, ಅಮೃತ ಊಟಮಾಡಿದ ಸುಖವು ಎಂದಿಗಾದರೂ ದೊರಕುವದೇ ? ಎಂದೆಂದಿಗೂ ದೊರಕುವದಿಲ್ಲ. ಆದರೆ ಎಂಥವನಿಗೆ ದೊರಕುವದೆಂದರೆ ಲಕ್ಷ್ಮೀಮನೋಹರನ ಸದ್ಗುಣವ ಕೀರ್ತಿಪ ಭಕುತಗಲ್ಲದಲೆ = ಶ್ರೀರಮೆಯ ಮನವನ್ನು ಅಪಹರಿಸಿ = ರಮೆಯನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡ ಶ್ರೀಹರಿಯ ಸಮಿಾಚೀನವಾದ ಜ್ಞಾನಾನಂದಾದಿ ಗುಣಗಳನ್ನು ಧ್ಯಾನ ಮಾಡಿ, ಹಾಡಿ ಪಾಡಿ ಕುಣಿದು ಆನಂದಾಶ್ರುಗಳಿಂದ ಪ್ರೇಮರೆತ ದೃಢವಾದ ಭಕ್ತರಿಗೇ ದೊರಕುವದು, ಇತರರಿಗೆ ಸಾಧ್ಯವಿಲ್ಲ.

**ದ್ರೌಪದೀಶಪತಿ ವಿಠಲರು :** ಕುಮುದಾಪ್ತ = ಚಂದ್ರಮಯೂಖ ಬಿಂಬಾ.

**ಭಾವಸೂಚನ :** ದಿನೇತಿ ॥ ಮಯೂಖ ಕಿರಣ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದಿನದಿನದಿ" ಇತಿ ॥ "ಕುಮುದಾಪ್ತ"–ಚಂದ್ರಃ ॥ "ಮಯೂಖ" – ಕಿರಣ ॥ "ಸೊಬಗು" – ಸೌಂದರ್ಯ ॥ ೧೫ ॥

### ಕನ್ನಡಾರ್ಥ

"ನಾಡೀಗತ ಪರಮಾತ್ಮನ ವ್ಯಾಪಾರಬೋಧಕ ಈ ಹರಿಕಥಾಮೃತವು ಹರಿಭಕ್ತರಿಗೆ ಮಾತ್ರ ಅಳವಡಿಸುವದು, ಮಿಕ್ಕವರಿಗಿಲ್ಲ" ಎಂಬುದನ್ನು ಈ ನಿದರ್ಶನದಿಂದ ತಿಳಿಸುತ್ತಾರೆ – "ದಿನದಿನದಿ" ಎಂಬ ಪದ್ಯದಿಂದ. "ಕುಮುದಾಪ್ತ" – ಚಂದ್ರ. "ಮಯೂಖ" – ಕಿರಣ. "ಸೊಬಗು" ಸೌಂದರ್ಯ. ॥ ೧೫ ॥

**ಅವತರಣಿಕಾ :** ಈ ಸ್ಥೂಲದೇಹದಲ್ಲಿ ಓತಪ್ರೋತವಾಗಿರುವ ನಾಡಿಗಳಲ್ಲಿ ಇಂದ್ರದೇವರೆ ಮೊದಲಾದ ಸಮಸ್ತ ತತ್ವಾಭಿಮಾನಿ ದೇವತೆಗಳು ತಮ್ಮಿಂದ ಉತ್ತಮರಾದವರಿಂದ ಕೂಡಿಕೊಂಡು ಇರುತ್ತ ದೈತ್ಯದಾನವರನ್ನು ಭೀತಿಗೊಳಿಸುತ್ತಾ, ಬಹು ಪ್ರೀತಿಯಿಂದ ಸಂಘಾತ ನಾಮಕ ಹರಿಯ ಉಪಾಸನೆಮಾಡುತ್ತಾ ಮೋದಬಡುತ್ತಲಿಹರೆಂದು ಉಪದೇಶಗೈಯ್ಯುತ್ತಾರೆ.

ಮೂಲ :

**ಈ ತನುವಿನೊಳಿಗಿಹವು ಓತ ।**
**ಪ್ರೋತರೂಪದಿ ನಾಡಿಗಳು ಪುರು ।**
**ಹೂತ ಮುಖರಲ್ಲಿಹರು ತಮ್ಮಿಂದಧಿಕರೊಡಗೂಡಿ ॥**
**ಭೀತಿಗೊಳಿಸುತ ದಾನವರ ಸಂ ।**
**ಘಾ(ಧಾ)ತನಾಮಕ ಹರಿಯ ಗುಣ ಸಂ ।**
**ಪ್ರೀತಿಯಲಿ ಸದುಪಾಸನೆಯ ಗೈಯುತಲೆ ಮೋದಿಪರು**
**॥ ೧೬ ॥**

**ಪದ್ಯಾರ್ಥ :** ಈ ತನುವಿನೊಳು = ಈ ಸ್ಥೂಲದೇಹಲ್ಲಿ, ಓತಪ್ರೋತ ರೂಪದಿ = ಆ ಕಡೆ ಈ ಕಡೆ, ಬಲ ಎಡಕ್ಕೆ, ಅಡ್ಡ ಉದ್ದ, ಪಸರಿಸಿ, ನಾಡಿಗಳು ಇರುವವು. ಅಲ್ಲಿ – ಪುರುಹೂತ ಮುಖರು = ಇಂದ್ರದೇವರೆ ಮೊದಲಾಗಿ, ಸಮಸ್ತ ತತ್ವಾಭಿಮಾನಿ ದೇವತೆಗಳು, ತಮ್ಮಿಂದಧಿಕರೊಡಗೂಡಿ = ತಮ್ಮ

ಗಿಂತಲೂ ರುದ್ರ ಗರುಡ ಶೇಷವಾಯು ಬ್ರಹ್ಮಾದಿ ಉತ್ತಮರಿಂದ ಕೂಡಿಕೊಂಡು ಇರುವರು, ಇದ್ದು – ದಾನವರ = ದನುವಂಶಜರಾದ ದಾನವರು ಕ್ರೂರರು. ದೈತ್ಯಾದಿಗಳನ್ನು ಭೀತಿಗೊಳಿಸುತ್ತ ಅವರಿಗೆ ಅಂಜಿಕೆಪುಟ್ಟುವಂತೆ ಹೆದರಿಸುತ್ತ, ಸಂಧಾತನಾಮಕ ಹರಿಯ = ಸಮ್ಯಕ್ ಧಾರಣ ಪೋಷಣ ಕರ್ತೃತ್ವಾತ್ ಸಂಧಾತಾ" ಸಂಧಾತಾ ಸಂಧಿಮಾನ್ ಸ್ಥಿತಾ ಎಂದು ವಿಷ್ಣು ಸಹಸ್ರನಾಮ, ಸಮೀಚೀನವಾಗಿ ಸಕಲ ಜೀವ ಜಗತ್ತನ್ನುಧರಿಸಿ, ರಕ್ಷಣೆಮಾಡುವಗೆ ಸಂಧಾತ ನೆಂದು ಹರಿಗೆ ನಾಮ, ಎರಡೂ ಮೂಲಪ್ರತಿ ಸಂಘಾತನೆಂದು ಇದೆ. ಈ ಪದವೂ ಸಹ ರಹಸ್ಯವಾಗಿದೆ = ಸಂಘಾತ ದೈತ್ಯಾದಿಗಳನ್ನು ಚನ್ನಾಗಿ ಘಾತಮಾಡಿ, ಹತಿಸಿ, ಸಂಘಾತನಾಮಕ ನರಕದಲ್ಲಿಟ್ಟು, ದಾನವರನ್ನು ಭೀತಿಗೊಳಿಸುವ ರೂಪವು ಈ ಸಂಘಾತ ಅಥವಾ ಸಂಧಾತನಾಮಕ ಹರಿಯ ಗುಣಗಳನ್ನು ಸಂಪ್ರೀತಿಯಲಿ = ಕೇವಲ ಸ್ನೇಹ ಆದರ-ಭಕ್ತಿ ಪುರಸ್ಸರವಾಗಿ ಸದುಪಾಸನೆಯ ಗೈಯ್ಯುತಲೆ = ಸಮೀಚೀನವಾಗಿ ಧ್ಯಾನೋಪಾಸನೆಮಾಡುತ್ತಲೇ ಮೋದಿಪರು = ಆನಂದಪಡುವರು.

**ದ್ರೌಪದೀಶಪತಿ ವಿಠಲರು :** ಈ ತನುವಿನೊಳು.

**ಭಾವಸೂಚನ :** ಈತನು ಇತಿ ॥ ಓತಪ್ರೋತಾ = ಸಂಬಂಧ-ಪುರುಹೂತಾ ಇಂದ್ರ ॥ ೧೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಈ ತನುವು " ಇತಿ ॥ " ಪುರುಹೂತಃ " – ಇಂದ್ರಃ ॥ "ಸಂಧಾತಾ " – ಓಂ* ॥ ದಿವೇ ಜನಾಯ ತನ್ವೇ ಗೃಣಾನಃ ಅನುದ್ಯಾವಾಪೃಥಿವೀ ತತ(ತ್ರ) ಓಜೋಽಮರ್ತ್ಯ ಜ(ಜಿ)ಹತ ಇಂದ್ರ ದೇವಾಃ ॥ ಕೃಷ್ವಾ ಕೃತ್ನೋ(ತ್ನೋ) ॥ *ಓಂ ॥ ವೃಷ್ಟಿಕಾಲೇ ದ್ಯಾವಾಪೃಥಿವ್ಯೌ ಸಂಧಾರಯತಿ ಇತಿ ತಥೋಕ್ತಃ ॥೧೬॥

## ಕನ್ನಡಾರ್ಥ

ಸ್ತೋತ್ತಮ ದೇವತೆಗಳೊಡನೆ ಇಂದ್ರಾದಿ ದೇವತೆಗಳು ನಾಡಿಗಳಲ್ಲಿ ಇರುತ್ತ ಪರಮಾತ್ಮನನ್ನು ಉಪಾಸಿಸುವರೆಂದು ತಿಳಿಸುತ್ತಾರೆ — " ಈ ತನುವಿನೊಳಗೆ" ಎಂಬ ಪದ್ಯದಿಂದ.

"ಪುರುಹೂತ" ಪದಕ್ಕೆ " ಇಂದ್ರ" ಎಂದು ಅರ್ಥ. "ಸಂಧಾತ" ಎಂಬ ಪಾಠವನ್ನು ಅನುಸರಿಸಿ ವ್ಯಾಖ್ಯಾನಿಸಿರುತ್ತಾರೆ. ಕೆಲವು ಮೂಲ ಪುಸ್ತಕಗಳಲ್ಲಿ

"ಸಂಘಾತ" ಎಂಬ ಪಾಠವು ಕಂಡುಬರುತ್ತದೆ. ಆದರೆ ಈ ಪಾಠವನ್ನೇ ವ್ಯಾಖ್ಯಾನಕಾರರು ಪರಿಗ್ರಹಿಸಿರುತ್ತಾರೆ. ಆದುದರಿಂದ "ಸಂಧಾತ" ನಾಮದ ಅರ್ಥ ವಿವರಣರೂಪವಾದ ಬೃಹತೀ ಋಙ್ಮಂತ್ರವನ್ನು ಉದಾಹರಿಸಿರುತ್ತಾರೆ.

"ವೃಷ್ಟಿಕಾಲದಲ್ಲಿ ಮಳೆಯಾಗುವ ವೇಳೆಯಲ್ಲಿ ಭೂಮಿ ಆಕಾಶಗಳನ್ನು ಪರಸ್ಪರ ಹೊಂದಿಸುವನು; ಆದುದರಿಂದ ಸಂಧಾತನು" ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ ॥ ೧೬ ॥

**ಅವತರಣಿಕಾ :** ಮನುಷ್ಯ ದೇಹದಲ್ಲಿ ನಾಡಿಗಳು ಇರುವಂತೆ ಇತರ ಜಲಚರಾದಿ ಪ್ರಾಣಿಗಳಲ್ಲಿ ನಾಡಿಗಳು ಸ್ಫುಟವಾಗಿರದಿದ್ದರೂ, ಜಲಚರ ಭೂಚರ ಆಕಾಶದಲ್ಲಿ ಸಂಚರಿಪ ಪಶುಪಕ್ಷ್ಯಾದಿಗಳಲ್ಲಿ ತತ್ತದ್ರೂಪ ತನ್ನಾಮದಿಂದ ಕರೆಸಿ ನಿರ್ಲಿಪ್ತನಾಗಿ ಈ ಕಾರ್ಯ ಶ್ರೀಹರಿ ಮಾಡುತ್ತಾನೆಂದು ಉಪದೇಶಗೈಯ್ಯುತ್ತಾರೆ.

ಮೂಲ :

**ಜಲಟ ಕುಕ್ಕುಟ ಖೇಟ ಜೀವರ ।**
**ಕಳೆವರಗಳೊಳಿದ್ದು ಕಾಣಿಸಿ ।**
**ಕೊಳದೆ ತತ್ತದ್ರೂಪನಾಮಗಳಿಂದ ಕರೆಸುತಲಿ ॥**
**ಜಲರುಹೇಕ್ಷಣ ವಿವಿಧ ಕರ್ಮಗ ।**
**ಳನುದಿನದಿ ತಾ ಮಾಡಿ ತತ್ತ ।**
**ತ್ಫಲಗಳುಣ್ಣದೆ ಸಂಚರಿಸುವನು ನಿತ್ಯಸುಖಪೂರ್ಣ ॥ ೧೭ ॥**

**ಪದ್ಯಾರ್ಥ :** ಜಲಟ = "ಜಲೇ ಅಟತಿ ಸಂಚರತೀತಿ, ಜಲಟ = ಜಲದಲ್ಲಿ ಸಂಚಾರಮಾಡತಕ್ಕ ಪ್ರಾಣಿಗಳು, ಕುಕ್ಕುಟ = ಕು = ಭೂಮೌ ಅಟತೀತಿ ಕುಕ್ಕುಟ, ಪಶ್ವಾದಿಗಳು, ಖೇಟ = ಖೇ = ಆಕಾಶೇ ಅಟತೀತಿ = ಖೇಟ ಆಕಾಶದಲ್ಲಿ ಸಂಚರಿಪ ಪಕ್ಷ್ಯಾದಿಗಳಾದ ಜೀವರ ಕಳೇವರಗಳೊಳಗಿದ್ದು = ಈ ಮೂರು ವಿಧ ಜೀವರ ದೇಹದಲ್ಲಿದ್ದು (ಮಾನವಾದಿ ದೇಹದಲಿ ೭೨೦೦೦ ನಾಡಿಗಳಿದ್ದಂತೆ ಇತರ ಖೇಟ-ಕುಕ್ಕು-ಜಲಟ ಪ್ರಾಣಿಗಳಲ್ಲಿ ಪ್ರಾಚುರ್ಯದಿಂದ ನಾಡಿಗಳು ಇರುವದಿಲ್ಲ) ವಾದರೂ ಕಾಣಿಸಿಕೊಳ್ಳದೇ ಇದ್ದರಾದರೂ, ತತ್ತದ್ರೂಪ ನಾಮಗಳಿಂದ ಕರೆಸುತಲಿ = ಆಯಾ ರೂಪ, ಆಯಾ ಜೀವರ ನಾಮದಿಂದ ಕರೆಸುತ್ತಾ, ಜಲರುಹೇಕ್ಷಣ = ಕಮಲ ಪತ್ರದೋಪಾದಿಲಿ ವಿಶಾಲ ದೃಷ್ಟಿ ನೇತ್ರವುಳ್ಳ ಕರುಣಾಮಯನು, ಮೇಲೆ ವಿವರಿಸಿದ ಆಯಾ ಪ್ರಾಣಿಗಳಲ್ಲಿ

ವಿವಿಧ ಕರ್ಮಗಳನುದಿನದಿ ತಾ ಮಾಡಿ, ಆಯಾ ಪ್ರಾಣಿಗಳ ಯೋಗ್ಯ ಕರ್ಮಗಳನ್ನು ತಾನು ಮಾಡಿ ಮಾಡಿಸುತ್ತ, ತತ್ಫಲಗಳುಣ್ಣದೆ ಸಂಚರಿಸುವನು ನಿತ್ಯ ಸುಖಪೂರ್ಣ = ನಿತ್ಯ ಸುಖ ಸಂತೋಷ ಆನಂದಪೂರ್ಣನಾದ ಹರಿಯು ಆಯಾ ಫಲಗಳನ್ನು ಉಣ್ಣದೇ ಕಾಣಿಸಿಕೊಳ್ಳದೆ ವಿಹಾರಮಾಡುವನು.

**ದ್ರೌಪದೀಶಪತಿ ವಿಠಲರು :** ಜಲಟ ಕುಕ್ಕುಟ, ಜಲಟ = ಜಲಚರ ಪ್ರಾಣಿ, ಕುಕ್ಕುಟ–ಅಂಡಜ ಪ್ರಾಣಿ, ಖೇಟಜಾ = ಆಕಾಶದಲ್ಲಿ ಚರಿಸುವದು. ಪ್ರಕಾರಾಂತರ, ಜರಟಾ ಎಂದರೆ ಮನುಷ್ಯಪ್ರಾಣಿ ಇವರೆ ಜರಾಯುಜರು ಚೀಲದಿಂದ ಹುಟ್ಟೋರು. ಖೇಟ ಎಂದರೆ ದೇವತೆಗಳು, ಉದ್ಭಿಜರು ಎಂತ ಕರೆಸುತ್ತಾರೆ = ಭೂಮಿಯಲ್ಲಿ ಹುಟ್ಟುವರು.

**ಭಾವಸೂಚನ :** ಜಲಟ = ಜಲಚರ, ಖೇಟ = ಖೇ ಅಟತೀತಿ ಖಗ ಇತ್ಯರ್ಥ ತದುಕ್ತಮಾಗ್ನೇಯೇ ॥ ತತ್ತದಾಕಾರ ಸಂಯುಕ್ತಂ ಸೃಜಾಂ ಸೃಷ್ಟ್ವಾರಮೇವ ಚಾ ॥ ಯೋವೇದ ಮುಚ್ಯತೇ ಜಂತುರ್ನಾತ್ರ ಕಾರ್ಯಾವಿಚಾರಣೇತಿ. ॥ ೧೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜಲಟ" ಇತಿ ॥ "ಖೇಟಃ" ಪಕ್ಷೀ ॥ "ಜಲರುಹ" – ಪದ್ಮಮ್ ॥ ೧೭ ॥

## ಕನ್ನಡಾರ್ಥ

ಜಲ–ಸ್ಥಲ–ಆಕಾಶಗಳಲ್ಲಿರುವ ಸಕಲ ಜೀವರಲ್ಲಿರುವ ಪರಮಾತ್ಮನ ಸಂಚಾರಗಳನ್ನು ತಿಳಿಸುತ್ತಾರೆ. "ಜಲಟ(ಜ)" ಎಂಬ ಪದ್ಯದಿಂದ. "ಖೇಟ"– ಆಕಾಶದಲ್ಲಿ ಚಲಿಸುವವು ಪಕ್ಷಿಗಳು. "ಜಲರುಹ" ನೀರಿನಲ್ಲಿ ಬೆಳೆಯುವದು ಪದ್ಮ ॥ ೧೭ ॥

**ಅವತರಣಿಕಾ :** ಅತಿ ರಹಸ್ಯವಾದ ನಾಡಿನಾಡಿಗತ ಭಗವದ್ರೂಪ ಉಪಾಸನೆ ಸದ್ಗುರುಗಳಿಂದ ತಿಳಿದು ಮಾಡಬೇಕೆಂದು ಉಪದೇಶಿಸಿ ಸಜ್ಜನರನ್ನು ಶಿಕ್ಷಿಸುತ್ತಾರೆ.

ಮೂಲ :

**ತಿಳಿದುಪಾಸನೆಗೈವುತೀಪರಿ ।**
**ಮಲಿನನಂತಿರು ದುರ್ಜನರ ಕಂ ।**
**ಗಳಿಗೆ ಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ ॥**

**ಮಳೆ ಬಿಸಿಲು ಹಸು ತೃಷಿ ಜಯಾಜಯ ।**
**ಖಳರ ನಿಂದ್ಯಾನಿಂದ್ಯ ಭಯಗಳಿ ।**
**ಗಳುಕದಲೆ ಮದ್ದಾನೆಯಂದದಿ ಚರಿಸು ಧರೆಯೊಳಗೆ ॥೧೮॥**

**ಪದ್ಯಾರ್ಥ :** ತಿಳಿದುಪಾಸನೆ = ಹಿಂದೆ ಹೇಳಿದಂತೆ ನಾಡಿವಿಭಾಗ ವಿವರಣೆ—ನಾಡಿಗಳಲ್ಲಿ ವಾಯು ಶ್ರೀಹರಿಯ ರೂಪಗಳ ಉಪಾಸನೆ, ಧ್ಯಾನ ಪೂಜಾಬಗೆಯನ್ನು ಸದ್ಗುರುಗಳಿಂದ ತಿಳಿದು, ಈ ಪರಿ ಗೈವುತಿರು = ಉಕ್ತ ಪ್ರಕಾರವಾಗಿ ಧ್ಯಾನೋಪಾಸನೆ ಮಾಡುತ್ತಿರು. ಏಕೆಂದರೆ ಅತೀಂದ್ರಿಯವಾದ ತೇಜೋಮಯ ನಾಡಿಗತ ಕಮಲಗಳಲ್ಲಿ ಮುಖ್ಯ ಹೃತ್ಕಮಲದಲ್ಲಿ ಬಿಂಬೋಪಾಸನೆಯು, ಪ್ರತಿಬಂಧದಿಂದ ಬಿಡುಗಡೆ ಮಾಡಿಸಿ, ಉದಾನ ವಾಯುದೇವರು ಊರ್ಧ್ವಲೋಕವನ್ನು ಸೇರಿಸುವರು. ದುರ್ಜನರ ಕಂಗಳಿಗೆ ಗೋಚರಿಸದೆ ಮಲಿನನಂತಿರು = ಅಜ್ಞಾನಿಗಳಾದ ದುಷ್ಟ ಜನರಿಗೆ ಈ ರಹಸ್ಯವನ್ನು ತಿಳಿಸದೆ, ಅರಿದವನೆಂದು ತೋರದೆ, ಮಲಿನ = ಮಾಸಿದ-ಜ್ಞಾನಶೂನ್ಯನಂತೆ ಇರಬೇಕು, ವಿಪಶ್ಚಿತರೊಡನೆ ಗರ್ವಿಸದೆ = ನಾನು ಈ ಭಗವದುಪಾಸನೆ ತಿಳಿದ ಜ್ಞಾನಿಯೆಂದು ಜ್ಞಾನಿಗಳೊಡನೆ ಗರ್ವ ಮಾಡಬೇಡ, ಹೆಮ್ಮೆಪಡಬೇಡ, ಮಳೆ ಬಿಸಿಲು = ಶೀತ ಉಷ್ಣ, ಹಸಿವಿ ತೃಷಿ = ಹಸಿವಿ ನೀರಡಿಕೆ, ಜಯಾಜಯ = ಗೆಲವು ಸೋಲು, ಖಳರು = ದುಷ್ಟ ಜನರು ಸಹಿಸದೆ ಮಾಡುವ, ನಿಂದ್ಯ= ದೂಷಣ, ಅನಿಂದ್ಯ ಭೂಷಣ ಇತ್ಯಾದಿ ಭಯಗಳಿಗಳುಕದಲೆ = ಇಂತಹ ಭೀತಿಗೆ ಅಂಜದಲೆ-ಶಿಗದಲೇ ದ್ವಂದ್ವಾತೀತನಾಗಿ, ಇವೆಲ್ಲಕ್ಕೂ ಶ್ರೀಹರಿಯೇ ಮುಖ್ಯ ಕಾರಣನೆಂದರಿದು-ಹರಿಸ್ಮರಣೆ ಮಾಡುತ್ತ, ಇತರ ಸುಖದುಃಖಾದಿಗಳನ್ನು ಮನಸ್ಸಿಗೆ ತಾರದೇ, ಮದ್ದಾನೆಯಂದದಿ = ಮದವೇರಿದ ಆನೆಯು ಮೈಮೇಲಿನ ಎಚ್ಚರವಿಲ್ಲದೇ, ಹೇಗೆ ತಿರುಗುತ್ತದೋ ಹಾಗೆ ನೀನು ಭಗವಂತನ ಸ್ಮರಣೆ ಎಂಬೋ ಮದದಲ್ಲಿ ಬಾಹ್ಯ ವಿಷಯಗಳ ಮರೆದು, ಅಂತರಂಗದಲ್ಲಿ ಸದಾ ಭಗವಂತನ ಸ್ಮರಿಸುತ್ತಾ, ಧರೆಯೊಳಗೆ ಚರಿಸು = ಧರೆ = ಈ ಪೃಥ್ವಿಸಂಬಂಧವಾದ ಸ್ಥೂಲ ದೇಹದಿಂದ ಸಾಧನಮಾಡು ಅಥವಾ ಭೂಮಿಲಿ ಚರಿಸು.

**ದ್ರೌಪದೀಶಪತಿ ವಿಠಲರು :** ತಿಳಿದುಪಾಸನೆ.

**ಭಾವಸೂಚನ :** ತಿಳಿದೇತಿ ॥ ಸಜ್ಜನಾನ್ ಶಿಕ್ಷಯತಿ ॥ ಮಲಿನೇತಿ ॥ ಅಳುಕದಲೆ = ಖಿನ್ನನಾಗದಲೇ ॥ ತದುಕ್ತಮೇಕಾ ದಶಸ್ಕಂಧೇ ॥ "ಬಾಹ್ಯಾಂತ

ರ್ಭಜನೋಽಹ್ಯತ್ರ ಸಾಧುರ್ವೈ ದುರ್ಜನೈರಿತೈಃ ॥ ವಚೋಭಿರ್ಭಿನ್ನಮಾತ್ಮಾನಂಯಃ ಸಮಾಧಾತುಮೀಶ್ವರ ಇತಿ ॥ ಮದ್ಧಾನೇತಿ ॥ ನೋದ್ವಿಜೇತ್ ಜನಾದ್ಧೀರ ಇತ್ಯುಕ್ತೇಃ ॥ "ಬುಧೋ ಬಾಲವತ್ ಕ್ರೀಡೇತು ಕುಶಲೋ ಜಡವಚ್ಚರೇತ್ ॥೧೮॥

"ತಿಳಿದು" ಇತಿ ॥ "ಗೈವುತ" =ಮಾಡುತ ॥ "ಕಂಗಳು" =ಕಣ್ಣುಗಳು ॥ " ವಿಪಶ್ಚಿತರು " = ಜ್ಞಾನಿಗಳು ॥ ನಿಂದ್ಯಾಂತ ಸಹನೇ ಮಾನವ್ — " ಶೀತವಾತಾತಪಾದೀನಿ ತತ್ಕಾಲೇ ದುಃಖದಾನ್ಯಪಿ ॥ ಪಾರತ್ರಿಕ ಸುಖಾಯೈವ ಸಹಂತೇ ಧನ್ಯಪೂರುಷಾಃ" ॥ ಇತಿ ವಿಷ್ಣುರಹಸ್ಯೇ ॥೧೮॥

**ಕನ್ನಡಾರ್ಥ**

ಈ ಉಪಾಸನೆಯುನ್ನು ಮಾಡುವ ಜ್ಞಾನಿಗಳ ಆಚಾರ ಸ್ವಭಾವಗಳನ್ನು ತಿಳಿಸುತ್ತಾರೆ—"ತಿಳಿದು" ಎಂಬ ಪದ್ಯದಿಂದ.

"ಮಳೆ ಬಿಸಿಲುಗಳನ್ನಾರಂಭಿಸಿ ನಿಂದಾ-ನಿಂದೆ ಭಯವರೆಗಿರುವ ಸಕಲ ದ್ವಂದ್ವಗಳನ್ನೂ ಸಹಿಸುವವರು." ಈ ವಿಷಯದಲ್ಲಿ ವಿಷ್ಣುರಹಸ್ಯದ ವಚನವು ಪ್ರಮಾಣವಾಗಿರುತ್ತದೆ. "ಚಳಿ-ಮಳೆ-ಗಾಳಿ-ಬಿಸಿಲು ಮುಂತಾದವುಗಳನ್ನು ದುಃಖಕೊಡುವ ಪ್ರಸಂಗದಲ್ಲಿಯೂ ಸಹ ಜ್ಞಾನಿಗಳಾದ ಧನ್ಯ ಮಹಾಪುರುಷರು ಮೋಕ್ಷ ಸುಖವನ್ನಪೇಕ್ಷಿಸಿ ಸಹಿಸುತ್ತಾರೆ" ಎಂಬುದು ಪ್ರಮಾಣ ವಚನಾರ್ಥ ॥೧೮॥

**ಅವತರಣಿಕಾ :** ಭಗವಂತನ ಸ್ಮೃತಿಯಿಂದ ಮೈಮರೆದು ಸಕಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಶ್ರೀಹರಿಯು ಎಂತಹ ಸರ್ವವ್ಯಾಪಾರಗಳನ್ನು ಮಾಡಿಸುವನೋ ಆ ಸಕಲವೂ ಶ್ರೀಹರಿಯ ಪೂಜೆ ಎಂದು ತಿಳಿದು ಅಂತರಾತ್ಮಕನಾದ (ಬಿಂಬ) ಶ್ರೀಹರಿಗೆ ಅರ್ಪಿಸುತ್ತಾ ಸಂತೋಷಪಡುತ್ತಿರಬೇಕೆಂದು ಸಜ್ಜನರಿಗೆ ಉಪದೇಶಿಸುತ್ತಾರೆ.

ಮೂಲ :

**ಕಾನನ ಗ್ರಾಮಸ್ಥ ಸರ್ವ ।**
**ಪ್ರಾಣಿಗಳು ಪ್ರತಿದಿವಸದಲಿ ಏ ।**
**ನೇನು ಮಾಡುವ ಕರ್ಮಗಳು ಹರಿಪೂಜೆಯೆಂದರಿದು ॥**
**ಧೇನಿಸುತ ಸದ್ಭಕ್ತಿಯಲಿ ಪವ ।**
**ಮಾನ ಮುಖದೇವಾಂತರಾತ್ಮಕ ।**
**ಶ್ರೀನಿವಾಸನಿಗರ್ಪಿಸುತ ಮೋದಿಸುತ ನಲಿವುತಿರು ॥೧೯॥**

**ಪದ್ಯಾರ್ಥ :** ಕಾನನ = ಅಡವಿಯಲ್ಲಿ ತಿರುಗುವ ಕ್ರೂರ ಮೃಗಾದಿ-ಪಶು ಪಕ್ಷ್ಯಾದಿಗಳು, ಗ್ರಾಮಸ್ಥ = ಊರು ಹಳ್ಳಿ ಪಟ್ಟಣಗಳಲ್ಲಿರುವ ಪಶ್ವಾದಿ ಮಾನವರು - ಸರ್ವಪ್ರಾಣಿಗಳು, ಅಂದರೆ ಸರ್ವಚೇತನರಾದ ಜೀವರುಗಳಲ್ಲಿ ನಿಂತು ಶ್ರೀಹರಿಯು ಪ್ರತಿದಿವಸದಲ್ಲಿ ಏನೇನು ಕರ್ಮಗಳು = ನಿತ್ಯದಲ್ಲಿ ಆಯಾ ಪ್ರಾಣಿಗೆ ಯೋಗ್ಯವಾಗಿ ಏನೇನು ಕರ್ಮ = ವ್ಯಾಪಾರ, ಕೆಲಸಮಾಡಿಸು ತ್ತಾನೋ, ಅವೆಲ್ಲವೂ ಸ್ವಬಿಂಬನಾದ ಶ್ರೀಹರಿಯೇ "ಎನ್ನ ಸ್ವಾಮಿ ಸರ್ವ ಸ್ವಾಮಿ" ಎಂದರಿದು, ಆ ಪ್ರಾಣಿಗಳ ವ್ಯಾಪಾರವೆಲ್ಲವೂ ಶ್ರೀ ಹರಿಪೂಜಾ ಎಂದರಿದು = ತನ್ನ ಬಿಂಬನಾದ ಹರಿಯಪೂಜಾ ಎಂದು ತಿಳಿದು, ಧೇನಿಸುತ = ಸಕಲ ಕ್ರಿಯಾಬಿಂಬಾರ್ಪಣ ಬಗೆಯನ್ನರಿತು, ಶ್ರೀಹರಿಯ ಸಕಲಕ್ರಿಯಾಭಿನ್ನ ವಾದರೂ ಕ್ರಿಯಾಮಾಡಿ ಮಾಡಿಸುವ ಶ್ರೀಹರಿಯೊಬ್ಬನೇ ಎಂದು ತಿಳಿದು ಚಿಂತಿಸುತ್ತ, ಸದ್ಭಕ್ತಿಯಲಿ = ಬಹು ಪ್ರೀತಿ-ಅತಿಶಯವಾದ ಆದರದಿಂದ ಪವ ಮಾನ ಮುಖ ದೇವಾಂತರಾತ್ಮಕ ಶ್ರೀನಿವಾಸನಿಗರ್ಪಿಸುತ = ಸಕಲ ತತ್ವೇಶರ ನಿಯಾಮಕ, ತತ್ವೇಶನಾಮಕ = ಪವಮಾನ = ಪವಮಾನನಾದ ವಾಯು ಸ್ವರೂಪ ದೇಹದಲಿರುವನೆಂಬ ವಿವೇಚನದಿಂದ, ಪವಮಾನ = ವಾಯ್ವಂ ತರ್ಯಾಮಿ ಶ್ರೀನಿವಾಸ = ಶ್ರೀ ಲಕ್ಷ್ಮೀವಕ್ಷಸ್ಥಳದಿ ಶ್ರೀರೂಪದಿಂದ ವಾಸ ಮಾಡಿರುವ ತನ್ನ ವಕ್ಷಸ್ಥಳದಲ್ಲಿ ಶ್ರೀಯನ್ನೇ ಧರಿಸಿದ, ಶ್ರೀ ವೆಂಕಟೇಶಾಭಿನ್ನ, ಬಿಂಬನಿಗೆ ಸಕಲಕ್ರಿಯಾರೂಪ ಪೂಜಾಸಮರ್ಪಣೆಮಾಡುತ್ತ, ಮೋದಿಸುತ = ಸದಾ ಆನಂದಪಡುತ್ತ, ನಲಿಯುತಿರು = ಆನಂದೋದ್ರೇಕದಲ್ಲಿ ಕುಣಿದಾಡುತ್ತ ಲಿರಬೇಕು.

**ದ್ರೌಪದೀಶಪತಿ ವಿಠಲರು :** ಕಾನನ ಗ್ರಾಮಸ್ಥ.

**ಭಾವಸೂಚನ :** ಕಾನನೇತಿ ॥ ಅಂತರಾತ್ಮಕ ॥ ಅಂತರ್ಯಾಮಿ ॥ ೧೯ ॥

**ವಿಶೇಷಸೂಚನೆ :** ಶ್ರೀ ಐಜಿಸ್ವಾಮಿಗಳವರು ಮಾನಸಸ್ಮೃತಿ ಯಲ್ಲಿ "ಶ್ವೇತದ್ವೀಪಗತೋಯಶ್ಚ ಬಾಹ್ಯಹೃತ್ಪದ್ಮಗಶ್ಚಯಃ ॥ ತಯೋರೈಕ್ಯಂ ವಿಜಾನೀಯಾಜ್ಜೀವ ಹೃತ್ಪವಗಸ್ಯಚ ॥ **ಶರೀರ ಸರ್ವನಾಡೀಷು ನಿವಿಷ್ಟಾ ನಾಂಚ ವೈಹರೇಃ ॥ ಬ್ರಹ್ಮಾಂಡಾಂತರ್ಬಹಿಸ್ಥಾನಾಂ ರೂಪಾಣಾಮಪಿ ಸರ್ವಶಃ ॥** ಆತ್ಮಹೃತ್ಪವಗೇನೈಕ್ಯಂ ಚಿಂತನಂ ಪರಮಾರ್ಚನಂ ॥ ಪಂಚ

ರಾತ್ರಾಗಮ ಪ್ರಮಾಣಾನುಸರಿಸಿ **ಶ್ರೀ ಪ್ರಾಣೇಶವಿಠಲರು** "ಸ್ಥಾನತ್ರಯ ದೊಳಿದ್ದ ಹೃತ್ಪದ್ಮದೊಳಗಿದ್ದ । ನಾನಾಜೀವ ಜಡರೊಳ ಹೊರಗೆ ಇರುತಿಹ್ಯಾ ॥ ಶ್ರೀನಿವಾಸನ ರೂಪಕತ್ಯಂತ ಐಕ್ಯವನುಸಾನುರಾಗದಲಿ ಚಿಂತಿಪುದೇ ಪೂಜೆ ॥೨೧॥ ಉಪಾಸನಾ ಸುಳಾದಿ ॥ ೨೦೧ ಪುಟ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕಾನನ" ಇತಿ ॥ "ಪೂಜಾ" ಭಗವದಾಜ್ಞಾಪಾಲನಾತ್ ॥ "ಧೇನಿಸುತ" ಚಿಂತಿಸುತ ॥ "ಶ್ರೀನಿವಾಸಃ" ಓಂ ॥ ಆಸ್ವಾಪೇ ಸ್ವಾಪಿಭಿಃ ಆಜಿತುರಂ ಸತ್ಪತಿಂ । ವಿಶ್ವಚರ್ಷಣಿಂ ಕೃಧಿ(ತಿ) ಪ್ರಜಾಸ್ವಾಭಗವಮ್ ॥ ಪ್ರಸೂತಿರಾಶಚೀಭಿರ್ಯೇತ ಉಕ್ಥೇನಃ ॥ ಓಂ * ॥ ಶ್ರಯತೇ ಇತಿ ಶ್ರೀಃ ಸಂಪತ್ ಜ್ಞಾನೈಶ್ವರ್ಯಾದಿ ಷಡ್ಗುಣಜಾತಂ ನಿವಸತಿ ಅತ್ರ ಇತಿ ತಥೋಕ್ತಃ ॥ ೧೯ ॥

## ಕನ್ನಡಾರ್ಥ

ಸಕಲರೂ ಮಾಡುವದು ಪರಮಾತ್ಮನ ಪೂಜೆಯಂದರಿದು ಭಗವಂತನಲ್ಲಿ ಭಕ್ತಿಯಿಟ್ಟು ನಲಿದಾಡಬೇಕೆಂದು ತಿಳಿಸುತ್ತಾರೆ — "ಕಾನನದ" ಎಂಬ ಪದ್ಯದಿಂದ. ಭಗವದಾಜ್ಞೆಯನ್ನು ಪರಿಪಾಲನರೂಪವಾದುದರಿಂದ "ಹರಿಪೂಜೆ" ಯೆನಿಸಿಕೊಳ್ಳುವವು. ಶ್ರೀ ಅಂದರೆ ಜ್ಞಾನೈಶ್ವರ್ಯ ಮುಂತಾದ ಸಂಪತ್ತು. ಅದು ಪರಮಾತ್ಮನಲ್ಲಿ ಇರುವದರಿಂದ ಶ್ರೀನಿವಾಸನು ಹರಿಯು ಎಂದು "ಶ್ರೀನಿವಾಸ" ನಾಮದ ಬೃಹತೀಮಂತ್ರಾರ್ಥಸಾರ. ॥ ೧೯ ॥

**ಅವತರಣಿಕಾ:** ಸಕಲ ಜೀವರಲ್ಲಿ ಸಕಲ ಕರ್ಮಗಳು ಶ್ರೀಹರಿ ಮಾಡಿಸಿದರೂ ಕರ್ಮಗಳು ವೃದ್ಧಿಯಾಗಿ ಕರ್ಮಲೇಪನ ಶ್ರೀಹರಿಗೆ ಆಗುವದಿಲ್ಲವೆಂದು ಶ್ರುತಿ ಪ್ರತಿಪಾದ್ಯ ಭಗವಂತನ ಮಹಾಮಹಿಮೆ ಸ್ತೋತ್ರಗೈಯ್ಯುತ್ತಾರೆ.

ಮೂಲ :

**ನೋಕನೀಯನು ಲೋಕದೊಳು ಶುನಿ ।**
**ಸೂಕರಾದಿಗಳೊಳಗೆ ನೆಲೆಸಿ ।**
**ದ್ದೇಕ ಮೇವಾದ್ವಿತಿಯ ಬಹುರೂಪಾಹ್ವಯಗಳಿಂದಾ ॥**
**ತಾಕರೆಸುತೊಳಗಿದ್ದು ತಿಳಿಸದೆ ।**
**ಶ್ರೀಕಮಲಭವ ಮುಖ್ಯ ಸಕಲ ದಿ ।**
**ವೌಕಸ ಗಣಾರಾಧ್ಯ ಕೈಕೊಂಡನವರತ ಪೂರೆವಾ ॥ ೨೦ ॥**

**ಪದ್ಯಾರ್ಥ :** ನೋಕನೀಯನು = ನಃಕನೀಯಾ = ಯಾರಿಂದಲೂ ಸಣ್ಣವನಲ್ಲದವನು ಅಂದರೆ ಸರ್ವೋತ್ತಮನು, ಅಥವಾ "ನ ಕರ್ಮಣಾವರ್ಧತೇ ನೋಕನೀಯಾ" ॥ "ವರ್ಧತೇ ನೋಕನಿಯಾನಿತಿ ಶ್ರುತೇಃ" ॥ ಲೋಕದೊಳು = ಚತುರ್ದಶ ಲೋಕದಲ್ಲಿ ಶುನಿಸೂಕರಾದಿಗಳೊಳಗೆ ನೆಲೆಸಿ = ನಾಯಿ ಹಂದಿ ಮೊದಲಾದ ಪ್ರಾಣಿಗಳಲ್ಲಿದ್ದು "ಶುನಿಚೈವಸ್ವಪಾಕೇಚ ಪಂಡಿತಾಃ ಸಮದರ್ಶನಃ" ಎಂಬ ಗೀತೋಕ್ತಿಯಂತೆ ತೃಣಾದಿ ಬ್ರಹ್ಮಾಂತ ಜೀವರಲ್ಲಿಪ್ಪನು, ಹರಿಯು ಸಮಶಬ್ದ ವಾಚ್ಯನು ಬೇರೆ ಅಲ್ಲ. ಹೀಗೆ ಒಬ್ಬನೇ ಒಂದೇ ರೂಪದಿಂದ ಶುನಿ ಮೊದಲಾದವುಗಳಲ್ಲಿ ಅಂತರ್ಯಾಮಿಯಾಗಿದ್ದರೂ, ಏಕಮೇವ ಅದ್ವಿತೀಯ = "ಏಕಮೇವಾಽದ್ವಿತೀಯಂ ಬ್ರಹ್ಮ" ಎಂಬುವ ಶ್ರುತ್ಯನುಸಾರವಾಗಿ ಶ್ರೀಹರಿಯು ಬಹುರೂಪಗಳನ್ನು ಧರಿಸಿದರೂ, ದ್ವಿತೀಯನಲ್ಲ–ಬೇರೊಬ್ಬನಿಗೆ ಎರಡನೆಯವನಲ್ಲ. ಬಹುರೂಪಾಹ್ವಯಗಳಿಂದ ತಾ ಕರೆಸುತೊಳಗಿದ್ದು, ತಿಳಿಸದೆ = ನಾನಾ ಪ್ರಾಣಿಗಳ ಸ್ವರೂಪದಂತೆ ಅನೇಕ ರೂಪಗಳಿಂದಲೂ ಬಹಿರಂಗದಲ್ಲಿ ರಾಮ ಕೃಷ್ಣಾದ್ಯಮಿತ ರೂಪನಾಮಗಳಿಂದಲೂ ತಾನು ಒಬ್ಬನೇ ಬಿಂಬನು ಕರೆಸಿಕೊಂಡು, ಒಳಗಿದ್ದು = ಸರ್ವಜೀವರ ಅಂತಸ್ಥಿತನಾಗಿದ್ದರೂ, ತಿಳಿಸದೇ = ಅಜ್ಞರಿಗೆ ತಿಳಿಯಗೊಡದಂತೆ ಇದ್ದು, ಶ್ರೀಕಮಲಭವ ಮುಖ್ಯ ಸಕಲ ದಿವೌಕಸ ಗಣಾರಾಧ್ಯ = ಶ್ರೀದೇವಿ ರಮಾ, ಬ್ರಹ್ಮದೇವರೇ ಮೊದಲಾದ ಸರ್ವದೇವತೆಗಳ ಸಮೂಹದಿಂದ ಪೂಜೆಗೊಳ್ಳುವನಾಗಿ—ಪೂಜಾ ಕೈಕೊಂಡು, ಅನವರತ ಪೊರೆವಾ = ನಿತ್ಯದಲ್ಲಿ ಅಂದರೆ ಇಹಪರ ಮುಕ್ತಿಯಲ್ಲಿಯೂ ಸಹ ಸಂರಕ್ಷಿಸುವ.

**ದ್ರೌಪದೀಶಪತಿ ವಿಠಲರು:** ನೋಕನೀಯ–ಏಕಮೇವ ಅದ್ವಿತೀಯ.

**ಭಾವಸೂಚನ:** ನೋಕನೀಯೇ ತಿ ॥ "ವರ್ಧತೇ ನೋಕನೀಯಾನಿತಿ ಶ್ರುತೇಃ" ॥ ಜ್ಯೇಷ್ಠ ॥ ೨೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೋಕನೀಯನು" ಇತಿ ॥ ನೋಕನೀಯಃ ಉತ್ತಮಃ ॥ "ನೋಕನೀಯಾನ್" ಇತಿಶ್ರುತೇಃ ॥ "ಏಕಂ" ಅಂತರ್ನಿರ್ಭೇದಂ । ಏವೇತಿ ಗುಣಕರ್ಮಾಭೇದೇ ॥ "ಅದ್ವಿತೀಯಃ" ಇತಿ ಸ್ವಸದೃಶ ದ್ವಿತೀಯ ವಸ್ತುರಹಿತಃ ॥ ೨೦ ॥

## ಕನ್ನಡಾರ್ಥ

"ನೋಕನೀಯನು" ಅಂದರೆ ಉತ್ತಮನು, ಸರ್ವೋತ್ತಮನು ; ಎಂದು

ಅರ್ಥ. "ನ ವರ್ಧತೇ ನೋಕನೀಯಾನ್"—ಪರಮಾತ್ಮನು ಯಾರಿಂದಲೂ ಕಡಮೆಯವನಲ್ಲ ಎಂದು ಶ್ರುತಿಯಿರುವದರಿಂದ ಹೀಗೆ ಅರ್ಥ ಹೇಳಬೇಕು., "ಏಕ" ಈ ಶಬ್ದಕ್ಕೆ ಸ್ವಗುಣಕರ್ಮಗಳಿಂದಲೂ ಭೇದವಿಲ್ಲವೆಂದು ಅರ್ಥ. "ಅದ್ವಿತೀಯ" ಶಬ್ದಕ್ಕೆ ಸ್ವಗುಣಕರ್ಮಗಳಿಂದಲೂ ಭೇದವಿಲ್ಲವೆಂದು ಅರ್ಥ. "ಅದ್ವಿತೀಯ" ಶಬ್ದಕ್ಕೆ "ತನಗೆ ಸಮಾನವಾದ ಬೇರೆ-ದ್ವಿತೀಯ ವಸ್ತುವಿನಿಂದ ರಹಿತನು" ಎಂದು ಅರ್ಥ ||೨೦||

**ಅವತರಣಿಕಾ:** ಹಿಂದೆ ಪೇಳಿದ ಪ್ರಕಾರ ತಿಳಿದು, ಉಪಾಸನೆಯನ್ನು ಮಾಡುವವರಿಗೆ ಶ್ರೀಹರಿಯು ಮಹತ್ವ ಫಲವನ್ನು ಕೊಟ್ಟು ರಕ್ಷಿಸುತ್ತಾನೆಂಬ ವಿಚಾರವನ್ನು ವಿವರಿಸುತ್ತಾರೆ.




ಮೂಲ:

**ಇನಿತುಪಾಸನೆಗೈವುತಿಹ ಸ |**
**ಜ್ಜನರು ಸಂಸಾರದಲಿ ಪ್ರತಿಪ್ರತಿ |**
**ದಿನಗಳಲಿ ಏನೇನು ಮಾಡುವದೆಲ್ಲ ಹರಿಪೂಜೆ ||**
**ಎನಿಸಿಕೊಂಬುದು ಸತ್ಯವೀ ಮಾ |**
**ತಿನಲಿ ಸಂಶಯುಬಡುವನರ ಅ |**
**ಲ್ಪನು ಸುನಿಶ್ಚಯ ಬಾಹ್ಯಕರ್ಮವಮಾಡಿ ಫಲವೇನು ||೨೧||**

**ಪದ್ಯಾರ್ಥ:** ಇನಿತು = ಹಿಂದೆ ಪೇಳಿದಂತೆ ಈ ಪ್ರಕಾರವಾಗಿ ತಿಳಿದು, ಉಪಾಸನೆಗೈವುತಿಹ ಸಜ್ಜನರು = ಧ್ಯಾನೋಪಾಸನೆಯಮಾಡುವ ಸಜ್ಜನರು = ಒಳ್ಳೇ ನಡತೆಯುಳ್ಳ ಭಗವದ್ಭಕ್ತರು, ಸಂಸಾರದಲಿ = ಈ ಸಂಸಾರ ಅವಸ್ಥೆಯಲ್ಲಿ, ಪ್ರತಿಪ್ರತಿ ದಿನಗಳಲಿ = ನಿತ್ಯ ನಿತ್ಯ ದಿವಾರಾತ್ರಿಗಳಲ್ಲಿ ಏನೇನು ಮಾಡುವದೆಲ್ಲ ಹರಿಪೂಜೆ ಎನಿಸಿಕೊಂಬುವದು = ಸಕಲ ವ್ಯಾಪಾರ ಕ್ರಿಯಾ ಹರಿಯ ಸ್ಮರಣೆಪೂರ್ವಕ ಮಾಡುವ ಕೆಲಸಗಳೆಲ್ಲ ಶ್ರೀಹರಿಯ ಪೂಜಾ ಶ್ರೀಹರಿಯ ಅರ್ಚನೆ, ಆರಾಧನೆ ಎನಿಸುತ್ತದೆ. ಇದೇ ಬಿಂಬಾರ್ಚನೆ, ಈ ಮಾತಿನಲಿ ಸಂಶಯವಿಲ್ಲ ಸತ್ಯ = ಈ ವಚನದಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲ ನಿಜನಿಜ. ಈ ಮಾತಿನಲಿ ಸಂಶಯಬಡುವ ನರ ಅಲ್ಪನು = ಈ ವಚನದಲ್ಲಿ ನಂಬಿಕೆ ಇಡದೆ ಸಂದೇಹಬಡವ ಮಾನವನು ಅಲ್ಪನು = ಕೀಳನು, ಅಜ್ಞಾನಿ ಎಂದು ನಿಶ್ಚಯವಾಗಿದೆ. ಬಾಹ್ಯ ಕರ್ಮವಮಾಡಿ ಫಲವೇನು ? = ಶ್ರೀಹರಿಯ

ವಿಸ್ಮರಣೆಯಿಂದ ಡಂಭಾಚಾರದಿಂದ, ಖ್ಯಾತಿಗೋಸುಗವಾಗಿ ಯಜ್ಞಯಾಗಾದಿ ಅನೇಕ ಬಹಿರಂಗ ಕರ್ಮಗಳು ಮಾಡಿದರೂ ಏನೂ ಫಲವಿಲ್ಲವೆಂದು ಉಪದೇಶಿಸುತ್ತಾರೆ.

**ದ್ರೌಪದೀಶಪತಿ ವಿಠಲರು:** ೨೧, ೨೨, ೨೩ ಪದ್ಯಗಳಿಗೆ ಅರ್ಥ ಬರೆದಿಲ್ಲ.

**ಭಾವಸೂಚನ:** ಇನಿತೇತಿ ॥ ೨೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ನಿಗಮಯತಿ "ಇನಿತು" ಇತಿ ॥

**ಕನ್ನಡಾರ್ಥ**

ಈ ಉಪಾಸನೆಯನ್ನು ಮಾಡುವವರಿಗೆ ಇರುವ ಮಹತ್ವವನ್ನು ತಿಳಿಸುತ್ತಾರೆ – "ಇನಿತು" ಎಂಬ ಪದ್ಯದಿಂದ ॥ ೨೧ ॥

**ಅವತರಣಿಕಾ:** ಸಕಲ ಪ್ರಾಣಿಗಳಲ್ಲಿ ಸಮನಾಗಿ ಕ್ರಿಯೆಮಾಡಿ ಮಾಡಿಸಿದರೂ, ಭೋಗ್ಯ ಭೋಕ್ತನು ತಾನಾದರೂ ಯೋಗ್ಯ ಅಯೋಗ್ಯ ರಸಗಳನ್ನು ವಿಭಾಗಗೈಸಿ ಮುಕ್ತಿಯೋಗ್ಯರಿಗೆ ಯೋಗ್ಯರಸ, ದಾನವರಿಗೆ ಅಯೋಗ್ಯರಸ ಉಣಿಸಿ, ಮೋಕ್ಷೇಚ್ಛುಗಳಾದ ಸಾತ್ವಿಕರಿಗೆ ಜ್ಞಾನ ಭಕ್ತ್ಯಾದಿಗಳನ್ನೂ ಅಯೋಗ್ಯರಾದ ದೈತ್ಯಾದಿಗಳಿಗೆ ಮಿಥ್ಯಾಜ್ಞಾನ ದ್ವೇಷಾದಿಗಳನ್ನೂ ಕೊಡುವನೆಂದು ಶ್ರೀಹರಿಯ ಮಾಹಾತ್ಮ್ಯೆಯನ್ನು ಕೊಂಡಾಡುತ್ತಾರೆ.

ಮೂಲ:

**ಭೋಗ್ಯ ಭೋಕ್ತೃಗಳೊಳಗೆ ಹರಿತಾ ।**
**ಭೋಗ್ಯ ಭೋಕ್ತನುಯೆನಿಸಿ ಯೋಗ್ಯಾ ।**
**ಯೋಗ್ಯರಸಗಳ ದೇವದಾನವಗಣಕೆ ಉಣಿಸುವನು ॥**
**ಭಾಗ್ಯನಿಧಿ ಭಕ್ತರಿಗೆ ಸದ್ವೈ ।**
**ರಾಗ್ಯಭಕ್ತಿ ಜ್ಞಾನವೀವಾ ।**
**ಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲಿ ಕೊಡುತಿಪ್ಪ ॥ ೨೨ ॥**

ಸೂಚನೆ:—ಈ ವಿಷಯವನ್ನು ೪ನೇ ಸಂಧಿ ಮತ್ತು ೧೧ನೇ ಸಂಧಿ ೩೩ನೇ ಪದ್ಯದಲ್ಲಿ ವಿವರಿಸಿದ ವಿಷಯವನ್ನೇ ಇಲ್ಲಿ ನಾಡಿದ್ವಾರಾ ರಸವಿಭಾಗ ಸಂದರ್ಭದಲ್ಲಿ ಅದೇ ವಿಷಯವನ್ನೇ ಬೇರೆ ರೀತಿಯಾಗಿ ವಿವರಿಸುವ ದಾಸರ ಕರುಣೆಗೆ ನಮೋನಮಃ

**ಪದ್ಯಾರ್ಥ :** ಭೋಗ್ಯ = ಜೀವರು ಭುಂಜಿಸಿ ಭೋಗಮಾಡಿ ಆನಂದ ಪಡೆಯತಕ್ಕ ಪದಾರ್ಥದಲ್ಲಿಯೂ, ಭೋಕ್ತೃಗಳಿಗೆ = ಆ ಪದಾರ್ಥಗಳನ್ನು ಭುಂಜಿಸುವ ಜೀವರುಗಳಲ್ಲಿಯೂ, ಹರಿ ತಾ = ಬಿಂಬನಾದ ಶ್ರೀಹರಿಯು ತಾನು, ಭೋಗ್ಯ ವಸ್ತು ಎನಿಸಿ – ತಾನೆ ಭೋಕ್ತನು = ಭೋಜನಮಾಡತಕ್ಕವನೂ ಎನಿಸುತ್ತಾ, ಯೋಗ್ಯ = ಸತ್ವರಸ, ಸಾತ್ವೀಕ ಗುಣಧರ್ಮ ಪದಾರ್ಥಗಳ ರಸ ವನ್ನು ದೇವತೆಗಳು – ಸಾತ್ವಿಕ ಜೀವಗಣ ಸಮೂಹಕ್ಕೆ, ಅಯೋಗ್ಯರಸ = ತಾಮಸ ಪದಾರ್ಥಗಳಿಂದ ಜನಿತ ರಸ–ತಮೋಗುಣರಾದ, ದೈತ್ಯ ದಾನವಗಣ ಸಮೂಹಕ್ಕೆ, ಅವರ ಯೋಗ್ಯತೆಯಂತೆ, ಉಣಿಸುವನು = ಭೋಜನಮಾಡಿಸುವ ಅನುಭೋಗಕ್ಕೆ ತಂದೀವನು. ಶ್ರೀಹರಿಯು ಬಡವನಲ್ಲ, ಭಾಗ್ಯನಿಧಿಯು = ನಿತ್ಯ ಮುಕ್ತನೂ, ದೋಷದೂರನು, ಮುಕ್ತಿ ಎಂಬೋ ಮಹಾ ಆನಂದಭಾಗ್ಯ ವನ್ನು ಕೊಡುವನು, ಭಾಗ್ಯ = ಸಂಪತ್ತಿಗೆ, ಅಭಿಮಾನಿ = ಇಂಥ ಸಂಪತ್ಕರಳಾದ ರಮೆಗೆ, ಭಾಗ್ಯನಿಧಿ = ಐಶ್ವರ್ಯ ಸಂಪತ್ತಿಗೆ ಆಶ್ರಯಸ್ಥಾನನು. ಇಂಥ ಹರಿಯು, ಭಕ್ತರಿಗೆ ಸದ್ವೈರಾಗ್ಯ ಭಕ್ತಿಜ್ಞಾನವೀವ = ಸಜ್ಜನರಾದ ಭಕ್ತರು ಹರಿ ಕೊಟ್ಟುದೆ ಉಣುವದೆಂಬುವ ಜ್ಞಾನವೆ ವೈರಾಗ್ಯ, ಭಕ್ತಿ = ಪ್ರೇಮ ಪ್ರವಾಹ ರೂಪ ಭಕ್ತಿ, ಜ್ಞಾನ = ಹರಿಸರ್ವೋತ್ತಮ–ಈಶ, ಸಕಲರು ಶ್ರೀಹರಿಯ ದಾಸ ರೆಂಬ ಇಂಥ ಮಹಾ ಭಾಗ್ಯವನ್ನು ಕೊಟ್ಟು, ಹರಿಸ್ಮರಣೆ ಜ್ಞಾನದಿಂದ ಪುಳು ಕಾಂಕಿತ ಮಾಡಿಸುವ ಮಹಾಭಾಗ್ಯ ಕೊಡುವನು. (ಅನುಭವಜನ್ಯಜ್ಞಾನ) ಅಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲಿ ಕೊಡುತಿಪ್ಪ = ಅಸಜ್ಜನರು ದುಷ್ಟರು ಮತ್ತು ಅಜ್ಞಾನಿಗಳಿಗೆ ಹರಿದ್ವೇಷ, ಮಿಥ್ಯಾ ಜ್ಞಾನವನ್ನು ಕೊಡುತಿಪ್ಪ. ಈ ಕೊನೆಯ ಅರ್ಧ ಪದ್ಯಾರ್ಥವೆ ಹಿಂದಿನಕ್ಕಿಂತಲೂ ವಿಶೇಷವಾದುದು.

**ಭಾವಸೂಚನ :** ಭೋಗ್ಯೇತಿ ‖ ೨೨ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಭೋಗ್ಯ " ಇತಿ ‖ ೨೨ ‖

## ಕನ್ನಡಾರ್ಥ

ಭೋಜ್ಯ – ಭೋಕ್ತೃಗಳಲ್ಲಿ – ಆ ನಾಮಗಳಿಂದ ಕರೆಯಿಸಿಕೊಳ್ಳುತ್ತ ಶ್ರೀಹರಿಯು, ಉಭಯ ವಿಧ ರಸಗಳನ್ನು ಸುರಾಸುರರಿಗೆ ಉಣಿಸಿ ಭಕ್ತರಿಗೆ ಜ್ಞಾನ ಭಕ್ತಿ ವೈರಾಗ್ಯ ಭಾಗ್ಯಗಳನ್ನೂ ಅಸುರರಿಗೂ ಅಸಜ್ಜನರಿಗೂ ದ್ವೇಷ

ಮುಂತಾದವುಗಳನ್ನು ಕೊಡುತ್ತಾನೆಂದು ಹೇಳುತ್ತಾರೆ – "ಭೋಗ್ಯ" ಎಂಬ ಪದ್ಯದಿಂದ. ॥ ೨೨ ॥

**ಅವತರಣಿಕಾ:** ಹಿಂದಿನ ಧ್ಯಾನಸಂಧಿ ಪದ್ಯ ೧೨ರಲ್ಲಿ ತನುವಿನೊಳಗಿಪ್ಪನು ಸದಾ ವಾಮನ ॥ ಎಂಬುವ ಪರಮಾತ್ಮನ ರೂಪವು ಮಧ್ಯ ದೇಹದಲ್ಲಿ ಇದ್ದು ಈಗ ಇಲ್ಲಿ- ಆ ವಾಮನರೂಪಿ ಹರಿಯು ಕಾರ್ಯ ಸವಿಸ್ತಾರವಾಗಿ ಉಪದೇಶಿಸುತ್ತಾರೆ.

**ಮೂಲ:**

**ಈ ಚತುರ್ದಶ ಭುವನದೊಳಗೆ ಚ ।**
**ರಾಚರಾತ್ಮಕ ಜೀವರಲ್ಲಿ ವಿ ।**
**ರೋಚನಾತ್ಮಜ ವಂಚಕನು ನೆಲೆಸಿದ್ದು ದಿನದಿನದಿ ॥**
**ಯಾಚಕನು ಯೆಂದೆನಿಸಿಕೊಂಬ ಮ ।**
**ರೀಚಿದಮನ ಸುಹಂಸರೂಪ ನಿ ।**
**ಷೇಚಕಾಹ್ವಯನಾಗಿ ಜನರಭಿಲಾಷೆ ಪೂರೈಪ ॥ ೨೩ ॥**

**ಪದ್ಯಾರ್ಥ:** ಈ ಚತುರ್ದಶ ಭುವನದೊಳಗೆ = ಈ ಬ್ರಹ್ಮಾಂಡದಲ್ಲಿರುವ ಹದಿನಾಲ್ಕು ಲೋಕಗಳಲ್ಲಿ ಇರುವ, ಚರಾಚರಾತ್ಮಕ ಜೀವರಲ್ಲಿ = ಚರ = ಚಲಿಸುವ ಜೀವರು, ಅಚರ = ಚಲಿಸದೇ ಇದ್ದ ಸ್ಥಾವರ ಜೀವರಲ್ಲಿ, ಜಂಗಮ ಸ್ಥಾವರ ಜೀವರುಗಳಲ್ಲಿ, ವಿರೋಚನಾತ್ಮಜ ವಂಚಕನು = ವಿರೋಚನನ ಮಗನಾದ ಬಲಿಚಕ್ರವರ್ತಿಯಲ್ಲಿ ಹೋಗಿ ಶ್ರೀಹರಿಯು ಚಿಕ್ಕ ವಟುವಾಗಿ ಪೋಗಿ ಮೂರುಪಾದ ಭೂಮಿಯಾಚಿಸಿ, ತ್ರಿವಿಕ್ರಮರೂಪದಿಂದ ಎರಡು ಪಾದದಿಂದಲೇ ಭೂ ಅಂತರಿಕ್ಷ ವ್ಯಾಪಿಸಿ ೩ನೇ ಪಾದಕ್ಕೆ ಸ್ಥಳವಿಲ್ಲದಿರಲು, ಬಲಿರಾಜನು ತನ್ನ ಶಿರಸ್ಸೇ ಇತ್ತುದಕ್ಕೆ ಅವನನ್ನು ರಸಾತಳಕ್ಕೆ ಮೆಟ್ಟಿದ–ವಂಚಕನು = ಮೋಸಗಾರನು, ಕಪಟರೂಪಿ ವಾಮನ = ವಾಮಂ ನಯತೀತಿ ವಾಮನಃ ॥ ವಾಯುಮಾತ್ಮಾನಂ ಮನ್ಯತೇ ವಾಮನಃ = ತನ್ನನ್ನು ತಾನು ತಿಳಿಯುವ, ಬಲಿವಧಾರ್ಥಂ ಸೂಕ್ಷ್ಮರೂಪಧಾರಣಾದ್ವಾಮನಃ (ವಿದ್ಯಾಧಿ ರಾಜೀಯ) ಇಂಥ ವಾಮನರೂಪಿ ಹರಿಯು ದೇಹದಲ್ಲಿ ನೆಲಸಿದ್ದು, ದಿನದಿನದಿ ಯಾಚಕನು ಎಂದೆನಿಸಿಕೊಂಬ = ಪ್ರತಿ ನಿತ್ಯದಲ್ಲಿ ಸಕಲ ಜೀವಕೃತ ಕರ್ಮಗಳು ನಿರಪೇಕ್ಷ ಬುದ್ಧಿಯಿಂದ = ಫಲಾಪೇಕ್ಷೆಯಿಲ್ಲದೆ ಸತ್ಕರ್ಮಗಳನ್ನು ಬಹುಪ್ರೀತಿಯಿಂದ ಅರ್ಪಿಸಿದ ನಿವೃತ್ತ ಕರ್ಮಗಳನ್ನೂ ಬೇಡುವವನಾಗಿ **ಯಾಚಕ**

**ನೆಂದೆನಿಸಿಕೊಂಬ,** ಬಲಿರಾಜನು ಹರಿ ಪ್ರೀತಿಗೋಸುಗ ನಿರ್ವ್ಯಾಜದಿಂದ ೩ ಪಾದ ಭೂಮಿ ಹೇಗೆ ಸಮರ್ಪಿಸಿದನೋ, ಅದರಂತೆ ನಿವೃತ್ತಿ ಕರ್ಮಗಳು ಸಮರ್ಪಿಸಬೇಕೆಂಬು ಅಭಿಪ್ರಾಯ. ಅಹಂಕೃತಾಳಿ ಕರ್ಮಿಗಳಾದ ಅಜ್ಞರಿಗೆ ವಂಚಕನು, ಹೀಗೆ ಯಾಚಕನಾಗಿ ಜೀವಕೃತ ಕರ್ಮಾಳಿಯನ್ನು ಸ್ವೀಕರಿಸಿ, ಮರೀಚಿದಮನ =ಮೃಗತೃಷೆ ಎಂಬುವ ಸಂಸಾರವನ್ನು ಮರ್ದನಮಾಡುವವನು. ಅಮುಖ್ಯ. ಮುಖ್ಯಾರ್ಥಃ–ಮರೀಚಿಃ ದಮನೋಹಂಸಃ ಎಂಬ ಮೂರು ಭಗವ ದ್ರೂಪಗಳ ಕಾರ್ಯವು ವಿಷ್ಣುಸಹಸ್ರ ನಾಮದಲ್ಲಿ, "ಉದವನ್ಮೇಘ ಚಲನಾನ್ಮ ರೀಚಿಃ ॥ ದುಷ್ಟಾನ್ ದಮಯತಿ ನಿಗೃಣ್ಹಾತೀತಿ ದಮನಃ ॥ ಸಂಸಾರಂ ಹಂತೀ ಹಂಸಃ ॥ ದುಃಖಾದಿ ದೋಷಹೀನಃ ಸಾರಭೂತತ್ವಾತ್ ಹಂಸಃ ॥ ಹೀಗೆ ಮೂರು ಕಾರ್ಯರೂಪಗಳಿಂದ, ಅಂದರೆ ತತ್ವಾಭಿಮಾನಿ ದುಷ್ಟ ದೈತ್ಯರನ್ನು ಬದಿಗೊತ್ತುವ ದಮನರೂಪಿಯು, ದುಷ್ಕರ್ಮಗಳನ್ನು ನಾಶಮಾಡಿ, ಮರೀಚೀ = ಉದವನ್ಮೇಘ ಚಲನಾನ್ಮರೀಚಿ, ಉದಕಾನಿ ಸಂತ್ರ್ಯಂತೇತಿ ಉದವಾನ್ = ಉದಕ ತುಂಬಿದ ಮೇಘಗಳಿಂದ ವರ್ಷ – ಮಳೆಗರೆಸುವನು (ಮರೀಚಿ) ಸಕಲರ ಶಿರಸ್ಸಿನಲ್ಲಿದ್ದು ವರುಣಬೀಜ ವಾಚ್ಯನಾಗಿ ಉದಕ ಸಿಂಚ ರಿಸಿ, ದೇಹಶುದ್ಧಿಮಾಳ್ಪನು–ಮೇಘ ಮಳೆ ವೃಷ್ಟಿಯಿಂದ ನಾನಾ ಬೀಜರೂಪ ವಾದ ಧಾನ್ಯರೂಪ ಫಲವನ್ನು ಕೊಟ್ಟು ಜೀವರನ್ನು ಸಲಹಿ = ತಾನು ಹಂಸ ರೂಪದಿಂದ ಶುಭಸಾರವನ್ನು ಸ್ವೀಕರಿಸಿ, ಸಂಸಾರಂ ಹಂತೀತಿಹಂಸ = ಸಕಲ ಜೀವರ ಸಂಸಾರರೂಪ ಲಿಂಗಭಂಗಗೈಸಿ ಆನಂದವನ್ನು ಕೊಡುವನಾದುದರಿಂದ ಹಂಸನೆಂದು ದಾಸಾರ್ಯರು, ವೇದ ಉಪನಿಷತ್ ಪ್ರಣೀತವಾದ ಈ ಮೂರು ಸಾರ್ಥಕ್ಯ ಹರಿಯ ನಾಮಕಗಳನ್ನಿಟ್ಟಿರುವರು. (ಈ ರಹಸ್ಯಾರ್ಥವನ್ನು ಪ್ರಾರ್ಥನೆ ಯಿಂದ ಬೋಧಿಸಿ ಬರೆಸಿದ ಜ್ಞಾನಿಗಳ ಉಪಕಾರ ಮರೆಯೆ. ಸಕಲ ಜನ್ಮಗಳಲ್ಲಿ ಜ್ಞಾನಪ್ರದರಾದ ದಾಸರೇ ತಾರಕರಾಗಿರಲಿ. ಆನಂದ–ಆನಂದ ಮತ್ತೆ ಪರಮಾ ನಂದದಿಂ ಆನಂದಾಶ್ರುಗಳಿಂದ ದಾಸರ ಪಾದಪೂಜಾ ಆನಂದ) ಈ ಮೂರು ರೂಪಗಳಿಂದ, ನಿಷೇಚಕಾಹ್ವಯನಾಗಿ = ತೊಳೆಯುವ-ವರ್ಷಿಸುವ, ಅಂದರೆ ಭಕ್ತರ ಅಭೀಷ್ಟಗಳನ್ನು ವರ್ಷಿಸುವನಾಗಿ, ಜನರಭಿಲಾಷೆ ಪೂರೈಪ = ತ್ರಿವಿಧ ಜನರ ಮನೋ ಇಚ್ಛಾಗಳನ್ನು ಪೂರೈಸುತ್ತಾನೆ.

**ಭಾವಸೂಚನೆ:** ಚತುರ್ದಶೇತಿ ॥ ವಿರೋಚನಾತ್ಮಜ = ಬಲಿ ॥

ಮರೀಚೀತಿ ॥ ಮರೀಚೀರ್ದಮನೋಹಂಸಃ ಇತ್ಯುಕ್ತೇಃ ॥ ೨೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ ಚತುರ್ದಶ" ಇತಿ ॥ "ವಿರೋಚನಾತ್ಮಜ" ಬಲಿಃ ॥ "ಯಾಚಕಃ" ತದ್ಗತತ್ವಾತ್ ॥ "ನಿಷೇಚಕಃ" ಭಕ್ತಾಭಿಲಷಿತ ಸೇಚಕಃ ॥ "ಉಕ್ಷ್ನಾಸಾತ್" ಇತ್ಯುಕ್ತೇಃ ॥ "ಮರೀಚಿಃ" – "ಮರೀಚಿಃ ದಮನೋ ಹಂಸಃ ॥" ಓಂ * ॥ ತವೀಯೋಽ ರಥ್ರಸ್ಯ ರಧ್ರತುರೋ ಬಭೂವ ತನ್ನಃ ಪ್ರತ್ನಂ ಸಖ್ಯಮಸ್ತು ಯುಷ್ಮೇ ಇತ್ಥಾ ವದದ್ಭಿಃ ಬಲಮಂಗಿರೋಭಿಃ ॥ ಓಂ ॥ ಬಲಾಸುರಂ ಮರಣಂ ಪ್ರಾಪಯತಿ ಇತಿ ಮರೀಚಿಃ ॥ **ದಮನಃ** ಓಂ* (ಅ) ಹನ್ನಚ್ಯುದಚ್ಯುದ್ದಮ್ಮೇಷಯಂ ತವ್ಯಷೋಃ ಪುರೋವಿದುರೋ ಅಸ್ಯ ವಿಶ್ವಾಃ ಸ ಹಿ ಧೀಭಿರ್ಹವ್ಯೋ ಅಸ್ತ್ಯುಗ್ರ ಈಶಾನಕೃನ್ಮಹತಿ ॥ * ಓಂ ॥ ಶತ್ರೂಣಾಂ ದಮಂ ನಿರೋಧಂ ಕರೋತಿ ಇತಿ ತಥೋಕ್ತಃ ॥ ಹಂಸಶ್ರುತಿರುಕ್ತಾ ಪುರಸ್ತಾತ್ ॥ ೨೩ ॥

## ಕನ್ನಡಾರ್ಥ

ವಿರೋಚನಾತ್ಮಕಃ – ವಿರೋಚನನೆಂಬ ದೈತ್ಯನ ಮಗ ಬಲಿರಾಜ. ಯಾಚಕರಲ್ಲಿ ಅಂತರ್ಯಾಮಿಯಾಗಿ ಇರುವದರಿಂದ "ಯಾಚಕನು" ಎಂದು ಹೇಳಿಸಿಕೊಳ್ಳುತ್ತಾನೆ. "ನಿಷೇಚಕಾಹ್ವಯ" ಎಂದರೆ ಭಕ್ತರ ಅಭಿಲಾಷೆಗಳನ್ನು ಸುರಿಸುವವನು–ಪೂರೈಸುವವನು ಎಂದು ಅರ್ಥ. "ಉಕ್ಷ್ನಾಸಾತ್" ಎಂಬ ಶ್ರುತಿಯಲ್ಲಿ ಈ ಅರ್ಥವನ್ನು ಹೇಳಲಾಗಿರುತ್ತದೆ. ಅದನ್ನು ಹಿಂದಿನ ಸಂಧಿ ಪದ್ಯಗಳಲ್ಲಿ ವಿವರಿಸಿದ್ದಾಗಿರುತ್ತದೆ. "ಮರೀಚಿ" ಎಂಬುದು ಶ್ರೀ ವಿಷ್ಣು ಸಹಸ್ರನಾಮಾಂತರ್ಗತವು. "ಅಸುರರನ್ನು ಮರಣಹೊಂದಿಸುವವನು" ಎಂಬುದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ.

**ದಮನ :—** ಇದೂ ಒಂದು ವಿಷ್ಣುನಾಮ. ಶತ್ರುಗಳನ್ನು ದಮನ ಮಾಡುವವನು. ಅಂದರೆ ಅವರನ್ನು ನಿರೋಧಮಾಡುವವನು ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ.

**ಹಂಸ :—** ನಾಮದ ವಿವರಣವನ್ನೂ ಶ್ರುತಿಯನ್ನೂ ಮುಂದೆ ಹೇಳಲಾಗುತ್ತದೆ ॥ ೨೩ ॥

**ಅವತರಣಿಕಾ :** ಅನ್ನ ನಾಮಾತು ಭಗವಾನ್ ಇತ್ಯುಕ್ತೇಃ ॥ ಹಿಂದಿನ ಪದ್ಯದಲ್ಲಿ ಅಖಿಳ ಕೃತಕರ್ಮಾಳಿ ಯಾಚನಮಾಡಿ ಪೇಳ್ವುದಂತೆ ಸ್ವೀಕರಿಸಿ, ಭಕ್ತರಿಷ್ಟ ಮಳೆಗರೆದು

ಬೀಜರೂಪದ್ವಾರಾ ಅನ್ನಪ್ರದನಾಗಿ ಸಕಲ ಜೀವರನ್ನೂ ರಕ್ಷಿಸುವ ಶ್ರೀಹರಿಯು, ಅನ್ನದ-ಅನ್ನಾದ ಅನ್ನವೆನಿಸುವ ಜೀವರನ್ನು ಅನ್ನರೂಪದಿಂದ ರಕ್ಷಿಸುವ ಅನಿರುದ್ಧ ರೂಪವನ್ನು ಸ್ತೋತ್ರಗೈಯ್ಯುತ್ತಾರೆ. ಹೀಗೆ ೩೩ ಪದ್ಯದವರೆಗೆ.

ಮೂಲ :

**ಅನ್ನದನ್ನಾದನ್ನಮಯ ಸ್ವಯ ।**
**ಮನ್ನ ಬ್ರಹ್ಮಾದ್ಯಖಿಳ ಚೇತನ ।**
**ಕನ್ನಕಲ್ಪಕನಾಹನನಿರುದ್ಧಾದಿ ರೂಪದಲಿ ॥**
**ಅನ್ಯರನಪೇಕ್ಷಿಸದೆ ಗುಣ ಕಾ ।**
**ರುಣ್ಯಸಾಗರ ಸೃಷ್ಟಿಸುವನು ಹಿ ।**
**ರಣ್ಯಗರ್ಭನೊಳಿದ್ದು ಪಾಲಿಸುವನು ಜಗತ್ರಯವ ॥ ೨೪ ॥**

**ಪದ್ಯಾರ್ಥ :** ಅನ್ನಾದ ಅನ್ನ, ಈ ಎರಡು ರೂಪಗಳು ಶ್ರೀ ವಿಷ್ಣು ಸಹಸ್ರನಾಮಗತ ರೂಪ. "ಯಜ್ಞಾಂತ ಕೃತ್ ಯಜ್ಞಗುಹ್ಯಮನ್ನ ಮನ್ನಾದ ಏವಚ" ॥ ಸರ್ವ ಭೂತಾನಾಂ ॥ ಅನ್ನಮಿತ್ಯುಚ್ಯತೇ ಹರಿಃ ॥ ಉಪಜೀವ್ಯಶ್ಚ ಭೂತಾನಾ ಮಿತಿ ಚಾನ್ನಂ ಜನಾರ್ದನ ಇತಿ ॥ – ಅನ್ನಮತ್ತೀತ್ಯನ್ನಾದ ಎಂದು ವಿದ್ಯಾಧಿ ರಾಜೀಯದಲ್ಲಿ ಹೇಳಿದ್ದಾರೆ. "ಅಹಮನ್ನ ಅಹಮನ್ನ, ಅಹಮನ್ನಾದೋ ಅಹಮನ್ನಾದೋ" ಎಂದು ಸಾಮಶ್ರುತಿಯು. ಇಲ್ಲಿ ದಾಸವರ್ಯರು– ಅನ್ನದನ್ನಾದನ್ನಮಯ ಸ್ವಯಮನ್ನ— ಈ ಪದ್ಯಕ್ಕೆ ಜ್ಞಾನಿಗಳಾದ ದ್ರೌಪದೀಶ ವಿಠಲರು ಮತ್ತು ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಅನ್ನ–ಅನ್ನಾದ ಅನ್ನದ—ಎಂದು ಮೂರು ಪದಗಳನ್ನು ಮಾಡಿ ಅರ್ಥ ವಿವರಿಸಿದ್ದಾರೆ. ಅನ್ನ = ಸರ್ವ ಪ್ರಾಣಿಗಳಿಗೆ ಉಪಜೀವ್ಯನಾದುದರಿಂದ ಹರಿಯು ಅನ್ನನೆಂದು ಕರೆಸುತ್ತಾನೆ. ಅನ್ನದ = ಅನ್ನವನ್ನುಣ್ಣುತ್ತಾನಾ (ಅದ = ಭಕ್ಷಣ ಇತಿ ಧಾತೋಃ) ದುದರಿಂದ ಅನ್ನಾದನೆಂದು, ಅನ್ನದ = ಅನ್ನಂದದಾತೀತಿ ಅನ್ನದ, ಜೀವರಿಗೆ ಯೋಗ್ಯವಾದ ಅನ್ನವನ್ನು ಕೊಡುವನಾದುದರಿಂದ ಅನ್ನದ, ಹೀಗೆ ಮೂರು ವಿಧದಿಂದ ಸ್ವಯಮನ್ನ = ತಾನೆ ಅನ್ನಮಯ (ಮಯಟ್ ಪ್ರಾಚುರ್ಯೇಃ) ನಾಗಿರುವನಲ್ಲದೆ, ಬ್ರಹ್ಮಾದ್ಯಖಿಳ ಚೇತನಕೆ = ಬ್ರಹ್ಮದೇವರೇ ಮೊದಲಾದ ಸಕಲ ಜೀವರಾಶಿಗಳಿಗೆ, ಅನ್ನಕಲ್ಪಕನಾಹ = ತ್ರಿವಿಧ ಜೀವರಿಗೆ ತಕ್ಕಂತೆ ಆಯಾ ಜೀವರಿಗೆ ಅನ್ನವನ್ನುಂಟುಮಾಡಿಕೊಡುವನು. ಆಹ = ಆಗಿರುತ್ತಾನೆ. ಹೀಗೆ

ಅನಿರುದ್ಧಾದಿ ರೂಪದಲ್ಲಿ = ಆನಿರುದ್ಧ-ಅನಿರುದ್ಧ, ಅನಿ-ಪ್ರದ್ಯುಮ್ನ, ಅನಿ-ಸಂಕರ್ಷಣ, ಅನಿ-ವಾಸುದೇವ, ಅನಿ-ನಾರಾಯಣ — ಐದು ರೂಪಗಳಿಂದ ಕಾರ್ಯಮಾಡಿ, ಜೀವರಿಗೆ ಅನ್ನ, ಉಪಜೀವ್ಯ ತಾನೆ ಆಗಿದ್ದಾನೆ. ಅಲ್ಲದೇ, ಅನ್ಯರನ್ನಪೇಕ್ಷಿಸದೇ =ತಾನು ಎರಡನೇದವರ ಸಹಾಯವಿಲ್ಲದೇ, ಗುಣಕಾರುಣ್ಯ ಸಾಗರ = ಅನಂತ ಕಲ್ಯಾಣ ಜ್ಞಾನಾನಂದಾದಿ ಗುಣಗಳಿಗೆ ಸಮುದ್ರ ಸದೃಶನಾದ ಹರಿಯು, ತನ್ನ ಅಧೀನಳಾದ ರಮಾ ಚಿತ್ಪ್ರಕೃತಿಯು, ಸತ್ವಾದಿ ಜಡ ಪ್ರಕೃತಿಗೆ ಅಭಿಮನ್ಯಮಾನಳಾದುದರಿಂದ ಸತ್ವಾದಿ ಗುಣಕ್ಕೆ ತಾನೇ ಕಾರಣನಾಗಿ ರಜೋಗುಣ ಪ್ರಾಚುರ್ಯದಿಂದ ಹಿರಣ್ಯಗರ್ಭನೊಳಿದ್ದು = ಬ್ರಹ್ಮದೇವರ ದ್ವಾರಾ, ಸೃಷ್ಟಿಸುವನು =ಸಕಲ ಬ್ರಹ್ಮಾಂಡವನ್ನೂ ಜೀವರನ್ನು ಸೃಷ್ಟಿಮಾಡುವ. ಸತ್ವಗುಣಪ್ರಾಚುರ್ಯದಿಂದ ಸ್ವಯಂವಿಷ್ಣು ತಾನೆ ನಿಂತು, ಜಗತ್ರಯವ = ಜೀವರನ್ನು ಪಾಲಿಸುವ = ರಕ್ಷಿಸುವನು, ಮೂರು ಲೋಕವನ್ನೂ ಪಾಲಿಸುವ ಇತ್ಯಾದಿ.

**ದ್ರೌಪದೀಶಪತಿ ವಿಠಲರು :** ಅನ್ನದನ್ನಾದನ್ನ ಸ್ವಯಮನ್ನ= ಅನ್ನ = ಅನ್ನಸ್ವರೂಪ, ಅನ್ನಾದ = ಅನ್ನ ಕೊಡುವ, ಅನ್ನದ = ಅದಭಕ್ಷಣ ಇತಿ ಧಾತೋ ಶಬ್ದದಿಂದ ಅನ್ನ ಉಂಬುವವ, ಈ ಮೂರರಲ್ಲಿ ತನ್ಮಯತದಾಕಾರ ತದ್ರೂಪ ತಚ್ಛಬ್ದವಾಚ್ಯನಾಗಿ, ಅನಿರುದ್ಧ ರೂಪಗಳಿಂದ ಬ್ರಹ್ಮಾದಿಗಳಿಗೆ ಅನ್ನನಾಗಿದ್ದಾನೆ.

**ಭಾವಸೂಚನ:** ಅನ್ನೇತಿ ॥ ಅನ್ನಮನ್ನಾದ ಏವಚೇತ್ಯುಕ್ತೇಃ ॥ ಭುಕ್ತ್ವೋ ಭೂತ್ವಾಂನ್ನವಾಂಶ್ಚಸ್ಯಾ ದನ್ನಾದಶ್ಚ ಏವತು । ಇತಿ ತೈತರೀಯ ಭಾಷ್ಯೇ ॥ ಸ್ವಯಮಿತಿ ॥ ಅನ್ನನಾಮಾತು ಭಗವಾನಿತ್ಯುಕ್ತೇಃ ॥ ೨೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**" ಅನ್ನದ "** ಇತಿ ॥ **ಅನ್ನ**–ಓಂ* ಸತ್ಯೈ(ತ್ರೇ)(ತ) ಇಂದ್ರ, ವಾಜನೋ ವಾಜಾನಾಂ ಸತ್ಪತಿಂ ಪತಿಂಮಾಭೇಮ ಶವಸಸ್ಪತೇ ॥ ತ್ವಾಮಭಿ ಪ್ರಣೋನುಮೋ ಪೂರ್ವೀರಿಂದ್ರಸ್ಯ ॥ *ಓಂ ॥ ಅದ್ಯತೇ ಸರ್ವಪ್ರಾಣಿಭಿಃ ಉಪಜೀವ್ಯತೇ ಇತಿ **ಅನ್ನಮ್** ॥ " **ಅನ್ನಾದಃ** " ॥ *ಓಂ ॥ ಪುರಾಭಿಂದುರ್ಯುವಾ ಕವಿಃ ಸ್ತೋತೃಭ್ಯಃ ಮಂಹತೇ ಮಘಮ್ ॥ ಜೇತಾರಮಪರಾಜಿತಮ್ ನ ವಿದಸ್ಯಂತ್ಯೂತಯಃ ಯದೀ ವಾಜಸ್ಯ ಗೋಮತಃ ॥ *ಓಂ ॥ ಭಕ್ತೋಪಹೃತ ಚರುಪು

ರೋಡಾಶಾದ್ಯನ್ನಂ ಅತ್ತಿ ಇತಿ **ಅನ್ನಾದಃ** || ಯದ್ವಾ ಅನ್ನಂ ಭಕ್ತಾನಾಂ ಆ ಸಮಂತಾತ್ ದದಾತಿ ಇತಿ ಅನ್ನಾದಃ || ಅದ್ಯತ್ವಾತ್ತ್ರ್ಯತ್ವ ಪ್ರಾಚುರ್ಯಾತ್ **"ಅನ್ನಮಯಃ"** || "ಅತ್ತಿ" ಇತ್ಯನ್ನಮ್ | ಉತ್ತರೇಣ ಅನ್ವಯಃ || ಯಸ್ಯ ಬ್ರಹ್ಮ ಚ ಕ್ಷತ್ರಂ (ಚೋಭೇ ಓದನಂ) "ಚ" ಇತಿ ಶ್ರುತೇಃ || "ಕಲ್ಪಕಃ" – ಕರ್ತಾ | " ಪಾಲಿಸುವ" – ವಿಷ್ಣ್ವಾತ್ಮನಾ ||೨೪||

"ಅನ್ನ"–ಇದು ವಿಷ್ಣು ಸಹಸ್ರಾಂತರ್ಗತನಾಮ. ಸರ್ವ ಪ್ರಾಣಿಗಳಿಂದ ಉಪಜೀವಿಸಲ್ಪಡುವದರಿಂದ – ಸರ್ವರು ಹರಿಯನ್ನು ಉಪಜೀವಿಸುವದರಿಂದ "ಅನ್ನ"ವೆಂದು ಪರಮಾತ್ಮನ ಹೆಸರು. "ಅನ್ನಾದಃ"—"ಭಕ್ತರಿಂದ ಸಮರ್ಪಿಸಲ್ಪಟ್ಟ ಹೋಮ ಮುಂತಾದವುಗಳಲ್ಲಿ ಸುರುವಲ್ಪಟ್ಟ ಚರು-ಪುರೋಡಾಶ ಮುಂತಾದ ಅನ್ನ (ಹವಿರ್ದ್ರವ್ಯ)ವನ್ನು ಸ್ವೀಕರಿಸುವವನು" ಎಂದು ಬೃಹತೀ ಮಂತ್ರಾನುಗುಣವಾದ ಈ ವಿಷ್ಣುನಾಮಾರ್ಥ; ಸರ್ವ ಪ್ರಾಣಿಗಳಿಂದ ಉಪಜೀವಿಸಲ್ಪಡುವದು. ಸಮಸ್ತ ಪ್ರಪಂಚವನ್ನು ಸಂಹರಿಸುವದು. ಪ್ರಚುರವಾದ ಅನ್ನವಿರುವದು–ಮಹಾ ಭೋಗವಿರುವದು. ಈ ಧರ್ಮಗಳಿಂದ ಪರಮಾತ್ಮನಿಗೆ ಅನ್ನಮಯನೆಂದು ಕರೆಯುತ್ತಾರೆ. ಜಗತ್ತನ್ನು ಸಂಹರಿಸುವದರಿಂದ ಪರಮಾತ್ಮನು ಅನ್ನನೆನಿಸಿರುತ್ತಾನೆ. ಎಲ್ಲ ಭಕ್ತರಿಗೆ ಅನ್ನವನ್ನು ಚೆನ್ನಾಗಿ ಒದಗಿಸಿ ಕೊಡುವದರಿಂದಲೂ ಅನ್ನಾದವೆಂದು ಹೇಳುತ್ತಾರೆ. "ಯಸ್ಯ ಬ್ರಹ್ಮಚಕ್ಷತ್ರಂ ಚ ಉಭೇ ಓದನಂ ಚ ಭವತಃ"—"ಬ್ರಹ್ಮಕ್ಷತ್ರ ಮುಂತಾದ ವರ್ಣವಿಶಿಷ್ಟವಾದುದೆಲ್ಲವೂ ಪರಮಾತ್ಮನಿಗೆ ಅನ್ನವೆನಿಸುವದು" ಎಂದು ಶ್ರುತಿಯು ಹೇಳುತ್ತದೆ. ಆದುದರಿಂದ "ಅನ್ನ"ವೆನ್ನುತ್ತಾರೆ ಸೃಷ್ಟಿ–ಸ್ಥಿತಿ–ಲಯಗಳಿಗನುಸಾರವಾಗಿ, "ಲಯಮಾಡುವವನೆಂದು" ಅನ್ನ ಶಬ್ದವಾಚ್ಯ ಸಂಕರ್ಷಣ ರೂಪವನ್ನು ತಿಳಿಯಬೇಕು. ವಿಷ್ಣುರೂಪದಿಂದ ಸಂರಕ್ಷಿಸುವನು. ಅನಿರುದ್ಧರೂಪದಿಂದ ಸೃಷ್ಟಿಮಾಡುವ. ||೨೪||

**ಅವತರಣಿಕಾ:** ಇನ್ನು ವೇದಮಾತೆಯಾದ ಗಾಯಿತ್ರಿ ಮಂತ್ರ ಪ್ರತಿಪಾದ್ಯ ಹರಿಯೇ ಶ್ವೇತದ್ವೀಪಾದಿ ತ್ರಿಸ್ಥಾನದಲ್ಲಿಪ್ಪನೇ ದೇಹದಲ್ಲಿಪ್ಪ, ತ್ರಿನಾಡಿಗಳಲ್ಲಿಪ್ಪ, ಶ್ರೀಹರಿಯೇ ಎನ್ನ ಬಿಂಬನೆಂದು ಐಕ್ಯ ಚಿಂತಿಸಿ, ಧ್ಯಾನೋಪಾಸನೆಯಲ್ಲಿ ಹರಿಯ ಸ್ತೋತ್ರ ಕೊಂಡಾಡುತ್ತಾರೆ.

ಮೂಲ :

**ತ್ರಿಪದ ತ್ರಿದಶಾಧ್ಯಕ್ಷ ತ್ರಿಸ್ಥ ।**
**ತ್ರಿಪಥಗಾಮಿನಿಪಿತ ತ್ರಿವಿಕ್ರಮ ।**
**ಕೃಪಣವತ್ಸಲ ಕುವಲಯದಳಶ್ಯಾಮ ನಿಸ್ಸೀಮ ॥**
**ಅಪರಿಮಿತ ಚಿತ್ಸುಖ ಗುಣಾತ್ಮಕ ।**
**ವಪುಷ ವೈಕುಂಠಾದಿ ಲೋಕಾ ।**
**ಧಿಪತ್ರಯೀಮಯ ತನ್ನವರ ನಿಷ್ಕಪಟದಿಂ ಪೊರೆವ ॥ ೨೫ ॥**

**ಪದ್ಯಾರ್ಥ :** ತ್ರಿಪದ = ತ್ರೀಣಿ ಪದಾನ್ಯಸ್ಯೇತಿ ತ್ರಿಪದ = ಮೂರು ಪಾದವುಳ್ಳ ಗಾಯತ್ರೀ ಮಂತ್ರ ಪ್ರತಿಪಾದ್ಯ, ತ್ರಿಪದ = ಭೂಃ-ಭುವಃಸ್ವಃ ಎಂಬ ಮೂರು ವ್ಯಾಹೃತಿ ಪ್ರತಿಪಾದ್ಯರೂಪನೇ, ತ್ರಿದಶಾಧ್ಯಕ್ಷ = ದೇವತೆಗಳ ಒಡೆಯನೆ ಅಥವಾ ಗಾಯತ್ರೀ ೨೪ ವರ್ಣಾಭಿಮಾನಿ ದೇವತೆಗಳ ಅಧ್ಯಕ್ಷ ಒಡೆಯ ಕೇಶವಾದಿ ೨೪ ರೂಪನೇ, ತಿಸೃಣಾಂದಶಾನಾಂ ಅವಸ್ಥಾನಾವ್ ಸೃಷ್ಟ್ಯಾದೀನಾಂ ಜಾಗ್ರದಾದೀನಾಂ ವಾಸ್ವಾಮಿ ತ್ರಿದಶಾಧ್ಯಕ್ಷ (ವಿದ್ಯಾಧಿ ರಾಜೀಯ) ತ್ರಿಸ್ಥ = ಶ್ವೇತದ್ವೀಪ-ಅನಂತಾಸನ ವೈಕುಂಠ ಎಂಬ ಈ ಮೂರೆಡೆ ಗಳಲ್ಲಿ ನೆಲಸಿಪ್ಪನೇ ಅಥವಾ ಬಹಿ ಅಂತಃಬ್ರಹ್ಮಾಂಡ ದೇಹದಲ್ಲಿ ಜೀವಾಂತ ರ್ಯಾಮಿಯಾಗಿರುವ ಹರಿಯೇ, ತ್ರಿಪಥಗಾಮಿನಿ = "ಗಂಗಾತ್ರಿಪಥಗಾಮಿನಿ" ಎಂಬುವಂತೆ ಗಂಗಾ ಯಮುನಾ ಸರಸ್ವತಿ ಈ ಮೂರು ಸಂಗಮವಾಗಿರುವ ಪ್ರಯಾಗ ರಾಜನೇ = ದೇಹಸ್ಥ ಇಡಾ ಗಂಗಾ - ಪಿಂಗಳಾ = ಯಮುನಾ, ಸರಸ್ವತಿ ಸುಷುಮ್ನಾ ನಾಡಿಗಳಲ್ಲಿಪ್ಪ ತ್ರಿರೂಪಾತ್ಮಕನಾದ ಗಂಗಾಜನಕನೇ, ತ್ರಿವಿಕ್ರಮ = ತ್ರಯೋವಿಕ್ರಮಾ ತ್ರಿಷು ಲೋಕೇಷು ಕ್ರಾಂತಾಯಸ್ಯ ತ್ರಿವಿಕ್ರ ಮಾ ॥ ಮೂರು ಪಾದದಿಂದ ಭೂ ಅಂತರಿಕ್ಷವನ್ನು ವ್ಯಾಪಿಸಿದವ **"ತ್ರೀಣಿ ಪದಾ ವಿಚಕ್ರಮ ಇತಿಶ್ರುತೇ** ॥ ಏವಂವಾ ತ್ರಿರಿತ್ಯೇವಂ ತ್ರಯೋವೇದಾಃ ಕೀರ್ತಿತಾ ಮುನಿಸತ್ತಮೈಃ ॥ ಕ್ರಮಾನ್ಸೇತಾ ತುಃಸರ್ವಾಸ್ತ್ವಂ ವಿಕ್ರಮೋಸಿ ಜನಾರ್ದನೇತಿ ಹರಿವಂಶೆ ॥ ( ಶ್ರೀ ವಿದ್ಯಾಧಿ ರಾಜೀಯ ವಿ. ಸ. ನಾ.) ಕೃಪಣ ವತ್ಸಲ = ದೀನರಾದ ಭಕ್ತರನ್ನು-ದಯೆಗೆ ಪಾತ್ರರಾದ ತನ್ನವರನ್ನು ರಕ್ಷಿಸುವ ಬಿರುದುಳ್ಳ ಹರಿ, ಕುವಲಯದಳಶ್ಯಾಮ = ಕನ್ನೈದಿಲೆಯಂತೆ ನೀಲವರ್ಣ ವಿಶಿಷ್ಟವಾದ ದೇಹಉಳ್ಳವ, ನಿಸ್ಸೀಮ = ಮಹಾ ಬಲಶಾಲಿ, ಪರಾಕ್ರಮಿ,

ಅಪರಿಮಿತ ಚಿತ್ಸುಖ ಗುಣಾತ್ಮಕವಪುಷ = ಮಿತಿ ಇಲ್ಲದ ಲೆಕ್ಕ ವಿಲ್ಲದ, ಚಿದಾನಂದ ದೇಹವುಳ್ಳವ ಜ್ಞಾನಾನಂದಾತ್ಮಕ ಗುಣವುಳ್ಳ, ದೇಹವುಳ್ಳ ಚಿದಾನಂದ ಶರೀರವುಳ್ಳ, ವೈಕುಂಠಾಧಿ ಲೋಕಾಧಿಪ = ಶ್ವೇತದ್ವೀಪ-ಅನಂತಾಸನ ವೈಕುಂಠಾಧಿ ಲೋಕಗಳಿಗೆ ಒಡೆಯನಾದವ, ತ್ರಯಿೀಮಯ = ಋಕ್-ಯಜುಃಸ್ಸಾಮವೇದ ಪ್ರತಿಪಾದ್ಯನೆಂದು ಪೊಗಳುವ, ತನ್ನವರ = ತನ್ನ ನಿಜ ಭಕ್ತರನ್ನು, ನಿಷ್ಕಪಟದಿಂ ಪೊರೆವ = ಕುಟಿಲರಹಿತನಾಗಿ ವಂಚನೆಯಿಲ್ಲದೆ ರಕ್ಷಿಸುವನು.

**ದ್ರೌಪದೀಶಪತಿ ವಿಠಲರು :** ತ್ರಿಪದ ತ್ರಿದಶಾ.

**ಭಾವಸೂಚನ :** ತ್ರಿಪದೇತಿ ॥ ತ್ರಿಪದ ತ್ರಿದಶಾಧ್ಯಕ್ಷ ಇತಿವಚನಾತ್ ॥ ತ್ರಿಸ್ಥ = ಶ್ವೇತ ದೀಪಾದಿಗತ ॥ ತ್ರಿಪಥಗಾಮಿನಿ = ಗಂಗಾ । ನಿಸ್ಸೀಮ = ಮರ್ಯಾದಾರಹಿತಾ ॥ ತ್ರಯಿೀಮಯ ವೇದ ಪ್ರತಿಪಾದ್ಯ ॥ ೨೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ತ್ರಿಪದ" ಇತಿ ॥ "ತ್ರಿಪದ" – ಓಂ* ವೃಷಣಸ್ತೇ ಅಭೀಶವೋ ವೃಷಾ ಕಶಾ ಹಿರಣ್ಯಯೀ (ಣ್ಯೈ) ವೃಷಾ ರಥೋ ಮಘವನ್ ॥ ವೃಷಣಾ ಹರೀ, ವೃಷಾ ತ್ವಂ ಶತಕ್ರತೋ ॥ ಓಂ ॥ * ॥ ತ್ರೀಣಿ – ಅಶ್ವರಥ ಕಶಾದೀನಿ, ಪದಾನಿ ಲಕ್ಷಣಾನಿ ಚಿಹ್ನಾನಿ ಯಸ್ಯ ಸಃ ತಥೋಕ್ತಃ ॥ **"ತ್ರಿದಶಾಧ್ಯಕ್ಷ"** – ಓಂ* ವೃಷಾ ಸೋತಾ ಸುನೋತು ತೇ ವೃಷನ್ನೃಜೀಪಿನ್ನಾಭರ ॥ ವೃಷಾದಧನ್ವೇ ವೃಷಣಂ ನದೀಷ್ವಾ ತುಭ್ಯಂ ಸ್ಥಾತರ್ಹರೀಣಾಂ ಐಂದ್ರ ॥ * ಓಂ ॥ ತಿಸ್ರಃ ದಶಾಃ ಶ್ರೇಷ್ಠಯಷ್ಟೃತ್ವಾಧಿಕಾರ, ಯಾಗಕ್ರತುತ್ವ ಅಶ್ವಧಾನಾ ದಾನಾಖ್ಯಾಃ ಅವಸ್ಥಾಃ ಯೇಷಾಂ ತೇ ತ್ರಿದಶಾಃ ಯಾಗಾಧಿಕಾರಿಣಃ ॥ ತದಧ್ಯಕ್ಷಃ ತತ್ಸ್ವಾಮೀ ॥ "ತ್ರಿಸ್ಥಃ" ಶ್ವೇತದ್ವೀಪಾದಿಸ್ಥಃ ॥ "ತ್ರಿಪಥಗಾಮಿನೀ" – ಗಂಗಾ ॥ "ತ್ರಿವಿಕ್ರಮಃ" – ಓಂ* ಇಂದ್ರೋ ಯಃ ಪೂರ್ಭಿದಾರಿತಃ ॥ ಯೋ ಧೃಷಿತೋ ಯೋ ವೃತೋ ಯೋ ಅಸ್ಮಿಶ್ಮಶ್ರುಷು (ಶು) ಶ್ರಿತಃ ॥ ವಿಭೂತ ದ್ಯುಮ್ನಯಶ್ಚ್ಯವನಃ ಪುರುಷ್ಟುತಃಕೃತ್ವಾ ॥ ಓಂ ॥ * ॥ "ತ್ರಿಷು" ಲೋಕೇಷು ಆಧ್ಯಾತ್ಮಿಕಾಧಿ ಭೌತಿಕಾಧಿ ದೈವಿಕಾಖ್ಯೇಷು "ತ್ರಿಷು" ಸ್ಥಾನೇಷು, "ವಿಕ್ರಮಃ" ದೇಹಸ್ಥಿತಸ್ಯಾಪಿ ವಿಕಾರಾದ್ಯಭಾವಾದಿರೂಪಃ, ಸರ್ವಭೂತೈಃ ಅನಾವೃತತ್ವಾದಿ ರೂಪಃ ಶತ್ರು(ಷು) ಭೇದಕತ್ವಾದಿರೂಪಶ್ಚ ಶೌರ್ಯಾವಿಶೇಷಃ ಯಸ್ಯ ಸಃ

**ತಥೋಕ್ತ**ಃ ॥ "ಕೃಪಣಾಃ" ದೀನಾಃ ॥ "ಕುವಲಯ" ಕುಮುದವ್ ॥ "ನಿಸ್ಸೀಮ" ಅಪರಿಮಿತ ॥ "ಆತ್ಮಕ" ರೂಪ ॥ "ತ್ರಯೀಮಯ" ವೇದ ಪ್ರತಿ ಪಾದ್ಯೇಷು ಉತ್ತಮಃ ॥ ೨೫ ॥

## ಕನ್ನಡಾರ್ಥ

**"ತ್ರಿಪದ"**—"ಅಶ್ವ-ರಥಕಶ (ಚಾಬೂಕು) ಗಳೆಂಬ ಮೂರು ಚಿನ್ಹ ಗಳಿಂದ ಚಿನ್ಹಿತನಾದವನು" ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ.

**"ತ್ರಿದಶಾಧ್ಯಕ್ಷ"** — ಯಾಗಮಾಡಿಸುವ - ಯಾಗಮಾಡುವ ಅಶ್ವಾ ಲಂಭನಗಳೆಂಬ ಮೂರು ಅಧಿಕಾರಗಳುಳ್ಳವರು ತ್ರಿದಶರು. ಅವರಿಗೆ ಅಧ್ಯಕ್ಷ ಸ್ವಾಮಿ ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ.

**"ತ್ರಿಸ್ಥ"**—ಶ್ವೇತದ್ವೀಪ ಅನಂತಾಸನ ವೈಕುಂಠ, ಈ ಮೂರು ಸ್ಥಲ ಗಳಲ್ಲಿ ಇರುವವನು. "ತ್ರಿಪಥಗಾಮಿನೀ"-ಗಂಗಾ ॥ "ತ್ರಿವಿಕ್ರಮ" ತ್ರಿಲೋಕ ಗಳಲ್ಲಿ ಆಧ್ಯಾತ್ಮಿಕ - ಆಧಿದೈವಿಕ - ಆಧಿಭೌತಿಕಗಳೆಂಬ ಮೂರು ಸ್ಥಾನಗಳಲ್ಲಿ "ವಿಕ್ರಮಃ" ದೇಹದಲ್ಲಿದ್ದರೂ ವಿಕಾರ ಮುಂತಾದವುಗಳಿಲ್ಲದಿರುವದು ಯಾವು ದರಿಂದಲೂ ಆವೃತವಾಗದಿರುವದು ಶತ್ರುಗಳನ್ನು ಭೇದಿಸುವದು, ಈ ಮುಂತಾದ ರೂಪವಾದ ಶೌರ್ಯಗುಣವು ಯಾರಿಗೆ ಇರುವದೋ ಅವನು ತ್ರಿವಿಕ್ರಮನು" ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ ॥ "ಕೃಪಣ" ದೀನರು. "ಕುವಲಯ" ಕುಮುದವೆಂಬ ಕರಿಯ ಕಮಲ. "ನಿಸ್ಸೀಮ" ಅಪರಿಮಿತ "ಚಿತ್ಸುಖಗುಣಾತ್ಮಕವಪುಷ" ಜ್ಞಾನಾನಂದ ಮುಂತಾದ ಗುಣಗಳೇ ದೇಹವಾಗಿ ಉಳ್ಳವನು. "ತ್ರಯೀಮಯ" ಪರಮ ಮುಖ್ಯ ವೃತ್ತಿಯಿಂದ ಸರ್ವವೇದಗಳ ಮುಖ್ಯಾರ್ಥನೂ ವೇದಗಳ ಮುಖ್ಯ ಮಹಾ ತಾತ್ಪರ್ಯ ವಿಷಯೀಭೂತನೂ ಎಂದು ಅರ್ಥ. ॥ ೨೫ ॥

**ಅವತರಣಿಕಾ :** ಇಂಥ ಮಾಹಾತ್ಮೆಯುಳ್ಳ ಶ್ರೀಹರಿಯು ಪರಾಧೀನನೆನಿಸದೇ ತನ್ನ ವಶನಾಗಿ ತಾನಿಪ್ಪನು ಮತ್ತು ತನ್ನ ವಶದಲ್ಲಿಪ್ಪ ಜಗತ್ತಿನಲ್ಲಿ ವ್ಯಾಪಿಸಿದ್ದಾನೆಂದು ಲವಣಮಿಶ್ರಿತ ಜಲದ ದೃಷ್ಟಾಂತದಿಂದ ಶ್ರೀಹರಿಯ ಸ್ತೋತ್ರಗೈಯ್ಯುತ್ತಾರೆ.

ಮೂಲ:

**ಲವಣ ಮಿಶ್ರಿತ ಜಲವು ತೋರ್ಪುದು ।**
**ಲವಣದೋಪಾದಿಯಲಿ ಜಿಹ್ವೆಗೆ ।**
**ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ ॥**
**ಸ್ವವಶ ವ್ಯಾಪೀಯೆನಿಸಿ ಲಕ್ಷ್ಮೀ ।**
**ಧವ ಚರಾಚರದೊಳಗೆ ತುಂಬಿಹ ।**
**ಅವಿದಿತನ ಸಾಕಲ್ಯಬಲ್ಲವರಾರು ಸುರರೊಳಗೆ ॥ ೨೬ ॥**

**ಪದ್ಯಾರ್ಥ:** ಲವಣ ಮಿಶ್ರಿತ ಜಲವು = ಉಪ್ಪಿನಿಂದ ಮಿಶ್ರಿತವಾದ ಕೂಡಿದ-ಕಲೆಸಿದ ನೀರು, ಜಿಹ್ವೆಗೆ ಲವಣದೋಪಾದಿಯಲಿ ತೋರುವದು = ನಾಲಿಗೆಗೆ ಉಪ್ಪಿನಂತೆ-ತೋರುವದು, ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ = ನೋಡುವವರಿಗೆ ಉಪ್ಪು ಬೇರೆ, ನೀರು ಬೇರೆಮಾಡಲು ಸಾಧ್ಯವಾಗುವದೇ, ಹೇಗೆ ಬೇರೆ ಮಾಡಲು ಎಂದಿಗೂ ಸಾಧ್ಯವಾಗುವದೇ ಇಲ್ಲವೋ, ಅದರಂತೆಯೇ, ಶ್ರೀ ಲಕ್ಷ್ಮೀಧವ ಸ್ವವಶ ವ್ಯಾಪೀಯೆನಿಸಿ = ಶ್ರೀ ಲಕ್ಷ್ಮೀದೇವಿಯ ಪತಿ ಶ್ರೀಹರಿಯು, ತನ್ನ ವಶದಲ್ಲಿ ತಾನಿದ್ದು ಅಂದರೆ ತಾನೇ ಸರ್ವ ಸ್ವತಂತ್ರನಾಗಿ, ಸ್ವವಶವ್ಯಾಪಿಯೆನಿಸಿ = ತನ್ನ ವಶದಲ್ಲಿದ್ದ ಬ್ರಹ್ಮಾದಿ ಚೇತನರೊಳಗೂ ಜಡವಾದ ಬ್ರಹ್ಮಾಂಡದೊಳಗೂ ವ್ಯಾಪ್ತನಾಗಿ, ಚರಾಚರ ದೊಳಗೆ ತುಂಬಿಹ = ಚರ = ಜಂಗಮ ಪ್ರಾಣಿಗಳಾದ ಬ್ರಹ್ಮಾದಿಗಳಲ್ಲಿ, ಅಚರ = ಜಡವಸ್ತುಗಳಲ್ಲಿ- ತಾನು ಮಹಾತ್ಮನಾದರೂ ಅಲ್ಪನಾಗಿ ಅವರವರ ಯೋಗ್ಯತೆಯಂತೆ ವ್ಯಾಪಿಸಿ ತುಂಬಿಕೊಂಡಿರುವನು, ಅವಿದಿತನ ಸಾಕಲ್ಯ ಬಲ್ಲವರಾರು ಸುರರೊಳಗೆ = ಪೂರ್ಣವಾಗಿ ತಿಳಿಯಲು ಸಾಧ್ಯವಾಗದ ಅನಂತ ಗುಣ ಉಳ್ಳ ಹರಿಯನ್ನು ಶ್ರೀ ಲಕ್ಷ್ಮೀದೇವಿಯೇ ಪೂರ್ಣ ತಿಳಿಯಳು, ಸುರ ರೊಳಗೆ = ದೇವತಾ ಸಮೂಹದಲ್ಲಿ ಯಾರೂ ಈತನ ಮಹಿಮೆ ತಿಳಿಯರು, ಎಂತ ಹೇಳಿದಮೇಲೆ ಮಾನವರಂತೂ, ತಿಳಿಯದಿರುವದು ಏನಚ್ಚರಿ ?

**ದ್ರೌಪದೀಶಪತಿ ವಿಠಲರು:** ಲವಣ ಮಿಶ್ರಿತ ಉಪ್ಪು ನೀರು, ಉಪ್ಪು ಬೇರೆ ನೀರು ಬೇರೆ ಹೇಗೆ ಮಾಡಲಿಕ್ಕೆ ಬರುವುದಿಲ್ಲವೋ ಹಾಗೆ ಪರಮಾತ್ಮ.

**ಭಾವಸೂಚನ:** ಲವಣೇತಿ ॥ ಸ್ವವಶೋ ವ್ಯಾಪೀತ್ಯುಕ್ತೇಃ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಲವಣ" ಇತಿ ॥ "ತೋರ್ಪುದು" – ತೋರ್ರೋದು । "ಗೈಸಲು" – ಮಾಡಲು । "ಸ್ವವಶಃ" ಓಂ* ಉಭಯಂ ಕರಂ ಮಂಹಿಷ್ಟ ಮುಭಯಾವಿನಂ ಯಚಿದ್ಧಿ ತ್ವಾ ಜನಾ ಇಮೇ ನಾನಾ ಹವಂತ ಊತಯೇ ಅಸ್ಮಾಕಂ ಬ್ರಹ್ಮೇದಮಿಂದ್ರ ॥ ಓಂ ॥ * ॥ ಸ್ವಸ್ಯೈವ ವಶಃ ನಾನ್ಯಸ್ಯ ಇತಿ ಸ್ವವಶಃ ॥ "ವ್ಯಾಪೀ" – ಓಂ* ಭೂತು ತೇऽಹಾ ವಿಶ್ವಾ ಚ ವರ್ಧನಂ ವಿತತೂರ್ಯಂತೇ ಮಘವನ್ ವಿಪಶ್ಚಿತೋರ್ನಾ ವಿಪ್ರೋ ಜನಾನಾಂ ಉಪಕ್ರಮಸ್ವ ಪುರುರೂಪಂ (ಪುಥುಷಂ) ಬಹುರೂಪಾಣ್ಯಸ್ಯ ಸಂತಿ ಇತಿ ವ್ಯಾಪೀ ॥ ಓಂ ॥ * "ಇಹ" – ಇರುವವ ॥ ೨೬ ॥

## ಕನ್ನಡಾರ್ಥ

ಪರಮಾತ್ಮನ ಸರ್ವವ್ಯಾಪ್ತಿಯನ್ನು ತಿಳಿಸುತ್ತಾರೆ – "ಲವಣ" ಎಂಬ ಪದ್ಯದಿಂದ. "ತೋರ್ಪುದು" ತೋರುವದು – ತೋರುತ್ತದೆ. "ಗೈಸಲು" – ಮಾಡಲು, "ಸ್ವವಶ" – "ತನ್ನ ವಶದಲ್ಲಿಯೇ ತಾನಿರುವವನು – ಇನ್ನೊಬ್ಬರ ಅಧೀನನಲ್ಲ" ಎಂದು ಬೃಹತೀ ಮಂತ್ರಾನುಗುಣವಾದ ನಾಮಾರ್ಥ. "ಇಹ" ಇರುವವನು ॥ ೨೬ ॥

**ಅವತರಣಿಕಾ :** ಹಿಂದೆ ಹೇಳಿದಂತೆ ಶ್ರೀಹರಿಯ ವ್ಯಾಪ್ಯ ವ್ಯಾಪಕತ್ವವನ್ನು ವನ್ನು ತಿಳಿದು ಭಜಿಸಲು, ಜನನ, ಮರಣಾದಿಗಳನ್ನು ತಪ್ಪಿಸಿ ಮೋಕ್ಷವನ್ನೀಯುವ ನೆಂದು ಶ್ರೀಹರಿಯ ಸ್ತೋತ್ರಗೈಯ್ಯುತ್ತಾರೆ.

ಮೂಲ :

**ವ್ಯಾಪ್ಯನಂದದಿ ಸರ್ವ ಜೀವರೊ ।**
**ಳಿಪ್ಪ ಚಿನ್ಮಯ ಘೋರಭವ ಸಂ ।**
**ತಪ್ಯಮಾನರು ಭಜಿಸೆ ಭಕುತಿಯಲಿಂದ ಇಹಪರದಿ ॥**
**ಪ್ರಾಪ್ಯನಾಗುವ ನವರವ ಗುಣಗ ।**
**ಳೊಪ್ಪುಗೊಂಬನು ಭಕ್ತ ವತ್ಸಲ ।**
**ತಪ್ಪಿಸುವ ಜನ್ಮಾದಿದೋಷಗಳವರಿಗನವರತ ॥ ೨೭ ॥**

**ಪದ್ಯಾರ್ಥ :** ವ್ಯಾಪ್ತನಂದದಿ = ಶ್ರೀಹರಿಯು ತಾನು ಸರ್ವತ್ರದಲ್ಲಿ ಸ್ವಾತಂತ್ರ್ಯದಿಂದ ವ್ಯಾಪಕನಾದರೂ, ವ್ಯಾಪ್ಯ = ಕಡಿಮೆ ಜೀವರುಗಳಲ್ಲಿ ಅಲ್ಪ

ಪ್ರಮಾಣವುಳ್ಳ ಸರ್ವಜೀವರೊಳಿಪ್ಪ = ಎಲ್ಲ ಜೀವರಲ್ಲಿ ವ್ಯಾಪ್ಯನಾಗಿರುವನು ಆದರೂ ಚಿನ್ಮಯನು = ಸಚ್ಚಿದಾನಂದ ದೇಹವುಳ್ಳವನು. ಭವಸಂತಪ್ಯ ಮಾನರು ಸಂಸಾರದಿಂದ ಬೆಂದು ಬಳಲಿದ (ಮಾನವರು) ವರು, ಭಕುತಿಯ ಲಿಂದ ಭಜಿಸೆ = ಶ್ರೀಹರಿಯೇ ನೀನೇ ಗತಿ ಹೊರತು ನಮಗೆ ಗತಿ ಬೇರೊಬ್ಬ ರಾರು ಇಲ್ಲವೆಂದು ಆದರೆ ಪ್ರೀತಿ ಪೂರ್ವಕವಾಗಿ ಭಜಿಸಲು, ಅವರವ ಗುಣ ಗಳೊಪ್ಪುಗೊಂಬನು = ಇಂತಹ ಭಕ್ತರು ಮಾಡಿದ ಅವಗುಣಗಳನ್ನು ಒಪ್ಪಿ ಕೊಂಡು, ಭಕ್ತಾಪರಾಧ ಸಹಿಷ್ಣು ಅಪರೋಕ್ಷಾನಂತರ ಪ್ರಾರಬ್ಧ ಕರ್ಮ ಅನುಭವಿಪ ಭಕ್ತರು ಕದಾಚಿತ್ ಅಪರಾಧಮಾಡಿದರೆ, ಆ ತಪ್ಪು ಒಪ್ಪಿಕೊಂಡು ಕ್ಷಮಿಸುವ, ಭಕ್ತವತ್ಸಲ = ಭಕ್ತರನ್ನು ರಕ್ಷಿಸುವ ಮಹಾ ಪ್ರೀತಿಯುಳ್ಳವನು, ತಪ್ಪಿಸುವ ಜನ್ಮಾದಿ ದೋಷಗಳವರಿಗನವರತ = ಇಂಥ ಪ್ರಾರಬ್ಧ ಅನುಭೋ ಕ್ತೃವ್ಯಕಾಲಗಳಲ್ಲಿ ಮುಂದೆ ಕರ್ಮಾನುಸಾರ ಬರುವ ಜನ್ಮಾದಿ ದೋಷಗಳನ್ನು ಉಪಮರ್ದಮಾಡಿ, ಅನವರತ ಕಾಪಾಡುವನು = ಮುಂದೆ ಮುಕ್ತಿ ಎಂಬ ನಿತ್ಯ ಸುಖದಲ್ಲಿಟ್ಟು ರಕ್ಷಿಸುವನು.

**ದ್ರೌಪದೀಶಪತಿ ವಿಠಲರು :** ವ್ಯಾಪ್ಯನಂದದಿ = ಕಾಷ್ಟದೊಳಗೆ ಅಗ್ನಿ ಇದ್ಧಾಗೆ ಇದ್ದಾನೆ.

**ಭಾವಸೂಚನ :** ವ್ಯಾಪ್ಯೇತಿ ಅಲ್ಪವಸ್ತುಗತ || ೨೭ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವ್ಯಾಪ್ಯ" ಇತಿ || ಅಲ್ಪದೇಶವೃತ್ತಿತ್ವಾತ್ || "ಚಿನ್ಮಯ" – ಜ್ಞಾನ ಪ್ರಚುರ | "ಸೇ" ಇರಲು | "ಒಪ್ಪುಗೊಂಬನು" ಕ್ಷಮಿಸುವ || ೨೭ ||

## ಕನ್ನಡಾರ್ಥ

ಹರಿಯು ಸರ್ವಗತತ್ವವನ್ನು ನಿರೂಪಿಸುತ್ತಾರೆ — "ವ್ಯಾಪ್ಯ" ಎಂಬ ಪದ್ಯ ದಿಂದ. ಕಡಿಮೆಯಾದ ಪ್ರದೇಶದಲ್ಲಿ ಇರುವ ವಸ್ತುವಿಗೆ ವ್ಯಾಪ್ಯವೆಂದು ಕರೆಯು ತ್ತಾರೆ. ವ್ಯಾಪ್ಯವಸ್ತುವಿನಂತೆ ಜೀವನಲ್ಲಿ ಪರಮಾತ್ಮನ ಸಂಬಂಧವಿದ್ದರೂ ಪರಮಾತ್ಮನು ಪೂರ್ಣನೇ ಆಗಿರುತ್ತಾನೆ. ಜೀವರ ದೇಹವ್ಯಾಪಾರ ಮಾಡಿಸು ವದಕ್ಕಾಗಿ ಜೀವದೇಹಗಳಲ್ಲಿ ಬಂದು ಇರುತ್ತಿದ್ದರೂ ಹರಿಯ ಪೂರ್ಣತ್ವಕ್ಕೆ ವಿರೋಧ ಬರುವದಿಲ್ಲ.

"ಚಿನ್ಮಯ" – ಪೂರ್ಣವಾದ ಜ್ಞಾನದಿಂದ ತುಂಬಿಕೊಂಡಿರುವವನು.

"ಭಜಿಸೆ" – ಭಜನೆಮಾಡಲು "ಒಪ್ಪಗೊಂಬುವ" – ಅವರ ಅಪರಾಧಗಳನ್ನು ಕ್ಷಮಿಸಿಬಿಡುತ್ತಾನೆ ॥ ೨೭ ॥

**ಅವತರಣಿಕಾ :** ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಸರ್ವವ್ಯಾಪ್ಯ ವ್ಯಾಪಕನೆಂದು ತಿಳಿದು, ಸಕಲ ಗೃಹಕರ್ಮಗಳು ಶ್ರೀಹರಿಯ ಸೇವೆಯೆಂದು ಶ್ರೀಹರಿಗೆ ಅರ್ಪಿಸಲು, ಸುಜ್ಞಾನ ಭಕ್ತಿ ಎಂಬ ಸಂಬಂಧವನ್ನು ಕೊಟ್ಟು ರಕ್ಷಿಸುತ್ತಾನೆಂದು ಉಪದೇಶಿಸುತ್ತಾರೆ.

ಮೂಲ :

**ಹಲವು ಬಗೆಯಲಿ ಹರಿಯ ಮನದಲಿ ।**
**ಒಲಿಸಿ ನಿಲ್ಲಿಸಿ ಏನುಮಾಡುವ ।**
**ಕೆಲಸಗಳು ಅವನಂಘ್ರಿ ಪೂಜೆಗಳೆಂದು ನೆನವುತಿರು ॥**
**ಹಲಧರಾನುಜ ತಾನೆ ಸರ್ವ ।**
**ಸ್ಥಳಗಳಲಿ ನೆಲೆಸಿದ್ದು ನಿಶ್ಚಂ ।**
**ಚಲ ಭಕುತಿ ಸುಜ್ಞಾನ ಭಾಗ್ಯವಕೊಟ್ಟು ಸಂತೈಪ ॥ ೨೮ ॥**

**ಪದ್ಯಾರ್ಥ :** ಹಲವು ಬಗೆಯಲಿ = ನಾನಾ ರೀತಿ, ಸರ್ವಪ್ರಕಾರದಿಂದ ಶ್ರೀಹರಿ ವ್ಯಾಪ್ಯ ವ್ಯಾಪಕ, ಪೋಷ್ಯ – ಪೋಷಕ, ಪ್ರೇರ್ಯ ಪ್ರೇರಕನೆಂದು ಹರಿಯ ಅನೇಕ ಗುಣಗಳಿಂದ ಪೂರ್ಣ ಮಮಸ್ವಾಮಿ ಎಂದು ಆತ್ಮೈಕ ಗುಣೋಪಾಸನೆಯಿಂದ ವೊಲಿಸಿ = ಹರಿಯನ್ನು ಮೆಚ್ಚಿಸಿ, ನಿಲ್ಲಿಸಿ = ಹೃತ್ಕಮಲದಲ್ಲಿ ಭಕ್ತಿ ಪಾಶದಿಂದ ಕಟ್ಟಿ ನಿಲ್ಲಿಸಿ, ಏನುಮಾಡುವ ಕೆಲಸಗಳು = "ಗೃಹಕರ್ಮವ ಬ್ಯಾಸರದಲೇ ಪರಮೋತ್ಸಹದಲಿ ಮಾಡುತ ಮೂಜಗದಾ ॥ ಮಹಿತನಸೇವೆ ಇದೇ ಎನುತಲಿ ಮೋದದಿ । ಅಹರಹರ್ಮನದಿ ಸಮರ್ಪಿಸುತಿಪ್ಪುದೆ ಫಲವಿದು ಬಾಳ್ದುದಕೆ" ಎಂಬುವ ದಾಸರಾಯರ ಉಕ್ತಿಯಂತೆ, ಸಕಲ ಕರ್ಮವೂ ಶ್ರೀಹರಿಯ ಅಂಘ್ರಿಯ ಪೂಜೆಗಳೆಂದು ನೆನವುತ್ತಲಿರಬೇಕು. ಹಲಧರಾನುಜ = ಹಲ = ನೇಗಿಲನ್ನೇ ಆಯುಧವನ್ನಾಗಿ ಧರಿಸಿದ ಬಲರಾಮನನುಜ ತಮ್ಮ ಶ್ರೀಕೃಷ್ಣನೇ ಶೇಷಶಾಯಿ ಹರಿಯು, ಸರ್ವಸ್ಥಳಗಳಲಿ ನೆಲೆಸಿದ್ದು = ಜೀವನಲ್ಲಿದ್ದು ಕೆಲಸಮಾಡಿಸುವಲ್ಲಿ, ಯಾವ ದೇಶ ಯಾವ ಕಾಲ ಯಾವ ದೇಹಕೊಟ್ಟರೂ, ಅಲ್ಲಲ್ಲಿ ವ್ಯಾಪ್ತನಾಗಿ ನೆಲೆಸಿದ್ದು, ತಾನೇ ಸಕಲಕ್ರಿಯಾ ಜೀವನಿಂದ ಮಾಡಿಸುವನೆಂದು ಭಜಿಸಲು, ನಿಶ್ಚಂಚಲ = ಚಂಚಲವಿಲ್ಲದ,

ತೈಲಧಾರೆಯಂತೆ ದೃಢ ಬಕುತಿ, ಸುಜ್ಞಾನ-ಸಮೀಚೀನ ಜ್ಞಾನ ಭಾಗ್ಯವ = ತನ್ನ ಪಾದದಲ್ಲಿ ಸುಜ್ಞಾನ ವೈರಾಗ್ಯ ಸದ್ಭಕ್ತಿ ಎಂಬ ಸಂಪತ್ತುಕೊಟ್ಟು, ಸಂತೈಪ = ಸಮಾಧಾನಮಾಡುವನು, ರಕ್ಷಿಸುವನು ॥ ೨೮ ॥

**ದ್ರೌಪದೀಶಪತಿ ವಿಠಲರು :** ಹಲವು ಬಗೆಯಲಿ.

**ಭಾವಸೂಚನ :** ಹಲವೇತಿ ॥ ಸರ್ವಪ್ರಕಾರ ॥ ಉಕ್ತಂಚ ದಾಸವರ್ಯೈಃರನ್ಯತ್ರ ॥ " ಗೃಹಕರ್ಮವ ಬ್ಯಾಸರದಲೆ ಪರಮೋತ್ಸವದಿಂ ಮೂಜಗವ॥ ಮಹಿತನ ಸೇವೇತಿ ॥ ೨೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಹಲವು " ಇತಿ ॥ " ಹಲವು ಬಗೆ " – ಸರ್ವಪ್ರಕಾರ ॥ " ಹಲಧರಃ "– ಬಲರಾಮಃ ॥ " ಸಂತೈಪ " – ರಕ್ಷಿಪ ॥ ೨೮ ॥

## ಕನ್ನಡಾರ್ಥ

ಹರಿಯ ಒಲುಮೆ ಉಪಾಯವನ್ನೂ ಬಗೆಯನ್ನೂ ತಿಳಿಸುತ್ತಾರೆ. " ಹಲವು ಬಗೆ " ಎಂಬ ಪದ್ಯದಿಂದ. " ಹಲವು ಬಗೆಗಳು " – ವಿವಿಧವಾದ ಧ್ಯಾನದ ಪ್ರಕಾರಗಳು. ಖಂಡಧ್ಯಾನ – ಅಖಂಡಧ್ಯಾನ ಎಂದು ಮುಂತಾಗಿ ಭಾಗವತಾದಿ ಶಾಸ್ತ್ರಗಳಲ್ಲಿ ಹೇಳಿದಂತೆ, ಪರಿಪರಿಯಿಂದ ಚಿಂತಿಸಬೇಕು ಎಂದು ತಾತ್ಪರ್ಯ. " ಹಲಧರಾನುಜ " ಹಲ – ನೇಗಿಲನ್ನು ಧರಿಸಿದ ಬಲರಾಮನ ಅನುಜ ತಮ್ಮನಾದ ಶ್ರೀಕೃಷ್ಣ, " ಸಂತೈಪ " – ರಕ್ಷಿಸುತ್ತಾನೆ. ॥ ೨೮ ॥

**ಅವತರಣಿಕಾ :** ಶ್ರೀಹರಿಯು ಸರ್ವತ್ರ ವ್ಯಾಪಕನಾದರೂ, ಲೇಶದೋಷವಿಲ್ಲದವನು ಎಂದು ಶ್ರೀಹರಿಯ ಗುಣಾತಿಶಯಗಳನ್ನು ಪೊಗಳುತ್ತಾರೆ.

ಮೂಲ :

**ದೋಷಗಂಧವಿದೂರ ನಾನಾ ।**
**ವೇಷಧಾರಕ ಈ ಜಗತ್ರಯ ।**
**ಪೋಷಕ ಪುರಾತನ ಪುರುಷ ಪುರುಹೂತ ಮುಖವಿಸುತ ॥**
**ಶೇಷವರ ಪರಿಯಂಕಶಯನ ವಿ ।**
**ಭೀಷಣಪ್ರಿಯ ವಿಜಯಸಖ ಸಂ ।**
**ತೋಷಬಡಿಸುವ ಜನರಿಗಿಷ್ಟಾರ್ಥಗಳ ಪೂರೈಸಿ ॥ ೨೯ ॥**

**ಪದ್ಯಾರ್ಥ :** ದೋಷಗಂಧವಿದೂರ = ಗಂಧ = ಲೇಶ ಸ್ವಲ್ಪ ಆದರೂ, ದೋಷವು ಹರಿಯಲ್ಲಿಲ್ಲ, ಪಾಪನಿರ್ಮುಕ್ತ, ನಾನಾ ವೇಷಧಾರಕ = ಜಗತ್ತಿನಲ್ಲಿ ಸರ್ವಚೇತನ ಪ್ರಾಣಿಗಳಂತೆ ಅವರಲ್ಲಿದ್ದು, ನಾನಾ ವೇಷಧಾರಕನು (ಬಹು ರೂಪಿಯಂತೆ) ಆದರೂ, ಈ ಜಗತ್ರಯ ಪೋಷಕನು = ಈ ಮೂರು ಲೋಕ ವನ್ನೂ ಸಂರಕ್ಷಿಸುವನು, ಪುರಾತನ ಪುರುಷ = ಸನಾತನನು, ಅನಾದ್ಯನಂತ ಕಾಲದಿಂದ ಸರ್ವತ್ರ ಸರ್ವಜೀವರ ಚಿತ್ ಶರೀರದಲ್ಲಿ ನೆಲೆಸಿರುವ ಪುರುಷರೂಪಿ ಹರಿಯು, ಪುರುಹೂತ ಮುಖವಿನುತ = ಇಂದ್ರದೇವರೇ ಮೊದಲಾಗಿ ಸಕಲ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತ ನಮಿಸಿಕೊಳ್ಳುವವನು, ಶ್ರೇಷ್ಠವರ ಪರಿಯಂಕಶಯನ = ಶೇಷದೇವರೇ ಉತ್ತಮವಾದ ಹಾಸಿಗೆಯಾಗಿರಲು ಅದರಲ್ಲಿ ಮಲಗಿದ ಕ್ಷೀರಸಾಗರಶಾಯಿ ಶ್ವೇತದ್ವೀಪಗತ ಹರಿಯು, ವಿಭೀಷಣ ಪ್ರಿಯ = ರಾಕ್ಷಸ ಕುಲದಲ್ಲಿ ಜನಿಸಿದರೂ, ಭಕ್ತನಾದ ವಿಭೀಷಣನಿಗೆ, ಪ್ರಿಯನು, ವಿಜಯಸಖ = ಅರ್ಜುನಸಖನು-ಗೆಳೆಯನು ಎಂದು ಶ್ರೀಹರಿಯ ಅನಂತ ಗುಣರೂಪಕ್ರಿಯೆಗಳಿಂದ ಸ್ತೋತ್ರಮಾಡಲು, ಸಂಪ್ರೀತನಾಗಿ ಸಂತೋಷಪಡಿಸುತ್ತಾ, ಜನರಿಗಿಷ್ಟಾರ್ಥ ಪೂರೈಸಿ = ತ್ರಿವಿಧ ಜೀವರಿಗೆ ಅವರವರಿಗೆ ಬೇಡಿದ್ದನ್ನು ಕೊಟ್ಟು ಪೂರ್ಣಮಾಡುವನು.

**ದ್ರೌಪದೀಶಪತಿ ವಿಠಲರು :** ದೋಷಗಂಧವಿದೂರ.

**ಭಾವಸೂಚನ :** ದೋಷೇತಿ ॥ ಗಂಧ = ಲೇಶ, ವಿಜಯ = ಅರ್ಜುನ ॥ ೨೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೋಷ" ಇತಿ ॥ "ಗಂಧ" - ಲೇಶಃ ॥ "ವಿಜಯ" - ಅರ್ಜುನ ॥ ೨೯ ॥

## ಕನ್ನಡಾರ್ಥ

"ದೋಷಗಂಧವಿದೂರ" ಎಂಬಲ್ಲಿ ಗಂಧ ಶಬ್ದಕ್ಕೆ "ಲೇಶ"-"ತುಸು" ಎಂದು ಅರ್ಥಮಾಡಬೇಕು. ಅಂದರೆ ದೋಷದ ಲವಲೇಶವೂ ಇಲ್ಲದವನು ಎಂಬ ಅರ್ಥವು ಸಿದ್ಧವಾಗುತ್ತದೆ. "ವಿಜಯಸಖ" ವಿಜಯ - ಅರ್ಜುನ ಅವನ ಸಖ-ಗೆಳೆಯ ॥ ೨೯ ॥

ಅವತರಣಿಕಾ: ಮತ್ತೂ ಬಿಂಬನಾದ ಶ್ರೀಹರಿಯ ಗುಣೋತ್ಕರ್ಷಗಳನ್ನು ಗೈಯ್ಯುತ್ತ ಸ್ತೋತ್ರಮಾಡುತ್ತಾರೆ.

ಮೂಲ :

ಶ್ರೀಮಹೀಸೇವಿತ ಪದಾಂಬುಜ ।
ಭೂಮ ಸದ್ಭಕ್ತ್ಯೈಕಲಭ್ಯ ಪಿ ।
ತಾಮಹಾದ್ಯಮರಾಸುರಾರ್ಚಿತ ಪಾದಪಂಕೇಜ ॥
ವಾಮವಾಮನ ರಾಮ ಸಂಸಾ ।
ರಾಮಯೌಷಧ ಹೇ ಮಮಕುಲ ।
ಸ್ವಾಮಿ ಸಂತೈಸೆನಲು ಬಂದೊದಗುವನು ಕರುಣಾಳು ॥ ೩೦ ॥

ಪದ್ಯಾರ್ಥ : ಶ್ರೀಮಹೀಸೇವಿತ ಪದಾಂಬುಜ = ಶ್ರೀದೇವಿ ಮಹೀ = ಭೂದೇವಿಯಿಂದ ಸೇವೆಗೊಳ್ಳುವ ಪಾದಪದ್ಮವುಳ್ಳವನು. "ಲಕ್ಷ್ಮೀಧರಾಭ್ಯಾ ಮಾಶ್ಲಿಷ್ಯಸ್ವಮೂರ್ತಿಗಣ ಮಧ್ಯಗ"ನಾದ ಬಿಂಬರೂಪಿ ಹರಿಯೇ, ಭೂಮ = ಸಕಲ ಗುಣಪೂರ್ಣ, ಸದ್ಭಕ್ತ್ಯೈಕಲಭ್ಯ = ವಿಶೇಷವಾದ ಸದ್ಭಕ್ತಿಗೆ ಮಾತ್ರ ಪ್ರಾಪ್ತನಾಗುವ, ಪಿತಾಮಹಾದ್ಯಮರಾಸುರಾರ್ಚಿತ = ಪಿತಾಮಹ ಬ್ರಹ್ಮ ದೇವರೇ ಮೊದಲಾದ, ಅಮರರು = ದೇವತೆಗಳಿಂದ ಪೂಜೆಗೊಳ್ಳುವವನೆ, ಅಸುರಾರ್ಚಿತ = ಅಸುರ ಕುಲದಲ್ಲಿ ಪುಟ್ಟಿದ, ಪ್ರಲ್ಹಾದ-ವಿಭೀಷಣಾದಿಗಳಿಂದ ಪೂಜೆಗೊಳ್ಳುವವನೆ, ಇದು ಮೇಲೆ ತೋರುವ ಮುಖ್ಯಾರ್ಥ, ಅಸುರಾಃ ಅಸುಷುರತಾಃ = ಪ್ರಾಣದೇವರಲ್ಲಿ ರತರಾಗಿ ಭಕ್ತರಾದ ಪ್ರಲ್ಹಾದ ವಿಭೀಷಣರು ಅಸುರ ಕುಲದಲ್ಲಿ ಉತ್ಪನ್ನರಾದರೂ, ಅಸು ಮುಖ್ಯ ಪ್ರಾಣನಲ್ಲಿ ರತಿಯುಳ್ಳವ ರಾಗಿ ಶ್ರೀ ಪ್ರಾಣಾಂತರ್ಗತ ಹರಿಯನ್ನೇ ಭಜಿಸುವವರು ಸದ್ಭಕ್ತರು ಇಂಥವರ ಸದ್ಭಕ್ತ್ಯೈಕಲಭ್ಯನೆಂದು ದಾಸರ ಹೃದಯಾಶಯವನ್ನು ಅನುಸರಿಸಿ ಅರ್ಥಮಾಡ ಬೇಕು. ಪ್ರಾಣದೇವರ ಭಕ್ತರಿಂದ ಪೂಜಿತನಾದ, ಪಾದಪಂಕೇಜ, ಪಾದ ಕಮಲಗಳುಳ್ಳವ, ವಾಮಃ = ವರೇಣ್ಯ-ಶ್ರೇಷ್ಠ-ಸುಂದರ, ವಾಮನಃ = ಇಂಥ ಸುಂದರರೂಪದಿಂದ ಬಾಲವಟುವಾಗಿ, ಬಲಿಯನ್ನು ಯಾಚಿಸಿದ ಹರಿಯೇ (ಯಾಚನೆಮಾಡುವರಲ್ಲಿ ವಾಮನ) ಹೇ ವಾಮನನೇ ನಿನ್ನನ್ನು ಯಾಚಿಸುವೆ, ಏನು ಯಾಚನೆಮಾಡುವೆನೆಂದರೆ, ಸಂಸಾರದಿಂದ ವಿಮುಕ್ತನ್ನಮಾಡಿ ಸಂತೈ ಸೆಂದು ಬೇಡುವೆ. ಆದರೆ ನೀನು ರಾಮ = ನೀನು ನಿನ್ನಲ್ಲೇ ರಮಿಸುವನು,

ಯೋಗಿಗಳು ನಿನ್ನನ್ನು ಹೃದಯದಲ್ಲಿಟ್ಟು ರಮಿಸುವವರಿಗೆ ನೀನು (ದಾನತೆಗೆದು ಕೊಂಬುವರಲ್ಲಿ ಬಲ ಅಂಗೈಯಲ್ಲಿ ಅಗ್ನಿತೀರ್ಥವಿದೆಯೆಂದು ದಾನ ಸ್ವೀಕರಿಸು ವಲ್ಲಿ) ರಾಮನೇ ನೀನೇನು ಕೊಡುವಿ, ಸಂಸಾರಾಮಯೌಷಧ = ಸಂಸಾರ ವೆಂಬ, ಆಮಯ = ರೋಗಕ್ಕೆ, ಔಷಧಿಕೊಡುವ ರಾಮನೇ, ಅಥವಾ = "ಯೋಗಿನೋಯಸ್ಮಿನ್‌ರಮಂತೇರಾಮಃ ||" "ರಮಣೀಯತ್ವಾಧಾಮಃ ||" (ವಿದ್ಯಾಧಿರಾಜೀಯ ವಿ.ಸ. ನಾಮ) ಇಂಥ ರಾಮರೂಪಿ ಹರಿಯೇ ಮಮಕುಲ ಸ್ವಾಮಿ = ನನ್ನ ಕುಲ ವಂಶಪಾರಂಪರ್ಯದಿಂದ ಬಂದ ಬ್ರಾಹ್ಮಣ ಕುಲಕ್ಕೆ ಸ್ವಾಮಿ ಒಡೆಯ, ಎನ್ನಸ್ವಾಮಿ, ಸರ್ವಸ್ವಾಮಿ ಎಂಬ ದಾರಢ್ಯದಿಂದ, ಸಂತೈಸಿಸಲು ರಕ್ಷಣಮಾಡೆಂದು ಯಾಚನೆಮಾಡಿ, ಬೇಡಿಕೊಳ್ಳಲು ಕರುಣಾಳು = ಪರಮ ಪ್ರೀತಿಯುಳ್ಳವನು ಅಂತಃಕರುಣಿಯು, ಬಂದೊದಗುವನು = ಭಕ್ತರ ಕರೆಗೆ ಓ ಎಂದು ಧ್ವನಿಕೊಡುತ್ತ ಬಂದು ಕಣ್ಣಿಗೆ ಕಾಣುತ್ತ ಒದಗುವನು = ಸಮೀಪಿಸುವನು.

**ದ್ರೌಪದೀಶಪತಿ ವಿಠಲರು :** ಶ್ರೀಮಹೀಸೇವಿತ ||

**ಭಾವಸೂಚನ :** ಶ್ರೀಮಹಿತಿ || ಭೂಪೂರ್ಣ || ವಾಮಸುಂದರ || ಆಮಯ = ರೋಗ ||೩೦||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಶ್ರೀಮಹೀ" ಇತಿ || "ಭೂಮ" – ಪೂರ್ಣಃ || "ಅಸುರಾಃ" ಪ್ರಹ್ಲಾದ ವಿಭೀಷಣಾದ್ಯಾಃ || "ಪಂಕೇಜ" ಪದ್ಮಮ್ || "ವಾಮ" – ವರೇಣ್ಯಃ ಸುಂದರಃ || "ರಾಮಃ" – ಓಂ* ಅಪ್ರತೀಕು(ಷ್ಟ)ತಂ ದೇವೀ ಶುಷ್ಮಂಸ ಪರ್ಯತಃ || ಉಭೇ ಸುಶಿ ಪ್ರರೋದಸೀ ತ್ವಮೇತದಧಾರಯಃ ಕೃಷ್ಣಾಸು ರೋಹಿಣೀಷು ಚ ಪುರುಷ್ಣೀಷು || ಓಂ || * || ರಮತೇ ಅನೇನ ಇತಿ ರಂ ಬಲಮ್ || ತೇನ "ಆಮಃ" ಅಮಿತದ್ಯಾವಾಪೃಥಿವ್ಯಾದ್ಯುಪಜೀವ್ಯ ಬಲವಾನ್ || ಅಥವಾ ರೋ ಘೃತಮಿತ್ಯಭಿಧಾನಾತ್ ರೋ ಘೃತಂ, ತತ್ಕಾರಣಂ ಪಯಃ ತತ್ "ಆ" ಸಮಂತಾತ್ ರೋಹಿಣ್ಯಾದಿ ಗೋವ್ಯಕ್ತಿಷು ನಿರ್ಮಾತಿ ಇತಿ ಆಮಃ ರಾಮಃ ||೩೦||

**ಕನ್ನಡಾರ್ಥ**

"ಭೂಮ" ಎಂದರೆ ಸುಜ್ಞಾನ ಆನಂದ ಮುಂತಾದ ಗುಣಗಳಿಂದ

ಪೂರ್ಣ ಅಥವಾ ದೇಶ ಕಾಲ ಗುಣಗಳಿಂದ ಪೂರ್ಣ" ಎಂದು ಅರ್ಥ. "ಅಸುರಾರ್ಚಿತ" ಎಂಬಲ್ಲಿ ಭಗವಂತನನ್ನು ಅರ್ಚಿಸಿದ ಅಸುರರು ಪ್ರಹ್ಲಾದ ವಿಭೀಷಣ ಮುಂತಾದವರು" ಎಂದು ತಿಳಿಯಬೇಕು. "ಪಂಕೇಜ" – ಪದ್ಮ. "ವಾಮ" ಮನಮೆಚ್ಚುಗೆಯಾಗುವಂತಹ ಸುಂದರತಮ ಎಂದು ಅರ್ಥ. "ರಾಮಃ" – ರಮಣ ಕ್ರೀಡಾಸಾಧನವಾದುದರಿಂದ "ರ" ಅಂದರೆ ಬಲ. ಅದರಿಂದ "ಆಮಃ" ಭೂಮಿ ಆಕಾಶಗಳಿಗೆ ಬಲಪಡಿಸುವವನು, ಆದುದರಿಂದ "ರಾಮ" ಎಂದು ತಿಳಿಯಬೇಕು. ಅಥವಾ "ರ" ಎಂದರೆ "ತುಪ್ಪ" ವೆಂದು ಕೋಶವಿರುವದರಿಂದ ತುಪ್ಪಕ್ಕೆ ಕಾರಣವಾದ ಹಾಲಿಗೂ "ರ" ಎಂದು ಹೆಸರು. ಅಂಥ "ರ" ಹಾಲನ್ನು, "ಆ" ಎಲ್ಲ ಗೋವುಗಳಲ್ಲಿ "ಮಾತಿ–ನಿರ್ಮಾತಿ" ಹುಟ್ಟಿಸು–ಉಂಟುಮಾಡುವದರಿಂದ "ರಾಮ" ಎಂದು ಕರೆಯುತ್ತಾರೆ. ಹೀಗೆ ಬೃಹತೀಮಂತ್ರಾನುಗುಣವಾದ ಅರ್ಥ ॥ ೩೦ ॥

**ಅವತರಣಿಕಾ :** ಸ್ವಪ್ರಯೋಜನರಹಿತನಾದ ಆಪ್ತಕಾಮನು ತ್ರಿವಿಧ ಪ್ರಾಣಿಗಳಲ್ಲಿದ್ದು ಅಖಿಳ ಕರ್ಮಗಳನ್ನು ಮಾಡಿದರೂ ದೋಷದೂರನೆಂದು ಶ್ರುತಿ ಹೊಗಳುತ್ತಿವೆ. ಜನನ ಮರಣಾದಿಗಳಿಂದ ದೂರನಾದರೂ ಜೀವರ ಸಂಗಡಲೇ ಸ್ಥೂಲದೇಹ ಹುಟ್ಟುವಾಗಲೇ ಒಂದು ರೂಪದಿಂದ ಶ್ರೀಹರಿಯ ರೂಪ ಪ್ರಾದುರ್ಭಾವವೆಂದು ಶ್ರುತ್ಯರ್ಥದಿಂದ ಹರಿಯು ಸ್ತೋತ್ರಗೈಯ್ಯುತ್ತಾರೆ.

ಮೂಲ :

**ದನುಜ ದಿವಿಜರೊಳಿದ್ದು ಅವರವ ।**
**ರನುಸರಿಸಿ ಕರ್ಮಗಳ ಮಾಳ್ಪನು ।**
**ಜನನ ಮರಣಾದ್ಯಖಿಳ ದೋಷವಿದೂರ ಎನ್ನೊಡನೆ ॥**
**ಜನಿಸುವನು ಜೀವಿಸುವ ಸಂರ ।**
**ಕ್ಷಣೆಯ ಮಾಡುವ ಎಲ್ಲ ಕಾಲದಿ ।**
**ಧನವ ಕಾಯ್ದಿಹ ಸರ್ಪನಂತ ನಿಮಿತ್ತ್ಯಬಾಂಧವನು ॥ ೩೧ ॥**

**ಪದ್ಯಾರ್ಥ :** ದನುಜ ದಿವಿಜರೊಳಿದ್ದು = ದನುದೇವಿ ಮಕ್ಕಳು ದಾನವರು, ದಿವಿಜ = ಸ್ವರ್ಗವಾಸಿಗಳಾದ ದೇವತೆಗಳಲ್ಲಿ ಇದ್ದು, ಅವರವರನುಸರಿಸಿ ಕರ್ಮಗಳ ಮಾಳ್ಪನು = ದನುಜ–ದೇವತೆಗಳ ಸ್ವಭಾನುಸಾರವಾಗಿ ಯೋಗ್ಯತೆಯಂತೆ ತಾನು ಸ್ವತಂತ್ರನಾದವನು ಅವರ ಅಧೀನನಾಗದೇ ಅವರಂತೆ ನಾನಾ

ಕ್ರಿಯೆಗಳನ್ನು ಮಾಡುವನು, ಜನನ ಮರಣಾದ್ಯಖಿಳ ದೋಷವಿದೂರ ಜೀವಿಗಳಂತೆ ಶ್ರೀಹರಿಗೆ ತ್ರಿಗುಣಬದ್ಧವಾದ ಜನನ-ಹುಟ್ಟುವದು, ಮರಣ = ದೇಹ ವಿಯೋಗ ಲಕ್ಷಣವಾದ ಸಾವು-ಕೇಡು ಮುಂತಾದ ದೋಷಗಳಿಂದ ಸಂತತ ದೂರಾಗಿರುವನು. ಜನ್ಮಮೃತಿಗತಾ ಶ್ರೀಹರಿಗೆ ಇಲ್ಲೇ ಇಲ್ಲ. ರಾಮ ಕೃಷ್ಣಾದಿ ರೂಪಗಳಿಂದ ಕೌಸಲ್ಯಾ-ದೇವಕಿ ಇವರ ಜಠರಗಳಲ್ಲಿ ಜನಿಸಿದ್ದು, ದೇವರಿಗೆ ಸ್ವತಃ ಚಿನ್ಮಯ ಪ್ರಾದುರ್ಭಾವ ಅವತಾರವೇ ಹೊರ್ತು ಗರ್ಭವಾಸ ಜನನವಿಲ್ಲವಾದರೂ, ಎಮ್ಮೊಡನೆ ಜನಿಸುವನು = ನಮ್ಮ ಸ್ಥೂಲ ದೇಹದೊಡನೆ ಹುಟ್ಟುವನು. ಹೇಗೆಂದರೆ "ಶ್ರೀ ಅಡವಿಸ್ವಾಮಿಗಳು ಶ್ರೀ ವಿಷ್ಣುತೀರ್ಥರು ಷೋಡಶಿ ಗ್ರಂಥ ಸ್ಥೂಲ ದೇಹಸೃಷ್ಟಿ ಪ್ರಕರಣದಲ್ಲಿ—(೧) ಪ್ರದ್ಯುಮ್ನೋರೇತಸ್ಥಂ ಜೀವಂ ರೇತಸ್ಸಾಸಹ ಸ್ತ್ರಿಯಾಂ ಸಿಂಚತಿ ॥ ತದೇ ತದ್ಭಗವತೋ **ಹರೇಃ ಪ್ರಥಮಂ ಜನ್ಮಮುಚ್ಯತೇ ॥೧॥** ಪುರುಷನಿಂದ ಸ್ತ್ರೀಗರ್ಭಕ್ಕೆ ರೇತಸ್ಸು ಸಿಂಚಿಸುತ್ತಾ ಜೀವನನ್ನು ಸ್ಥಾನಾಂತರಮಾಡಿ, ತಾನು ಸಹ ಜೀವನ ಸಂಗಡ ಇದ್ದು ಸ್ತ್ರೀಗರ್ಭದಲ್ಲಿ ತಂದಿಡುವನು. ಅದೇವೆ **ಹರಿಗೆ ಪ್ರಥಮ ಜನ್ಮ.**

(೨) ಶಿಶು ಯೋನೇಃನಿರ್ಗಚ್ಛನ್ನತಿಶ್ರಾಂತೋ ಭೂಮ್ಯಾಂ ಪತಿತಃ ಕ್ಷಣೇನ ಬಾಹ್ಯವಾಯು ಸ್ಪರ್ಶೇನ ಕಿಂಚಿದ್ವಿಶ್ರಾಂತಾ ಸಚೇತನೋಭವತಿ **ತದೇತದ್ಭಗವತೋ ದ್ವಿತೀಯ ಜನ್ಮ ಉಚ್ಯತೇ ॥**

ಸೂತಿಕಾವಾಯುವಿನಿಂದ ಬಡಿಯಲ್ಪಟ್ಟು ಶಿಶು ತಾಯಿ ಗರ್ಭದಿಂದ ಹೊರಗೆ ಬಂದು ಭೂಮಿ ಸ್ಪರ್ಶಮಾಡಿ ಹೊರಗಿನ ಗಾಳಿಯಿಂದ ಕಿಂಚಿತ್ ವಿಶ್ರಾಂತ ಚೇತಸನಾಗುವುದೇ **ಭಗವಂತನಿಗೆ ಎರಡನೆಯ ಜನ್ಮ.**

(೩) ಪುನಃ ಮರಣಾನಂತರಂ ಪಿತುರನ್ಯ ಜನನೇ ಪಿತ್ರಾ ಸಹ ಸ್ವಯಮಪಿಯುಜ್ಯಾಯತೇ ತದೇ **ತದ್ಭಗವತೋ ಹರೇಃ ತೃತೀಯ** ಜನ್ಮಮುಚ್ಯತೇತ್ಯನುಸಂಧೇಯಂ । ಮರಣವಾದ ನಂತರದಲ್ಲಿ ಜೀವನು ಎರಡನೇ ಜನ್ಮಕ್ಕೆ ಬರಲು ಅನ್ಯಪಿತರು ಎರಡನೇ ತಂದೆ ಪಿತೃ ರೇತಸ್ಸಿನಲ್ಲಿ ಜೀವನನ್ನು ತಂದಿಡುವನು. ಇದೇವೆ ಹರಿಗೆ ಮೂರನೇ ಜನ್ಮವೆಂದು ಅನೇಕ ಉಪನಿಷತ್ ರಹಸ್ಯಾರ್ಥವನ್ನು ಬೋಧಿಸಿರುವರು. ಎಮ್ಮೊಡನೆ ಜನಿಸುವನೆಂದು ಈ ಶಬ್ದಕ್ಕೆ ಇಷ್ಟು ವಿಶದವಾದ ಉಪನಿಷತ್ ಪ್ರಮೇಯ ರಹಸ್ಯ ಅರ್ಥ. ಹರಿಯು ಜೀವನಲ್ಲಿದ್ದು ಇಷ್ಟು ಕಾರ್ಯಮಾಡಲು ಅವನಿಗೂ ಜನನವೆಂದು ಲೋಕದಲ್ಲಿ

ಪ್ರಸಿದ್ಧ. "ಜನಿಘೋತ ವಿಷ್ಣು" ಎಂಬ ಶ್ರುತ್ಯರ್ಥವನ್ನು ವಿಶದವಾಗಿ ತೋರಿದ ಜ್ಞಾನಿಗಳ ಪದಕ್ಕೆ ತಲೆ ಬಾಗಿಯೇ ಇರಲಿ. ಜೀವಿಸುವ = ಜೀವನ ಸಂಗಡಲೇ ತಾನಿದ್ದು ಜೀವನನ್ನು ಸಂರಕ್ಷಿಸಿ, ಜೀವನು ದೇಹದಿಂದ ವರ್ಧಿಸುವ ಕಾಲದಲ್ಲಿ ಬೆಳೆಯುತ್ತಾ, ಜೀವನಿಗೆ ಜೀವಿಸುವ = ಜೀವದಿಂದಿರುವ ಅಸ್ತಿತ್ವ ಇರುವಿಕೆ ಇತ್ತು ತಾನು ಜೀವಿಸುವನಂತೆ ತೋರುವನು. ಎಲ್ಲ ಕಾಲದಲಿ ಸಂರಕ್ಷಣೆಯ ಮಾಡುವ = ಜೀವನಿಗೆ ಯಾವ ಯಾವ ಅವಸ್ಥಾ ಸಂಸಾರದಲ್ಲಿ ಬರುತ್ತದೋ ಆ ಎಲ್ಲ ಕಾಲದಲ್ಲಿ ಸಾಧನಪೂರ್ತಿ ನಂತರ, ಲಿಂಗಭಂಗ-ಮುಕ್ತಿಯಲ್ಲಿ ಬಿಡದೇ ಸಮೀಚೀನವಾಗಿ ರಕ್ಷಿಸುವ ಕಾಪಾಡುವನು; ಹೇಗೆಂದರೆ ಧನವ ಕಾಯ್ದಿಹ ಸರ್ಪನಂತೆ = ಸರ್ಪವು ತನಗೆ ಯಾವ ಪ್ರಯೋಜನವಿಲ್ಲದೆ, ಭೂಗತವಾದ ದ್ರವ್ಯವನ್ನು ಕಾದುಕೊಂಡಿರುವಂತೆ, ಅನಿಮಿತ್ತ ಬಾಂಧವನು = ನಿಮಿತ್ತ ಉಪಕಾರಕ್ಕೆ ಪ್ರತ್ಯುಪಕಾರವಿಲ್ಲದೇ ಯಾವ ಪ್ರಯೋಜನವಿಲ್ಲದೆ ಕಾಪಾಡುವ, ಬಾಂಧವ = ಆಪ್ತನು.

**ದ್ರೌಪದೀಶಪತಿ ವಿಠಲರು :** ದನುಜ ದಿವಿಜರೊಳಿದ್ದು.

**ಭಾವಸೂಚನ :** ದನುಜೇತಿ ॥ ಎನ್ನೊಡನೆ ಯುಕ್ತನಾಗಿ ॥ ೩೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದನುಜ" ಇತಿ ॥ "ಒಡನೆ"—ಸಂಗಡ ॥ "ಜನಿಸುವ"—ಪ್ರಾದುರ್ಭವಿಸುವ ॥ "ಜೀವಿಸುವ"—ಜೀವಿತನಾಗುವ ॥ ೩೧ ॥

## ಕನ್ನಡಾರ್ಥ

ಜೀವನನ್ನು ಬೆಂಬಿಡದೆ ಸದಾ ಸಂರಕ್ಷಿಸುವನೆಂದು ಪರಮಾತ್ಮನ ಮಹಿಮೆಯನ್ನು ತಿಳಿಸುತ್ತಾರೆ. "ದನುಜ" ಎಂಬ ಪದ್ಯದಿಂದ "ಒಡನೆ"-ಸಂಗಡ, ಜೊತೆಯಲ್ಲಿ, "ಎನ್ನೊಡನೆ ಜನಿಸುವನು"--ಎಂದರೆ ಜೀವರೊಡನೆ ಪರಮಾತ್ಮನು ಹುಟ್ಟುತ್ತಾನೆ ಎಂದು ಅರ್ಥ ಹೇಳಬಾರದು. ಪರಮಾತ್ಮನಿಗೆ ಜನನವಾಗಲೀ ಮರಣವಾಗಲೀ ಇರುವದಿಲ್ಲ. ಪರಮಾತ್ಮನು ಪ್ರಾದುರ್ಭವಿಸುತ್ತಾನೆ ಎಂದು ಅರ್ಥ ತಿಳಿಯಬೇಕು. "ಜೀವಿಸುವ" - ಎಂದರೆ "ಬದುಕುವನು" ಎಂದು ಅರ್ಥವಲ್ಲ. ಜೀವರ ಜೀವನಕ್ಕೆ ಕಾರಣನಾಗಿ ಅವರನ್ನು ಬದುಕಿಸುವ" ನೆಂದು ಅರ್ಥ ಮಾಡಬೇಕು. ಅಂದರೆ ವಿರೋಧ ಬರುವದಿಲ್ಲ ॥ ೩೧ ॥

**ಅವತರಣಿಕಾ :** ಜೀವನನ್ನು ಸೃಷ್ಟಿಮಾಡಿ, ಸೃಷ್ಟ್ಯಾರಂಭದಿಂದ ಅವನ ಯೋಗ್ಯ ಕರ್ಮಗಳನ್ನು ಮಾಡಿಸಿ ಲೋಕರಿಗೆ ಜೀವಕೃತು ಕರ್ಮವೆಂದು ತೋರಿಸಿ ಪ್ರಳಯಕಾಲದಲ್ಲಿ ಜೀವನನ್ನು ಉದರದಲ್ಲಿಟ್ಟಾಗ್ಗೆ ಜೀವನ ಎಲ್ಲ ಕರ್ಮತೋರ ದಿರುವವು, ಸೂರ್ಯ-ಸೂರ್ಯನ ಛಾಯಾ ದೃಷ್ಟಾಂತದಿಂದ ತೋರಿಸುತ್ತಾರೆ.

**ಮೂಲ :**

**ಬಿಸರುಹಾಪ್ತಾಗಸದಿ ತಾನುದ ।**
**ಯಿಸಲು ವೃಕ್ಷಂಗಳ ನೆಳಲು ಪಸ ।**
**ರಿಸುವವಿಳೆಯೊಳು ಅಸ್ತಮಿಸೆ ಅಲ್ಲಲ್ಲೆ ಲೀನಹುವು ॥**
**ಶ್ವಸನ ಮುಖ್ಯಮರಾಂತರಾತ್ಮಕ ।**
**ನೊಶದೊಳಿಪ್ಪುದು ಈ ಜಗತ್ರಯ ।**
**ಬಸುರೊಳಿಂಬಿಟ್ಟೆಲ್ಲ ಕರ್ಮವ ತೋರ್ಪನೋಳ್ಪರಿಗೆ ॥ ೩೨ ॥**

**ಪದ್ಯಾರ್ಥ :** ಬಿಸರುಹ = ತಾವರೆ, ಕಮಲ, ಆಪ್ತ = ಕಮಲ ಬಾಂಧವ ಸೂರ್ಯನು, ತಾನು ಉದಯಿಸಲು = ತಾನು ಪೂರ್ವದಿಕ್ಕಿನಲ್ಲಿ ಮೂಡಲು, ವೃಕ್ಷಂಗಳನೆಳಲು = ಗಿಡಮರಗಳ ನೆಳಲು ಛಾಯಾ, ಇಳೆಯೊಳಗೆ, ಪಸರಿಸುವುವು = ಭೂಮಿಯ ಮೇಲೆ ಹಬ್ಬುವುದು. ಅಸ್ತಮಿಸೆ ಅಲ್ಲಲ್ಲೆ ಲೀನಹವು = ಸೂರ್ಯನು ಅಸ್ತಮಯನಾಗಲು, ಆ ನೆರಳು ಅಲ್ಲಲ್ಲೆ = ಆಯಾ ಸ್ಥಳದಲ್ಲೇ ಬೆರತು ಮಾಯವಾಗಿ ಕಾಣದಂತಾಗುವದು. ಅದರಂತೆ = ಶ್ವಸನ = ವಾಯುದೇವರೆ, ಮುಖ್ಯ ಅಮರಾಂತರಾತ್ಮಕ = ಮೊದಲಾಗಿ, ಸಮಸ್ತ ದೇವತೆಗಳ ಅಂತರಂಗದಲ್ಲಿಪ್ಪ ಹರಿಯು (ಮರಗಳ ಛಾಯಾ ಹೇಗೆ ಸೂರ್ಯನ ವಶವಾಗಿಪ್ಪುದೋ ಹಾಗೆ) ವಶದೊಳಿಪ್ಪದು, ಜಗತ್ರಯ = ಈ ಮೂರು ಲೋಕಗಳು ತನ್ನ ಆಧೀನದಲ್ಲಿಟ್ಟು, ಅವರಿಂದ ಮಾಡಿಸುವ-ಎಲ್ಲ ಕರ್ಮವನ್ನೂ ನೋಳ್ಪರಿಗೆ ತೋರ್ಪನು, ಪುನಃ ಸಕಲ ಜೀವರನ್ನು ಬಸುರೊಳಿಂಬಿಟ್ಟು = ತನ್ನ ಉದರದಲ್ಲಿ ಆಶ್ರಯಕೊಟ್ಟು ಉದರದಲ್ಲಿಟ್ಟಾಗ್ಗೆ, ಸೂರ್ಯ ಅಸ್ತಂಗತನಾದಾಗ್ಗೆ ಮರಗಳ ನೆರಳು ಹೇಗೆ ತೋರುವದಿಲ್ಲವೋ, ಹಾಗೆಯೇ ಹರಿಯ ಉದರದಲ್ಲಿ ಸಕಲ ಜೀವರಿದ್ದಾಗ್ಗೆ, ಬಹಿರಂಗ ಯಾವ ಕರ್ಮವೂ ಇಲ್ಲವೆಂದು ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ಬಿಸರುಹ ಆಪ್ತ = ಕಮಲಮಿತ್ರ ಸೂರ್ಯ,

**ಭಾವಸೂಚನ :** ಬಿಸುರುಹೇತಿ-ಪದ್ಮ || ಆಗಸ = ಗಗನ || ಶ್ವಸನ = ವಾಯು, ಇಂಬಿಟ್ಟು = ಸ್ಥಳಕೊಟ್ಟು || ೩೨ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಬಿಸರುಹ" ಇತಿ || "ಯಥಾಪಿಯಂತಿ ತೇಜಾಂಸಿ ಮಹಾ ತೇಜಸಿ ಭಾಸ್ಕರೇ || ಪೃಥಕ್ ಪೃಥಕ್ ಸ್ಥಿತಾನ್ಯಹ್ನಿ ಸ್ವಲ್ಪೈರಪಿ ಚ ಸರ್ವಶಃ || ಪರೇ ಬ್ರಹ್ಮಣಿ ಜೀವಾಖ್ಯ ಬ್ರಹ್ಮಾಣ್ಯಪ್ಯಪಿಯಂತಿ ಹಿ || ಮುಕ್ತೌ" || ಇತಿ ಶ್ರೀ ವಿಷ್ಣುತತ್ವ ನಿರ್ಣಯೇ || ಪದ್ಮಾಪ್ತಃ ಸೂರ್ಯಃ || "ಆಗಸ" - ಆಕಾಶಃ || "ಪಸರಿಸುವವು" ವಿಸ್ತೃತವಾಗುವವು || "ಇಳೆ" - ಪೃಥ್ವಿ || "ಅಸ್ತಮಿಸೆ" ಅಸ್ತವಾಗಲು | "ಲೀನಪುವು" ಲೀನವಾಗುವವು || "ಶ್ವಸನಃ" ವಾಯುಃ || ಮುಖ್ಯೇತಿ ಜಗತಿ ಅನ್ವೇತಿ || "ಬಸರು" ಹೊಟ್ಟೆ || "ಇಂಬು" ಸ್ಥಳ || "ತೋರ್ಪ" ತೋರಿಸುವ "ನೋಳ್ಪ" ನೋಡುವ || ೩೨ ||

**ಕನ್ನಡಾರ್ಥ**

"ತತ್ವೇಶರ ವ್ಯಾಪಾರಗಳಿಂದ ಸಹಿತವಾದ ಸಮಸ್ತ ಪ್ರಪಂಚವು ಭಗವದಧೀನ. ಭಗವದಿಚ್ಛೆಯಿಂದಲೇ ನಿರ್ವಾಹವಾಗುತ್ತದೆ" ಎಂಬುದನ್ನು ಸೂರ್ಯ ಹಾಗೂ ಅವನಿಂದಾಗುವ ವೃಕ್ಷಚ್ಛಾಯಾಗಳ ಈ ದೃಷ್ಟಾಂತದಿಂದ ತಿಳಿಯಪಡಿಸುತ್ತಾರೆ. "ಬಿಸರುಹಾಪ್ತ" ಎಂಬ ಪದ್ಯದಿಂದ.

ಸೂರ್ಯೋದಯ ಸೂರ್ಯಾಸ್ತಗಳನ್ನು ಗಿಡಮರಗಳ ನೆಳಲು ಅನುಸರಿಸಿ ನಡೆವಂತೆ ತತ್ವೇಶರಿಂದೊಡಗೂಡಿದ ಸಮಸ್ತ ಪ್ರಪಂಚವೂ ಪರಮಾತ್ಮನ ಅಧೀನದಲ್ಲಿ ಇದ್ದು, ಅವನನ್ನನುಸರಿಸಿಯೇ ನಡೆಯುವದು. ಈ ವಿಷಯದಲ್ಲಿ ಶ್ರೀವಿಷ್ಣುತತ್ವ ನಿರ್ಣಯದ ವಚನಗಳು ಆಧಾರವಾಗಿರುತ್ತವೆ. ಹಗಲಿನಲ್ಲಿ ಬೇರೆ ಬೇರೆಯಾಗಿ ಇರುವ ಪ್ರಕಾಶಗಳು ಸೂರ್ಯನಲ್ಲಿಯೇ ಹೇಗೆ ಲೀನವಾಗುವವೋ ಹಾಗೆ ಜೀವರೆಲ್ಲರೂ ಪರಬ್ರಹ್ಮ ನೆನಿಸಿರುವ ನಾರಾಯಣನಲ್ಲಿ ಮುಕ್ತಿಯಲ್ಲಿ ಪ್ರವೇಶಪಡೆಯುತ್ತಾರೆ" ಎಂದು ದೃಷ್ಟಾಂತವನ್ನು ತೋರಿಸಿರುತ್ತಾರೆ.

"ಪದ್ಮಾಪ್ತ"-ಕಮಲಕ್ಕೆ ಬಂಧುವೆನಿಸಿದವನು ಸೂರ್ಯ || ೩೨ ||

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಹೇಳಿದಂತೆ ಸಕಲ ಕರ್ಮ ಜೀವರಿಂದ ತಾನು ಮಾಡಿಸಿದರೂ, ಸ್ವಾಮಿಯು ತಾನೇ ಸ್ವತಂತ್ರನು ಚಿನ್ಮಯನು ಮುಕ್ತಿಪ್ರದಾತೃವೆಂದು ಶ್ರೀಹರಿಯ ಅನಂತ ಗುಣಗಳನ್ನು ಸ್ತೋತ್ರಗೈಯ್ಯುತ್ತಾರೆ.

ಮೂಲ :

**ತ್ರಿಭುವನೈಕಾರಾಧ್ಯ ಲಕ್ಷ್ಮೀ ।**
**ಸುಭುಜ ಯುಗಳಾಲಂಗಿತಾಂಗ ।**
**ಸ್ವಭು (ಸುಭು) ಸುಖಾತ್ಮಸುವರ್ಣವರ್ಣ ಸುಪರ್ಣವರವಹನ॥**
**ಅಭಯದಾನಂತಾರ್ಕಶಶಿ ಸ ।**
**ನ್ನಿಭನಿರಂಜನ ನಿತ್ಯದಲಿ ತನ ।**
**ಗಭಿನಮಿಸುವರಿಗೀವ ಸರ್ವಾರ್ಥಗಳ ತಡೆಯದಲೆ ॥ ೩೩ ॥**

**ಪದ್ಯಾರ್ಥ :** ತ್ರಿಭುವನೈಕ - ಆರಾಧ್ಯ = ಮೂರು ಲೋಕಗಳಿಂದ ಪೂಜೆಗೊಳ್ಳುವ ಒಬ್ಬನೆ ಹರಿಯು, ಲಕ್ಷ್ಮೀಸುಭುಜಯುಗಳಾಲಂಗಿತಾಂಗ = ಶ್ರೀ ಲಕ್ಷ್ಮೀದೇವಿಯರ ಎರಡೂ ಬಾಹುಗಳಿಂದ, ಅಥವಾ ಲಕ್ಷ್ಮೀ ಎಂದರೆ ಶ್ರೀ ಭೂದೇವಿಯರ ಎರಡೂ ತೋಳಿನಿಂದ ಆಲಿಂಗಿತ = ಅಪ್ಪಿಸಿಕೊಳ್ಳುವನಾದ ದೇಹವುಳ್ಳವ, ಸ್ವಭುಃ = ಸ್ವತ ಏವ ಭವತೀತಿ ಸ್ವಭುಃ; ತನ್ನ ಇಚ್ಛೆಯಿಂದಲೇ ತಾನೇ ಅವತರಿಸುವ, ಸ್ವತಂತ್ರ ಸತ್ತ್ವಾವಾನ್, ಸುಖಾತ್ಮ= ಸುಖ ಸಂತೋಷ, ಆನಂದಮಯ ಶರೀರವುಳ್ಳವ, ಸುವರ್ಣವರ್ಣ ಸುಪರ್ಣವರ ವಹನ = ಬಂಗಾರದಂತೆ ಮೈಬಣ್ಣವುಳ್ಳ ಗರುಡವಾಹನನು, ಹೀಗೆ ಅರ್ಥ ಮಾಡುವದಕ್ಕಿಂತಲೂ, "ಸುವರ್ಣ ವರ್ಣ ಹೇಮಾಂಗೋ" — ಎಂಬುವ ವಿಷ್ಣು ಸಹಸ್ರನಾಮದಂತೆ ॥ ಸುವರ್ಣಮಿವ ವರ್ಣೋಯಸ್ಯೇತಿ ಸುವರ್ಣ ವರ್ಣಃ ॥ **ಯದಾಪಶ್ಯ ಪಶ್ಯತೇ ರುಗ್ಮವರ್ಣ ಮಿತಿ ಶ್ರುತೇಃ** ॥ (ಶ್ರೀ ವಿದ್ಯಾಧಿರಾಜೀಯ) ಶ್ರೀಹರಿಯೇವೆ, ಸುವರ್ಣವರ್ಣದಂತೆ ಕಾಂತಿಯುಳ್ಳವ = ಕಾದ ಕಾಂಚನದೋಪಾದಿ ವರ್ಣವುಳ್ಳವನು, ವರ =ಶ್ರೇಷ್ಠವಾದ ಗರುಡವಾಹನವುಳ್ಳವನು. ಅಭಯದ = ನಭಯ ಯಸ್ಮಾತಿತ್ಯಭಯಾ, ಯಾರಿಂದ ಭಯವಿಲ್ಲವೊ ಆತನೇ ಅಭಯನು, ಲೋಕರಿಗೆ ಯಾವ ಭಯವಿಲ್ಲ ಅಂಜಬೇಡಿರೆಂದು-ಅಭಯವ = ಅಭಯ ವಚನವನ್ನು ಕೊಡುವನು ಹರಿ, ಅನಂತಾರ್ಕ ಶಶಿಸನ್ನಿಭ =ಅನಂತಕೋಟಿ ಸೂರ್ಯಪ್ರಕಾಶ ಜ್ಞಾನಪ್ರದನು, ಅನಂತಕೋಟಿ ಶಶಿಸನ್ನಿಭ =ಅನಂತಕೋಟಿ ಚಂದ್ರಶೀತಲನು, ಆನಂದಕೊಡುವನು. ನಿರಂಜನ ಪಾಪದೂರ, ಪರಿಶುದ್ಧ, ನಿರ್ಮಲ, ನಿರ್ದೋಷಿ, ನಿತ್ಯದಲಿ = ನಿರಂತರದಲ್ಲಿ ತನಗೆ ಅಭಿನಮಿಸುವರಿಗೆ = ಭಕ್ತಿಪುರಸ್ಸರವಾಗಿ ನಮಿಸುವರಿಗೆ, ಈವ

ಸರ್ವಾರ್ಥಗಳ ತಡೆಯದಲೇ = ಸಕಲ ಪುರುಷಾರ್ಥ ಚತುಷ್ಟಯಗಳನ್ನು ತಡಮಾಡದಲೇ-ತಕ್ಷಣವೇ ಕೊಡುವನು.



**ದ್ರೌಪದೀಶಪತಿ ವಿಠಲರು :** ತ್ರಿಭುವನೈಕ ||

**ಭಾವಸೂಚನ :** ತ್ರಿಭುವನೇತಿ || ೩೩ ||

## .ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತ್ರಿಭುವನ" ಇತಿ || "ತ್ರಿಭುವನೈಕಾರಾಧ್ಯ" ಉತ್ತಮತ್ವೇನ ಆರಾಧ್ಯಃ || "ಸ್ವಭೂಃ"-ಸ್ವತಃ ಏವ ಅಪರಾಧೀನ ಸತ್ತಾವಾನ್ || ಓಂ* || ರಂಭಂ ನ ಜಿವ್ರಯೋ (ಜೀರಯೋ) ರರಂಭಾ (ಶ್ಮಾ) ಶವಸಸ್ಪತೇ ಉಶ್ಮಸಿತ್ವಾ ಸಧಸ್ಥ ಆ ಸ್ತೋತ್ರಮಿಂದ್ರಾಯ ಗಾಯತ ಪುನರುಮ್ಣಾಯ ಸತ್ವನೇ || *ಓಂ || ಭವತಿ ಇತಿ ಭೂಃ-ಸತ್ತಾವಾನ್ || "ನಿರಂಜನಃ"-ನಿಷ್ಪಾಪಃ || ೩೩ ||

## ಕನ್ನಡಾರ್ಥ

"ತ್ರಿಭುವನೈಕಾರಾಧ್ಯ" ವೆಂದರೆ "ಮೂರು ಲೋಕಗಳಿಂದ ಸರ್ವೋಚ್ಚತಮನೆಂದು ಮುಖ್ಯವಾಗಿ ಆರಾಧಿಸಲ್ಪಡುವವನು ಎಂದು ಅರ್ಥ. "ಸ್ವಭೂಃ" -ಸ್ವತಃ ತನ್ನ ಸಹಜ ಸ್ವಭಾವ ಮಹಿಮೆಯಿಂದಲೇ-ಪರರ ಅಧೀನವಾಗದಂತಹ ಸ್ವತಂತ್ರವಾದ "ಸತ್ತಾ"-ಇರುವದು, ತಿಳಿದುಕೊಳ್ಳುವದು, ಪ್ರವರ್ತಿಸುವದು- ("ಸ್ಥಿತಿ-ಪ್ರಮಿತಿ, ಪ್ರವೃತ್ತಿ") ಇವುಗಳಿಂದ ಯುಕ್ತನಾದುದು. ಅಂದರೆ, "ತನ್ನ ಸತ್ತಾ ಇರುವಿಕೆ, ಜ್ಞಾನಪ್ರವೃತ್ತಿಗಳಲ್ಲಿ ಯಾರಿಗೂ ಅಧೀನವಾಗದೇ ಇರುವದು" ಎಂದು ಅರ್ಥ. "ಭೂಃ" ಎಂಬ ವಿಷ್ಣು ಸಹಸ್ರನಾಮಾಂತರ್ಗತ ನಾಮದ ಬೃಹತೀಮಂತ್ರದಲ್ಲಿ ಈ ಅರ್ಥವನ್ನು ನಿರೂಪಿಸಲಾಗಿರುತ್ತದೆ. "ನಿರಂಜನ" ಪಾಪವಿಲ್ಲದವನು || ೩೩ ||

**ಅವತರಣಿಕಾ :** ಈಗ ಸಕಲ ಕರ್ಮಗಳನ್ನು ಶ್ರೀಹರಿಯಲ್ಲಿ ಯಜ್ಞತ್ವೇನ ಸಮರ್ಪಣಾರೂಪ ಉಪಾಸನೆಯು ಬಹು ಗೌಪ್ಯವಾದುದು. ಪ್ರತಿನಿತ್ಯ ಮೂರು ಕಾಲಗಳಲ್ಲಿ ಮಾಡತಕ್ಕ ಸಂಧ್ಯೋಪಾಸನೆ ಮನುಜನ ಆಯುಃಪರಿಮಿತದಲ್ಲಿ ಸವನ ತ್ರಯ ಯಜ್ಞ ನಾಚರಿಸುವ ಬಗೆ ಸಮರ್ಪಿಸುವ ರೀತಿ ವಿವರಿಸುತ್ತಾರೆ.

ಮೂಲ :

**ಕವಿಗಳಿಂದಲಿ ತಿಳಿದು ಪ್ರಾತಃ ।**
**ಸ್ಸವನ ಮಧ್ಯಂದಿನವು ಸಾಯುಮು ।**
**ಸವನಗಳ ವಸುರುದ್ರ ಆದಿತ್ಯರೊಳು ರಾಜಿಸುವ ॥**
**ಪವನನೊಳು ಕೃತಿಜಯುಸುಮಾಯಾ ।**
**ಧವನಮೂರ್ತಿತ್ರಯುವ ಚಿಂತಿಸಿ ।**
**ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು ॥ ೩೪ ॥**

**ಪದ್ಯಾರ್ಥ :** ಕವಿಗಳಿಂದಲಿ ತಿಳಿದು = ಕವಿ ಬ್ರಹ್ಮಜ್ಞಾನಿ, ಅಪರೋಕ್ಷ ಜ್ಞಾನಿಗಳು, ಮಹಾ ರಹಸ್ಯವಾದ ಉಪನಿಷದರ್ಥ ಬೋಧಕರಾದ ಜ್ಞಾನಿಗಳಿಂದ ಸದುಪದೇಶ ಹೊಂದಿ, ಪ್ರಾತಃ ಸವನ = ಜನನಾರಭ್ಯ ೨೪ ವರ್ಷ, ಮಧ್ಯಂದಿನ ಸವನ, ೨೫ನೇ ವರ್ಷದಿಂದ ೪೪ ವರುಷ, ಸಾಯುಮ ಸವನಗಳು = ಸಾಯಂಕಾಲ ಯಜ್ಞ, ೬೯ನೇ ವರುಷದಿಂದ ೧೧೬ ವರ್ಷ ಅಂದರೆ ೪೮ ವರುಷ ಹೀಗೆ ೨೪ + ೪೪ + ೪೮ = ೧೧೬ ವರ್ಷ. ಚಾಂದ್ರಮಾನ ತಿಂಗಳು ೧೦, ದಿವಸ ೧೦, ಗಳಿಗೆ ೨೦, ಪಳ ೮ ಹೀಗೆ, ವರ್ಷ ಆದರೆ, ನೂರು ವರುಷಕ್ಕೆ ೧೧೬ ವರುಷವಾಗುತ್ತದೆ. ಛಾಂದ್ಯೋಗ್ಯ ಉಪನಿಷತ್ ರಹಸ್ಯದಂತೆ ಪರಿಗಣನೆ.

(೧) ೨೪ ವರ್ಷದವರೆಗೆ, ಪ್ರಾತಃಸವನ ಅಷ್ಟವಸುಗಳಂತರ್ಗತ ಪವನಾಂತರ್ಯಾಮಿ ಕೃತಿಪತಿ ಪ್ರದ್ಯುಮ್ನನಲ್ಲಿ. ಅಲ್ಲಿಂದ—

(೨) ೪೪ ವರ್ಷ, ಮಾಧ್ಯಂದಿನ ಸವನ = ಏಕಾದಶ ರುದ್ರಾಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಜಯಾಪತಿ ಸಂಕರ್ಷಣನಲ್ಲಿ ತರುವಾಯ—

(೩) ೪೮ ವರುಷ ಸಾಯುಂ ಸವನ = ದ್ವಾದಶಾದಿತ್ಯಾಂತರ್ಗತ ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಮಾಯಾಪತಿ ವಾಸುದೇವನಲ್ಲಿ ಯಜ್ಞತ್ವೇನ ಸಮರ್ಪಿಸಿ, ಮೂರ್ತಿತ್ರಯುವ ಚಿಂತಿಸಿ = ಪ್ರದ್ಯುಮ್ನ ಸಂಕರುಷಣ ವಾಸುದೇವ ಈ ಮೂರು ಮೂರ್ತಿಗಳನ್ನು ಚಿಂತಿಸಬೇಕು. ಹೀಗೆ ಪ್ರತಿದಿವಸವೆಂಬ ಆಹುತಿಗಳನ್ನು ಕಾಲನಾಮಕ ಹರಿಯಲ್ಲಿ ಹಾಕಿ ಅರ್ಚಿಸುತ್ತ ಪೂಜಾ ಮಾಡಿ, ಸುಖಿಸುತಿರು = ಸಂತೋಷಪಡುತ್ತಿರಬೇಕು. (ವ್ಯಾಸದಾಸಸಿದ್ಧಾಂತ ಕೌಮುದೀಕಾರರು ವಿಶದ ವ್ಯಾಖ್ಯಾನ ಬರೆದಿದ್ದಾರೆ.)

**ದ್ರೌಪದೀಶಪತಿ ವಿಠಲರು :** ಕವಿಗಳಿಂದಲಿ ॥ ಸವನ ೩, ೧ ಪ್ರಾತಃ ವಸುಪ್ರದ್ಯುಮ್ನಃ ೨ ಮಧ್ಯಾಹ್ನರುದ್ರ ಸಂಕರ್ಷಣ, ೩ ಸಾಯಂ ಆದಿತ್ಯ ವಾಸುದೇವ.

**ಭಾವಸೂಚನ :** ಕವೀತಿ ॥ ೩೪ ॥

**ವಿಶೇಷಸೂಚನ :** ಈ ವಿಷಯ ಶ್ರೀಮೂದನೂರು ಅಡಿವಿಸ್ವಾಮಿಗಳ ಚತುರ್ದಶಿಯಲ್ಲಿ ಸ್ವರೂಪಯಜ್ಞ ವಿಚಾರ ವಿಸ್ತಾರವಾಗಿದೆ ನೋಡುವುದು.

“ಕವಿ” ಇತಿ ॥ ಮಹಾ ಮತಿತ್ವಾತ್ ಉಪನಿಷದರ್ಥಜ್ಞಾಃ ॥ ಶ್ರೀಮಧ್ವ ವಿಜಯೇ ಚ “ಘಟನೋಪ ನಿಷತ್ಸು ನಾಲ್ಪ ಬುದ್ಧೇಃ” ಸುಘಟ ಇತಿ ॥ “ಕೃತಿ” ಇತಿ ॥ ಪ್ರದ್ಯುಮ್ನ – ಸಂಕರ್ಷಣ ವಾಸುದೇವಾಃ ॥ ಚತುರ್ದಶೋಪಾಸ ನಾಯಾಂ ಚ—“ ಅಥ ಸರ್ವಮುಮುಕ್ಷು ಯೋಗ್ಯಂ ಅಪರೋಕ್ಷಾಂತ ರಂಗ ಸಾಧನಂ ಇದಮುಪಾಸನಂ ಗೌಪ್ಯತಮಂ ಶೃಣುತ ಯೋಗ್ಯಾಃ—ನಿರಂತರಂ ಪರಮಾದರೇಣೈವ ಅನುಸಂದಧೀತ ॥ “ಅಹಮೇವ ವಿಷ್ಣುಪೂಜಾತ್ಮಕ ಯಜ್ಞ ರೂಪಃ ॥ ಯಜ್ಞಾರಂಭಾತ್ ಪೂರ್ವಂ ನಾರಾಯಣೋ ದೇವತಾ ॥ ಪ್ರಸಿದ್ಧ ಯಜ್ಞೇ ಸವನತ್ರಯಂ ಅಸ್ತಿ ॥ ಅತ್ರಾಪಿ ತದಸ್ತಿ ॥ ಕಥಮ್ ? ಪುರುಷಸ್ಯ ಶತಮಾಯುಃ ॥ ತಸ್ಯ ಕಿಂಚಿತ್ ಪಲಾಧಿಕ ವಿಂಶತಿ ಘಟಿಕಾಧಿಕ ದಶದಿನಾಧಿಕ ದಶಮಾಸಾತ್ಮಕ ವರ್ಷವಿವಕ್ಷಯಾ ಷೋಡಶೋತ್ತರ ಶತವರ್ಷಾಣಿ ಭವಂತಿ ॥ ತತ್ರ ಭಾಗತ್ರಯಮ್ ॥ ಪೂರ್ವ ಚತುರ್ವಿಂಶತಿ ವರ್ಷಾತ್ಮಕಃ ಏಕಃ ಕಾಲಃ ॥ ತದುತ್ತರಃ ಚತುಶ್ಚತ್ವಾರಿಂಶದ್ವರ್ಷಾತ್ಮಕಃ ಅಪರಃ ॥ ತದುತ್ತರಃ ಅಷ್ಟಚತ್ವಾ ರಿಂಶದ್ವರ್ಷಾತ್ಮಕಃ ಅನ್ಯಃ ॥ ಪ್ರಸಿದ್ಧ ಯಜ್ಞಃ ಪ್ರಾತಃಸವನಂ ಮಾಧ್ಯಂದಿನ ಸವನಂ ಸಾಯಂಸವನಂ ಇತಿ ಸವನತ್ರಯಾತ್ಮಕಃ ॥ ತತ್ರ ಪ್ರಾತಃಸವನಂ ಚತುರ್ವಿಂಶತ್ಯಕ್ಷರಾತ್ಮಕ ಗಾಯತ್ರೀಛಂದಸ್ಕ ಮಂತ್ರೋಪೇತಮ್ ॥ ಅಯಮಪಿ ಚತುರ್ವಿಂಶತಿ ವರ್ಷಾತ್ಮಕ ಕಾಲೋಪೇತಃ ಪ್ರಾತಃಸವನಮ್ ॥ ಪ್ರಾತಃ ಸವನಸ್ಯ ವಸವಃ ದೇವತಾಃ ॥ ಮಾಧ್ಯಂದಿನ ಸವನಸ್ಯ ರುದ್ರಃ ॥ (ಸಾಯಂ ಸವನಸ್ಯ) ತೃತೀಯಸ್ಯ ಆದಿತ್ಯಾಃ ॥ ಅತ್ರ ತು ತತ್ವೇಶಾಃ ಏವ ಸುಖೇನ ಯೋಗ್ಯಂ ಪ್ರಾಣಿಜಾತಂ ವಾಸಯಂತಿ ಇತಿ ವಸುನಾಮಾನಃ ಪ್ರಾತಃಸವನಸ್ಯ ದೇವತಾಃ ॥

ಮಾಧ್ಯಂದಿನಂ ಸವನಂ ಚತುಶ್ಚತ್ವಾರಿಂಶದಕ್ಷರಾತ್ಮಕ ತ್ರಿಷ್ಟುಪ್

ಛಂದಸ್ಕ ಮಂತ್ರೋಪೇತಮ್ ॥ ಅಯಮಪಿ ಚತುಶ್ಚತ್ವಾರಿಂಶದ್ವರ್ಷಾತ್ಮಕ ಕಾಲೋಪೇತಃ ॥ ಮಾಧ್ಯಂದಿನ ಸವನಮ್ ॥ ಅಸ್ಯ ಸಂಕರ್ಷಣಃ ದೇವತಾ ॥ ಅತ್ರ ತತ್ವೇಶಾಃ ಏವ ಅಯೋಗ್ಯಜನಂ ರೋಧಯಂತಿ ಇತಿ ರುದ್ರನಾಮಾನಃ ದೇವತಾಃ ಪ್ರಸಿದ್ಧಂ ತೃತೀಯಂಸವನಂ ಅಷ್ಟಚತ್ವಾರಿಂಶದಕ್ಷರಾತ್ಮಕ ಜಗತೀ ಛಂದಸ್ಕ ಮಂತ್ರೋಪೇತಮ್ ॥ ಅಯಮಪಿ ಅಷ್ಟಚತ್ವಾರಿಂಶದ್ವರ್ಷಾತ್ಮಕ ಕಾಲೋಪೇತಃ ತೃತೀಯ ಸವನ ಮಿತ್ಯುಚ್ಯತೇ ॥ ಅಸ್ಯ ವಾಸುದೇವಃ ದೇವತಾ ॥ ತತ್ವೇಶಾಃ ಏವ ಆದಾನಾದಿಕಾರಯಿತೃತ್ವಾತ್ ಆದಿತ್ಯನಾಮಾನಃ ದೇವತಾಃ ॥

ಪ್ರಸಿದ್ಧಸವನೇಷು ವಸ್ವಾದಯಃ ಯಜಮಾನೈಃ ಪ್ರಾರ್ಥಿತಾಃ ಸ್ವಾಧಿಷ್ಠಿತಕಾಲೇ ಪ್ರಾಪ್ತವಿಘ್ನಾನ್ ನಿವಾರಯಿತ್ವಾ ಯಜ್ಞಂ ಸಮಾಪಯಂತಿ ॥ ಅತ್ರಾಪಿ ಪ್ರಾತಃಸವನೇ "ಭೋಃವಸವಃ। ವಿಷ್ಣುಪೂಜಾತ್ಮಕ ಯಜ್ಞರೂಪಸ್ಯ ಜ್ವರಾದ್ಯುಪದ್ರವೇಣ ಯಥಾ ಲೋಪಃ ಮಾ ಭೂತ್ ತಥಾ ರಕ್ಷತ ॥" ಭಾಗವತಾನಾಂ ಭವತಾಂ ಆಧಿಪತ್ಯೇ ವಿಷ್ಣುಪೂಜಾವಿಚ್ಛೇದಃ ನ ಉಚಿತಃ ॥" ಇತಿ ಪ್ರಾರ್ಥಿತಾಃ ರಕ್ಷಂತಿ ॥ ಏವಮೇವ ಉತ್ತರತ್ರ ಸವನದ್ವಯೇ ದ್ರಷ್ಟವ್ಯಮ್ ॥

ಪ್ರಸಿದ್ಧೇ ದೀಕ್ಷಾಃ ಉಪಸದಃ ಸ್ತುತಶಸ್ತ್ರೇ ದಕ್ಷಿಣಾ ಸೋಷ್ಯತಿ ಇತಿ ವ್ಯವಹಾರಃ ಅಸೋಷ್ಟೇತಿ ವ್ಯವಹಾರಃ ಅವಭೃಥಃ ಇತಿ ಸಪ್ತಸಂತಿ ॥ ಅತ್ರ ಅಶನಾಯಾಪಿಪಾಸೇ ವ್ಯಾಧ್ಯಾದಿ ಸಕಲೋಪದ್ರವೈಃ ಪ್ರಾಪ್ತಾವಸ್ಥಾ ಚ ದೀಕ್ಷಾ ॥ ಸ್ವಾಯಂಭುವಭಾರ್ಯಾ ಶತರೂಪಾ ತದಭಿಮಾನಿನೀ ॥ ಅಶನಪಾನಸುಖಾವಸ್ಥಾನಾನಿ ಯಜಮಾನ ವ್ಯಾಪಾರರೂಪೌ ಪಸದ ಸಂಜ್ಞತಾನಿ ॥ ಹಾಸ– ತಾಂಬೂಲ ಭಕ್ಷಣ ಮೈಥುನ ಶವಹೃತಿ ತದ್ಬಾಹ ಪ್ರಭೃತೀನಿ ಸ್ತುತಶಸ್ತ್ರಸಂಜ್ಞತಾನಿ ॥ ಋಕ್ಷು ಸಾಮಗಾನಂ ಸ್ತೋತ್ರಮ್ ॥ ಕೇವಲಂ ಮಂತ್ರಪಾಠಃ ತು ಸ್ತುತಶಸ್ತ್ರಮ್" ಇತಿಭೇದಃ ॥ ಕಾಯಕ್ಲೇಶಾದಿರೂಪಂ ವೇದಾಭ್ಯಾಸಾದಿರೂಪಂ ಚಿಂತನಾದಿರೂಪಂ ತಪಃ ವಿದ್ಯಾದಾನಂ ಅನ್ನಾದಿದಾನಂ ಚ ಆರ್ಜವಂ ಅಹಿಂಸಾ ಸತ್ಯವಾಕ್ಯಮ್ ಇತಿ ದಕ್ಷಿಣಾ ॥ ಸ್ವಾಯಂಭುವಮನುಃ ತದಭಿಮಾನೀ ॥ ಪಿತುಃ ಸಕಾಶಾತ್ ಮಾತುಃ ಉದರೇ ಪ್ರವೇಶೇ ಜನಿಷ್ಯತಿ ಇತಿ ಯಃ ವ್ಯವಹಾರಃ ಸ ಏವ ಸವನಂ ಕರಿಷ್ಯಾಮಿ ಇತಿ ವ್ಯವಹಾರಃ ॥

ಮಾತುಃ ಸಕಾಶಾತ್ ಉತ್ಪತ್ತೌ "ಜನಿತಃ" ಇತಿ ಯಃ ವ್ಯವಹಾರಃ ಸ ಏವ ''ಅತರೋತ್'' ವ್ಯವಹಾರಃ || ಮರಣಮೇವ ಅವಭೃಥಸ್ನಾನಮ್ ||

ತತ್ರ ಮಂತ್ರತ್ರಯಮ್ || ಓಂ ಅಕ್ಷತಮಸೀ || ಓಂ | ಅಚ್ಯುತಮಸಿ ಓಂ || ಓಂ | ಪ್ರಾಣಶಂಸಿತಮಸಿ ಓಂ || ಇತಿ ||

"ಹೇ! ಭಗವನ್! ತ್ವಂ ಸ್ವರೂಪೇಣ ಅಕ್ಷಯಃ ಅಸಿ || ಗುಣೈಃ ಅಚ್ಯುತಃ ಅಸಿ || ಮುಖ್ಯ ಪ್ರಾಣಾದಪಿ ಅಧಿಕಸುಖಃ ಅಸಿ ||" ಇತಿ ಮಂತ್ರತ್ರಯಾರ್ಥಃ ||

ಯಜ್ಞಾಂತೇ ಅನಿರುದ್ಧಃ ದೇವತಾ || ಏತದುಪಾಸನಸ್ಯ ಮೋಕ್ಷಾರ್ಥಃ ಅಪರೋಕ್ಷಃ ಏವ ಮುಖ್ಯಂ ಫಲಮ್ || ರೋಗಾದಿ ವಿಘ್ನಪರಿಹಾರಃ ಆಯು ರಭಿವೃದ್ಧಿಶ್ಚೇತಿ ದ್ವಯಂ ಅವಾಂತರ ಫಲಮ್ ಇತಿ || ಯಸ್ಮಿನ್ ಜನ್ಮನಿ ಏವ ಮನುಸಂಧಾನ ಸಾಮರ್ಥ್ಯಂ ಈಶ್ವರಃ ದದಾತಿ || ತತ್ರೈವ ಅತೀತಾಶೇಷ ದೇಹಾನಾಂ ವಿಸ್ಮೃತಾಂ ಅಪಿ ಸರ್ವೇಷಾಂ "ಏವಮೇವ" ಇತಿ ಅನುಸಂಧೇ ಯಮ್ || ತೇನ ಭಗವದ್ಭಕ್ತಾನಾಂ ಸರ್ವಾಣಿ ಅಪಿ ಜನ್ಮಾನಿ ಭಗವತ್ಪೂಜಾತ್ಮ ಕಾನಿ ಭವಂತಿ || ಇತಿ ಆಯುಃಸಾರ್ಥಕ್ಯಮ್ || ಇತಿ ಛಾಂದೋಗ್ಯೇ ದ್ವಿತೀ ಯೇ ಚತುರ್ವಿಂಶತಿ ಖಂಡೇ ಚ "ಓಂ ಬ್ರಹ್ಮವಾದಿನೋ ವದಂತಿ'' ಇತಿ ಚ ಉಕ್ತಮ್ || ಅನೇನ "ಕಂ" ಸುಖಂ ಹರಿಂ, "ವೇತ್ತಿ" ಇತಿ ಕವಿಪದಂ ನಿರುಕ್ತಂ ಭವತಿ || ಯದ್ ವಸೂನಾಂ ಪ್ರಾತಃಸವನಂ ರುದ್ರಾಣಾಂ ಮಾಧ್ಯಂ ದಿನ ಸವನಂ ಆದಿತ್ಯಾನಾಂ ವಿಶ್ವೇಷಾಂ ಚ ದೇವಾನಾಂ ತೃತೀಯ ಸವನಮ್ ಇತಿ || ತದ್ಭಾಷ್ಯೇ ಚ ವಸುರುದ್ರಾದಿತೇಯೇಷು ವಿಶ್ವೇಷು ಸ್ಥಿತಮೀಶ್ವರಮ್ || ತನ್ನಾಮಾನಂ ಹರಿಂ ಮಂತ್ರೈಃ ಲೋಕದ್ವಾರಾದಿಭಿಃ ಪ್ರಭುಮ್ || ಪ್ರಾರ್ಥ ಯಿತ್ವಾ ದಿವಂ ತ್ವಜ್ಞಃ ಜ್ಞಃ ಮೋಕ್ಷಂ ಪ್ರಾಪ್ನುಯಾತ್ ಧ್ರುವಮ್ || ಇತಿ || "ಯೋ ದೇವಾನಾಂ ನಾಮಧಾ'' ಇತಿ ಶ್ರುತೇಃ ಭಗವತಃ ಏವವಸ್ವಾದಿ ನಾಮ (ಮಾನಿ) || ೩೪ ||

## ಕನ್ನಡಾರ್ಥ

ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಲ್ಪಟ್ಟ ಪುರುಷ ಯಜ್ಞವನ್ನು ನಿರೂಪಿಸುತ್ತಾರೆ—"ಕವಿಗಳಿಂದಲೆ'' ಎಂಬ ಪದ್ಯದಿಂದ, "ಕವಿ'' ಎಂದರೆ ಉಪನಿಷತ್ತುಗಳ ರಹಸ್ಯಾರ್ಥಗಳನ್ನು ತಿಳಿದ ಮಹಾಮತಿಗಳು, ಸುಮಧ್ವ ವಿಜಯದಲ್ಲಿ ಅಲ್ಪಮತಿಗಳಿಗೆ ಉಪನಿಷತ್ತಿನ ರಹಸ್ಯಾರ್ಥಗಳ ಸಮೀಚೀನವಾದ

ನಿರ್ಣಯಜ್ಞಾನವು ಸುಲಭವಲ್ಲ, ದುರ್ಘಟವೆಂಬುದಾಗಿ ನಿರೂಪಿತವಾಗಿರುತ್ತದೆ. ಉಪನಿಷದ್ರಹಸ್ಯವನ್ನರಿತವರು ಕವಿಗಳು. ಕೃತಿಜಯಾ ಮಾಯಾಪತಿಗಳೆಂದರೆ ಕ್ರಮವಾಗಿ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಭಗವಂತನ ರೂಪಗಳು ಎಂದು ತಿಳಿಯಬೇಕು.

ಹದಿನಾಲ್ಕು ಉಪಾಸನೆಗಳನ್ನು ನಿರೂಪಿಸುವಾಗ ಶ್ರೀ ವಿಷ್ಣುತೀರ್ಥರು ಮಾದನೂರು ಶ್ರೀಗಳವರು ಭಾಗವತ ಸಾರೋದ್ಧಾರಕಾರರು ಮುಮುಕ್ಷುಗಳಿಗೆ ಅತ್ಯವಶ್ಯಕವಾಗಿ ಬೇಕಾಗುವ ಅಪರೋಕ್ಷಜ್ಞಾನದ ಅಂತರಂಗ ಸಾಧನವಾದ "ಆಯುರ್ಯಜ್ಞ'' ಅತಿ ಗೌಪ್ಯವಾದ ಉಪಾಸನೆಯನ್ನು ಕೇಳಿರಿ'' ಎಂದು ನಿರೂಪಿಸಿರುತ್ತಾರೆ. ಸದಾ ಆದರಾತಿಶಯದಿಂದ ಈ ಪ್ರಮೇಯವನ್ನು ಅನು ಸಂಧಾನದಲ್ಲಿ ತರಬೇಕು.

"ಜೀವನು ವಿಷ್ಣು ಪೂಜಾತ್ಮಕ ಯಜ್ಞರೂಪನು. ಯಜ್ಞವು ಪ್ರಾರಂಭ ವಾಗುವ ಮೊದಲು ನಾರಾಯಣನು ದೇವತೆ. ಪ್ರಸಿದ್ಧವಾದ ಯಜ್ಞಗಳಲ್ಲಿ ಮೂರು ಸವನಗಳಿರುತ್ತವೆ. "ಪ್ರಾತಃ, ಮಾಧ್ಯಂದಿನ ಸಾಯಂ" ಎಂಬು ದಾಗಿ ಸವನಗಳ ಹೆಸರುಗಳು. ಜೀವರೂಪ ಯಜ್ಞದಲ್ಲಿಯೂ ಪ್ರಾತಃ, ಮಾಧ್ಯಂ ದಿನ ಸಾಯಂ ಎಂಬ ಮೂರೂ ಸವನಗಳಿರುತ್ತವೆ. ಹೇಗೆಂದರೆ ಪುರುಷನಿಗೆ ಒಂದು ನೂರು ವರ್ಷ ಆಯುಷ್ಯವಿದೆ. ಒಂದು ವರ್ಷಕ್ಕೆ ೧೨ ತಿಂಗಳುಗಳನ್ನು ಮಾಡದೇ, ೧೦ತಿ. ೧೦ದಿ. ೨೦ಘ. ಕೆಲಪಳಗಳಿಗೆ ಒಂದು ವರ್ಷವೆಂದು ವರ್ಷದ ಮಾಸವನ್ನು ತಿಳಿದುಕೊಂಡರೆ, ಪ್ರಚಲಿತ ೧೦೦ ವರ್ಷದ ಆಯುಷ್ಯವು ಪರಿಗಣಿತ ವಾದ ನೂತನ ಮಾನದಿಂದ ೧೧೬ ವರ್ಷಗಳಾಗುತ್ತವೆ. ಹೀಗೆ ೧೧೬ ವರ್ಷಾ ತ್ಮಕವಾದ ಆಯುಷ್ಯದಲ್ಲಿ ಮೂರು ಭಾಗಗಳನ್ನು ಮಾಡಬೇಕು. ಮೊದಲಿನ ೨೪ ವರ್ಷಗಳ ಒಂದು ಭಾಗ, ಮುಂದೆ ೪೪ ವರ್ಷಗಳು ಅಂದರೆ ೬೮ರವರೆಗೆ ಎರಡನೆಯ ಭಾಗ, ೬೮ರ ನಂತರ ೪೮ ವರ್ಷಗಳು ಅಂದರೆ ೬೮–೧೧೬ರ ವರೆಗೆ ಮೂರನೆಯ ಭಾಗ. ಹೀಗೆ ಮೂರು ಭಾಗಗಳು. ಪ್ರಸಿದ್ಧವಾದ ಯಜ್ಞದಲ್ಲಿ ಪ್ರಾತಃಸವನ ಮಾಧ್ಯಂದಿನ ಸವನ ಸಾಯಂಸವನಗಳೆಂಬ ಮೂರು ಸವನ ಗಳಿರುತ್ತವೆ. ಈ ಆಯುರ್ಯಜ್ಞದಲ್ಲಿಯೂ ಮೂರು ಸವನಗಳಿರುತ್ತವೆ. ೨೪ ವರ್ಷದ ಆಯುಷ್ಯದ ಪ್ರಥಮಭಾಗವು ಪ್ರಾತಃಸವನವೆನಿಸಿಕೊಳ್ಳುತ್ತದೆ. ಅದರ ನಂತರದ ೪೪ ವರ್ಷಗಳ (೬೪–೬೮) ಭಾಗವು ಮಾಧ್ಯಂದಿನ ಸವನ

ವೆನಿಸಿಕೊಳ್ಳುತ್ತದೆ. ಅದರ ಮುಂದಿನ ೪೮ ವರ್ಷಗಳ ಭಾಗವು ಸಾಯಂ ಸವನವೆನಿಸಿಕೊಳ್ಳುತ್ತದೆ.

ಪ್ರಾತಃಸವನವು ೨೪ ಅಕ್ಷರಗಳಿಂದ ಯುಕ್ತವಾದ ಗಾಯತ್ರೀ ಛಂದಸ್ಸಿನಿಂದ ಕೂಡಿದ ಮಂತ್ರದಿಂದ ಯುಕ್ತವಿರುತ್ತದೆ. ಈ ಪುರುಷಾಯುಷ್ಯದ ಮೊದಲನೆಯ ಭಾಗವು ೨೪ ವರ್ಷಾತ್ಮಕ ಕಾಲದಿಂದ ಯುಕ್ತವಾಗಿರುತ್ತಹೆ. ಆದುದರಿಂದ ಪ್ರಾತಃಸವನವೆನಿಸಿಕೊಳ್ಳುತ್ತದೆ. ಪ್ರಾತಃಸವನಕ್ಕೆ ದೇವತೆಗಳು ವಸುಗಳು. ಮಾಧ್ಯಂದಿನ ಸವನದ ದೇವತೆಗಳು ರುದ್ರರು, ಸಾಯಂ ಸವನದ ದೇವತೆಗಳು ಆದಿತ್ಯರು. ಈ ಆಯುರ್ಯಜ್ಞದ ಮೊದಲನೆಯ ಭಾಗವಾದ ಪ್ರಾತಃಸವನದಲ್ಲಿ ತತ್ವೇಶರಾದ ತತ್ವನಿಯಾಮಕರಾದ ದೇವತೆಗಳೇ ವಸುಗಳೆಂದು ಹೇಳಿಸಿಕೊಳ್ಳುತ್ತಾರೆ. ತತ್ವಪತಿದೇವತೆಗಳು ಯೋಗ್ಯ ಪ್ರಾಣಿಗಳಿಗೆ ಸುಖದಿಂದ ಆಚ್ಛಾದಿಸುತ್ತಾರೆ. ಅಂದರೆ ಸುಖವನ್ನು ಹೊಂದಿಸುತ್ತಾರೆ; ಆದುದರಿಂದ "ವಸುಗಳು" ಎಂದು ಅನ್ನಿಸಿಕೊಳ್ಳುತ್ತಾರೆ.

ಮಾಧ್ಯಂದಿನ ಸವನವು ೪೪ ಅಕ್ಷರಯುಕ್ತವಾದ ತ್ರಿಷ್ಟುಪ್ ಛಂದೋಬದ್ಧವಾದ ಮಂತ್ರಯುಕ್ತವಾದುದು. ಪ್ರಕೃತ ಆಯುರ್ಯಜ್ಞದ ಮಾಧ್ಯಂದಿನ ಸವನವೂ ಸಹ ೪೪ ವರ್ಷಗಳಿಂದ ಯುಕ್ತವಾಗಿರುತ್ತದೆ. ಈ ಮಾಧ್ಯಂದಿನ ಸವನಕ್ಕೆ ಮುಖ್ಯವಾಗಿ ಸಂಕರ್ಷಣನು ದೇವತೆಯು. ರುದ್ರರು ಅವಾಂತರ ದೇವತೆಗಳು. ಪ್ರಕೃತ ದೇಹದೊಳಗಿರುವ ತತ್ವಾಭಿಮಾನಿ ದೇವತೆಗಳೇ ಅಯೋಗ್ಯರನ್ನು ರೋಧಿಸುವದರಿಂದ ರುದ್ರನೆನಿಸಿಕೊಳ್ಳುತ್ತಾರೆ.

ಸಾಯಂ ಸವನವು ೪೮ ಅಕ್ಷರಯುಕ್ತವಾದ ಜಗತೀ ಛಂದೋಬದ್ಧವಾಗಿರುತ್ತದೆ. ಪ್ರಕೃತ ಸಾಯಂಸವನವೂ ೪೮ ವರ್ಷ (ಅವಧಿ) ರೂಪಕಾಲದಿಂದ ಯುಕ್ತವಾಗಿರುತ್ತದೆ. ಇದಕ್ಕೆ ವಾಸುದೇವನು ಮುಖ್ಯ ದೇವತೆಯು. ತತ್ವನಿಯಾಮಕ ದೇವತೆಗಳು ಆದಾನಾದಿಗಳನ್ನು = ಸ್ವೀಕಾರ ಮುಂತಾದುವುಗಳನ್ನು ಮಾಡಿಸುವದರಿಂದ "ಆದಿತ್ಯ" ರೆಂದೆನಿಸಿಕೊಳ್ಳುತ್ತಾರೆ.

ಲೋಕ ಪ್ರಸಿದ್ಧವಾದ ಯಜ್ಞದಲ್ಲಿ – ಸವನಗಳಲ್ಲಿ "ವಸು ಮುಂತಾದ ದೇವತೆಗಳು ಯಜಮಾನರಿಂದ (ಯಾಗಯಜಮಾನರಿಂದ) ಪ್ರಾರ್ಥಿತರಾಗಿ ತಮ್ಮ ಅಧಿಷ್ಠಾನ ಕಾಲಗಳಲ್ಲಿ ಬಂದಿರುವ ವಿಘ್ನಗಳನ್ನು ದೂರಗೊಳಿಸಿ ಯಜ್ಞವನ್ನು ಮುಗಿಯಿಸುತ್ತಾರೆ ಎಂದು ಸ್ತುತಿಯಾಗಿರುತ್ತದೆ. ಅದರಂತೆ ಪ್ರಕೃತ

ಆಯುರ್ಯಜ್ಞದ ಪ್ರಾತಃಸವನದಲ್ಲಿಯೂ "ಹೇ ವಸುಗಳೇ! ವಿಷ್ಣು ಪೂಜಾತ್ಮಕವಾದ ಯಜ್ಞರೂಪವಾದ ಈ ಆಯುಷ್ಯವನ್ನು ಜ್ವರಮುಂತಾದ ಉಪದ್ರವಗಳಿಂದ ಲೋಪಗೊಳ್ಳದಂತೆ ಮಾಡಿ ಸಂರಕ್ಷಿಸಿರಿ. ಭಗವತ್ಸೇವಕರಾದ ತಮ್ಮ ಆಧಿಪತ್ಯವಿರುವಾಗ ವಿಷ್ಣುಪೂಜೆಯ ವಿಚ್ಛೇದವು ಉಚಿತವೆನಿಸುವದಿಲ್ಲ." ಹೀಗೆ ಪ್ರಾರ್ಥಿತರಾಗಿ ವಸುಗಳು ಸಂರಕ್ಷಿಸುತ್ತಾರೆ. ಹೀಗೆಯೇ ಮುಂದಿನ ಸವನಗಳಲ್ಲಿಯೂ ಈ ಬಗೆಯ ಸೋತ್ರಗಳಿರುವುದಾಗಿ ತಿಳಿದುಕೊಳ್ಳಬೇಕು.

ಲೋಕರೂಢವಾದ ಯಜ್ಞಗಳಲ್ಲಿ — "ದೀಕ್ಷಾ-ಉಪಸದ-ಸ್ತುತಶಸ್ತ್ರ-ದಕ್ಷಿಣ "ಸೋಷ್ಯತಿ" ಎಂಬ ವ್ಯವಹಾರ (ಶಬ್ದಗಳು) "ಅಸೋಷ" — ಎಂಬ ವ್ಯವಹಾರ ಶಬ್ದಗಳು "ಅವಭೃಥ" ಹೀಗೆ ಏಳು ಅಂಗಗಳಿರುತ್ತವೆ. ಈಗ ಪ್ರಕೃತವಾದ ಆಯುರ್ಯಜ್ಞದಲ್ಲಿಯೂ ಏಳು ಅಂಗಗಳಿರುತ್ತವೆ. ಹೇಗೆಂದರೆ ಹಸಿವೆ, ನೀರಡಿಕೆ, ವ್ಯಾಧಿ ಮುಂತಾದ ರೋಗಗಳಿಂದಾಗುವ ಅವಸ್ಥೆ. ಇವುಗಳು "ದೀಕ್ಷಾ" ಎನಿಸಿಕೊಳ್ಳುತ್ತವೆ. ಉಣ್ಣುವದು, ಕುಡಿಯುವದು ಸುಖವಾಗಿ ಇರುವದು; ಇವುಗಳು ಯಜಮಾನನ ವ್ಯಾಪಾರಗಳು ಉಪಸದಗಳು ನಗೆ, ತಾಂಬೂಲಸೇವನ, ಸ್ತ್ರೀಸಂಭೋಗ, ಶವಹರಣ ಶವವನ್ನು ದಹನಮಾಡುವದು, ಈ ಮುಂತಾದವುಗಳು "ಸ್ತುತಶಸ್ತ್ರ" ಗಳೆನಿಸಿಕೊಂಡಿರುವವು. ಋಕ್ಕುಗಳಲ್ಲಿ ಸಾಮಸ್ವರದಿಂದ ಗಾನಮಾಡುವದು ಸ್ತೋತ್ರವೆನಿಸಿಕೊಳ್ಳುತ್ತದೆ. ಕೇವಲ ಮಂತ್ರಪಾಠವು ಸ್ತುತಶಸ್ತ್ರವೆನಿಸಿಕೊಳ್ಳುತ್ತದೆ. ಹೀಗೆ ಎರಡರಲ್ಲಿರುವ ವ್ಯತ್ಯಾಸವನ್ನು ತಿಳಿಯಬೇಕು. ಶರೀರಶೋಷಣ, ವೇದಭ್ಯಾಸ ಭಗವದ್ರೂಪ ಚಿಂತನ ತಪಸ್ಸು ವಿದ್ಯಾದಾನ ಅನ್ನ ಮುಂತಾದವುಗಳ ದಾನ, ಋಜುತನ, ಸರಲಭಾವ, ಅಹಿಂಸಾ, ಸತ್ಯವಚನಗಳು "ದಕ್ಷಿಣೆ" ಯೆನಿಸಿಕೊಳ್ಳುತ್ತವೆ. ತಂದೆಯಿಂದ ತಾಯಿಯ ಉದರದಲ್ಲಿ ಪ್ರವೇಶವಾಗಲು "ಹುಟ್ಟುವನು", "ಜನಿಸುವನು" ಎಂಬ ಶಬ್ದಗಳೇ "ಸೋಷ್ಯತಿ" ಎಂಬ ವ್ಯವಹಾರವೆನಿಸುವವು. "ಸವನವನ್ನು ಮಾಡುವೆ" ಎಂಬ ಶಬ್ದಗಳೆನಿಸುವವು. ತಾಯಿಯಿಂದ ಉತ್ಪನ್ನನಾಗಲು ಆಗುವ "ಜನಿಸಿದನು" ಎಂಬ ವ್ಯವಹಾರವು "ಸವನವನ್ನು ಮಾಡಿದನು-ಅಸೋಷ್ಯ" ಎಂಬ ವ್ಯವಹಾರವೆನಿಸಿಕೊಳ್ಳುತ್ತದೆ. ಮರಣವೇ ಅಪಭೃತವೆನಿಸಿಕೊಳ್ಳುತ್ತದೆ.

ಈ ಯಜ್ಞದಲ್ಲಿಯ ಮಂತ್ರಗಳು — (೧) ಓಂ ಅಕ್ಷತಮಸಿ, (೨) ಓಂ

ಅಚ್ಯುತಮಸಿ, (೩) ಓಂ ಪ್ರಾಣಶಂಸಿತಮಸಿ" ಎಂಬವುಗಳು. "ಹೇ ಭಗವಂತನೇ! ನೀನು ನಾಶರಹಿತವಾದ ಸ್ವಭಾವದವನಿರುತ್ತೀ! (೨) ಹೇ ಭಗವಂತನೇ! ಗುಣಗಳಿಂದ ಸದಾ ಪೂರ್ಣನಿರುತ್ತೀ! (೩) ಹೇ ಭಗವಂತನೇ! ನೀನು ಜೀವೋತ್ತಮನಾದ ಮುಖ್ಯ ಪ್ರಾಣನಿಗಿಂತಲೂ ಅಧಿಕ ಸುಖಪೂರ್ಣನಿರುತ್ತೀ! ಎಂದು ಮೂರೂ ಮಂತ್ರದ ಅರ್ಥ.

ಯಜ್ಞಾಂತದಲ್ಲಿ ಅನಿರುದ್ಧನು ದೇವತೆಯು. ಮೋಕ್ಷಕಾರಣವಾದ ಅಪರೋಕ್ಷಜ್ಞಾನವು ಈ ಆಯುರ್ಯಜ್ಞರೂಪ ಉಪಾಸನಕ್ಕೆ ಮುಖ್ಯವಾದ ಪ್ರಧಾನ ಫಲ. ರೋಗ ಮುಂತಾದ ವಿಘ್ನಪರಿಹಾರ – ಆಯುಷ್ಯಾವೃದ್ಧಿ ಮುಂತಾದವುಗಳು ಅವಾಂತರ ಫಲಗಳು.

ಯಾವ ಜನ್ಮದಲ್ಲಿ ಇಂಥ ಅನುಸಂಧಾನ ಶಕ್ತಿಯನ್ನು ಹರಿಯು ಪಾಲಿಸುವನೋ ಆ ಜನ್ಮದಲ್ಲಿ ಹಿಂದೆ ಕಳೆದುಹೋಗಿರುವ ಹಾಗೂ ಮುಂಬರುವ ದೇಹಗಳಿಗೆ ಹಿಂದೆ ಹೇಳಿದ ರೀತಿಯಲ್ಲಿ ಆಯುರ್ಯಜ್ಞಾಹುತಿ ಭಾವವನ್ನು ಅನುಸಂಧಾನದಲ್ಲಿ ತರಬೇಕು. ಇದರಿಂದ ಭಗವದ್ಭಕ್ತರ ಸಕಲ ಜನ್ಮಗಳೂ ಭಗವತ್ಪೂಜಾರಪಗಳೆನಿಸಿಕೊಳ್ಳುತ್ತವೆ. ಆದುದರಿಂದ ಆಯಾ ಜನ್ಮಗಳ ಆಯುಷ್ಯವೂ ಸಫಲವಾಗುತ್ತದೆ.

ಛಾಂದೋಗ್ಯೋಪನಿಷತ್ತಿನ ೨ನೆಯ ಅಧ್ಯಾಯ ೨೪ನೆಯ ಖಂಡದಲ್ಲಿ "ಬ್ರಹ್ಮವಾದಿನಃ ವದಂತಿ" ಎಂಬುದಾಗಿ ಆರಂಭಿಸಿ ಈ ವಿಷಯವು ನಿರೂಪಿತವಾಗಿರುತ್ತದೆ.

ಇದರಿಂದ "ಕ" ಸುಖಮಯ ಸುಖಪೂರ್ಣನಾದ ಹರಿಯನ್ನು "ವಿ" ತಿಳಿದುಕೊಳ್ಳುವವನು "ಕವಿ" ಎಂದು ಕವಿಪದವನ್ನು ನಿರ್ವಚನದಿಂದ ವಿವರಿಸಿದಂತಾಗುತ್ತದೆ.

ಛಾಂದೋಗ್ಯೋಪನಿಷತ್ತಿನ ಭಾಷ್ಯದಲ್ಲಿ ಶ್ರೀಮದಾಚಾರ್ಯರು ವಸು–ರುದ್ರ–ಆದಿತ್ಯರುಗಳಲ್ಲಿರುವ ಹರಿಯ ಪ್ರದ್ಯುಮ್ನ – ಸಂಕರ್ಷಣ – ವಾಸುದೇವ ರೂಪಗಳನ್ನು ಅಜ್ಞರು ಸ್ವರ್ಗಾದಿ ಲೋಕಗಳಿಗಾಗಿ ಪ್ರಾರ್ಥಿಸುತ್ತಾರೆ; ಮಹಾಜ್ಞಾನಿಗಳು ಮಾತ್ರ ಮೋಕ್ಷವನ್ನಪೇಕ್ಷಿಸಿ ಈ ಉಪಾಸನವನ್ನು ಮಾಡುತ್ತಾರೆ. "ಯೋ ದೇವಾನಾಂ" ಎಂಬ ಶ್ರುತಿಗೆ ಅನುಸಾರವಾಗಿ ಸರ್ವನಾಮಗಳೂ ಭಗವಂತನಲ್ಲಿಯೇ ಸಮನ್ವಯಿಸುವದರಿಂದ "ವಸು – ರುದ್ರ – ಆದಿತ್ಯ" ಈ

ನಾಮುಗಳು ತತ್ತ್ರದಂತರ್ಗತನಾದ ಹರಿಯನ್ನೇ ಹೇಳುತ್ತವೆ. ||೩೪||

**ಅವತರಣಿಕಾ:** ಇನ್ನು ಈ ಸ್ವರೂಪಯಜ್ಞ ಪುರುಷಗಳ ಪರಿಮಿತಿ ೧೧೬ ವರ್ಷ ವಿವರ. ಸವನತ್ರಯಗಳಲ್ಲಿರುವ ದೇವತೆ ಪವನಾಂತರ್ಯಾಮಿ ಹರಿರೂಪ ಉಪಾಸನೆ ಕ್ರಮ. ಹಿಂದೆ ಹೇಳಿದ್ದನ್ನೇ ಸವಿಸ್ತರ ಉಪದೇಶಿಸುತ್ತಾರೆ.

ಮೂಲ:

**ಚತುರವಿಂಶತ್ಯಬ್ದವಸು ದೇ ।**
**ವತೆಗಳೊಳು ಪ್ರದ್ಯುಮ್ನನಿಪ್ಪನು ।**
**ಚತುರ ಚತ್ವಾರಿಂಶತಿಗಳಲಿ ಸಂಕರುಷಣಾಖ್ಯ ||**
**ಹುತವಹಾಕ್ಷನೊಳಿಹನು ಮಾಯಾ ।**
**ಪತಿಯು ಹದಿನಾರಧಿಕ ದ್ವಾತ್ರಿಂ ।**
**ಶತಿ ವರುಷಗಳಲಿಪ್ಪನಾದಿತ್ಯನೊಳು ಸಿತಕಾಯ || ೩೫ ||**

**ಪದ್ಯಾರ್ಥ:** ಚತುರವಿಂಶತ್ಯಬ್ದ = ಇಪ್ಪತ್ತು ನಾಲ್ಕು ವರ್ಷ ಅಂದರೆ ಜನನಾರಭ್ಯ ೨೪ ವರ್ಷ ಪ್ರಾತಃ ಸವನದಲ್ಲಿ ೮ ಜನ ವಸುದೇವತೆಗಂತರ್ಗತ ಪವನಾಂತಸ್ಥಪ್ರದ್ಯುಮ್ನ, ಅಲ್ಲಿಂದ ಚತುರ ಚತ್ವಾರಿಂಶತಿಗಳಲಿ = ನಾಲ್ವತ್ತು ನಾಲ್ಕು ವರ್ಷಗಳವರೆಗೆ ಮಾಧ್ಯಂದಿನಸವನ, ಇಲ್ಲಿ ಹುತವಹಾಕ್ಷನೊಳು = ಅಗ್ನಿಯೇ ನೇತ್ರವಾಗಿವುಳ್ಳ ಮಹರುದ್ರದೇವರಲ್ಲಿ ಏಕಾದಶ ರುದ್ರರಲ್ಲಿ ಪವನಾಂತಸ್ಥ ಸಂಕರುಷಣ, ಹದಿನಾರಧಿಕ ದ್ವಾತ್ರಿಂಶತಿ ವರುಷಗಳಲಿ = ದ್ವಾತ್ರಿಂಶತಿ = ೩೨ಕ್ಕೆ ಹದಿನಾರಧಿಕ ೩೨ + ೧೬ = ೪೮ ವರುಷ ಸಾಯಂ ಸವನದಲ್ಲಿ, ದ್ವಾದಶಾದಿತ್ಯರುಗಳಲ್ಲಿಪ್ಪ ಪವನಂತರ್ಯಾಮಿ ಸಿತಕಾಯ = ಶುಭ್ರವರ್ಣ ದೇಹವುಳ್ಳ ಮಾಯಾಪತಿ ವಾಸುದೇವನನ್ನು ಚಿಂತಿಸಿ ಯಜ್ಞ ಸಮರ್ಪಿಸಬೇಕು.

**ದ್ರೌಪದೀಶಪತಿ ವಿಠಲರು:** ಚತುರವಿಂಶತ್ಯಬ್ದ.

ವರ್ಷ—ದೇವತೆ—ಹರಿರೂಪ.
೨೪—ವಸು—ಪ್ರದ್ಯುಮ್ನ.
೪೪—ರುದ್ರ—ಸಂಕರ್ಷಣ.
೪೮—ಆದಿತ್ಯಾ—ವಾಸುದೇವ.

**ಭಾವಸೂಚನ:** ಚತುರೇತಿ || ಹುತವಹ = ಅಗ್ನಿ || ೩೫ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಚತುರ" ಇತಿ || ತೃತೀಯೇ ಷೋಡಶಖಂಡೇ "ಪುರುಷೋ ವಾವ ಯಜ್ಞಃ | ತಸ್ಯ ಯಾನಿ ಚತುರ್ವಿಂಶತಿವರ್ಷಾಣಿ ತತ್ಪ್ರಾತಃಸವನಮ್ | ಇತ್ಯುಕ್ತ್ವಾ "ಯಾನಿ ಅಸ್ಯ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯಂದಿನ ಸವನಮ್ ||" ಇತ್ಯುತ್ತರಂ – "ಯಾನಿ ಅಷ್ಟಚತ್ವಾರಿಂಶದ್ವರ್ಷಾಣಿ ತೃತೀಯಂ ಸವನಮ್ ಇತಿ || "ಏತದ್ಧಸ್ಮ ತದ್ವಿದ್ವಾನಾಹ ಮಹಿದಾಸ ಐತರೇಯಃ ಸಹ ಷೋಡಶಂ ಶತವರ್ಷಂ ಅಜೀವತ್ ಪ್ರಾಹ | ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ" ಇತಿ ಚ ಇತಿ || ತದ್ಭಾಷ್ಯಂ ಚ "ವಿಷ್ಣುಪೂಜಾರ್ಥ ಯಜ್ಞೋಽಹಂ ಇತ್ಯುಪಾಸನಮಾದರಾತ್ || ಕುರ್ವೀತ ಪುರುಷಃ ನಿತ್ಯಂ ತಸ್ಯ ಯತ್ ಷೋಡಶೋತ್ತರಮ್ || ಶತಮಾಯುಃ ತತ್ಸವನತ್ರಯ ಮೀರಿತ ಮುತ್ತಮಮ್ || ಚತುರ್ವಿಂಶತ್ತು ಯತ್ಪೂರ್ವಂ ಪ್ರಾತಃಸವನಮೇವ ತತ್ || ಪ್ರಾರ್ಥಯಿತ್ವಾ ವಸೂಂಸ್ತದ್ಗಂ ಪುಮಾನ್ ಮೃತ್ಯು ಮುಪಾನುದೇತ್ || ಮಧ್ಯೇ ಚತುಶ್ಚತ್ವಾರಿಂಶನ್ ಮಾಧ್ಯಮಂ ಸವನಂ ಸ್ಮೃತಮ್ || ರುದ್ರಾಣಾಂ ಪ್ರಾರ್ಥನೇನಾತ್ರ ಪುಮಾನ್ ಮೃತ್ಯುಮುಪಾನುದೇತ್ || ತತೋಽಷ್ಟಚತ್ವಾರಿಂಶಚ್ಚ ತೃತೀಯಂ ಸವನಂ ಸ್ಮೃತಮ್ || ಆದಿತ್ಯಾನಾಂ ಪ್ರಾರ್ಥನೇನ ತದ್ಗಂ ಮೃತ್ಯುಮುಪಾನುದೇತ್ ||" ಇತಿ ಸರ್ವಯಜ್ಞಃ" ಇತಿ || "ಹುತವಹಾಕ್ಷ" ರುದ್ರಃ || "ಸಿತಕಾಮಃ" ವಾಸುದೇವಃ | "ವ್ರೀಡಾ" ಲಜ್ಜಾ || "ಬಳಿ" ಸಮೀಪ ||

## ಕನ್ನಡಾರ್ಥ

ಛಾಂದೋಗ್ಯೋಪನಿಷತ್ತಿನ ೩ನೆಯ ಅಧ್ಯಾಯದ ೧೬ನೆಯ ಖಂಡದಲ್ಲಿ ಈ ಪುರುಷಯಜ್ಞವನ್ನು ನಿರೂಪಿಸಲಾಗಿದೆ. "ಪುರುಷನೇ–ಜೀವನೇ ಭಗವತ್ಪೂಜಾರ್ಥವಾದ ಯಜ್ಞನು ಅಂದರೆ "ನಾನು ಭಗವತ್ಪೂಜಾರ್ಥ, ಯಜ್ಞರೂಪನು" ಎಂದು ಪುರುಷನು ಉಪಾಸಿಸಬೇಕು. ಪುರುಷನಿಗೆ ಯಜ್ಞನೆಂಬುದನ್ನು ಹೇಳಿದರೆ ಬೇಕಾಗುವ ಸವನ ಮುಂತಾದವುಗಳನ್ನು ನಿರೂಪಿಸಿರುತ್ತಾರೆ. "ಪುರುಷನ ಮೊದಲಿನ ೨೪ ವರ್ಷದ ಆಯುರ್ಭಾಗವು ಪ್ರಾತಃಸವನವೆನಿಸುತ್ತದೆ." ನಂತರ ೪೪ ವರ್ಷಗಳು ಅಂದರೆ ೨೪–೬೮ ವರ್ಷಗಳ ಅವಧಿಯು ಮಾಧ್ಯಂದಿನ ಸವನವೆನಿಸುತ್ತದೆ. ಅನಂತರದ ೪೮ ವರ್ಷಗಳ ಅವಧಿಯು

ಸಾಯಂಸವನವೆನಿಸುತ್ತದೆ" ಎಂದು ಹೇಳಿ, ಈ ಉಪಾಸನೆಯ ಫಲವನ್ನೂ ಪ್ರಶಂಸಿಸಿರುತ್ತಾರೆ.

ಮಹಿದಾಸನು ಇತರಾದೇವಿಯ ಪುತ್ರನು, ಮಹರ್ಷಿಯು. ಅವನು ಪುರುಷಯಜ್ಞ ಪ್ರಕಾರವನ್ನೂ ವಸ್ವಾದಿಗಳನ್ನೂ ಕುರಿತು ಮಾಡುವ ಪ್ರಾರ್ಥನೆಯನ್ನೂ ತಿಳಿದವನು. ಆದುದರಿಂದ "ಹೇ ರೋಗವೇ! ನೀನು ನನ್ನ ಶರೀರವನ್ನು (ವ್ಯರ್ಥವಾಗಿ) ಏಕೆ ಕ್ಲೇಶಗೊಳಿಸುತ್ತೀ? ಈ ನಿನ್ನ ತಾಪದಿಂದ ನಾನು ಮೃತನಾಗುವದಿಲ್ಲ" ಎಂದು ಹೇಳಿ ತಾನು ೧೧೬ ವರ್ಷ ಜೀವಿಸಿದನು. ಹೀಗೆ ಉಪಾಸನೆಯನ್ನು ತಿಳಿದವನಿಗೂ ೧೧೬ ವರ್ಷಾಯುಷ್ಯದ ಜೀವನ" ವೆಂದು ಫಲವನ್ನೂ ಉಪನಿಷತ್ತು ಹೇಳಿರುತ್ತದೆ.

ಛಾಂದೋಗ್ಯ ಭಾಷ್ಯದಲ್ಲಿ—"ಜೀವನು 'ತಾನು ವಿಷ್ಣುಪೂಜಾರ್ಥವಾದ ಯಜ್ಞರೂಪನು" ಎಂದು ತಿಳಿದು ಉಪಾಸಿಸಬೇಕು. ನಿತ್ಯದಲ್ಲಿಯೂ ಈ ಉಪಾಸನವನ್ನು ಮಾಡುವ ಪುರುಷನಿಗೆ ೧೧೬ ವರ್ಷದ ಆಯುಷ್ಯಾಭಿವೃದ್ಧಿಯಾಗುತ್ತದೆ. ಆದರಲ್ಲಿ "ಪ್ರಾತಃ ಮಾಧ್ಯಂದಿನ-ಸಾಯಂ" ಎಂದು ಸವನಗಳಿರುತ್ತವೆ. ಪೂರ್ವದ ೨೪ ವರ್ಷಗಳು ಪ್ರಾತಃಸವನವೆನಿಸುತ್ತದೆ. ಅದಕ್ಕೆ ದೇವತೆಗಳಾದ ವಸುಗಳನ್ನೂ ಅಲ್ಲಿರುವ ಹರಿಯ ರೂಪ (ಪ್ರದ್ಯುಮ್ನ)ವನ್ನೂ ಪ್ರಾರ್ಥಿಸಿ ಆ ಅವಧಿಯ ಅಪಮೃತ್ಯುವನ್ನು ಕಳೆದುಕೊಳ್ಳುತ್ತಾನೆ (ಕೊಳ್ಳಬೇಕು). ನಡುವಿನ ೪೪ ವರ್ಷಗಳು ಮಾಧ್ಯಂದಿನ ಸವನವೆನಿಸುತ್ತದೆ. ಅದಕ್ಕೆ ದೇವತೆಗಳಾದ ರುದ್ರರನ್ನೂ ತದಂತರ್ಗತವಾದ ಸಂಕರ್ಷಣನನ್ನೂ ಪ್ರಾರ್ಥಿಸಿ ಆ ಕಾಲದ ಅಪಮೃತ್ಯುವನ್ನು ತಪ್ಪಿಸಿಕೊಳ್ಳುತ್ತಾನೆ;-ತಪ್ಪಿಸಿಕೊಳ್ಳಬೇಕು. ಅನಂತರದ ೪೮ ವರ್ಷಗಳು ಸಾಯಂಸವನವೆನಿಸುತ್ತದೆ. ಅದಕ್ಕೆ ದೇವತೆಗಳಾದ ಆದಿತ್ಯರನ್ನೂ ತದಂತರ್ಗತನಾದ ಶ್ರೀ ವಾಸುದೇವನನ್ನೂ ಪ್ರಾರ್ಥಿಸಿ ಆ ಕಾಲದ ಅಪಮೃತ್ಯುವನ್ನು ತಪ್ಪಿಸಿಕೊಳ್ಳುತ್ತಾರೆ; ತಪ್ಪಿಸಿಕೊಳ್ಳಬೇಕು! ಇದು ಸರ್ವಯಜ್ಞ! ಎಂಬುದಾಗಿ ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ.

"ಹುತವಹಾಕ್ಷ"—ರುದ್ರ. ಹುತವಹ-ಅಗ್ನಿ-(ಆಹುತಿಯನ್ನು ನುಂಗುವವ) ಅಗ್ನಿಯೇ ಅಕ್ಷ-ಕಣ್ಣು ಆಗಿರುವನು. ಅಂದರೆ ಕಣ್ಣಿನಲ್ಲಿ ಅಗ್ನಿಯನ್ನಿಟ್ಟು ಕೊಂಡಿರುವವನು ವಾಸುದೇವನು. "ವ್ರೀಡಾ"-ಲಜ್ಜಾ-ನಾಚಿಕೆ. "ಬಳಿ"-ಹತ್ತಿರ ॥ ೩೫-೩೬ ॥

**ಅವತರಣಿಕಾ:** ಹಿಂದಿನ ಎರಡು ಪದ್ಯಗಳಲ್ಲಿ ಹೇಳಿದ ಸವನತ್ರಯ ೧೧೬ ವರ್ಷಗಳಲ್ಲಿ ೧೧೬ ಹರಿರೂಪಗಳನ್ನರಿತು ಭಜಿಸಿದರೆ ಅಕಾಲ ಅಪಮೃತ್ಯು ಪರಿಹಾರವಾಗಿ ಸಂಪೂರ್ಣ ಸಾಧನಮಾಡಿಸಿ ಫಲನೀಯುತ್ತಾನೆಂದು ಉಪದೇಶಿಸುತ್ತಾರೆ.

**ಮೂಲ:**

**ಷೋಡಶೋತ್ತರ ಶತವರುಷದಲಿ ।**
**ಷೋಡಶೋತ್ತರ ಶತ ಸುರೂಪದಿ ।**
**ಕ್ರೀಡಿಸುವ ವಸು ರುದ್ರ ಆದಿತ್ಯರೊಳು ಸತಿಸಹಿತ ॥**
**ವ್ರೀಡವಿಲ್ಲದೆ ಭಜಿಪ ಭಕ್ತರ ।**
**ಪೀಡಿಸುವ ದುರಿತೌಘಗಳ ದೂ ।**
**ರೋಡಿಸುತ ಬಳಿಯಲಿ ಬಿಡದೆ ನೆಲಸಿಪ್ಪ ಭಯಹಾರಿ ॥೩೬॥**

**ಪದ್ಯಾರ್ಥ:** ಷೋಡಶೋತ್ತರ ಶತ ವರುಷದಲಿ = ೧೦೦ ವರ್ಷಕ್ಕೆ ೧೬ ಉತ್ತರವಾಗಿ ಅಂದರೆ ೧೧೬ ವರ್ಷಗಳಲ್ಲಿ, ಷೋಡಶೋತ್ತರ ಶತ ಸುರೂಪದಿ = ೧೧೬ ಚಿನ್ಮಯವಾದ ರೂಪಗಳಿಂದ ಇರುತ್ತಾನೆ.

೨೪ನೇ ವರ್ಷ ಮೊದಲನೇ ಸವನದಲ್ಲಿ ಪ್ರಾರ್ಥಿತ ಮಂತ್ರ—

ಗಾಯತ್ರಿ ಛಂದಸ್ಸಿನಿಂದ ೨೪ ಅಕ್ಷರ ಮಿಳಿತ ೨೪ ರೂಪಗಳು ೪೪ ವರ್ಷ ಮಾಧ್ಯಂದಿನ ಸವನ ೪೪ ತ್ರಿಷ್ಟುಪ್ ಛಂದಸ್ಸು ಅಕ್ಷರದಿಂದ ಮಿಳಿತ ೪೪ ರೂಪಗಳು. ೪೮ ವರ್ಷ ಸಾಯಂಸವನ = ೪೮ ಅಕ್ಷರವುಳ್ಳ ಜಗತಿ ಛಂದಸ್ಸಿನಲ್ಲಿ ಪ್ರತಿ ಅಕ್ಷರ ಪ್ರತಿಪಾದ್ಯ ರೂಪಗಳು ೪೮ ಹೀಗೆ ೨೪+೪೪+೪೮ = ೧೧೬ ರೂಪಗಳನ್ನು ಭಜಿಸಬೇಕು.

೨೪ ವರ್ಷದಲ್ಲಿ ವಸ್ವಂತರ್ಗತ ವಾಯುಪ್ರದ್ಯುಮ್ನನ ೨೪ ರೂಪ.

೪೪ ವರ್ಷದಲ್ಲಿ ರುದ್ರಾಂತರ್ಗತ ವಾಯುಸಂಕರುಣನ ೪೪ ರೂಪ.

೪೮ ವರ್ಷದಲ್ಲಿ ಆದಿತ್ಯಾಂತರ್ಗತ ವಾಸುದೇವಾಂಶ ೪೮ ದಿಂದ ಕೃತಿ ಜಯಾ - ಮಾಯಾದೇವಿಯರೆಂಬುವ ಸತಿಸಹಿತ = ಸತಿಯರಿಂದೊಡಗೂಡಿ, ಕ್ರೀಡಿಸುವನು = ವಿಹಾರ ಮಾಡುವನು, ಎಂದು ತಿಳಿದು ಅನನ್ಯ ಭಕ್ತಿಭಾವದಿಂದ, ವ್ರೀಡವಿಲ್ಲದೇ = ನಾಚಿಕೆ ಬಿಟ್ಟು, ದೇಹದ (ಅಭಿಮಾನ ಬಿಟ್ಟು) ಎಚ್ಚರಿಕೆ ತಪ್ಪಿ ಭಜಿಸುವ ಭಕ್ತರಿಗೆ, ಪೀಡಿಸುವ ದುರಿತೌಘಗಳ ಕಳೆದು = ಪೀಡೆ ಕಷ್ಟಕೊಡುವ ದುರಿತ ರಾಶಿಗಳನ್ನು, ದೂರೋಡಿಸುತ = ಸಮೀಪಕ್ಕೆ ಬಾರದಂತೆ

ದೂರದಲ್ಲಿ ಅಟ್ಟಿ, ಬಳಿಯಲ್ಲಿ ಬಿಡದೆ ನೆಲಸಿಪ್ಪ = ಭಕ್ತರ ಹತ್ತಿರ ಅಂತರಂಗದಿ ಈ ೧೧೬ ರೂಪಗಳಿಂದ ಕಾಯುತ್ತ, ಭಯಹಾರಿ = ಅಪಮೃತ್ಯು ಮುಂತಾದ ಭಯ ಪರಿಹರಿಸುತ್ತಾ ನೆಲೆಸಿ ಇರುವನು.

**ದ್ರೌಪದೀಶಪತಿ ವಿಠಲರು :** ಷೋಡಶೋತ್ತರ.

**ಭಾವಸೂಚನ :** ಷೋಡಶೇತಿ ॥ ವ್ರೀಡಾ = ಲಜ್ಜಾ ॥ ಬಳಿ ಸಮೀಪ ॥ ೩೬ ॥

ಸೂಚನೆ:—ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ೩೬ನೆಯ ಪದ್ಯಾರ್ಥ **೩೪-೩೫** ಪದ್ಯಗಳಲ್ಲಿ ಹೇಳಿದ ಪುರುಷ ಯಜ್ಞೋಪಾಸನೆಯ ಫಲಿಸ್ತುತಿ ರೂಪವಾದುದರಿಂದ ೩೪-೩೫ನೆಯ ಪದ್ಯಗಳನ್ನು ವಿವರಿಸಿರುವುದರಿಂದಲೇ ಗತಾರ್ಥವಾಗಿರುವುದರಿಂದ ೩೬ನೆಯ ಪದ್ಯವನ್ನು ಪ್ರತ್ಯೇಕವಾಗಿ ಪ್ರತೀಕವನ್ನು ಹಿಡಿದು, ವ್ಯಾ.ದಾ.ಸಿ.ಕೌ. ವ್ಯಾಖ್ಯಾನಕಾರರು ವ್ಯಾಖ್ಯಾನಿಸಿರುವುದಿಲ್ಲ. ಆದುದರಿಂದ ಬೇರೆ ಟೀಕಾ ಬರೆದಿಲ್ಲ.

**ಅವತರಣಿಕಾ :** ಇನ್ನು ೧೧೬ ವರುಷಕ್ಕೆ ಆಗುವ ದಿವಸಗಳು. ಅಲ್ಲಿಪ್ಪ ಭಗವದ್ರೂಪಗಳ ಪರಿಗಣನೆ ಮತ್ತು ಹಗಲು ರಾತ್ರಿ ಅಭಿಮಾನಿಗಳಾದ ದೇವತೆಗಳು ಭಾರತೀ ಪ್ರಾಣದೇವರಲ್ಲಿದ್ದು ಭಕ್ತರ ದುರಿತ ನಿವಾರಿಸುತ್ತ, ಹಿಂಕಾರ ನಿಧನಾದಿ ಸಾಮ ಪ್ರತಿಪಾದ್ಯರೂಪಗಳಿಂದ ಪಿತೃಗಳನ್ನೇ ಪೊರೆವನೆಂದು ಛಾಂದೋಗ್ಯ ಶ್ರುತ್ಯರ್ಥ ವಿವರಿಸುತ್ತಾರೆ.

ಮೂಲ :

**ಮೂರಧಿಕ ಎಂಭತ್ತು ಸಹಸ್ರೈ ।**
**ನೂರ ಇಪ್ಪತ್ತೈನಿಪ ರೂಪದಿ ।**
**ತೋರುತಿಪ್ಪದಿವಾನಿಶಾಧಿಪರೊಳಗೆ ನಿತ್ಯದಲಿ ॥**
**ಭಾರತೀ ಪ್ರಾಣರೊಳಗಿದ್ದು ನಿ ।**
**ವಾರಿಸುತ ಭಕ್ತರ (ಭಕುತರ) ದುರಿತ ಹಿಂ ।**
**ಕಾರ ನಿಧನ ಪ್ರಥಮರೂಪದಿ ಪಿತೃಗಳನೆ ಪೊರೆವ ॥ ೩೭ ॥**

**ಪದ್ಯಾರ್ಥ :** ಮೂರಧಿಕ ಎಂಭತ್ತು ಸಹಸ್ರೈನೂರು ಇಪ್ಪತ್ತೈನಿಪ ರೂಪಿ = ೮೩೫೨೦ ರೂಪದಿ ಇದರ ವಿವರ.

| | |
|---|---|
| ೧೧೬ ವರ್ಷಕ್ಕೆ | ೧೧೬ ವರ್ಷಕ್ಕೆ ರಾತ್ರಿ ಅಭಿಮಾನಿ |
| ೩೬೦ ಹಗಲು ಅಭಿಮಾನಿದೇವತಾ | ೩೬೦ ದೇವತಾ ರಯಿ |
| ೪೧೭೬೦ ಪ್ರಾಣಾಂತರ್ಯಾಮಿ. | ೪೧೭೬೦ ಇವೆರಡನ್ನೂ ಕೂಡಿಸಿದರೆ |

ಒಟ್ಟಿಗೆ ೮೩೫೦ ಭಗವದ್ರೂಪಗಳಿಂದ ರಯಿ ಪ್ರಾಣರಲ್ಲಿ ನಿತ್ಯ ಇರುತ್ತಾ-ಭಕ್ತರದುರಿತ ನಿವಾರಿಸುತ್ತ = ಹೀಗೆ, ರಯಿ, ಪ್ರಾಣರಲ್ಲಿರುವ ರೂಪಗಳನ್ನು ಉಪಾಸನೆಮಾಡುವ ಭಕ್ತರ, ಅಪಮೃತ್ಯು ಪಾಪಾದಿಗಳನ್ನು ನಿವಾರಣೆಮಾಡುತ್ತ ಹಿಂಕಾರೋ ಪ್ರದ್ಯುಮ್ನವಸ್ವಾದಿಗಳಲ್ಲಿ-ಪ್ರದ್ಯುಮ್ನ, ನಿಧನೋ = ಸಂಕರ್ಷಣ ರುದ್ರಾದಿಗಳಲ್ಲಿ ಪ್ರಥಮರೂಪೋ ವಾಸುದೇವ ಎಂದು ಛಾಂದೋಗ್ಯದಲ್ಲಿ ಸಾಮ ಪ್ರತಿಪಾದ್ಯ ರೂಪಗಳೇ ಆದಿತ್ಯರಲ್ಲಿ ವಾಸುದೇವ, ಈ ರೂಪತ್ರಯಗಳಿಂದಲೇ ಪಿತಾ = ವಸು, ಪಿತಾಮಹ = ರುದ್ರ, ಪ್ರಪಿತಾಮಹ = ಆದಿತ್ಯರಲ್ಲಿ ಈ ಮೂರು ರೂಪಗಳಿಂದಲೂ ಪಿತೃಗಳನ್ನೇ ಪೊರೆಯುವನು, ಸಂರಕ್ಷಿಸುವನು ಎಂದು ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ಮೂರಧಿಕ.

**ಭಾವಸೂಚನ :** ಮೂರೇತಿ ॥ ಪ್ರಥಮ = ವಾಸುದೇವ ॥ ೩೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೂರು" ಇತಿ ॥ "ತ್ರ್ಯುತ್ತರಾಧಿಕ ಸಾಹಸ್ರ (ಸಪ್ತತ್ಯಾ) ಪಂಚೋತ್ತರ ಶತೇನ ಚ ॥ ದಿವಾನಿಶಾಧಿಪಾಂಸ್ತಸ್ಯ ಹಿಂಕಾರಾದಿಃ ಮರುತ್ಪತೌ" (ತೇಃ) ॥ ಇತಿ ಕೌಸ್ತುಭೇ ॥ "ಪ್ರಥಮಾ"-ತದಾದಯಃ ॥ ೩೭ ॥

## ಕನ್ನಡಾರ್ಥ

ಒಟ್ಟು ಹಗಲು ರಾತ್ರಿಗಳಿಗೆ ಸೇರಿ ೮೩೫೦ ಅಭಿಮಾನಿ ದೇವತೆಗಳು. ಇವುಗಳಿಗೆ ನಿಯಾಮಕನಾಗಿ ಪರಮಾತ್ಮನು "ಹಿಂಕಾರ ಪ್ರದ್ಯುಮ್ನ - ನಿಧನ - ಸಂಕರ್ಷಣ (ಪ್ರಸ್ತಾನ) ಪ್ರಥಮ ವಾಸುದೇವ" ಗಳೆಂಬ ಮೂರು ರೂಪಗಳಿಂದ ಇದ್ದು ಪಿತೃಗಳನ್ನು ರಕ್ಷಿಸುತ್ತಿರುತ್ತಾನೆ, ಎಂದು ಕೌಸ್ತುಭದಲ್ಲಿಯೂ ಹೇಳಲಾಗಿರುತ್ತದೆ. ॥ ೩೭ ॥

**ಅವತರಣಿಕಾ :** ಸರ್ವಗತನಾದ ಹರಿಯು, ಸಕಲ ಜೀವರಲ್ಲಿ ವ್ಯಾಪಾರಮಾಡಿದರೂ, ನಿರ್ಲೇಪನು ಗುಣತ್ರಯಗಳಿಂದ ಬದ್ಧನಾಗುವನಲ್ಲವೆಂದು ದೃಷ್ಟಾಂತಪೂರ್ವಕವಾಗಿ ಉಪದೇಶಿಸುತ್ತಾರೆ.

ಮೂಲ :

**ಬುದ್ಧಿಪೂರ್ವಕ ಉತ್ತಮೋತ್ತಮು ।**
**ಶುದ್ಧಿ ಊರ್ಣಾಂಬರವ ಪಂಕದೊ ।**
**ಳದ್ದಿ ತೆಗೆಯಲು ಲೇಪವಾಗುವದೇ ಪರೀಕ್ಷಿಸಲೂ ॥**
**ಪದ್ಮನಾಭನು ಸರ್ವ ಜೀವರೊ ।**
**ಳಿದ್ದರೇನು ಗುಣತ್ರಯಗಳಿಂ ।**
**ಬದ್ಧನಾಗುವನೇನೊ ನಿತ್ಯಸುಖಾತ್ಮ ಚಿನ್ಮಯನು ॥ ೩೮ ॥**

**ಪದ್ಯಾರ್ಥ :** ಬುದ್ಧಿಪೂರ್ವಕ = ಚನ್ನಾಗಿ ನಿಶ್ಚಿತವಾಗಿ ತಿಳಿದೂ ತಿಳಿದೂ, ಉತ್ತಮೋತ್ತಮ = ಬಹಳೇ ಉತ್ತಮವಾದ ಬೆಲೆಬಾಳುವ, ಶುದ್ಧ ಊರ್ಣಾಂಬರವ = ಯಾವ ಮಿಶ್ರವಿಲ್ಲದೆ ಶುದ್ಧವಾದ ಉಣ್ಣೆಯಿಂದ ನೇಯಿದ ಬೆಲೆಬಾಳುವ ಶಹಲನ್ನು, ಪಂಕದೊಳದ್ದಿ ತೆಗೆಯಲು =ಕೆಸರಿನಲ್ಲಿ ಚನ್ನಾಗಿ ಮುಳುಗಿಸಿ ತೋಯಿಸಿ ಮೇಲೆ ತೆಗೆದರೆ, ಆ ಕೆಸರು ಊರ್ಣಾಂಬರಕ್ಕೆ ಕಿಂಚಿತ್ತಾದರೂ, ಲೇಪವಾಗುವದೆ ? = ಹತ್ತುವದೇನು ? ಹತ್ತುವದಿಲ್ಲ. ಪರೀಕ್ಷಿಸಲು = ಇಂತು ಪರೀಕ್ಷಾಮಾಡಿ ನೋಡಿದ್ದಾರೆ, ನೀವೂ ಪರೀಕ್ಷಿಸಿ ನೋಡಿರಿ. ಇದರಂತೆ ನೀವು ಬುದ್ಧಿಪೂರ್ವಕ ನಿಶ್ಚಿತ ಜ್ಞಾನದಿಂದ ತಿಳಿದು ಭಗವಂತನ ಗುಣಗಳನ್ನು ವಿಚಾರಿಸಿರಿ. ಪದ್ಮನಾಭನು = ಮೂಲರೂಪಿ ಪುರುಷನಾಮುಕ, ನಾಭಿಯೆ ಕಮಲವಾಗಿವುಳ್ಳ ಪದ್ಮನಾಭರೂಪಿ ಹರಿಯು, ಜೀವರೊಳಿದ್ದರೇನು = ಸಕಲ ಜೀವರಲ್ಲಿದ್ದು ಸಕಲಕ್ರಿಯಾ ಮಾಡಿಸಲೇನು, ಗುಣತ್ರಯಗಳಿಂ ಬದ್ಧನಾಗುವನೇನೊ =ಜಡಪ್ರಕೃತ್ಯಾತ್ಮಕ ಸತ್ವ, ರಜ, ತಮೋಗುಣಗಳಿಂದ ಎಂದಿಗಾದರೂ, ಬದ್ಧನಾಗುವನೆ ? ಎಂದಿಗೂ ಬದ್ಧನಾಗುವದಿಲ್ಲ. ಏಕೆಂದರೆ, ಸುಖಾತ್ಮಕ = ಸತ್ - ಚಿದಾನಂದಾತ್ಮಕ ದೇಹವುಳ್ಳವನಾದಕಾರಣ, ಪ್ರಕೃತ್ಯಾದಿ ಗುಣಗಳಿಂದ ಬದ್ಧನಲ್ಲ.

**ದ್ರೌಪದೀಶಪತಿ ವಿಠಲರು :** ಬುದ್ಧಿಪೂರ್ವಕ.

**ಭಾವಸೂಚನ :** ಬುದ್ಧೀತಿ ॥ ಲೇಪವಾಗುವವೆ ? ॥ ವಸ್ತ್ರರೂಪವಲ್ಲ ಅದರಂತೆ ತೋರುವದು ॥ ಪರೀಕ್ಷಿಸಲು ॥ ತೋಯಿಸಲು ॥ “ ತದುಪಚಾರೋ ಹಿಕೃಷ್ಣಾಂಗಾಹವಿುತಿಕರ್ದಮುಲೇಪನೆ ॥ ವಸ್ತ್ರಸ್ಯಯದ್ವದೇವಸ್ಯಾರ್ಥದಿತಿ. ॥ ೩೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸರ್ವಗತಸ್ಯಾಪಿ ಅಲೇಪಂ ದೃಷ್ಟಾಂತೇನ ಆಹ – "ಬುದ್ಧಿಪೂರ್ವಕ" ಇತಿ ॥ "ಊರ್ಣಾಂಬರ" – ಶಹಲು (ಶಾಲು) ॥ ೩೮ ॥

## ಕನ್ನಡಾರ್ಥ

ಪರಮಾತ್ಮನು ಸರ್ವಗತನಾಗಿದ್ದರೂ ಎಲ್ಲ ಕಡೆಗಳಲ್ಲಿ ಇರುತ್ತಿದ್ದರೂ ಆಯಾ ವಸ್ತುಗಳಲ್ಲಿರುವ ದೋಷಗಳು ಪರಮಾತ್ಮನ ರೂಪಗಳಿಗೆ ಸಂಬಂಧಿಸುವದಿಲ್ಲ, ದೋಷಲೇಪವಿಲ್ಲ" ಎಂಬುದನ್ನು ದೃಷ್ಟಾಂತದಿಂದ ತಿಳಿಯಪಡಿಸುತ್ತಾರೆ – "ಬುದ್ಧಿಪೂರ್ವಕ" ಎಂಬ ಪದ್ಯದಿಂದ.

ಪರಿಶುದ್ಧವಾದ ಉತ್ತಮ ಜಾತಿಯ ಉಣ್ಣೆಯ ಶಾಲನ್ನು ಕೆಸರಿನಲ್ಲಿ ಅದ್ದಿದರೂ ಸಹ ಆ ಕೊಳೆಯು ಉಣ್ಣೆಗೆ ಹತ್ತುವದಿಲ್ಲ, ಹೊಲಸಾಗುವದಿಲ್ಲ. ಅದರಂತೆ ಪರಮಾತ್ಮನು ಸರ್ವಜೀವರಲ್ಲಿ ಉಚ್ಚ ನೀಚ ಜಡಗಳಲ್ಲಿ ಇರುತ್ತಿದ್ದರೂ ಆಯಾ ಸತ್ವಾದಿ ಗುಣ ದೋಷಗಳು ಅವನಿಗೆ ಅಂಟಿಕೊಳ್ಳುವದಿಲ್ಲ. ॥ ೩೮ ॥

**ಅವತರಣಿಕಾ :** ಮತ್ತೂ ಶ್ರೀಹರಿಯ ಅನಂತ ಗುಣಮಹಿಮೆ ವರ್ಣಿಸುತ್ತಾರೆ.

ಮೂಲ :

**ಸಕಲ ದೋಷವಿದೂರ ಶಶಿ ಪಾ ।**
**ವಕ ಸಹಸ್ರಾನಂತ ಸೂರ್ಯ ।**
**ಪ್ರ್ರಕರ ಸನ್ನಿಭಗಾತ್ರ ಲಕುಮಿ ಕಳತ್ರ ಸುರಮಿತ್ರ ॥**
**ನಿಖಿನಸಾಂಡದೊಳಿಪ್ಪ ಬ್ರಹ್ಮಾ ।**
**ದ್ಯಖಿಳ ಚೇತನಗಣಕೆ ತಾನೇ ।**
**ಸಖನೆನಿಸಿಕೊಂಡಕುಟಿಲಾತ್ಮಕ ನಿಪ್ಪನವರಂತೆ ॥ ೩೯ ॥**

**ಪದ್ಯಾರ್ಥ :** ಸಕಲ ದೋಷವಿದೂರ = ಎಲ್ಲ ನ್ಯೂನತೆ, ಕೊರತೆ ಪಾಪಾದಿಗಳಿಂದ ದೂರನಾದವನು, ಶ್ರೀಹರಿಯಲ್ಲಿ ಕಿಂಚಿತ ಯಾವ ದೋಷಾದಿಗಳೂ ಇಲ್ಲ. ಶಶಿ = ಚಂದ್ರ, ಪಾವಕ = ಅಗ್ನಿ, ಸೂರ್ಯಾನಂತಕೋಟಿ, ಪ್ರಖರ ಸನ್ನಿಭಗಾತ್ರ = ಸುಪ್ರಕಾಶ ತೇಜಸ್ಸು ಸಮಾನವಾಗಿ ಹೋಲುವ, ಗಾತ್ರ = ದೇಹವುಳ್ಳವ ಚಿನ್ಮಯ ದೇಹಿಯು, ಲಕುಮಿ ಕಳತ್ರ = ಶ್ರೀ ಲಕ್ಷ್ಮೀದೇವಿಯೇ ಪತ್ನಿಯಾಗಿವುಳ್ಳವನು, ಐಶ್ವರ್ಯವಂತನು. ಸುರಮಿತ್ರ =

ದೇವತೆಗಳ ಗೆಳೆಯ–ಸಖ, ವಿಖನಸಾಂಡದೊಳಿಪ್ಪ =ಬ್ರಹ್ಮಾಂಡದಲ್ಲಿ, ಬ್ರಹ್ಮಾದ್ಯಖಿಳ ಚೇತನಗಣಕೆ = ಬ್ರಹ್ಮದೇವರೆ ಮೊದಲುಮಾಡಿ ಎಲ್ಲ ತೃಣಾಂತ ಜೀವರಾಶಿಗೆ, ತಾನೇ ಸಖನೆನಿಸಿಕೊಂಡು = ಸ್ವಯಂ ತಾನು ಗೆಳೆಯನೆನಿಸಿಕೊಂಡು, ಒಂದರಕ್ಷಣ ಬಿಡದಲೆ ಜೀವಾಂತರ್ಯಾಮಿಯಾದ ಮಿತ್ರನು ಎನಿಸಿಕೊಂಡು, ಅಕುಟಿಲಾತ್ಮಕನು = ದೋಷ ಡೊಂಕು ಇತ್ಯಾದಿಗಳಿಲ್ಲದೆ ಇರುವ, ಚಿನ್ಮಯ ದೇಹವುಳ್ಳವ ಅಥವಾ ನಿರ್ದೋಷಿ ವಂಚನಾರಹಿತನೆಂದು ಕರೆಸುವನು, ಇಪ್ಪನವರಂತೆ =ತ್ರಿವಿಧ ಜೀವರಲ್ಲಿ ಅವರವರ ಸ್ವಭಾವದಂತೆ ಇರುತ್ತಾನೆ.

**ದ್ರೌಪದೀಶಪತಿ ವಿಠಲರು :** ಸಕಲ ದೋಷವಿದೂರ.

**ಭಾವಸೂಚನ :** ಸಕಲೇತಿ ॥ ವಿಖನಸ = ಬ್ರಹ್ಮ ॥ ೩೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಸಕಲ " ಇತಿ ॥ " ಪ್ರಕರ " – ಸಮೂಹ । " ಕಳತ್ರ" – ಭಾರ್ಯಾ । "ವಿಖನಸ"–ಬ್ರಹ್ಮಾ ॥ "ಅಕುಟಿಲ"–ಅವಕ್ರ ॥ ೩೯ ॥

## ಕನ್ನಡಾರ್ಥ

"ಸೂರ್ಯಪ್ರಕರ ಸನ್ನಿಭಗಾತ್ರ" ಇಲ್ಲಿ ಪ್ರಕರಶಬ್ದಕ್ಕೆ ಸಮೂಹವೆಂದು ಅರ್ಥ. " ಕಳತ್ರ " – ಹೆಂಡತಿ – ಭಾರ್ಯಾ " ವಿಖನಸ " – ಬ್ರಹ್ಮದೇವನು (ಚತುರ್ಮುಖನು). " ಅಕುಟಿಲ " – ವಕ್ರನಲ್ಲದವನು, ನಿಷ್ಕಪಟ – ಶುದ್ಧ ಸ್ವಭಾವದವನು ॥ ೩೯ ॥

**ಅವತರಣಿಕಾ :** ಶ್ರೀಹರಿಯು ಸಕಲರಲ್ಲಿರುವನೆಂದು ಹೇಳಿದ್ದಾರೆ. ಶ್ರೀಹರಿಯು ಚೇತನರಾಶಿಯಲ್ಲಿ ಯಾವ ಪ್ರಕಾರ ವ್ಯಾಪ್ತನಾಗಿರುವನೆಂಬುವದನ್ನು ಆಕಾಶ ದೃಷ್ಟಾಂತದಿಂದ ಉಪದೇಶಿಸುತ್ತಾರೆ.

ಮೂಲ :

**ದೇಶಭೇದಗಳಲ್ಲಿ ಇಪ್ಪಾ ।**
**ಕಾಶದೋಷಾದಿಯಲಿ ಚೇತನ ।**
**ರಾಶಿಯೊಳು ನೆಲಸಿಪ್ಪ ಅವ್ಯವಧಾನದಲಿನಿರುತ ॥**
**ಶ್ರೀಸಹಿತ ಸರ್ವತ್ರದಿ ನಿರವ ।**
**ಕಾಶ ಕೊಡುವಂದದಲಿ ಕೊಡುತ ನಿ ।**
**ರಾಶೆಯಲಿ ಸರ್ವಾಂತರಾತ್ಮಕ ಶೋಭಿಸುವ ಸುಖದ ॥ ೪೦ ॥**

**ಪದ್ಯಾರ್ಥ :** ದೇಶಭೇದಗಳಲ್ಲಿ ಇಪ್ಪಾಕಾಶದೋಪಾದಿಯಲಿ = ಆಕಾಶವು ಸರ್ವತ್ರ ವ್ಯಾಪ್ತವಾಗಿದೆಯೆಂಬುದು ಸರ್ವರ ಅನುಭವ. ಆದರೆ ಹೇಗೆ ವ್ಯಾಪ್ತವಾಗಿದೆಯೆಂದರೆ ಘಟ, ಮಠ, ಪಟಾಕಾಶವೆಂದರೆ, ಮಡಿಕೆ ಮನೆ ವಸ್ತ್ರಾದಿಗಳಲ್ಲಿ ಬಿಡದೆ ಆಕಾಶವು ಆಯಾ ಪದಾರ್ಥಗಳಿಗೆ ಅವಕಾಶ (ಪೊಳ್ಳು) ಕೊಡುತ್ತ– ಇರುತ್ತ ಇರಲು ಸ್ಥಳಕೊಡುತ್ತ ಆಯಾ ವಸ್ತುಗಳಂತೆ ವ್ಯಾಪಿಸಿಕೊಂಡಿದೆ. ಈ ಮಹಾ ಆಕಾಶದಂತೆ ಶ್ರೀಹರಿಯು, ಚೇತನರಾಶಿಯೊಳಗೆ = ಸಕಲ ಚೇತನರಾಶಿ ಉಸಿರಾಡಿಸುವ ಜೀವರಾಶಿಗಳೊಳು, ನೆಲಸಿಪ್ಪ ಅನ್ವಯಧಾನದಲಿ ನಿರುತ = ಸ್ವಲ್ಪ ಕಾಲವಾದರೂ ಬಿಡದೆ ಒಂದೇ ಸಮನಾಗಿ ಸಂದಿಗೊಂದಿಗಳಲ್ಲಿ ನಿತ್ಯ ಇರುವನು. ತಾನೊಬ್ಬನಲ್ಲ – ಶ್ರೀಸಹಿತ ಸರ್ವತ್ರದಿ = ದೇಶ ಕಾಲದಿಂದ ಸಮಳೆನಿಸುವ ಶ್ರೀ ಲಕ್ಷ್ಮೀದೇವಿಯಿಂದ ಒಡಗೂಡಿ, ನಿರವಕಾಶ ಕೊಡುವಂದದಲಿ ಕೊಡುತ = ಎಲ್ಲ ಸ್ಥಳಗಳಲ್ಲಿ ಆಕಾಶವು, ಇರವು = ಇರುವಿಕೆ, ವಾಸಸ್ಥಾನ ಕೊಡುವಂತೆ, ಕೊಡುತ = ಪರಮಾತ್ಮ ನಿರವಕಾಶನಾಗಿ ಇರುತ್ತ, ನಿರಾಶೆಯಿಂದಲಿ = ಅಪೇಕ್ಷಾ ರಹಿತನಾಗಿ ಜೀವರಿಂದ ತಾನು ಪ್ರತ್ಯುಪಕಾರ ಪ್ರತಿಫಲ ಅಪೇಕ್ಷಿಸದೇ, ಬಹಿರದಲ್ಲಿ ಅಲ್ಲದೇ–ಸರ್ವಾಂತರಾತ್ಮಕ = ಜೀವರ ಅಂತರ್ಯಾಮಿಯಾಗಿಯೂ, ಶೋಭಿಸುವ. ಸುಖ ದ = ಜೀವರಿಗೆ ಸುಖ = ಆನಂದವನ್ನು ಕೊಡುತ್ತ ಸುಪ್ರಕಾಶಮಾನನಾಗಿಯೂ ಮನೋಹರನಾಗಿಯೂ ಇರುವನು.

**ದ್ರೌಪದೀಶಪತಿ ವಿಠಲರು :** ದೇಶ ಭೇದಗಳಲ್ಲಿ.

**ಭಾವಸೂಚನ :** ದೇಶೇತಿ ||೪೦||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೇಶ" ಇತಿ || "ನೆಲಸಿಪ್ಪ" – ಇರುವ || "ನಿರವ" – ಅವಕಾಶ || "ಸುಖದಃ" – ಓಂ* || *ಆದುತ್ತ್ರೇರಂ ವರಾಯುಮನ್ಯವೇ ಭುವನ ಇಂದ್ರ

---

* ಸೂಚನೆ:—"ಸುಖದ" – ಓಂ* ಅಶ್ವೋ ಅಶ್ವಾಯತೇ ಭವ ಸಮಂದ ಸ್ವಾಪೃಂಥಸೋ ರಾಧಸೇ ತನ್ವಾ ಮಹೇ ನಸ್ತೋತಾರಂ ನಿದೇ ಕರಃ ಇಮಾಃ ಉತ್ವಾ || ಓಂ* || ಹೀಗೆ ಬೃಹತೀ ಸಹಸ್ರ ಪುಸ್ತಕದಲ್ಲಿ ಬೇರೆ ಮಂತ್ರವನ್ನು ಪರಿಗ್ರಹಿಸಿದ್ದಾರೆ. ಪಾಠಾಂತರವಿರಬಹುದು,

ಶಂಹೃದೇ ॥ ಆತ್ವಶತ್ರ ವಾಗಹಿ ನ್ಯತ್ಥಾನಿ ಚ ಹೂಯಸೇ ಉಪಮಃ ॥ *ಓಂ ॥ ಸುಖದತ್ವಾತ್ ತಥೋಕ್ತಃ ॥ ೪೦ ॥

## ಕನ್ನಡಾರ್ಥ

ಆಕಾಶದಂತೆ ಸರ್ವಗತನಾದ ವಾಸುದೇವನ ಮಹಿಮೆಯನ್ನು ಬಣ್ಣಿಸುತ್ತಾರೆ—"ದೇಶಭೇದ" ಎಂಬ ಪದ್ಯದಿಂದ.

"ನೆಲಸಿಪ್ಪ"-ಇರುವ ॥ "ನಿರವ"-ಅವಕಾಶ, ಎಡೆ ॥ "ಸುಖದ"-ಸುಖವನ್ನು ಕೊಡುವವನು" ಎಂದು ಬೃಹತೀಮಂತ್ರಾನುಗುಣವಾದ ಅರ್ಥ ॥ ೪೦ ॥

**ಅವತರಣಿಕಾ :** ಶ್ರೀಹರಿಯ ವ್ಯಾಪ್ತತೆಯು ಜೀವರ ಒಳಹೊರಗೆ ಹೇಗೆ ಯಾವ ಪ್ರಕಾರ ಇರುವದೆಂಬುದನ್ನು ಶ್ರೀಹರಿಯ ಗುಣೋತ್ಕರ್ಷಪೂರ್ವಕ ವರ್ಣಿಸುತ್ತಾರೆ.

**ಮೂಲ :**

**ಶ್ರೀವಿರಂಚಾದ್ಯಮರಗಣ ಸಂ ।**
**ಸೇವಿತಾಂಘ್ರಿ ಸರೋಜ ಈ ಜಡ ।**
**ಜೀವರಾಶಿಗಳೊಳಹೊರಗೆ ನೆಲಸಿದ್ದು ನಿತ್ಯದಲಿ ॥**
**ಸಾವಕಾಶನುಯೆನಿಸಿ ತನ್ನ ಕ ।**
**ಳೇವರದೊಳಿಂಬಿಟ್ಟು ಸಲಹುವ ।**
**ದೇವ ದೇವಕಿರಮಣ ದಾನವಹರಣ ಜಿತಮರಣ ॥ ೪೧ ॥**

**ಪದ್ಯಾರ್ಥ :** ಶ್ರೀ = ಲಕ್ಷ್ಮೀದೇವಿಗೆ ಬಿಂಬನಾದ ಹರಿಯು ಶ್ರೀಶಬ್ದ ವಾಚ್ಯ ವಿಜ್ಞಾನಮಯನೆಂದು ಕರೆಸುತ್ತಾನೆ, ವಿಜ್ಞಾನಮಯರೂಪದಿಂದ ಸೇವೆಗೊಳ್ಳುವ, ಮುಖ್ಯನಾದರೂ, ಶ್ರೀ ಲಕ್ಷ್ಮೀ, ವಿರಂಚಾದ್ಯಮರಗಣ = ಬ್ರಹ್ಮಾದಿ ದೇವತೆಗಳ ಸಮೂಹದಿಂದ, ಸಂಸೇವಿತಾಂಘ್ರಿ ಸರೋಜ = ಸಮೀಚೀನವಾಗಿ ಸದ್ಭಕ್ತಿಯಿಂದ ಬ್ರಹ್ಮಾದಿಗಳು ಪಾದಕ್ಕೆ ಪೂಜಾಮಾಡಿದುದನ್ನು ಅರ್ಪಿಸಲು, ಪ್ರೀತನಾಗುವ ಪಾದಕಮಲಗಳುಳ್ಳವನು, ಈ ಜಡ - ಜೀವರಾಶಿಗಳೊಳಹೊರಗೆ ನೆಲಸಿದ್ದು = ಪ್ರಕೃತ್ಯಾತ್ಮಕ ಶುದ್ಧವಾದ ಜಡ ಪದಾರ್ಥಗಳಿಗೆ ಅಸ್ತಿತ್ವಕೊಡುವನಾಗಿ = ಜಡಗಳ ಒಳಗೆ ಬಿಂಬನಾಗಿ, ಹೊರಗೆ ಆಯಾ ಜಡ ವಸ್ತುಗಳು, ಪಂಚಭೂತಾತ್ಮಕವಾದವುಗಳ ಉಪಚಯಕ್ಕೆ ಕಾರಣನಾಗಿ ಪರಿಣಾಮಹೊಂದುವಲ್ಲಿಯೂ ತಾನಿದ್ದು, ಮತ್ತು ಸ್ಥಾವರ ಜೀವರ ಅಂತರ್ಯಾಮಿಯಾಗಿ ಇದ್ದು ತೃಣಾದಿ ಜೀವರ ಉತ್ಪತ್ತಿಕಾರಣನಾಗಿ ಸಸ್ಯಾದಿಗಳಿಗೆ

ಅವಕಾಶದನಾಗಿಯೂ ಚೇತನ ಜೀವರಾಶಿಯಲ್ಲಿ ಅಂತರ್ಯಾಮಿಯಾಗಿಯೂ, ಸೃಷ್ಟ್ಯಾರಂಭಿಸಿ ಲಯಪರಿಯಂತರ ಎಲ್ಲ ದೇಹ ಎಲ್ಲ ಕಾಲಗಳಲ್ಲಿ ಹೊರಗೂ ತಾನಿದ್ದು ಎಲ್ಲ ಅವಸ್ಥೆಗಳಲ್ಲಿಯೂ, ನಿತ್ಯದಲ್ಲಿ ನಿರಂತರಬಿಡದೆ ನೆಲಸಿದ್ದು = ಇರುವನಾಗಿ, ಸಾವಕಾಶನು ಎನಿಸಿ = ಜಡ ಉಪಚಯಕ್ಕೆ ಮತ್ತು ಜೀವರ ಉತ್ಪತ್ತಿ ದೇಹಾದಿಗಳ ಕೊಡುವದಕ್ಕೆ ಆಯಾ ಸಂದರ್ಭಗಳಲ್ಲಿ ಎಡೆಕೊಡುವ ನೆಂದು ಎನಿಸುತ್ತ, ಕೊನೆಗೆ ತನ್ನ ಕಳೇವರದೊಳಿಂಬಿಟ್ಟು ಸಲಹುವ = ತನ್ನ ಕಳೇವರ = ದೇಹದಲ್ಲಿ ಸಕಲ ತಾತ್ವಿಕ ಜನರನ್ನು ಆಯಾ ಸ್ಥಳಗಳಲ್ಲಿ, ಇಂಬು ಇರಲಿಕ್ಕೆ ಸ್ಥಾನವನ್ನು ಕೊಟ್ಟು, ಇತರ ಪ್ರಾಣಿಗಳಿಗೆ ಯೋಗ್ಯವಾದ ಸ್ಥಳಗಳ ಲ್ಲಿಟ್ಟು, ಸಲಹುವ = ರಕ್ಷಣೆಮಾಡುವ, ದೇವ = ಕ್ರೀಡಾದಿ ಗುಣ ವಿಶಿಷ್ಟ ನಾದವ, ದೇವಕಿರಮಣ = ದೇವತೆಗಳಿಗೆ ಸುಖವನ್ನು ಕೊಡುವಳಾದ ಕಾರಣ ಶ್ರೀ ಲಕ್ಷ್ಮೀದೇವಿಗೆ ದೇವಕಿಯೆಂತಲೂ ಈ ಲಕ್ಷ್ಮೀದೇವಿಗೆ ಪತಿಯಾದುದ ರಿಂದ ದೇವಕ ಎಂತಲೂ ಹೇಳಿದ್ದಾರೆ. ದಾನವ ಹರಣ = ದೈತ್ಯ ದಾನವಾದಿ ಗಳನ್ನು ಸಂಹರಿಸಿ, ಅಂಧಂತಮಾದಿಗಳಲ್ಲಿಡುವನೂ, ಜಿತಮರಣ = ತಾನು ಸ್ವತಃ ದೇಹ ವಿಯೋಗಾದಿ ಮರಣಶೂನ್ಯನು, ಮರಣ ಮೃತ್ಯುದೇವತೆಯನ್ನು ಜಿತಮಾಡಿದವನು ಗೆಲ್ದವನು, ದುರ್ಗಾರಮಣ ನರಸಿಂಹನೇ ಎಂದು ಸ್ತೋತ್ರ ಗೈದಿದ್ದಾರೆ.

**ದ್ರೌಪದೀಶಪತಿ ವಿಠಲರು :** ಶ್ರೀವಿರಂಚಾದ್ಯಮರಗಣ.

**ಭಾವಸೂಚನ :** ಶ್ರೀತಿ ||

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀವಿರಂಚಿ" ಇತಿ || "ಸಾವಕಾಶ" — ಅವಕಾಶಯುತಾ || "ದೇವಕೀ" – ರಮಾ || ೪೧ ||

### ಕನ್ನಡಾರ್ಥ

ಎಲ್ಲರಿಗೂ ಅವಕಾಶಕೊಡುವದರಿಂದ "ಸಾವಕಾಶ-ಅವಕಾಶಯುಕ್ತನು" ಎಂದು ಪರಮಾತ್ಮನಿಗೆ ಕರೆಯುತ್ತಾರೆ. "ದೇವಕೀರಮಣ" ಎಂಬಲ್ಲಿ "ದೇವಕೀ" ಶಬ್ದಕ್ಕೆ "ರಮಾ" – "ಲಕ್ಷ್ಮೀ" ಎಂದು ಅರ್ಥ ಹೇಳಿದರೆ ಸರಿಹೋಗುತ್ತದೆ. ದೇವಾನಾಂ ಕಂ ಸುಖಂ (ಸುಖಯಿತುಂ) ಶೀಲಂ ಅಸ್ಯಾಃ ಇತಿ ದೇವಕೀ – ದೇವತೆಗಳಿಗೆ ಸುಖವನ್ನು ಕೊಡುವ ಸ್ವಭಾವದವ

ಳಾದುದರಿಂದ ದೇವಕೀ ಎಂದು ವ್ಯುತ್ಪತ್ತಿ. "ದೇವಕ" – ದೇವತೆಗಳಿಗೆ ಸುಖವನ್ನೀಯುವ ಸ್ವಭಾವದ ಪರಮಾತ್ಮ– ಆತನ ಪತ್ನೀ (ಸ. ಅಸ್ಯಾಅಸ್ತಿ ಇತಿ) "ದೇವಕೀ" – ಲಕ್ಷ್ಮೀ ಎಂದೂ ವ್ಯುತ್ಪತ್ತಿ ಆಗಬಹುದು.

ಮೂಲ :

**ಮಾಸವೊಂದಕೆ ಪ್ರತಿದಿವಸದಲಿ ।**
**ಶ್ವಾಸಗಳು ಅಹವಷ್ಟ ಚತ್ವಾ ।**
**ರಿಂಶತಿ ಸಹಸ್ರಾಧಿಕಾರು ಸುಲಕ್ಷ ಸಂಖ್ಯೆಯಲಿ ॥**
**ಹಂಸನಾಮಕ ಹರಿಯ ಷೋಡಶ ।**
**ಈಶತಾಬ್ದದಿ ಭಜಿಸೆ ವೊಲಿವ ದ ।**
**ಯಾಸಮುದ್ರ ಕುಚೇಲಗೊಲಿದಂದದಲಿ ದಿನದಿನದಿ ॥ ೪೨ ॥**

**ಪದ್ಯಾರ್ಥ :** ಪ್ರತಿ ದಿವಸದಲಿ ಶ್ವಾಸಗಳು =ಪ್ರತಿದಿವಸದಲ್ಲಿ ೨೧೬೦೦ ಶ್ವಾಸಜಪ ಹಂಸ ಜಪಗಳನ್ನು ಸಮೀರದೇವನು ಮಾಡುವನು. ಈ ಲೆಕ್ಕದಿಂದ ಒಂದು ಮಾಸ ೩೦ ದಿನಕ್ಕೆ ೨೧೬೦೦ × ೩೦ ರಿಂದ ಗುಣಿಸಿದರೆ, ಅಹವಷ್ಟ ಚತ್ವಾರಿಂಶ ಸಹಸ್ರಾಧಿಕಾರು. ಲಕ್ಷ ಸಂಖ್ಯೆಯಲಿ = ಅಹವು ಅಗುವವು, ಅಷ್ಟಚತ್ವಾರಿಂಶ ಸಾಹಸ್ರ, ನಾಲ್ವತ್ತೆಂಟುಸಾವಿರ (೪೮೦೦೦)ಕ್ಕೆ ಅಧಿಕ = ಹೆಚ್ಚಾದ ಆರುಲಕ್ಷ ಉಳ್ಳ ಸಂಖ್ಯಾ ಎಂದರೆ ೬೪೮೦೦೦ ಆರುಲಕ್ಷ ನಾಲ್ವತ್ತೆಂಟು ಸಹಸ್ರ, ಹಂಸನಾಮಕ ಹರಿಯ = ಶ್ರೀ ಹಂಸನಾಮಕನಾದ ಪರಮಾತ್ಮನ, ಶ್ವಾಸರೂಪ ಹಂಸ ಜಪಗಳನ್ನು ಪ್ರಾಣದೇವರು, ಜೀವನಿಂದ ಮಾಡಿಸುತ್ತಾನೆಂಬ ಅನುಸಂಧಾನದಿಂದ ತಿಳಿದು, ಈ ಸಂಖ್ಯೆಯಲಿ ಈ ಲೆಕ್ಕದಿಂದ ಷೋಡಶಶತಾಬ್ದದಿ ಭಜಿಸೆ = ನೂರಾ ಹದಿನಾರು ವರ್ಷಗಳ ಪರಿಯಂತವಾಗಿ ಹಂಸಮಂತ್ರ ಜಪಸಂಖ್ಯಾವನ್ನರಿತು, ಮಾಡಿ ಮಾಡಿಸಿದ ಪ್ರಾಣಾಂತರ್ಯಾಮಿ ಹಂಸನಾಮಕ ಹರಿಗೆ ಪೂಜಾವೆಂದು ತಿಳಿದು ದಿನದಿನದಿ ಪೂಜಿಸಲು, ದಯಾಸಮುದ್ರ = ಕರುಣಾಕ್ಕೆ ನಿಧಿಯಾದ ಕರುಣಾಳು, ಕುಚೇಲಗೊಲಿದಂದದಲಿ ವೊಲಿವ; ಕು = ಕುತ್ಸಿತವಾದ ಹರಕು ಬಟ್ಟೆಯುಳ್ಳ ಸುದಾಮನು, ಬಡವನು ಒಪ್ಪಿಡಿ ಅವಲಕ್ಕಿಕೊಡಲು ಅನಂತ ಮಡಿ ಐಶ್ವರ್ಯಾದಿಗಳನ್ನು ಕೊಟ್ಟು ರಕ್ಷಿಸುವಂತೆ, ಈ ಹಂಸಮಂತ್ರ ಜಪ ಸುಲಭೋಪಾಯ ತಿಳಿದು ಹರಿಗೆ ಅರ್ಪಿಸಬೇಕು.

**ದ್ರೌಪದೀಶಪತಿ ವಿಶಲರು :** ಮಾಸವೊಂದಕೆ.

**ಭಾವಸೂಚನ :** ಸಂಕ್ಷೇಪೇಣಶ್ವಾಸ ಸಂಖ್ಯಾಮಾಹ॥ ಮಾಸ ಒಂದಕ್ಕೇತಿ ॥ ಆಹವು = ಆಗೋವು ॥ ೪೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಾಸ" ಇತಿ ॥ "ಹಂಸರೂಪೌ" ಇತ್ಯುಕ್ತೇಃ ॥

## ಕನ್ನಡಾರ್ಥ

ಮುಖ್ಯ ಪ್ರಾಣನು ಹಂಸ - ಶ್ವಾಸಮಂತ್ರವನ್ನು ಜಪಿಸುವ ಮಹಿಮೆಯನ್ನು ಬಣ್ಣಿಸುತ್ತಾರೆ "ಮಾಸ" ಎಂಬ ಪದ್ಯದಿಂದ. ॥ ೪೨ ॥

**ಅವತರಣಿಕಾ :** ಕಾಲನಾಮಕ ಹರಿಯ ಹಂಸಮಂತ್ರಗಳನ್ನು ಸ್ಥೂಲದೇಹದಲ್ಲಿ ಒಂದು ವರ್ಷಕ್ಕೆ ವಾಯುದೇವರು ಹಂಸಮಂತ್ರ ಜಪವನ್ನು ಮಾಡುವ ಕಾರ್ಯ ವಿಸ್ತರಿಸುತ್ತಾರೆ.




ಮೂಲ :

**ಸ್ಥೂಲ ದೇಹದೊಳಿದ್ದು ವರುಷಕೆ ।**
**ಏಳಧಿಕ ಎಪ್ಪತ್ತು ಲಕ್ಷದ ।**
**ಮೇಲೆ ಎಪ್ಪತ್ತಾರು ಸಾವಿರ ಶ್ವಾಸಜಪಗಳನು ॥**
**ಘಾ(ಗಾ)ಳಿದೇವನು ಕರುಣದಲಿ ಈ ।**
**ರೇಳು ಲೋಕದೊಳುಳ್ಳ ಚೇತನ ।**
**ಜಾಲದೊಳು ಮಾಡುವನು ತ್ರಿಜಗದ್ವ್ಯಾಪ್ತ ಪರಮಾಪ್ತ ॥೪೩॥**

**ಪದ್ಯಾರ್ಥ :** ಸ್ಥೂಲದೇಹದೊಳಿದ್ದು =ಕಣ್ಣಿಗೆ ಕಾಣುವ ಈ ಪಾರ್ಥಿವ ಶರೀರದಲ್ಲಿ, ಗಾಳಿದೇವನು ಇದ್ದು ವಾಯು ಶ್ರೀ ಪ್ರಾಣದೇವರಿದ್ದು, ವರುಷಕ್ಕೆ = ೧೨ ತಿಂಗಳ ಸಂಖ್ಯಾತ್ಮಕ ಒಂದು ವತ್ಸರ (೩೬೦ ದಿವಸ) ಕ್ಕೆ ೭೭,೭೬೦೦೦ ಶ್ವಾಸಜಪಗಳನು = ತ್ರಿವಿಧ ಜೀವರಲ್ಲಿ ಹಂಸಮಂತ್ರ ರೂಪವಾದ ಜಪಗಳನ್ನು ಶ್ರೀಹರಿಯ ಕರುಣದಲಿ, ಚೇತನ ಜಾಲದೊಳು = ಜೀವಿಗಳ ಸಮೂಹದಲ್ಲಿ, ಗಾಳಿದೇವನು = ವಾಯುದೇವರು ಮಾಡುವರು. ಶ್ರೀಹರಿಯ ಅಧೀನತೆಯಿಂದ, ತ್ರಿಜಗದ್ವ್ಯಾಪ್ತ =ಮೂರು ಲೋಕದಲ್ಲಿ ವ್ಯಾಪ್ತನಾಗಿ, ಪರಮಾಪ್ತ = ಪರಮ ಬಾಂಧವ, ಆಪ್ತಸಖನಾಗಿ ಹರಿಯೂ, ಹರಿಯ ಕರುಣಾಪೂರ್ಣನಾದ ವಾಯು ಪರಮಾಪ್ತರು.

**ದ್ರೌಪದೀಶಪತಿ ವಿಠಲರು:** ಸ್ಥೂಲ ದೇಹದೊಳಿದ್ದು.

**ಭಾವಸೂಚನ:** ಸ್ಥೂಲೇತಿ. ಘಾಳಿ = ವಾಯು ॥ ೪೩ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಗಣಯತಿ—"ಸ್ಥೂಲ" ಇತಿ ॥ "ಗಾಳಿ" – ವಾಯುಃ ॥ ೪೩ ॥

**ಕನ್ನಡಾರ್ಥ**

ವಾಯುದೇವನು ಸ್ಥೂಲದೇಹದಲ್ಲಿದ್ದು ಮಾಡುವ ಶ್ವಾಸಮಂತ್ರ ಜಪಗಳ ಒಟ್ಟು ಸಂಖ್ಯೆಯನ್ನು ಗಣಿಸಿ ತಿಳಿಸುತ್ತಾರೆ — "ಸ್ಥೂಲದೇಹದಿ" ಎಂಬ ಪದ್ಯದಿಂದ.

"ಗಾಳಿದೇವ" = ವಾಯುದೇವನು ॥ ೪೩ ॥

**ಅವತರಣಿಕಾ:** ಶ್ರೀವಾಯುದೇವರು ಶ್ರೀಹರಿಯಾಜ್ಞೆಯಿಂದ ಚೇತನರ ಸ್ಥೂಲ ದೇಹಗಳಲ್ಲದೆ ಈರೆರಡು ೨×೨ = ೪ ದೇಹಗಳಲ್ಲಿದ್ದು ಶ್ವಾಸರೂಪ ಹಂಸಮಂತ್ರ ಗಳನ್ನು ಒಂದು ದಿವಸಕ್ಕೆ ಎಷ್ಟು ಜಪ-ಹಂಸೋಪಾಸನೆ ಕ್ರಮ ವಿವರಿಸುತ್ತಾರೆ.

ಮೂಲ:

**ಈರೆರಡು ದೇಹಗಳೊಳಗಿದ್ದು ಸ ।**
**ಮೀರದೇವನು ಶ್ವಾಸ ಜಪ ನಾ ।**
**ನೂರಧಿಕವಾಗಿಪ್ಪ ಯೆಂಭತ್ತಾರು ಸಾಹಸ್ರ ॥**
**ತಾರಚಿಸುವನು ದಿವಸವೊಂದಕೆ ।**
**ಮೂರುವಿಧ ಜೀವರೊಳಗಿದ್ದು ಖ ।**
**ರಾರಿಕರುಣಾ ಬಲವದೆಂತುಟೊ ಪವನರಾಯನೊಳು ॥ ೪೪ ॥**

**ಪದ್ಯಾರ್ಥ:** ಈರೆರಡು = ಈರು ಎರಡು × ಎರಡು = ನಾಲ್ಕು ದೇಹ, ೧ ಸ್ಥೂಲ, ೨ ಅನಿರುದ್ಧ, ೩ ಲಿಂಗ, ೪ ಸ್ವರೂಪ ಹೀಗೆ ಜೀವರುಗಳ ನಾಲ್ಕು ದೇಹಗಳಲ್ಲಿದ್ದು, ಸಮೀರ ದೇವನು = ಸಮೀರ, ಸಮ್ಯಕ ಈರಯತಿ ಪ್ರೇರಯ ತೀತಿ ಸಮೀರ, ಉತ್ತಮ ಪ್ರಕಾರದಿಂದ ಶರೀರಾವಯವಾದಿಗಳಿಗೆ ಪ್ರೇರಣಾ ಮಾಡುವ, ವಾಯುದೇವನು, ಶ್ವಾಸಜಪ = ಶ್ವಾಸರೂಪವಾದ ಹಂಸಮಂತ್ರ ಜಪಗಳನ್ನು ನಾನೂರಧಿಕವಾಗಿಪ್ಪ ಎಂಭತ್ತಾರು ಸಹಸ್ರ = ೮೬,೪೦೦ ಎಂಭ ತ್ತಾರು ಸಾವಿರದಾ ನಾಲ್ಕುನೂರು ಅಂದರೆ ಸ್ಥೂಲದೇಹ ಒಂದರಲ್ಲಿ ೨೧,೬೦೦ ಜಪದಂತೆ ನಾಲ್ಕು ದೇಹದಿ ೪ ರಿಂದ ಗುಣಿಸಿದರೆ ೮೬,೪೦೦ ಜಪ, ಹಂಸರೂಪಿ

ಪರಮಾತ್ಮನ ರೂಪಗುಣ-ಕ್ರಿಯೋಪಾಸನೆಯನ್ನು ಸಮೀರನು ಮಾಡುವನೆಂಬ ಜ್ಞಾನದಿಂದ ಮನುಜಾದಿಗಳಿಗೆ ಯೋಗ್ಯ ಫಲ ದೊರಕುವುದು (ಐತರೇಯ). ತಾ ರಚಿಸುವನು ದಿವಸವೊಂದಕೆ = ತಾನು, ವಾಯುದೇವರು ಒಂದು ದಿವಸದಲ್ಲಿ ಇಷ್ಟು ೮೬,೪೦೦ ಶ್ವಾಸ ಜಪಗಳನ್ನು ಒಂದು ದಿವಸದಲ್ಲಿ ಮಾಡಿ, ಮೂರು ಜೀವರೊಳಿದ್ದು ಮಾಡುವನು = ತ್ರಿವಿಧ ಜೀವರಲ್ಲಿ ಅವರ ಯೋಗ್ಯತೆಯಂತೆ (ಭೂ, ಅಭೂ, ಭೂರ್ಭುವ) ಇತ್ಯಾದಿಗಳ ವಿವರ (೧ನೇ ಸಂಧಿ ಆರು ಮೂರೆರಡೊಂದು ಪದ್ಯದಲ್ಲಿ ವಿವರಿಸಿದೆ) ಪವನರಾಯನೊಳು ಖರಾರಿ ಕರುಣಾಬಲವದೆಂತುಟೊ = ಖರನಾಮಕ ದೈತ್ಯನನ್ನು ಸಂಹರಿಸಿದ ಶ್ರೀಹರಿಯ ಕರುಣಾ ಬಲ = ಶಕ್ತಿ ತೇಜಸ್ಸು ಅನುಗ್ರಹವು ಎಷ್ಟಿರುವದೆಂದು ಪೇಳಲು ಸಾಧ್ಯವಿಲ್ಲ. ಮುಂದೆ ೧೩ನೆಯ ಸಂಧಿಯಲ್ಲಿ ಸವಿಸ್ತರ ಕಾಲನಾಮಕ ಹರಿಯ ಉಪಾಸನೆ ಹೇಳಿದರೂ ಇಲ್ಲಿ ನಾಡೀ ಪ್ರಕರಣದಲ್ಲಿಯೂ, ಪ್ರಸಂಗಾನುಸಾರ ದೇಶಕಾಲ ಪ್ರವರ್ತಕ ಭಗವದ್ರೂಪ ಉಪಾಸನೆ ಸಂಕ್ಷಿಪ್ತದಿಂದ ತೋರಿದ್ದಾರೆ.

**ದ್ರೌಪದೀಶಪತಿ ವಿಠಲರು :** ಈರೆರಡು ದೇಹದೊಳಿದ್ದು.

**ಭಾವಸೂಚನ :** ಈರೆರಡೇತಿ ॥ ೪೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ವಾಸಜಪಸ್ತು ದೇಹಚತುಷ್ಟಯೇಽಪಿ ವಾಯುಜಃ ಇತಿ ಭಾವೇನ ಸಂಖ್ಯಾಂ ಆಹ–"ಈರೆರಡು" ಇತಿ ॥ "ಖರಃ" – ದೈತ್ಯಃ ॥ "ಎಂತುಟೋ" – ಎಷ್ಟು ಅದೋ ?

## ಕನ್ನಡಾರ್ಥ

"ಮುಖ್ಯ ಪ್ರಾಣರು ನಾಲ್ಕೂ ದೇಹಗಳಲ್ಲಿ ಶ್ವಾಸಜಪಗಳನ್ನು ಮಾಡುತ್ತಿರುವರು" ಎಂಬ ಅಭಿಪ್ರಾಯದಿಂದ ಸಂಖ್ಯೆಯನ್ನು ಹೇಳುತ್ತಾರೆ— "ಈರೆರಡು" ಎಂಬ ಪದ್ಯದಿಂದ.

ಹೀಗೆ ನಾಲ್ಕು ದೇಹಗಳಲ್ಲಿ ಸ್ವರೂಪ ಲಿಂಗ ಅನಿರುದ್ಧ ಸ್ಥೂಲ ಶರೀರಗಳಲ್ಲಿ ೮೬೪೦೦ ಶ್ವಾಸಜಪವನ್ನು ಒಂದು ದಿವಸಕ್ಕೆ ಮಾಡುವ ಮುಖ್ಯ ಪ್ರಾಣದೇವರ ಮಹಿಮೆ ಎಷ್ಟು ಎಂಬುದನ್ನು ಹೇಳಲಸಾಧ್ಯ ಎಂಬುದು ಈ ಪದ್ಯದ ಭಾವ ॥ ೪೪ ॥

**ಅವತರಣಿಕಾ:** ಸ್ವಾಹಂಕಾರ ಖಂಡನ ಪೂರ್ವಕ, ನಾಡೀ ಪ್ರಕರಣ ಸಂಧಿಯಲ್ಲಿ ವಿವರಿಸಿದ ಸಮಸ್ತ ರಹಸ್ಯೋಪಾಸನೆಗಳನ್ನೂ ಬಿಂಬನಾದ ಶ್ರೀ ಜಗನ್ನಾಥ ವಿಠಲಗೆ ಅರ್ಪಿಸಿ, ಈ ಸಂಧಿಗೆ ಮಂಗಳ ಹೇಳುತ್ತಾರೆ.

**ಮೂಲ :**

**ಶ್ರೀಧವ ಜಗನ್ನಾಥವಿಠ್ಠಲ ।**
**ತಾದಯುದಿ ವದನದೊಳು ನುಡಿದೋ ।**
**ಪಾದಿಯಲಿ ನಾನುಡಿದೆ ನಲ್ಲದೆ ಕೇಳಿ ಬುಧಜನರು ॥**
**ಸಾಧುಲಿಂಗ ಪ್ರದರ್ಶಕರು ನಿ ।**
**ಷೇಧಗೈಸಿದರೇನಹುದು ಎನ್ನಪ ।**
**ರಾಧವೇನಿದರೊಳಗೆ ಪೇಳ್ವುದು ತಿಳಿದುಕೋವಿದರು ॥ ೪೫ ॥**

ಅಂತು ಸಂಧಿ ೧೨ಕ್ಕೆ ಪದ ೩೭೬ಕ್ಕೆ ನಾಡಿ ಪ್ರಕರಣ ಸಂಧಿ ಸಮಾಪ್ತ.
ಮಂಗಳಮಹ - ಶ್ರೀಗುರುಮಧ್ವೇಶ - ಶ್ರೀಕೃಷ್ಣಾರ್ಪಣಮಸ್ತು.

**ಪದ್ಯಾರ್ಥ :** ಶ್ರೀಧವ = ಲಕ್ಷ್ಮೀಪತಿಯಾದ, ಜಗನ್ನಾಥ = ಜಗತ್ತಿಗೆ ಸ್ವಾಮಿಯಾದ, ವಿಠ್ಠಲ = ವಿಠಲನಾಮಕ ಹರಿಯು ಅಜ್ಞ ಜನರ ಅಜ್ಞಾನ ದೂರೋಡಿಸಿ–ಸುಜ್ಞಾನ ತಂದುಕೊಡುವ ವಿಠ್ಠಲನಾಮಕ ಹರಿಯು, ತಾ ದಯುದಿ = ತಾನೆ ಪರಮಾನುಗ್ರಹಿಸಿ ಕರುಣಾಮಾಡಿ, ವದನದೊಳು ನುಡಿದೋ ಪಾದಿಯಲಿ ನುಡಿದೆನಲ್ಲದೆ ಕೇಳಿ ಬುಧ ಜನರು = ಎನ್ನ ಮುಖದಲ್ಲಿ ನಿಂತು ತತ್ವಾಭಿಮಾನಿಗಳಿಂದ ತಾನು ನುಡಿದು ನುಡಿಸಿದಂತೆ, ನಾನು ನುಡಿದೆ–ಹೇಳಿದೆ ನಲ್ಲದೆ ನನ್ನ ಸ್ವಬುದ್ಧಿಯಲ್ಲ ಎನಗೆ ಪ್ರೇರಕರು ತತ್ವಾಭಿಮಾನಿಗಳಂತರ್ಗತ ವಾಯುಗತ ಹರಿಯೇ ಎಂಬ ಎಂಥ ನಿಶ್ಚಯ ಜ್ಞಾನದಾಸರದು. ( ದಾಸರೆ, ಇಂಥ ನಿಶ್ಚಿತ ತತ್ವ ಹರಿವಾಯುಗಳ ವ್ಯಾಪಾರ ಶಕ್ತಿಯು ಇದನ್ನು ಕಾಲಕಾಲಕ್ಕೆ ಪಾಲಿಸಿರಿ.) ಕೇಳಿ ಬುಧಜನರು = ಜ್ಞಾನಿಗಳಾದವರು ಕೇಳಿರಿ. ಸಾಧುಲಿಂಗ ಪ್ರದರ್ಶಕರು ನಿಷೇಧಗೈಸಿದರೇನು = ಸಜ್ಜನರಂತೆ ವೇಷಧಾರಣಮಾಡಿದ, ಪಂಡಿತಂಮನ್ಯ ಮಾನರಾದ ಗೋಮುಖ ವ್ಯಾಘ್ರದಂತೆ ತೋರ್ಪ ಅಸಜ್ಜನರು ನಿಂದಿಸಿದರೇನಾಗುವದು ? ಹರಿವಾಯುಗಳು ನಿಂತು ನುಡಿಸಿದಂತೆ, ನುಡಿದ ಮೇಲೆ ಎನ್ನಪರಾಧವೇನಿದರೊಳಗೆ = ನನ್ನ ತಪ್ಪೇನು ಇರುವದು ? ಕೋವಿದರು = ಜ್ಞಾನಿಗಳು, ತಿಳಿದು ಪೇಳುವದು = ಚನ್ನಾಗಿ ವಿಚಾರಿಸಿ ಹೇಳುವದೆಂದು

ಬಹು ನಮ್ರಾಭಾವದಿಂದ ಸಜ್ಜನರಿಗೆ ಪ್ರಾರ್ಥಿಸಿದ ದಾಸರೇ ಸದಾ ಸುಜ್ಞಾನ ವಿತ್ತು ಕಾಪಾಡಿರಿ. ಈ ಮುಂದನಲ್ಲಿ ನಿಂತು ಪದ್ಯಾರ್ಥ ಬರೆದು, – ದಾಸರು ಬರೆಸಿದ್ದು ದಾಸವರ್ಯರ ಅಂತರ್ಗತ ಮಧ್ವೇಶನ ಅಡಿದಾವರೆಗಳಿಗೆ ಅರ್ಪಿತ ವಾಗಿ, ಸುಜ್ಞಾನವೀಯಲಿ. ಶ್ರೀಮಧ್ವೇಶ ಶ್ರೀಕೃಷ್ಣಾರ್ಪಿತವು.

ದ್ರೌಪದೀಶಪತಿ **ವಿಠಲರು :** ಶ್ರೀಧವ ಜಗನ್ನಾಥ ವಿಠಲ – ೧೨ನೇ ಸಂಧಿ ಸಮಾಪ್ತ, ಶ್ರೀಮಧ್ವೇಶಾರ್ಪಣಮಸ್ತು.

**ಭಾವಸೂಚನ :** ಶ್ರೀಧವೇತಿ ॥ ೪೫ ॥ ಓಂ ಇತಿ ಶ್ರೀಮದ್ದಾಸ ವರ್ಯಾಯ ಹರಿಕಥಾಮೃತಸಾರ ಭಾವಸೂಚನೆ ನಾಡೀಸಂಧಿ ಸಮಾಪ್ತಃ ॥ ೧೨ ॥ ಶ್ರೀಮಧ್ವೇಶಾರ್ಪಿತವು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ – "ಶ್ರೀಧವ" ಇತಿ ॥ "ಸಾಧು" ಇತಿ ದಾಂಭಿಕಾಃ ॥ "ಅಹುದು" – ಆಗುವದು. "ಪೇಳ್ವದು" – ಹೇಳ್ವದು. ॥ ೪೫ ॥

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ನಾಡೀ ಪ್ರಕ್ರಿಯಾಸಂಧಿಃ ಸಂಪೂರ್ಣಃ ॥ ೧೨ ॥

## ಕನ್ನಡಾರ್ಥ

ಸಂಧಿಯನ್ನು ಮುಗಿಸುತ್ತಾರೆ–"ಶ್ರೀಧವ" ಎಂಬ ಪದ್ಯದಿಂದ "ಸಾಧು ಲಿಂಗ ಪ್ರದರ್ಶಕರು" ಎಂದರೆ ಸಾಧುಗಳ ಚಿಹ್ನೆಗಳನ್ನು ಮಾತ್ರ ತೋರಿಸು ವವರು ತೋರಿಕೆಯಲ್ಲಿ ಸಾಧುಗಳಂತೆ ಇರುವವರು ಅಂದರೆ ಸಾಧುಗಳ ವೇಷ ದಲ್ಲಿರುವವರು ದಾಂಭಿಕರು ಎಂದು ಅರ್ಥ. "ಅಹುದು" – ಆಗುವದು. "ಪೇಳ್ವದು"–ಹೇಳುವದು. ॥ ೪೫ ॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ
ನಾಡೀ ಪ್ರಕ್ರಿಯಾಸಂಧಿಯ ಕನ್ನಡ ಅನುವಾದವು ಮುಗಿದುದು.

ಶ್ರೀಮಧ್ವೇಶ ಕೃಷ್ಣಾರ್ಪಿತವಾಗಲಿ.

ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ

ಶ್ರೀ ಗುರುರಾಜೋ ವಿಜಯತೇ

# ೧೩ ನಾಮಸ್ಮರಣ ಸಂಧಿಯ ಸಾರ

## ನಿತ್ಯವಾದ ಓಂಕಾರ ಅಜಾದಿ ೫೧ ವರ್ಣನಾಮ ವೇದವಿಚಾರ.

" ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋಮಮ ||
ಅಕಾರಾದ್ಯತಿ ಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ — ಎಂದು ಶ್ರೀ ಸರ್ವಜ್ಞರ ತಂತ್ರಸಾರ ಸಂಗ್ರಹವೇ ಈ ನಾಮಸ್ಮರಣ ಸಂಧಿ ಉಪಕ್ರಮಕ್ಕೆ ಮೂಲಾಧಾರವಾಗಿದೆ. ನಾಮವೆಂದರೇನು ? ಭಗವಂತನು ಅನಾದಿ ನಿತ್ಯನು. ಅಂತೇ ಆತನ ಅನಂತ ನಾಮಗಳೂ ನಿತ್ಯ. ಎಲ್ಲಕ್ಕೂ ಮೂಲ ಪ್ರಣವ ಓಂಕಾರ ಮಂತ್ರ. ಗುಣಪೂರ್ಣನಾದ ಪರಮಾತ್ಮನೇ ಓಂಕಾರ ನಾಮವುಳ್ಳವನು.

ಈ ತಂತ್ರಸಾರ ವಿವರವನ್ನು ಶ್ರೀ ಶ್ರೀವರದೇಂದ್ರತೀರ್ಥ ಶ್ರೀಪಾದಂಗಳವರು – ಶ್ರೀಜಗನ್ನಾಥದಾಸಾರ್ಯರ ವಿದ್ಯಾಗುರುಗಳು, ಕನ್ನಡದಲ್ಲಿ ರಚಿಸಿದ್ದಾರೆ. ಬ್ರಹ್ಮದೇವರ ಪ್ರಶ್ನೆಗೆ ಶ್ರೀಹರಿಯು ಹೇಳುತ್ತಾನೆ. (ಸೃಷ್ಟಿ ಪ್ರ|| ಸುಳಾದಿ, ಪುಟ ೧೮ರಲ್ಲಿ ಪೂರ್ತಿ ಈ ಕನ್ನಡ ತಂತ್ರಸಾರ ನೋಡಿರಿ.)

" ವನಜಸಂಭವ ಕೇಳು ನಾನೆ ಸರ್ವೋತ್ತಮ | ಎನಗನಂತಾನಂತ ಮಂಗಳಗುಣ | ಪ್ರಣವವಾಚ್ಯನು ನಾನೆ ಅಷ್ಟವರ್ಣೋಪೇತ ಪ್ರಣವ ವಿಚಾರವನು ಪೇಳ್ವೆ ನಿನಗೆ || ಎಂದು ಹೇಳುತ್ತ

## ಪ್ರಣವ ವಿಚಾರ

ಪ್ರಣವ ಓಂಕಾರದಲ್ಲಿ, ಅಕಾರ, ಉಕಾರ, ಮಕಾರ, ನಾದಬಿಂದು, ಘೋಷಶಾಂತ ಅತಿಶಾಂತಗಳು ಈ ದಿವ್ಯ ವರ್ಣಕ್ಕೆ ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮನೆಂದು ಎಂಟು ನನ್ನ ರೂಪಗಳು. ವೇದಾದಿಯಲ್ಲಿ ಇರುತಿಹನೆಂದು ಪರಮ ಋಷಿಗಳು ಈ ಮಹಾಮಂತ್ರ ಜಪಿಸಿ ಎನ್ನ ಪುರವೈದಿದರು. ಹೀಗೆ ಅಕಾರವರ್ಣ ವಿಶ್ವನಿಂದ ೧೬ ಅಚ್ಚುಗಳು ; ಅಕಾರದಿಂದ ಅಃ ವರೆಗೆ ಅಜ ಆನಂದಾದಿ ೧೬ ರೂಪಗಳು.

ವಿಶ್ವದಿಂದ ಪ್ರಾದುರ್ಭೂತ ಉ, ಮ, ನಾದ, ಬಿಂದು, ಘೋಷಗಳಿಂದ ಕ್ರಮವಾಗಿ, ಕ, ಚ, ಟ, ತ, ಪ, ಈ ವರ್ಗಗಳಿಗೆ ೫ ರಂತೆ ೨೫ ವರ್ಣಗಳು. ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ ಮೂರ್ತಿಗಳಿಂದ ಪ್ರಾದುರ್ಭಾವ.

ಶಾಂತದಿಂದ ಯ, ರ, ಲ, ವ. ಅತಿ ಶಾಂತದಿಂದ ಶ, ಷ, ಸ, ಹ, ಳ. ಪರಮಾತ್ಮನಿಂದ ನಾಲ್ಕು, ಜ್ಞಾನಾತ್ಮನಿಂದ ೫ ಹೀಗೆ ೯ ವರ್ಣಗಳು ಅಂತು ೫೦ ವರ್ಣಗಳು ಕ, ಷ, ಮಿಳಿತವಾದ ಕ್ಷ ಲಕ್ಷ್ಮೀನರಸಿಂಹ. ಕ್ಷ ಕೂಡಿಸಿ ೫೧ ವರ್ಣಗಳು. ಇವುಗಳಿಂದೇ ವ್ಯಾಹೃತಿ, ಅಷ್ಟಾಕ್ಷರ, ದ್ವಾದಶಾಕ್ಷರ, ಗಾಯತ್ರೀಮಂತ್ರ. ಗಾಯತ್ರಿಯಿಂದ ಪುರುಷಸೂಕ್ತ. ಪುರುಷಸೂಕ್ತದಿಂದ ಸರ್ವವೇದಗಳು ವ್ಯಂಜಕ.

"ವೈದಿಕಾಸ್ಸರ್ವಶಬ್ದಾಶ್ಚ ತಸ್ಮಾತ್ ಸರ್ವಾಭಿದೋಮ್ಯಹಂ ॥
"ಪಂಚಾಶದ್ವರ್ಣಭಿನ್ನಾಶ್ಚ ಸರ್ವಶಬ್ದಾ ಅತೋಽಪಿತ ॥ ೧೬ ॥

(ತಂತ್ರಸಾರ)

"**ಓಂಕಾರೇಣ ಸರ್ವವಾಕ್ ಸಂತೃಣ್ಣೇತ್ಯಾದಿ ಛಾಂದೋಗ್ಯ ಶ್ರುತೌ ॥** ಛಾಂದೋಗ್ಯ ಶ್ರುತಿಯಲ್ಲಿ ಓಂಕಾರದಿಂದ ಸರ್ವರೂಪ ವರ್ಣಗಳ ವ್ಯಂಜಕವೆಂದು ಹೇಳುತ್ತದೆ. ಕಾರಣ "ತಸ್ಮಾದಹಂ ಸರ್ವಾಭಿದಃ ಸರ್ವಶಬ್ದಜಾತಂ **ಅಭಿಧಾ** ನಾಮಧೇಯಂ ಸತಥೋಕ್ತ ಅಸ್ಮಿ ॥ ಸರ್ವಶಬ್ದ, ಸರ್ವನಾಮಗಳು ಸರ್ವ ರೂಪಗಳು ನಾನೇ (ಪರಮಾತ್ಮ) ಎಂದು ಶ್ರುತಿ ಹೇಳುತ್ತದೆ. ಈ ಪ್ರಕರಣವು ಸರ್ವರಿಂದ ಮಾನ್ಯವಾದುದು. **ಪ್ರಕಾಶಸಂಹಿತೆಯಲ್ಲಿ** "ದೇಶತೋ ಕಾಲತೋ ವ್ಯಾಪ್ತಾ ವರ್ಣಾಃ ಸರ್ವೇಽಪಿ ಶಾಶ್ವತಾಃ ॥ ವ್ಯಾಪ್ತೇಶ್ವರ ಮತಿಸ್ಥಾನಾಂಶ್ರುತೀನಾಂ ತಾದೃಶೋಲಯಃ ॥ ಸೃಷ್ಟಾಲಯೇನ ಸಾವಿಷ್ಣೋ ರಾಜ್ಞಯಾಕುಂಠಿತಾಭವೇತ್ ॥ ತಾದೃಶೋಹಿಲಯಸ್ತೇಷಾಂ ನಸ್ವರೂಪಲಯಃಸ್ಮೃತಃ ॥ **ವರ್ಣೇಷು ಸರ್ವಭಾಷಾಭಿವ್ಯಂಜಕಾಶಕ್ತಿರಿಷ್ಯತೇ** ॥ ಸ್ವಯಂ ಶ್ರೀವಿಷ್ಣು ಭಾವಜ್ಞಾ ವೇದೈಸ್ತುಷ್ಟಾವವೇದವಿತ್ ॥ ತೇವೇದಾಋಗ್ಯಜುಃ ಸಾಮಾಥರ್ವಣಾ ಶ್ರೀಹರೇರ್ವಶಾಃ ॥ ಚತ್ವಾರೋಽಪಿ ಪೃಥಕ್ ಜಾತ್ಯಾನಂತ ದೋಷವಿವರ್ಜಿತಾಃ ॥ ಉದಾತ್ತಾದಿ ಸ್ವರಾರ್ಥಾದಿ ವರ್ಣಕ್ರಮ ಸಮಾಗಮೈಃ ॥ ವಿಸರ್ಗಬಿಂದು ಪೂರ್ವೋರು ಶಬ್ದಯೋಗ್ಯ ಗುಣೋಚ್ಚಯೈಃ ॥ ಅನಂತ ಕಲ್ಪಮಾರಭ್ಯ ಈಷತ್ ವ್ಯತ್ಯಾಸವರ್ಜಿತಾಃ ॥

ಸಾಂಶಾ ಸಮಸ್ತದೇಶೇಷು ವ್ಯಾಪ್ತಾಶುದ್ಧ ಜಡಾಸ್ಸದಾ ॥ ಗುಣಾಖ್ಯಾನಪರಾ ವಿಷ್ಣೋಃ ಶಬ್ದದೋಷ ವಿವರ್ಜಿತಾಃ ॥ ಜ್ಞಾತ ಜ್ಞಾಪಕತಾ ತೇಷು ವಿಪರೀತಾರ್ಥವತ್‌ಕೃತಾ ॥ ಅಸ್ಪಷ್ಟತ್ವಾದಯಸ್ತೇಷು ವಾದದೋಷಾನಸತ್ಯಲಂ ॥ ಧ್ವನಿರೂಪಾಸ್ಸೃಷ್ಟಿಕಾಲೇ ವಾಕ್‌ಸ್ಥಾವಾಗ್‌ದೇವತಾವಶಾ ॥ ಲಯೇ ಲಕ್ಷ್ಮೀವಶಾಃ ಸೃಷ್ಟೌ ಬ್ರಹ್ಮಾದ್ಯೈರಭಿಮಾನಿಭಿಃ ॥ ರಕ್ಷಿತಾ ಪ್ರಳಯೇ ಸೃಷ್ಟಾವೇಕರೂಪಾ ಭವಂತಿಹಿ ॥ ಅನಂತಾನಂತ ಸಂಖ್ಯಾತಾಃ ವಿಷ್ಣೋರ್ಜ್ಞಾನೇಚ ಸಾಧಕಾಃ ॥ ಸರ್ವದೇಶಗತಾನಂತಾಃ ಕಂಠಸ್ಥಾಸ್ತಸ್ಯಶಾರ್ಜಪಾ ॥ ಕಂಠೆನೋದ್ಗಿಯಮಾನಾಸ್ತೇ ಜೀವಾನಾಂ ಯೋಗ್ಯತಾವಶಾತ್ ॥ ತತ್ತತ್ ಸ್ವರೂಪ ವಿಜ್ಞಾನ **ವ್ಯಂಜಕಾ ಶ್ರೀಹರೀಚ್ಛಯಾ** ॥ ವೃತ್ತಿಜ್ಞಾನೋತ್ಪಾದಶೌಂಡಾ ಅಯೋಗ್ಯಾನಾಮಬೋಧಕಾಃ ॥ ಶಬ್ದರೂಪಾಸಾಕ್ಷಿಯುಕ್ತಮನಃ ಶ್ರೋತ್ರೈಕಗೋಚರಾಃ ॥ ಸರ್ವಶಬ್ದಾತ್ಮಕಹರೇಃ ಬಿಂಬಸ್ಯ ಪ್ರತಿಬಿಂಬಕಾಃ ॥ ಶಬ್ದರೂಪಾ ವೇದಗತಾದುರ್ಗಾಸಾನಂತರೂಪಿಣೀ ॥ ಪುರುಷೋಬೋಧಿತಜ್ಞಾನಾತುಷ್ಟಾವ ಪುರುಷಂಪರಂ ॥ ಅನಂತಾತ್ಮಾನಂತಶಕ್ತಿ ರೋಂಕಾರಾದಿಶ್ರುತಿವ್ರಜಾನ್ ॥ ನಿತ್ಯಾನ್‌ಸವ್ಯಂಜಯಂಸ್ತೇಷಾಂ ॥ ಸೃಷ್ಟ್ಯೋ ದುರ್ಗಾಮುಪಾದಿಶತ್ ॥ ಪ್ರಳಯಸ್ಯಷ್ಟಮೇಭಾಗೇ ವೇದಂ ಸೃಷ್ಟ್ವರ್ಜಗತ್ಪತೇ ॥ ಓಂಕಾರ ಪ್ರಥಮವ್‌ವ್ಯಕ್ತೋಬಭೂವ ಭಗವನ್ಮಯಃ ॥ ಅ, ಉ, ಮ ನಾದಬಿಂದೂಚ ಘೋಷಾ ಶಾಂತಾತಿ ಶಾಂತಕಾಃ ॥ ಇತ್ಯಾದಿ (ಪ್ರಕಾಶ ಸಂಹಿತಾ ಅಧ್ಯಾಯ ೧ ಕೊನೆಯಭಾಗ. ಈ ಪುಸ್ತಕ ಅಚ್ಚಾಗಿಲ್ಲ) ಮುಂದೆ ೫೧ ವರ್ಣಗಳು ಇತ್ಯಾದಿ ಸೃಷ್ಟಿತಂತ್ರ ಸಾರದಲ್ಲಿ ಹೇಳಿದಂತೆ ಮೊದಲಿಗೆ ವಿವರಿಸಲಾಗಿದೆ.

ಈ ಪ್ರಕಾಶ ಸಂಹಿತೆ ಪ್ರಮಾಣಗಳ ಸಾರಾಂಶವೇನೆಂದರೆ:—ದೇಶಕಾಲಗಳಲ್ಲಿ ವ್ಯಾಪ್ತವಾದ ಸರ್ವವರ್ಣಗಳೂ ಶಾಶ್ವತವಾದವು. ಸರ್ವ ವೇದಗಳೂ ಲಯಕಾಲದಲ್ಲಿ ವಿಷ್ಣುವಿನ ಆಜ್ಞೆಯಿಂದ ಕುಂಠಿತವಾಗುತ್ತವೆ. ಹೊರ್ತಾಗಿ ನಿತ್ಯವಾದ ವರ್ಣಗಳಿಗೂ ವೇದಗಳಿಗೂ ಸ್ವರೂಪದಿಂದ ನಾಶವಿಲ್ಲ. ನಿತ್ಯವಾದ ವೇದಗಳು ಲಯಕಾಲದಲ್ಲಿ ಕೇವಲ ವಿಷ್ಣುವಿನ ಆಧೀನವಾಗಿ "ಸರ್ವೇ ವೇದಾಃ ಯತ್ಪದಮಾಮನಂತಿ" ಎಂಬುವಂತೆ ಶ್ರೀವಿಷ್ಣುವನ್ನೇ ಸ್ತೋತ್ರಗೈಯುತ್ತಲಿರುವವು. ಲಯ ಕಾಲದಲ್ಲಿಯೂ ಭಗವದಧೀನಳಾದ ಲಕ್ಷ್ಮಿಯು-ಈ ವೇದಗಳಿಗೆ ಅಭಿಮಾನಿ, ಆಕೆಯ ವಶದಲ್ಲಿರುತ್ತವೆ. ಸೃಷ್ಟಿಕಾಲದಲ್ಲಿ ಬ್ರಹ್ಮಾದಿಗಳು

ಅಭಿಮಾನಿಗಳು. ಲಯ ಕಾಲದಲ್ಲಿ ಸರ್ವ ವೇದಗಳು ಏಕರೂಪವಾಗಿ, ಅಂದರೆ ಬಹಿರ್ ವ್ಯಂಜಕತ್ವ ಇಲ್ಲದೇ ಅನಂತಾನಂತ ಸಂಖ್ಯಾಕ ವೇದಗಳು ವಿಷ್ಣು ಜ್ಞಾನದಲ್ಲೇ ಸಾಧಕವಾಗಿರುತ್ತವೆ. ಸೃಷ್ಟಿಕಾಲದಲ್ಲಿ ಅವುಗಳ ಸ್ವರೂಪವಿಜ್ಞಾನ ಅಭಿವ್ಯಂಜಕ ಶಕ್ತಿಯನ್ನು ಶ್ರೀಹರಿಯು ತನ್ನ ಇಚ್ಛೆಯಿಂದ, ಪ್ರಳಯದ ಅಷ್ಟಮ ಭಾಗದಲ್ಲಿ ಎಂದರೆ ರಾತ್ರಿಯ ಕೊನೇಭಾಗದಲ್ಲಿ ವೇದಾಭಿಮಾನಿ ದುರ್ಗಾದೇವಿಗೆ ಪ್ರೇರಣಮಾಡಿ, ಸಕಲ ಶ್ರುತಿಗಳ ಸ್ತೋತ್ರರೂಪದಿಂದ ಅಭಿವ್ಯಕ್ತಿ ಶಕ್ತಿಕೊಡುತ್ತಾನೆ. ಅಲ್ಲದೇ ಸರ್ವ ವರ್ಣಗಳಿಗೂ, **ಸರ್ವಭಾಷೆಗಳಿಗೂ ಸೃಷ್ಟಿಕಾಲದಲ್ಲಿ ಅಭಿವ್ಯಂಜಕ ಶಕ್ತಿ** ಕೊಡುತ್ತಾನೆಂದು ಇದೆ. (ಹೀಗಿರಲು ಆ ಭಾಷಾ ಮೊದಲು ಈ ಭಾಷೆ ಮೊದಲೆಂಬುವ ವಿಚಾರಕ್ಕೆ ಆಸ್ಪದವೇ ಇಲ್ಲ.) ಸರ್ವಶಬ್ದಗಳಿಗೂ ಶ್ರೀಹರಿಯು ಬಿಂಬ, ಸಕಲ ವರ್ಣಗಳೂ ಶಬ್ದಗಳೂ ಪ್ರತಿಬಿಂಬಗಳು. ಓಂಕಾರ ಮೊದಲಿಗೆ ಶ್ರೀ ದುರ್ಗೆಯಿಂದ ವ್ಯಕ್ತಪಡಿಸಿ, ಓಂಕಾರಗತ ಅಷ್ಟವರ್ಣಗಳಿಂದಲೇ ಅಜಾದಿ ೫೧ ವರ್ಣಗಳ ಉತ್ಪತ್ತಿ. ಈ ಎಲ್ಲ ವರ್ಣಗಳೂ ಪರಮಾತ್ಮನ ನಾಮವೇ! ಇದೇ **ವೇದಭಾಗ ಮುಖ್ಯ ಸಾರಾಂಶ! ಜ್ಞಾನದಿಂದ ತಿಳಿದು ಹರಿಯ ನಾಮಸ್ಮರಣಗೈವುದೆಂದು ಸಂಧಿಯ ಪೀಠಿಕೆ.**

ಇದರ ವಿವರ ಮತ್ತು ಹೆಚ್ಚಿಗೆ ಬ್ರಹ್ಮಕುಲಾಭಿಮಾನಿಗಳಾದ, ಶ್ರೀ ಭೃಗು ಋಷಿಗಳ ಅಂಶರಾದ ಶ್ರೀ ವಿಜಯದಾಸಾರ್ಯರೂ ಈ ಜಡ ವರ್ಣಗಳಕ್ರಮ ವಿವರ, ಅಲ್ಲಲ್ಲಿಪ್ಪ ಭಗವದ್ರೂಪಗಳಾವವು, ಎಷ್ಟು ರೂಪಗಳಿಂದ ಹರಿ ಇರುವ, ಅಲ್ಲಿ ಆವರ್ಣಗಳ ಒಂದೊಂದು ವರ್ಣಕ್ಕೆ ಎಷ್ಟು ಜನ ಅಭಿಮಾನಿ ದೇವತೆಗಳು, **ನಾಮೋಚ್ಚಾರಣ ಬಗೆ** ಹೇಗೆಂಬುದನ್ನು ಸೃಷ್ಟಿ ಪ್ರಕರಣ ಸುಳಾದಿ ೬, ೭, ೮ ರಲ್ಲಿ ಬಹು ಚೆನ್ನಾಗಿ ವಿವರಿಸಿದ್ದಾರೆ. ಈ ಜ್ಞಾನಿಗಳ ಅನುಗ್ರಹದಿಂದಲೇ ಹರಿನಾಮಸ್ಮರಣೆಗೈಯ್ಯಲು ಜ್ಞಾನ ಪುಟ್ಟುವದು. ಕಾರಣ ಈ ಸುಳಾದಿಗಳ ಅರ್ಥ ಬುಧರಿಂದ ತಿಳಿವುದು. ಇಲ್ಲಿ ಪ್ರಸಂಗಾನುಸರಿಸಿ ಕೆಲವು ಮಾತ್ರ ಉದಾಹರಿಸುತ್ತದೆ. ಸುಳಾದೀ ೬,ತ್ರಿವಿಡಿತಾಳ–ಪುಟ ೨೫, ೧೬ ಸ್ವರ ೩೫ ವ್ಯಂಜನ ವರ್ಣಗಳು, ಮಿಳಿತವಾಗುವ ಕ್ರಮ ಹೇಳುತ್ತಾರೆ. "ಯಾವತ್ತು ಸ್ವರವರಣ ಒಂದೊಂದು ಬಗೆಯಿಂದ। ಆವಾವ ಸ್ವರದಲ್ಲಿ ಕೂಡಿಸಲು। ಕವರ್ಗಾದಿಗೆ ದೀರ್ಘ–ಹ್ರಸ್ವ–ಕನ್ನೆ–ಮಾತ್ರ। ಪೋವತ್ತು ಬಿಂದು ವಿಸರ್ಗದಿಂದ। ಮೂವತ್ತೈದಕೆ ಕೇಳು ಒಂದಕೆ **ದ್ವಿಷಟ್ಪದಿಯು**। ಈ ವಿಧ ತಿಳಿವಿಂಶತಿ ಚತುರಶತ।

(೩೫ × ೧೨ = ೪೨೦) (ಚತುರಶತ ನಾಲ್ಕುನೂರಾ, ವಿಂಶತಿ ಇಪ್ಪತ್ತು) ದೇವ ದೇವೇಶ ನಮ್ಮ ವಿಜಯ ವಿಠ್ಠಲರೇಯ। ಜೀವೋತ್ತಮನಿಂದ ಪೂಜೆಗೊಂಬನಿಲ್ಲಿ ॥೩॥ ಈ ಸ್ವರ ವ್ಯಂಜನಗಳಲ್ಲಿ ಇಪ್ಪ ರೂಪಗಳು (೪೨೦) ಇದರೊಳಗೆ ಒಂದೊಂದರಲ್ಲಿ ವ್ಯಂಜನ ವರ್ಣಗಳು ಮಿಳಿತವಾದ ಬಗೆ ಅಲ್ಲಿ ಭಗವದ್ರೂಪ. ಮುಂದೆ ಅಟ್ಟತಾಳದಲ್ಲಿ.

"ಅ ಓಂಕಾರಬೀಜ ಎಂಟರಿಂದಲಿ ಸತ್ಯ। ಈ ವರ್ತಮಾನಕ್ಕೆ ಅಭಿವ್ಯಕ್ತಿಯಾಯಿತು। ಅ ವರ್ಗ ಮಿಗಿಲಾಗಿ ಎಂಟು ವರ್ಗಗಳೈದು ಕ್ಷ ಒಂದು ಕೂಡಿಸೆ ಏಕ ಪಂಚಾಶತಿ। ಸೂವರ್ನವಾಗಿ ವೊಪ್ಪುತಿವೆವ್ಯಾಪ್ತಿ। ಕಾವುತಾವಿಲೆ ಉಂಟು ಸ್ವರ ಸಂಯೋಗವಾಗೆ। ಮೂವತ್ತು ಹತ್ತು ಮೇಲೆ ನೂರು ಇಪ್ಪತ್ತು। (೩೦ × ೧೦ = ೩೦೦ + ೧೨೦ = ೪೨೦ ವರ್ಣಗಳು ತದ್ಗತ ರೂಪಗಳಾದವು) ಈ ವರ್ಣಗಳೆಲ್ಲ ಗುಣಿತಮಾಡಲಾಗಿ। ಭಾವಿಸುವದು ವರ್ಣೋವರಣ ಸಂಯೋಗ। (ವರ್ಣೋವರ್ಣ = ವರ್ಣ = ವರ್ಗೀಯ = ೨೫, ಅವರಣ = ಅವರ್ಗೀಯ ೧೦ ಹೀಗೆ ೩೫)। ಕ ವೊಂದಕೆ ನೋಡು ಮೂವತ್ತೈದರಂತೆ। ಈ ವಿಚಾರ ಮಾತ್ರಕೆ ಎಣಿಸಲು ಹದಿನಾಲ್ಕು। ಸಾವಿರದೇಳುನೂರು ಲೆಖ್ಖವನ್ನು। (೪೨೦ × ೩೫ = ೧೪೭೦೦) ಶ್ರೀವಲ್ಲಭ ನಮ್ಮ ವಿಜಯವಿಠಲರೇಯ। ಕಾವುತಲಿಪ್ಪನು ಈಪರಿ ತಿಳಿದವನ ॥೪॥

ಇನ್ನು ಮುಂದೆ **ಆದಿತಾಳ**ದಲ್ಲಿ ಅನಂತ ವರ್ಣಗಳಾಗುವ ಬಗೆ, ಆವರ್ಣಗಳಲ್ಲಿ, ೧೬ ಜನ ಅಭಿಮಾನಿ ದೇವತೆಗಳ ಸಹ ಹರಿ ಇಪ್ಪುದೆಂಬುದನ್ನೂ, ಸಕಲ ವೇದಪುರಾಣ ವಿವರ ತಿಳಿಸುತ್ತಾರೆ.

**ಆದಿತಾಳ**

ಇದರೊಳು ಇನ್ನುಂಟು ಪಾದರ್ಥದಿ ಉಚ್ಚಾರಣೆ। ಇದೆ ಅನಂತಾನಂತ ವರ್ಣಗಳಾಗೋವು। ಇದರಲ್ಲಿ ಉಪನಿಷತ್ತು ಸರ್ವವೇದ ಪುರಾಣ। ಮುದದಿಂದ ಪಂಚರಾತ್ರ ಬ್ರಹ್ಮತರ್ಕ ರಾಮಾಯಣ। ಸುಧಿಯಾದ ಭಾಗವತಯೋಗಶಾಸ್ತ್ರ ಭಾರತ। ಪದೋಪದಿಗೆ ಕರ್ಮಭೇದ ಮೀಮಾಂಸ ನಿರ್ಣಯ। ಒದಗಿ ತುಂಬಿಹವು ವೈದಿಕ ಲೌಕಿಕ ಶಬ್ದ। **ಇದರಿಂದ ಕಮಲಾಸನ ಹರಿಯಲ್ಲಿ ಸಮನ್ವಯ**। ಉದಯಾಸ್ತಮಾನ ಬಿಡದೆ ದುಃಖಶಾಬ್ದ ತುಚ್ಛ। ವೊದಲಾದ ವಾಕ್ಯದಿಂದ ಮಾಡುವ ಮಹಾಜ್ಞಾನಿ। **ಅದಕಾರಣಹರಿ ಅಖಿಳ**

**ವರ್ಣಾತ್ಮಕ । ನಿಧಿಯಾದ ಓಂಕಾರ ಪ್ರತಿಪಾದ್ಯನೆನಿಸುವ ।** ಪದುಮೆ ವಿರಂಚಿ–ವಾಯು–ಖಗ–ಶೇಷ–ರುದ್ರೇಂದ್ರ । ಮದನ ಸೂರ್ಯೇಂದು ಮಿಕ್ಕ । ತ್ರಿದಶ ಮಹಾಮುನಿ ಸರ್ವ ಚೇತನಕೆ ಕೂಡೋದಯ್ಯಾ । ಉದಧಿ ದರ್ಶನ ದಂತೆ ಎಲ್ಲರಿಗೆ ಸಾಧ್ಯವೆನ್ನು । ಸದಮಲ ಮೂರುತಿ ವಿಜಯವಿಠಲರೇಯ । ಯದುಕುಲೋತ್ತಮ ಕಾಣೋ ಭಕ್ತರ ಸಲಹುವ ॥೫॥

ಮತ್ತೂ **ಮುಂದೆ ೮ ನೇ** ಸುಳಾದಿ "ಚಿಂತನೆಮಾಡು ಮನವೆ ಸುಳಾದಿಲಿ, ಸ್ವರ ವ್ಯಂಜನಾದಿಗಳಲ್ಲಿಪ್ಪ, ಒಂದೊಂದು ವರ್ಣದಲ್ಲಿ ೬೪ ಭಗನ್ಮೂರ್ತಿಗಳಿರುವ ಬಗೆ ತೋರಿಸಿ, ಬ್ರಹ್ಮಕುಲಕ್ಕೆ ಜ್ಞಾನವಿತ್ತು ರಕ್ಷಿಸುವ ಬ್ರಹ್ಮಕುಲಾಭಿಮಾನಗಳ ಚರಣವನ್ನು ಮರೆಯದೇ ಸ್ಮರಿಸಿದರೆ ಹರಿಯೊಲಿವನೆಂದು ಸ್ತೋತ್ರಗೈದು ಮುಂಬಡುವ.

**ಮಟ್ಟತಾಳ** (ಪುಟ ೩೦–೩೧)

ಕಾ ಮೊದಲು ಕ್ಷಾಕಡೆ ಮೂವತ್ತೈದು । ಈ ಮಹವರ್ಣಗಳು ಇದರ ವಿವರ ತಿಳಿವುದು । ಆ ಮರಿಯಾದಿಗಳು ಪದಿನಾರು ಉಂಟು । ವ್ಯೋಮ ವ್ಯಾಪಿಸಿ ದಂತೆ ಸರ್ವದ ವರ್ಣಗಳು । ಸಾಮಸ್ತ ಬಗೆಯಿಂದ ವ್ಯಾಪ್ತವಾಗಿವೆ ನೋಡಿ । ಸಾಮ ಮಿಗಿಲಾದ ಶಾಸ್ತ್ರ ವೈದಿಕಶಬ್ದ ಭೂಮಿಯೊಳಗಾಡುವ ಲೌಕಿಕ ಶಬ್ದಗಳು । ಈ ಮಹಾ ವರ್ಣದಲಿ ಪ್ರವರ್ತಕವಲ್ಲದಲೇ । ಕಾಮಿಸಿದರೆ ಒಂದು ಪ್ರಯೋಜನವಿಲ್ಲ । ಭೂಮ ಭೂತೇಶ್ವರ ವಿಜಯ ವಿಠ್ಠಲರೇಯನ । **ನಾಮ ಮೂರ್ತಿಗಳೆಂದು ಚಿಂತಿಸು** ಪ್ರಣವದಲಿ ॥೨॥ ಇಂತು ಭಗವನ್ನಾಮ ಮೂರ್ತಿಗಳು ಪ್ರಣವದಿಂದ ವ್ಯಕ್ತವಾಗಿವೆ ಎಂದು ಪೇಳುತ್ತ ಮುಂದೆ —

**ತ್ರಿವಿಡಿತಾಳ** (ಪುಟ ೩೧ ರಲ್ಲಿ)

ಇದರ ವಿಸ್ತಾರ ಮಾಡುತ್ತಾರೆ—

"ಕಾ ಒಂದು ಗುಣಿಸಿದರೆ ಹದಿನಾರು ಬಗೆ ಉಂಟು । ಆವಾವ ಕಾಲಕ್ಕೆ ನೋಡಿದರು । ಭಾವಿಸು, ಕ–ಕಿ–ಕು–ಕೆ–ಕೈ–ಕೊ–ಕೌ–ಕಂ । ಈ ವಿಧ ಹೃಸ್ವ ಇದರಂತೆ ದೀರ್ಘ । ಯಾವತ್ತು ಇದರಂತೆ ನಿಜವೆಂದು । ಕೋವಿದನಾಗಿ ನೀ ತಿಳಿಯಬೇಕು । ಕಾ ವರ್ಣದಿ ರೂಪ ಕಪಿಲಾದಿ ಹದಿನಾರು (೧೬) । ಈ ವೊಳಗಿನ (ಜಡವರಣದಲ್ಲಿಯ ರೂಪ) ಹದಿನಾರು ರೂಪ (೧೬) । ದೇವನ್ನ ನಾಮಗಳು ಅಜಾದಿಗಳ ಸಂಖ್ಯ । ಮೂವತ್ತೆರಡು ಭಗವದ್ರೂಪಗಳು । ಪಾವನ ಮೂರುತಿ ವಿಜಯವಿಠ್ಠಲರೇಯ । ಆವಾಗ ವರಣಾಧಿಷ್ಠಾನದಲ್ಲಿ ಯಿಪ್ಪ ॥೩॥

ಅಟ್ಟತಾಳದಲ್ಲಿ ಇನ್ನೂ ಇದರ ವಿವರ ಹೇಳುತ್ತಾರೆ – ಇದರ ವಿಹಿತವೊಂದು ವರಣಕ್ಕೆ । ಅದರಂತೆ ಕ-ಚ-ಟ-ತ-ಪ-ಯ-ಶ ವ । ರ್ಗದಲಿ ಎಣಿಸಿ ಕ-ಷ ಮಿಳಿತವಾದ ಇದನ್ನೆಲ್ಲ ಕೂಡಿಸಿ ಪಂಚ ತ್ರಿಂಶತಿ (೩೫) ಯಾ । ದದು ಕಾಣೊ ಇದರೊಳು ಅ-ಆ-ಇ-ಈ-ಉ ಎಂಬ । ಹದಿನಾರು ಇಡಲಾಗಿ, ಕ ಅಃ ವಾಹದು। ಇದನೆಲ್ಲ ಒಂದೊಂದು ಏಕಾಕ್ಷರದಿಂದ ಪದುಮನಾಭನು ಕರೆಸಿಕೊಂಬನು ಕೇಳಿ । **ಅದೇ ಅದೇ ನಾಮ ಮತ್ತದೆ ಅದೆ ರೂಪದಿ** । ಒದಗಿ ಎಣಿಸಲಾಗಿ ಮೂವತ್ತೆರಡು (೩೨) **ನಾಮ** । ಸದಮಲವಾಗಿವೆ ಅರುವತ್ತು ನಾಲಕು (೬೪) । ಮೊದಲಾರಂಭಿಸಿ ಮೂವತ್ತೈದಕೆ ನೋಡು । ಮುದದಿಂದ ಗುಣಿಸಲು ಒಂದೊಂದು ವರಣಕ್ಕೆ । ಅದೇ ಪ್ರಕಾರದಲಿ । ಅರವತ್ತು ನಾಲ್ಕು ಉಂಟು । **ಅಧಿಕಾರತನಭೇದ ಧ್ಯಾನಮಾಡುವದಕ್ಕೆ ।** ಪದುಮಗರ್ಭನೈಯ್ಯ ವಿಜಯವಿಠ್ಠಲರೇಯ । ಪದವಿಯ ಕೊಡುವನು ಈ ಪರಿ ಕೊಂಡಾಡೆ ॥೪॥

ಇದರ ವಿವರ ಒಂದು —

| | | |
|---|---|---|
| ೧೬ ಅಕಾರಾದಿ | ಕ-ಗುಣಿಸಿದರೆ ೬೪ ಭಗವದ್ರೂಪಗಳು. | |
| ೩೫ ಕಪಿಲಾದಿ | ೧೬ ಕಪಿಲಾದಿ ನಾಮಕ-ಹದಿನಾರು | |
| | ೧೬ ಅಜಾದಿ ನಾಮಕ-ಹದಿನಾರು | |
| | ೧೬ ಕಕಾವೆಂಬವವು | ಜಡವರ್ಣಗಳಲ್ಲಿಪ್ಪ |
| | ೧೬ ಲಿ ಆ ವೆಂಬುವವು | ರೂಪ |
| | —— | |
| | ೬೪ ಒಂದು ವರ್ಣದಲ್ಲಿ ೬೪ ರೂಪ. | |

ಇದನ್ನು ಬುಧರಿಂದ ತಿಳಿದು ಸರ್ವ ವರ್ಣಗಳು ಭಗವನ್ನಾಮ ರೂಪಗಳು,ಅಲ್ಲಿಪ್ಪ ಹರಿಮೂರ್ತಿಗಳ ಸಂಖ್ಯಾ ತಿಳಿದು ಅವಸ್ಯ-ನಾಮಸ್ಮರಣ-ನಾಮಾಭಿಮಾನಿ ಉಷಾದೇವಿ ಆರಂಭಿಸಿ—ಪ್ರಾಣಪರಿಯಂತರವಾಗಿ ೧೬ ದೇವತೆಗಳು ಅಭಿಮಾನಿಗಳೂ ಅಂತಃಪ್ರೇರಕ ಹರಿಯೇ ತನ್ನಾಮ ವಾಚ್ಯನೆಂದು ತಿಳಿಯಬೇಕೆಂದು

ಮುಂದೆ **ಆದಿತಾಳ** ಪುಟ ೩೨-೩೩ ರಲ್ಲಿ ವಿವರಿಸುತ್ತಾರೆ.

"ಆವನಾದರು ಹಳಿಯಲಿ ಉಗಳಲಿ । ಆವನಾದರು ಬೈಯಲಿ ಕಾಯಲಿ । ಆವನಾದರು ಹೊಡೆಯಲಿ ತಡೆಯಲಿ । ಆವನಾದರು ಪೊಗಳಲಿ ಅಟ್ಟಲಿ । ಆವನಾದರು ಉಣಿಸಲಿ ಉಡಿಸಲಿ । ಆವನಾದರೂ ಛೀ ಛೀಯೆನಲಿ । ಆವನಾ

ಆವನಾದರೂ ಥೂ ಥೂ ಎನಲಿ । ಆವನಾದರೂ ಭಂಗಿಸಲಿ ಮತ್ತಾವನಾದರೂ ಹಂಗಿಸಲಿ । ಆವನಾದರೂ ಏನೇನನಲಿ । **ಈ ವರ್ಣಗಳೆಲ್ಲ ಭಗವನ್ನಾಮಗಳೊ । ಜೀವನ್ಮುಕ್ತನು ಈ ವಿಧದಿ ತಿಳಿದವನು** । ನೋವು ನೋವುಗಳಲಿ ಪಾವನವಾದ ಭಕುತಿಯಲಿ ಸ್ವ । ಭಾವಿತ ನೀನಾಗೊ ಜ್ಞಾನಿ ನೀನಾಗೋ । ಯಾವತ್ತು ಇಂದ್ರಿಯಗಳ ವ್ಯಾಪಾರ । ಸೇವೆ ಶ್ರೀಹರಿಗೆನ್ನು । ತ್ರೈವಿಧ ಜೀವರು ಇದನೆ ತೊರೆದು । **ಮತ್ತಾವದು ಆಡುವರೊ? ವರಣಗಳಿಲ್ಲದಲೆ** । ದೇವದೇವೇಶನ್ನ ವೊಲಿಸಬೇಕಾದರೆ । ಈ ಉಪಾಯವೆ ಬೇಕು ಎಲ್ಲಿದ್ದರು ಕೇಳು । ಕಾಮಜನಕ ನಮ್ಮ ವಿಜಯವಿಠ್ಠಲರೇಯ । ಆವಾವ ವರಣಗಳಂತೆ ವೊಳಗಿದ್ದು । ಕಾವನು ಶರಣರನು ಒಡನೊಡನೆ ಬರುವ ॥೫॥

**ಜತೆ**

ಅಕ್ಷರಾಕ್ಷರದಿಂದ **ಭಗವನ್ನಾಮವ ಚಿಂತಿಸು** ।
ಅಕ್ಷರಕ್ಷರ ಪುರುಷ ವಿಜಯವಿಠ್ಠಲ ಸುಳಿವ ॥೬॥

ಇದು ಓಂಕಾರ ವೇದವರ್ಣಗಳು ಅಜಾದಿ ೫೧ ವರ್ಣಗಳು ಅನಾದಿ ನಿತ್ಯವಾದ ನಾಮಗಳಲ್ಲಿರುವ ವಿವರಣೆ ಹೇಳಿದ್ದು ವೇದಮಾಹಾತ್ಮೆ ವೇದ – ಜ್ಞಾನವು.

## ಶ್ರೀ ಭಗವನ್ನಾಮ ಮಹಿಮೆ

ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್ ।
ನಾಮಾನಿ ರೂಪಾಣಿ ಚ ಮಂಗಲಾನಿ ತೇ ॥
ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋ ।
ರಾವಿಷ್ಟ ಚಿತ್ತೋ ನಭವಾಯ ಕಲ್ಪತೇ ॥ (ಶ್ರೀ ಭಾಗವತ)

ಶ್ರೀಹರಿಯೇ ನಿನ್ನ ಪವಿತ್ರತರವಾದ ನಾಮಗಳನ್ನು ಕೇಳುತ್ತ, ಉಚ್ಚಾರ ಮಾಡುತ್ತ ಸ್ಮರಿಸುತ್ತಲೂ, ಮಂಗಳಕರವಾದ ರೂಪಗಳನ್ನು ಚಿಂತಿಸುತ ಧ್ಯಾನ ಮಾಡುತ್ತ ಮತ್ತು ಇತರರಿಗೂ ಹರಿನಾಮ ಸ್ಮರಣಮಾಡಲು ಪ್ರಚೋದಿಸುತ್ತಲೂ, ಸಕಲ ಕ್ರಿಯೆಗಳನ್ನೂ ಶ್ರೀಹರಿಯ ಪಾದಕ್ಕೆ ಕೃಷ್ಣಾರ್ಪಣಪೂರ್ವಕವಾಗಿ ಅರ್ಪಿಸುತ್ತ ಶ್ರೀಹರಿಯ ಪಾದಾರವಿಂದಗಳಲ್ಲಿ ಚಿತ್ತ (ಮನಸ್ಸು) ಇಟ್ಟವರು ಸಂಸಾರಬಂಧನಕ್ಕೆ ಒಳಗಾಗುವದಿಲ್ಲವೆಂದು ಶ್ರೀ ಭಾಗವತವಚನ. ಇನ್ನು

ಶ್ರೀಹರಿನಾಮ ಮಾಹಾತ್ಮ್ಯ ಅನೇಕ ಪುರಾಣಾದಿಗಳಲ್ಲೂ ಇತರ ಗ್ರಂಥಗಳಲ್ಲೂ ಸವಿಸ್ತರ ಇದೆ. ಇಲ್ಲಿ ಅವೆಲ್ಲ ಪ್ರಮಾಣ ಕೊಡಲು ಗ್ರಂಥಬಾಹುಲ್ಯ ಭಯ. ಶ್ರೀ ಭಾಗವತಸಾರೋದ್ಧಾರಕಾರರು ೨೯ ನೇ ಪ್ರಕರಣದಲ್ಲಿ ನಾಮಪ್ರಶಂಸನೆ ವರ್ಣನ ಬಹು ಸ್ವಾರಸ್ಯವಾಗಿ ಮಾಡಿದ್ದಾರೆ. ದೇವಾಂಶರಾದ ಎಲ್ಲ ದಾಸಾರ್ಯರೂ ಹರಿನಾಮ ಮಹಿಮೆ ಬೇಕಾದಷ್ಟು ಹೊಗಳಿದ್ದಾರೆ.

**ಶ್ರೀ ಪುರಂದರದಾಸರ**—ಅನೇಕ ಪದಗಳಿವೆ.

೧ "ಕಲಿಯುಗದೊಳು ಹರಿನಾಮವ ನೆನೆದರೆ | ಕುಲಕೋಟಿಗಳುದ್ಧರಿಸುವವೈ ‖ ಸುಲಭದ ಮುಕ್ತಿಗೆ ಸುಲಭನೆಂದೆನಿಸುವ ಜಲರುಹನಾಭನ ನೆನೆ ಮನವೆ ‖"

೨ "ಹರಿನಾರಾಯಣ ಹರಿನಾರಾಯಣ ಹರಿನಾರಾಯಣ ಎನುಮನವೆ" ‖

೩ "ನಾಮಕೀರ್ತನೆ ಅನುದಿನಮಾಳ್ಪಗೆ ನರಕ ಭಯಗಳುಂಟೆ | ನಾಮವೊಂದೆ ಯಮನಾಳ್ಗಳ ಒದೆದು, ಅಜಾಮಿಳನಿಗೆ ಸುಕ್ಷೇಮವಿತ್ತ ಹರಿ ‖"

೪ "ಒಂದೇ ನಾಮದೊಳಡಗಿದವು ಆನಂದದಿಂದುಸುರುವ ಅಖಿಳ ವೇದಗಳು‖

೫ "ಹರಿಯೆಂಬ ನಾಮಾಮೃತದ ಸುರುಚಿಯು ಪರಮ ಭಕ್ತರಿಗಲ್ಲದೆ | ಅರಿಯದ ಕಡುಮೂರ್ಖ ನೀಚ ಜನರಿಗೆಲ್ಲ ಹರುಷವಾಗಬಲ್ಲದೇ ‖"

೬ "ಸ್ಮರಣೆಯೊಂದೆ ಸಾಲದೇ ಗೋವಿಂದನ ಸ್ಮರಣೆಯೊಂದೆ-ಸಾಲದೆ ‖"

೭ "ಇನ್ನೇಕೆ ಯಮನ ಬಾಧೆಗಳು–ಎನ್ನ ಜಿಂಹ್ವೆಯೊಳಗೆ ಹರಿನಾಮವೊಂದಿರಲು"

೮ "ಚಿಂತೆ ಯಾತಕೋ ಮನುಜ ಭ್ರಾಂತಿಯಾತಕೋ | ಕಂತುಪಿತನ ದಿವ್ಯ ನಾಮ ಮಂತ್ರವನ್ನು ಜಪಿಸುವರಿಗೆ"

೯ "ನರನಾದಮೇಲೆ ಹರಿನಾಮ ಜಿಂಹ್ವೆಯೊಳಿರಬೇಕು."

೧೦ "ನಾರಾಯಣನೆನ್ನಿರೋ ಶ್ರೀ ನರಹರಿ ನಾರಾಯಣನೆನ್ನಿರೋ ‖ ನಾರಾಯಣನೆಂದು ಅಜಮಿಳನು ಕೈವಲ್ಯ ಸೇರಿದನೆಂಬೊ ಸುದ್ದಿಯ ಕೇಳಿ ಅರಿಯಿರಾ ‖"

೧೧ "ಯಾರು ಸಂಗಡ ಬಾಹೋರಿಲ್ಲ ನಾರಾಯಣ ನಿಮ್ಮ ನಾಮ ಒಂದಲ್ಲದೆ‖" ಇನ್ನೂ ನೂರಾರು ಪದಗಳಿವೆ. ನಾಮಮಾಹಾತ್ಮ್ಯೆ ಆರಿತರೆ ದುರಿತಗಿರಿಯನ್ನು ವಜ್ರದಂತೆ ಖಂಡಿಪುದು ಸಂದೇಹ ಬೇಡ.

("ಸುಬೋಧ" ಪ್ರಕಟನೆ)

## ಶ್ರೀ ವಿಜಯದಾಸಾರ್ಯರು

(೧) ಸಾಧನಭಾಗ ಸುಳಾದಿಲಿ ೨೪ ರಿಂದ ೩೩ ವರೆಗೆ ೯-೧೦ ಸುಳಾದಿ ಮತ್ತು ಸ್ತೋತ್ರಭಾಗ ಸುಳಾದಿ ೪೭ ರಿಂದ ೬೨ ವರಗೆ ೧೪-೧೫ ಸುಳಾದಿಯಲ್ಲಿ ಹರಿನಾಮ ಮಹಿಮೆ ಸವಿಸ್ತರ ಬಣ್ಣಿಸಿದ್ದಾರೆ. ನೋಡುವದು. ಇಲ್ಲಿ ಸಂಕ್ಷಿಪ್ತ ವಾಗಿ ಕೆಲವು ಮಹತ್ವ ವಿಷಯ ಸಜ್ಜನರ ಮುಂದಿರಿಸಿದೆ. ದಾಸರ ವಚನದಲ್ಲಿ ಆದರ ಭಕ್ತಿಯಿಟ್ಟು ನಾಮ ಮಾಹಾತ್ಮೆ ತಿಳಿದರೆ ದಾಸರಿಗೊಲಿದ ಈಶನೇ ಸಂಸಾರತರಣಕ್ಕೆ ಈಸುಗುಂಬಳಕಾಯಿ.

### ಸು. ೨೪. **ಅಟ್ಟತಾಳ ನಾಮಸ್ಮರಣೆ ಮಾಹಾತ್ಮೆ**

ಧ್ಯಾನದಾನಕರ್ಮ ಏನೇನುಮಾಡಲು। ಊನವಲ್ಲದೆ ಸಂಪೂರ್ಣವಾ ಗಮು ಕಾಣೊ । ಕ್ಷೋಣಿಯೊಳಗೆ ಸಮಾನವಿಲ್ಲದ **ನಾಮಾ** ದೀನನಾಗಿ ನಿಂದು ದಿನಕ್ಕೊಮ್ಮೆನೆನೆದಡೆ। ಧ್ಯಾನದಾನ ಕರ್ಮ ಆವಾವಕಾಲಕ್ಕೆ। ತಾನೆಸಗಿದ ಫಲಕೆ ನೂರುಮಡಿಯುಂಟು। ದಾನವಾಂತಕ ರಂಗ ವಿಜಯವಿಠಲನ। **ಚೂಣಿ** ಗೆ ನೆನಸಲು ಮಾಣದೆಗತಿ ಈವ ॥ ೬ ॥

### ಆದಿತಾಳ ಹರಿನಾಮ ಸವಿರುಚಿವರ್ಣನೆ

ಆವ ಸವಿಯೋ ಆವ ರುಚಿಯೊ। ಆವಾನಂದವೋ ಆವರಸವೊ। ಆವ ಸೌಖ್ಯವೊ ಆವ ಮೋಹವೋ। ಆವ ಹಿತವೊ ಆವ ಕುರುಹವೊ। ಆವ ಮಹ ತ್ತ್ರವೋ ಆವ ಅಣುವೋ। ಆವ ಚಂದವೊ ಆವ ತರುವೋ। ಆವಧೇನುವೋ ಆವರಸವೋ। ಆವ ಮೂಲವೋ ಆವವರ್ನವೊ। ಆವುದೋ **ಶ್ರೀಹರಿ ನಾಮಾ। ಪಾವನವಾದ ಮಹಿಮೆ**। ಶ್ರೀವಿಭುವೆ ವಿಜಯವಿಠಲನಂಘ್ರಿ ನಂಬು ಮನವೆ ॥ ೫ ॥

### ಜತೆ

"ನಾಮದಿಂದಾದಗತಿ ಮಿಕ್ಕಾದದರಿಂದಿಲ್ಲಾ। ರಾಮನಾಮನೆನಿಯೋ ವಿಜಯವಿಠಲರೇಯನ ॥" ಎಂದು ನಾಮಮಾಹಾತ್ಮೆಕೊಂಡಾಡಿ-"ನಾಮವೆ ಸಕಲಸಾಧನಕ್ಕೆ ಸಾಧನ। ನೀ ಮರೆಯದಿರು ವಿಜಯವಿಠಲನ್ನ (ಸು. ೨೭ರ ಜತೆ) ಮುಂದೆ ಸುಳಾದಿ ೨೭ **ಮಟ್ಟತಾಳದಲ್ಲಿ** । "ತಿಳಿದಾದರೊಮ್ಮೆ ತಿಳಿಯದಾದ ರೊಮ್ಮೆ। ಇಳಿಯೇಶನ **ನಾಮಾವಳಿಗಳು ಕೊನೆ ನಾಲಿಗೆಯಲಿನೆನೆದರೆ**। ಹಲವು ಜನ್ಮಗಳಲ್ಲಿದ್ದಾ ಹೊಲೆಪಾಪಗಳೆಲ್ಲ। ಅಳಿವವು ನಿಶ್ಚಯವು ಉಳಿಯವು

ಎಳ್ಳನಿತು । ಕಾಲಕಾಲಕೆ ಭರ್ತ ವಿಜಯವಿಠ್ಠಲನಿಗೆ। ತೊಳಲುವದು ನಿತ್ಯ ಸಲಹು ಸಲಹು ಎಂದು ॥೨॥ ಮುಂದೆ **ಆದಿತಾಳದಲ್ಲಿ** ॥ "ಶ್ರೀಧರನ್ನ ನಾಮವನ್ನು ಸಾಧಿಸಿ ನಾಲಿಗಿತುದಿಗೆ। ಆದರದಿಂದೆರಕಹೊಯ್ದು। ತೋದು ತೋದು ನಾಭಿತನಕ। ಭೇದಿಸಿ ಪಾಪದಬಟ್ಟೆ। ಭೇದಿಸಿ - ಪುಣ್ಯಗತಿಯ। ಹಾದಿಯನ್ನು ಮೆಟ್ಟಿ ಅಹಲ್ಲಾದನಾಗೊ ನಿನ್ನೊಳಗೆ। **ವೇದ (ವೇದ್ಯ) ನಾಮ** ವಿಠ್ಠಲ। ಆದಿದೇವ ಸಾಸಿರಪರಾಧವಿರಲು ಹಿಂದೆ ಕಳೆದು। ಕಾದು ಕೊಂಬ ಕರುಣದಲ್ಲಿ ॥೫॥

ಜತೆ ॥ ಸರ್ವಸಾಧನದೊಳಗೆ ನಿನ್ನ ನಾಮಕೆ ಸರಿ। ಊರ್ವಿಯೊಳಗೆ ಇಲ್ಲ ವಿಜಯವಿಠಲಧೊರಿಯೆ ॥೬॥ (ಸುಳಾದಿ ೨೯)

ಜತೆ ॥ (೩೦ನೆ ಸುಳಾದಿ) ಸಂಸಾರಾಂಬುಧಿಗೆ ನಿನ್ನ ನಾಮವೆ ನಾವಿ। ಹಂಸ ವಿಜಯವಿಠಲ ನಿನ್ನ ಚರಣವೆ ಧಡಿ ॥೬॥ ಮುಂದೆ ಸುಳಾದಿ ೩೨.

ಮಟ್ಟತಾಳ ಆರಂಭಿಸಿ—ಜತೆಯ ಪೂರ್ತಿ ಏನೂ ಸಾಧನ ಮಾಡಿದರೂ ಹರಿನಾಮಕ್ಕೆ ಸರಿಯಾಗದೆಂದು ವರ್ಣಿಸಿದ್ದಾರೆ. (ಸಾಧನ ಸುಳಾದಿ ಭಾಗ ೧, ಪುಟ ೬೫-೬೬).

**ಮಟ್ಟತಾಳ**—ಸ್ನಾನ ಜಪತಪವು ಮೌನವನುಷ್ಠಾನ। ದಾನಪರ್ವಣಿ ಪುಣ್ಯದಾನ ಸುಯಾಗಗಳು। ನಾನಾಕ ಯಾತ್ರೆಗಳು ಏನು ಕರ್ಮ ನಿ। ದಾನ ದಿಂದಲಿ ಮಾಡೆ ಶ್ರೀನಾರೆಯಣನ ಧ್ಯಾನ **ನಾಮಂಗಳು ತಾ ನುಡಿಯದಿರೆ ಕಾಣರು** ನಿರ್ವಾಣ। ಅನಾದಿ ನಿಧನ ವಿಜಯವಿಠಲನ್ನ। ನೀನೆ ಯೆನ್ನದವನು ಜ್ಞಾನಿಯಾದರೇನು ॥

**ತ್ರಿವಿಡಿತಾಳದಲ್ಲಿ**—ಹಲವು ವೇದಗಳೋದಿ ಹಲವು ಕೇಳಿದರೇನು **ಇಳಿಯೊಳು ಯತಿಯಾಗಿ ಚರಿಸಲೇನು**। ಬಲು ವಿವೇಕ ಮತಿ ಸತತ ವಾದರು ತನ್ನ। ಒಳಗಿದ್ದ ನರಹರಿಯ ಗೆಳೆಯನೆಂದರಿಯಾದೆ। **ಕಲಿಮಾನ ವನು ಧರ್ಮಾ**ವಳಿಯ ನೆಸಗಿದರೇನು। ಫಲವಿಲ್ಲವೋ ಬಹುಕಾಲ ಬಳಲಿ ದರು। ಬೆಳದಗಿಡದ ತುದಿಗೆ ಫಲ ಪುಟ್ಟದಂತೆಯೋ। ಕುಲಟೆ ಮಕ್ಕಳ ಪಡೆದು ನೆಲೆಯಾಗದಂತೆ। ಜಲಜನಾಭನ **ಭಕ್ತಿ ಮಿಳಿತವಲ್ಲದ ಧರ್ಮ**। ಮಳ ಲೋಳು ಗೋಕ್ಷೀರ ಯೆರೆದಂತೆಯಾಗುವದು। ಚಲುವಗದಾಗ್ರಜ ವಿಜಯ ವಿಠಲನ್ನ। ಸಲೆ **ನಾಮ ಸ್ಮರಿಸದೆ ಸಂಸಾರ ಹರವಿಲ್ಲ** ॥೩॥

**ಅಟ್ಟತಾಳ** — ಹರಿನಾಮದಿಂದಲಿ ಪರಗತಿಯಾದಂತೆ । ಧರೆಯೊಳಗುಳ್ಳ ವಿಸ್ತಾರ ಕರ್ಮವ । ಮರೆಯದೆ ಯೋಚಿಸಿ ಇರಳು ಹಗಲು ಇರೆ । . . . . ನರನು ಕೆಸರು ತುಳಿದು ಬಂದು । ಮರಳಿ ಕೆಸರಿನಲ್ಲಿ ಚರಣವ ತೊಳೆದಂತೆ । ಪರಿಪೂರ್ಣವಾಗದೆ ದುರಿತ ಸಂಘಟಿಸೋದು । ಸುರಧೀಶ ವಿಕ್ರಮ ವಿಜಯ ವಿಠ್ಠಲನ್ನ । ಸ್ಮರಣೆ ಸರ್ವಕ್ಕೆ ಪ್ರಾಯಶ್ಚಿತ್ತಾ ಭೂತ ॥೪॥ ಮುಂದೆ ಜತೆಯಲ್ಲಿ ॥

"ಹರಿನಾಮದಿಂದಲಿ ಸಂಸಾರ ನಿವೃತ್ತಿ । ಸ್ಥಿರವೆಂದವರ ಬಿಡನು ಸುತಪ ವಿಜಯವಿಠಲ ॥೬॥ — ಇಂತು ನಾಮಮಹಿಮೆ ಹೇಳುವದಲ್ಲದೆ ಸ್ತೋತ್ರಭಾಗ ಸುಳಾದಿಗಳಲ್ಲಿಯೂ, ಹರಿನಾಮ ಮಾಹಾತ್ಮೆ ಕೊಂಡಾಡಿದ್ದಾರೆ. ಸ್ವಲ್ಪ ವಿಷಯಗಳನ್ನು ಅತ್ಯಾವಶ್ಯವೆಂದು ಇಲ್ಲಿ ವಿವರಿಸುತ್ತದೆ. ಸ್ತೋತ್ರಭಾಗ ಸು. ೪೮ ಪುಟ ೧೫೫.

ಶ್ರೀಹರಿ ನಾಮಾ ದೊರಕುವದೇ ಕಷ್ಟ, ದೊರಕಿದರೂ ನಿಲಕದು, ದೊರಕಿದರೆ ಅವನು ಬಲು ದೊರೆಯು ರಾಜನು, ಧರಣಿಸುರರ ಜನುಮಗಳು ಅನಂತ ದೊರಕಿದರೂ ಹರಿನಾಮ ದೊರೆಯದು. ಏಕಚಕ್ರಾಧಿಪತಿಯಾದ ರಾಜನ ಸುಖ ವೆಂಥದೆಂಬುದು ವಿಸ್ತರಿಸಲೇನು । ಸಪ್ತಶರಧಿ ಸಪ್ತದ್ವೀಪ ಆಳುವಂಥ ದೊರೆಯ ಸುಖದಕಿಂತಲೂ ಹರಿನಾಮಸ್ಮರಣೆ ಸುಖ ನೂರುಮಡಿ ಮಿಗಿಲು, ಅಧಿಕವಾದದು. ಧರಣಿಯೊಳು ಹರಿನಾಮ ದೊರೆಯದು ದೊರೆಯದೆಂದು ಮೊರೆಮೊರೆದು, ವೇದಗಳು ಕೂಗುತ್ತಲಿವೆ. ಹರಿನಾಮಸ್ಮರಣೆಮಾಡಿದವನು ನೋಡಲಾಗಿ, ಹರಿಯ ಬಲ್ಲನು. ಧರಾಧರನ ನಾಮ ರುಚಿಕರವಾಗಿ ಸವಿದು ಸುಂದರವೆಂಬುದು ಅರಿಧರ ಸಂಕ್ಷಿಪ್ತ ವಿಜಯವಿಠಲನ । ಸ್ಮರಣೆ ಒಂದಕೆ ಎಲ್ಲ ಸರಿ ಎಂದೆನಿಸದು – ಹೀಗೆ ಧ್ರುವತಾಳದಲ್ಲಿ ಹೇಳಿ ಮಟ್ಟತಾಳದಲ್ಲಿ, ಕಾಲಸೂತ್ರವಾದ ಮೇಲಾದ ನರಕದಲಿ ಘೋಳಿಡುತ್ತ ವಂಶಾವಳಿ ಮಿಡಕುತ್ತಿರಲು, ಆ ವಂಶದಲ್ಲಿ ಒಬ್ಬ ಬಾಲಕ ಭೂಲೋಕದಲಿ ಪುಟ್ಟ, ಶೀಲ ಗುಣವಂತನಾಗಿ, ಕಾಲಕಾಲದಲ್ಲಿ ನಾಲಿಗೆ ಯಿಂದಲಿ ಹರಿಯನೆನೆಸುತ್ತ ಹರೇಹರೆ ಎಂದು ನಾಮೋಚ್ಚರಿಸಿ ಶ್ರೀಲೋಲನೆ ನಿನಗೆ ಅರ್ಪಿತವೆಂದು ವೇಳೆಯಲ್ಲಿ ನಾಮೋಚ್ಚಾರಣ ಶಬ್ದ ಘಾಳಿ ವಾಯು ದ್ವಾರಾ ನರಕದವರೆಗೆ ಮುಟ್ಟೆ, ನರಕ ಶೀಳಿ ಅವನ ಕುಲಕೆ ವಾಲಯವಾಗು ವದು. ವಿಶಾಲ ವೈಕುಂಠದಲಿ ಎಂದು ಹರಿನಾಮ ನರಕಸ್ಥರನ್ನು ಉದ್ಧಾರ ಮಾಡುವದೆಂದು ಪೇಳುತ್ತ ತ್ರಿವಿಡಿ ತಾಳದಲ್ಲಿ, ನಾಮವೆ ಜೀವನವು ನಾಮವೆ

**ಪಾವನವು** । ನಾಮವೆ ಸಕಲಾಘ ಹೋಮವೆನಿಸುವದು । ನಾಮವೆನಲು **ಸ್ತುರಸ್ತೋಮವೆ** ಭಜಿಸುವದು । ನಾಮವೆ ತಿಳಿವುದು ಪ್ರೇಮವೆ ಎನುತಲಿ । **ನಾಮವೆ** ಉತ್ತುಮ ಹೇಮವೆಂದು ಕಾಯಾ । ಧಾಮವೆಮಾಡಿ ಸಕಾಮವೆ **ಬಯಸದೆ** । ಸಾಮವೇದಲೋಲ ವಿಜಯವಿಠ್ಠಲನ್ನ । ನಾಮವನೆನೆಯೆ **ನಿಷ್ಕಾಮವೆ** ನುಡಿಯುತ್ತ ॥ ಮತ್ತೂ ಅಟ್ಟತಾಳದಲ್ಲಿ ವಿಶೇಷ ಮಾಹಾತ್ಮ್ಯೆ **ಪೇಳುತ್ತಾರೆ** ॥ ಅಪ್ಪತಿಮ್ಮಪ್ಪನ ನಾಮವನೆನೆಸಾಲು । ತುಪ್ಪ ಸಕ್ಕರೆ ಹಣ್ಣು ಹರಿವಾಣದಲ್ಲಿ । ಒಪ್ಪಚಾರದಿಂದ ಸವಿದಂತೆ ಕಾಣಿರೋ । ಅಪಾಕೃತ ರಸಕೆ ಪಡಿಯುಂಟೆ । ಸುಪ್ರಸಾದನಾಮ ವಿಜಯವಿಠಲನ್ನ । ತಪ್ಪದೇ ನಾಮಗುಪ್ತದಲಿ ನೆನಿಸೊ ॥ ಪುನಃ ಆದಿತಾಳದಲ್ಲಿ ಮತ್ತು ಹೆಚ್ಚಿನ ನಾಮಮಹಿಮೆ ಹೇಳುತ್ತಾರೆ. "ನಾಮ ಒಂದು ಬಲವಾಗಿ ಶೀಮೆಯೊಳಗುಳ್ಳ । ಬಲು ತಾಮಸರು ಬಂದು ಎನ್ನ ರೋಮ ಬಾಗಿಸುವರೆ । ಗೋಮತಿ ಮಿಕ್ಕಾದ ನದಿಯ ಮಿಂದು ಬಂದರೇನು । **ನಾಮಕ್ಕನಂತ ಮಹಿಮೆ ಕಡಿಮೆ ಫಲವಧಿಕವಿಲ್ಲ** । ಈ ಮಾತು ಮನ್ನಿಸಿ ಸುಕಾಮಿಸಿ ಹರಿಯಪಾದ । **ನಾಮವೆಬಿಡದೆ ನೆನಿಸೆ ರೋಮರೋಮದ ದುರಿತನಾಶ** । ಕ್ಷೇಮಾಕೃತೇ ವಿಜಯವಿಠಲನ ನಾಮ ಮುದ್ರಾಂಕಿತದವಗೆ । ಭೂಮಿ ಆಕಾಶಕ್ಕೆ ಒಂದೇ ಸುಮಾರ್ಗವೆಂದು **ಪೇಳೊ** ॥ ೫ ॥

ಜತೆಯಲ್ಲಿ ॥ **ಹರಿನಾಮಕೆ ಸರಿಯಾದ ಕುರುಹು ನಾನರಿಯೇನು** । ಅರಿದವರಿಗೆ ನಮೊ ಶೀಶಾ (ಗಿರಿಶಾ) ವಿಜಯವಿಠಲ ॥ ಮತ್ತೂ ಮೈಮರೆದು ದಾಸರು ಅನೇಕ ಸುಳಾದಿಲಿ, ಅನೇಕ ರೀತಿಯಿಂದ ಹರಿನಾಮ ಮಹಿಮೆ ಕೊಂಡಾಡಿದ್ದಾರೆ. "ನಿನ್ನ ನಾಮ ಪೀಯೂಷನ್ನವೊ ಜ್ಞಾನಿಗಳಿಗೆ । ನಿನ್ನ ನಾಮವೆ ರುಚಿ ಅನಂತಕಾಲದಲ್ಲಿ । ನಿನ್ನ ನಾಮವೆ ಸವಿದುಣ್ಣಲು ಸುಖ । ನಿನ್ನ ನಾಮದ ಮಹಿಮೆಯನ್ನು ಬಲ್ಲ ಮಾನವ ಅನ್ಯರಸದಲ್ಲಿ ಮನವೆರಗಿಸಾ । ಮನ್ನಿಸಿ ಹರಿಯನಾಮ ಕಾರುಣ್ಯ ನಾಮಾಮೃತಸುರಿದವನ್ನ ಸೌಭಾಗ್ಯಕ್ಕೆ ಎದಿರು ಉಂಟೆ ॥ "ಮನಸಾರ ನಿನ್ನ ನಾಮಾಮೃತವು ಬಿಡದೆ ನೆನೆಸುತ್ತ ಸವಿದುಂಡ ಮಾನವಗಾದರೂ ಕನಸಿನೊಳಗಾದರು ಹಸಿವೆ ತೃಷಿಗಳಿಲ್ಲ." "ಹರಿನಾಮಾಮೃತವನ್ನು ಉಣಬಲ್ಲ ಜ್ಞಾನಿಗೆ । ಬರಿದೆ ನೆಚ್ಚನು ವಿಷಯಾ **ವಿಜಯವಿಠಲ ವೊಲಿವ** ॥ "ಹರಿನಾಮವೆ ಸ್ನಾನ ಹರಿನಾಮವೇ ಮೌನ ।

ಹರಿನಾಮವೆ ಧ್ಯಾನಾ ಹರಿನಾಮವೆ ದಾನಾ । ಹರಿನಾಮವೆ ಗಾನಾ । ಹರಿನಾಮವೇ ಜ್ಞಾನಾ ಹರಿನಾಮವೆ ಸರ್ವ ತೀರ್ಥಯಾತ್ರೆಗಳು । ಹರಿನಾಮವೆ ಕೃತು ಹರಿನಾಮವೆ ವ್ರತ । ಹರಿನಾಮವೆ ಸಕಲ ಸಾಧನ ಸಂಪತ್ತು । ಹರಿನಾಮವೆ ಗತಿ । ಹರಿನಾಮವೆ ಮತಿ । ಹರಿನಾಮವೇ ಹಿತ । ಹರಿನಾಮಾಮೃತ । **ಹರಿನಾಮ ನೆನೆಯದಿರೆ । ಶರಧಿ ಬತ್ತಿ ಮೀನು । ಮರಳಿದಂತೆ ಮರಳಿ ಹೀನವಾಗುವರು ।** ಹರಿನಾಮ ಒಂದೇ ಉಳ್ಳದೆ ಬಂದ ದುರಿತ ಪರಿಹರಮಾಡುವನು ಗಂಭೀರ ವಿಜಯವಿಠಲ ॥ ೩ ॥

"ನರಕದವರ ಉದ್ಧಾರಮಾಡಿದ ನಾಮಾ । ಪರಿಪೂರ್ಣರಕ್ಷಣ ವಿಜಯ ವಿಠಲನ್ನ ನಾಮಾ ॥ ೬ ॥ ಬೇಸರದೇ ದಾಸಾರ್ಯರು ಮೈಮರೆದು ಹೇ । "ಅಚ್ಯುತಾನಂತ ಗೋವಿಂದ ಕೃಷ್ಣ । ಸಚ್ಚಿದಾನಂದ ವೈಕುಂಠರಮಣ । ಅಚ್ಚರ ಮಹಿಮ ಕಮಲಜಾಂಡ । ಮುಚ್ಚಿ ಬಿಚ್ಚುವಂಥ ಬಿಗಹು ಪ್ರತಾಪಾ । ಅರ್ಚಿಸ್ವಾಮ್ರನ್ನೆಂಬೊ ನಾಮದೊಡಿಯಾ ವಿಜಯಾವಿಠಲನೆ । ಅಚ್ಯುತಾಪದವಿ ಗರುಹಾನೀನೆ" ॥ ಮುಂದೆ **ನಾರಾಯಣ** ಎಂದು ನುಡಿಯಲು, ಆಯಾ ಅಕ್ಷರ ಮಾಹಾತ್ಮೆ ಬಣ್ಣಿಸುತ್ತಾರೆ. "**ನಾ** ಯೆಂದು ನುಡಿಯಲು ನಾನಾ ನರಕನಾಶ । **ರಾ** ಯೆಂದು ಪೇಳಲು ರಾಯಪದವಿಯಕ್ಕು । **ಯ** ಯೆಂದು ವರ್ಣಿಸಲು ಎಲ್ಲ ಕಾಲದಲ್ಲಿ । ಶ್ರೇಯಸ್ಸಿನಲ್ಲಿ ಆನಂದಕ್ಕೆ ಅಭಿವೃದ್ಧಿ । **ಣಾ** ಯೆಂದದರ ಫಲವಾರು ಪೇಳುವರಯ್ಯಾ । ಭೂವ್ಯೋಮ ಪಾತಾಳ ಮಧ್ಯದಲ್ಲಿ । ರಾಯಾಮಹಿಷ್ವಾಸಾ ವಿಜಯವಿಠ್ಠಲನ್ನ ಗಾಯನ್ನವಾಳ್ಪನ್ನ ಮತಿಗೆ ನಮೊ ನಮೊ ॥ ೩ ॥" "ತುಲವೆಂಬೊ ಪಾಪಕ್ಕೆ ಪಾಪಕ ಹರಿನಾವಾ । ತಿಳಿದು ಶ್ರೀಮತಿ ನಮ್ಮ ವಿಜಯವಿಠಲನೊಲಿಸೆ ॥ ೬ ॥ ಇಂತು ಶ್ರೀ ಪುರಂದರ ವಿಜಯರ ವಚನಗಳಿಂದಲೇ ಹರಿನಾಮ ಮಹಾ ಮಾಹಾತ್ಮೆ ಸವಿದುಣ್ಣ ಅವರು ಉಂಡ ಎಂಜಲ ಉಣ್ಣುವದೇ ಸವಿಕರ ರುಚಿಕರ – ಸುಖಕರ, ಆನಂದ ಕರ, ಮುಕ್ತಿದವೆಂದು ಭಾವಿಸಿ ಈ ಜ್ಞಾನಿಗಳು ಪೊರೆದ ಹರಿನಾಮ ಮಹಿಮೆ ಬೇಸರದೆ ಸವಿಯಿರೆಂದು ಸಜ್ಜನರ ಪದಕೆರಗಿ ಬೇಡುವೆ.

## ಹರಿನಾಮೋಚ್ಚಾರಕ್ಕೆ ಕಾಲ

"ಕೃತಯುಗದೊಳಗೆ ಅಪರಿಮಿತ ಧ್ಯಾನವನ್ನು । ಮಿತಿ ಇಲ್ಲದಂತೆ ಸತತ ಮಾಡಿದರನ್ನ । ತ್ರೇತಾಯುಗದೊಳಗುನ್ನತ ದಾನದಿಂದ ಅತಿಶಯವಾಗಿ

ಸಮ್ಮತವೆನಿಸಿದರನ್ನ । ಚತುರದ್ವಾಪರದಲ್ಲಿ ಪ್ರತಿದಿವಸ ಬಿಡದಲೆ । ಹಿತವಾಗಿ ಕರ್ಮ ಪ್ರತಿ ಇಲ್ಲದಲೆ ಮಾಡೆ । ಗತಿಗೆ ಸಾಧನವಲ್ಲ ಪ್ರತಿಕೂಲವಲ್ಲದಲೆ । ಮತಿವಂತರ ಪ್ರೀಯ ವಿಜಯವಿಠಲನ್ನ ಕಥನ (ಕಥ್ಥನ) **ನಾಮಾಮೃತಕೆ ಪ್ರತಿಗಾಣೆ ಕಲಿಯುಗದಿ ॥ ೨ ॥** ( ಸು. ಸಾಧನ ಭಾಗ ೧, ಸು. ೨೪ ಮಟ್ಟ ತಾಳ) "ಕಲೌ ಕೃಷ್ಣಸ್ಯ ಕೀರ್ತನಂ" ಎನ್ನುವಂತೆ ದಾಸರಾಯರು ಕಲಿಯುಗ ದಲ್ಲಿ ಬಹು ಸುಲಭ ಸಾಧನ ಶ್ರೀಹರಿಯ ನಾಮಸ್ಮರಣೆ, ಏಕಂದರೆ ಇತರ ಯುಗಗಳಿಗಿಂತಲೂ ಕಲಿಯುಗದಲ್ಲಿ ಹುಟ್ಟುವ ಜನರ ಆಯು, ಅನ್ನ ಐಶ್ವರ್ಯ ದೇಹ, ಜ್ಞಾನ ಪರಿಸ್ಥಿತಿ ಬಹು ಕಡಿಮೆಯಾದುದರಿಂದ ಸುಲಭವಾದ ಭಗವ ನ್ನಾಮ ಕೀರ್ತನೆಗೆಯೇ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಹರಿನಾಮಸ್ಮರಣೆಗೆ ಕಾಲ ನೇಮವಿಲ್ಲ. ದೇಶ ಪ್ರಾಶಸ್ತ್ಯ ಇಲ್ಲ. ಯಾವ ದೇಶದಲ್ಲಿ ಹರಿನಾಮಸ್ಮರಣೆ ಬರುವದೋ ಅದೇ ಪುಣ್ಯ ದೇಶ – ಅದೇ ಪರ್ವಕಾಲ,–"ಸರ್ವದೇಶವು ಪುಣ್ಯ ದೇಶವು ಸರ್ವಕಾಲವು ಪುಣ್ಯ ಕಾಲವು ಶರ್ವವಂದ್ಯನ ವಿಮಲಮೂರ್ತಿ ಧ್ಯಾನ ಉಳ್ಳವಗೆ" ಎಂದು ಹಿಂದಿನ ಸಂಧಿಯಲ್ಲಿ ದಾಸರಾಯರು ಅಪ್ಪಣೆಕೊಡಿಸಿದ್ದಾರೆ. ಶುಚಿಯಾಗಿರಲಿ ಅಶುಚಿಯಾಗಿರಲಿ ಸರ್ವದಾ ಸರ್ವತ್ರ ಹರಿನಾಮಸ್ಮರಣೆ ಮಾಡುವದೆಂದು ಅನೇಕ ವಚನಗಳಿವೆ. ಯಾವ ಕಾಲದಲ್ಲಿ ಹರಿನಾಮಸ್ಮರಣೆ ಇಲ್ಲವೋ ಅದೆ ಪಾಪಿಕಾಲ, ಬರಗಾಲ, ಕಾರಣ ಸಂತತವಾಗಿ ಹರಿನಾಮಸ್ಮರಣೆ ಮಾಡುವದೆಂದು ದಾಸರ ವಚನ. ಪದ್ಯ ೧, ೨, ೩ ಚೆನ್ನಾಗಿ ನೋಡಿರಿ.

## ಹರಿನಾಮೋಚ್ಚಾರಣೆಗೆ ಅಧಿಕಾರಿ ಯಾರು ?

ಪದ್ಯ ೪ರಲ್ಲಿ ಆವಕುಲದವನಾದಡೇನು, ಆವದೇಶದೊಳಿದ್ದರೇನು, ಆವ ಕರ್ಮವ ಮಾಡಿದರೇನು ? ಆವಕಾಲವಾದರೇನು ಶ್ರೀದೇವಿ ರಮಣನ ನೆನಹು ಮರೆಯದೇ ಪೂಜಿಸುವ ಜ್ಞಾನಿಗಳಿಗೆ ಭಯ ದುಃಖಾದಿ ದೋಷಗಳಿಲ್ಲವೆಂದು ಹೇಳಿದ್ದಾರೆ. "ಯಸ್ಯದೇವೇಪರಾಭಕ್ತಿಃ ಯಥಾದೇವೇ ತಥಾಗುರೌ ॥ ತಸ್ಯೈತೆ ಕಥಿತಾಹ್ಯರ್ಥಾಃ ಪ್ರಕಾಶಂತೆ ಮಹಾತ್ಮನಾ ಇತ್ಯಾದಿ ಶ್ರುತಿಭ್ಯಶ್ಚ ॥ ಶ್ರೀ ಸರ್ವ ಜ್ಞರ ಬ್ರಹ್ಮಸೂತ್ರಭಾಷ್ಯ ॥ ಯಾವಾತನಿಗೆ ದೇವರಲ್ಲಿ ಉತ್ತಮವಾದ ಸರ್ವೋ ತ್ತಮ ಜ್ಞಾನದಿಂದ ಭಕ್ತಿ ಮಾಡುತ್ತದೋ, ಅದರಂತೆಯೇ ತಾರತಮ್ಯಾನು ಗುಣವಾಗಿ ಬ್ರಹ್ಮ ವಾಯ್ವಾದಿ ಗುರುಗಳಲ್ಲಿ ಭಕ್ತಿ ಇದೆಯೋ ಆ ಗುರುಗಳ

ಉಪದೇಶದಿಂದ ತತ್ವಾರ್ಥವು ಪ್ರಕಾಶವಾಗುತ್ತದೋ, ಅವರ ಜ್ಞಾನದಲ್ಲಿ ಬಿಂಬಿಸಿ ಹೊಳೆಯುತ್ತದೋ, ಆತನೆ ಯೋಗ್ಯ ಅಧಿಕಾರಿ ಎಂದು ಶ್ರುತಿಗಳಿಂದ ಹೇಳಲ್ಪಟ್ಟಿದೆ. "ವ್ಯೋಮಸಂಹಿತಾಯಾಂಚ" **ಅಂತ್ಯಜಾ ಅಪಿಯೇಭಕ್ತಾ ನಾಮಜ್ಞಾನಾಧಿಕಾರಣಃ ||** ವ್ಯೋಮ ಸಂಹಿತೆಯಲ್ಲಿಯೂ ಕೂಡ ಬ್ರಹ್ಮ-ಕ್ಷತ್ರ ವೈಶ್ಯ ಮೂವರೇ ಅಧಿಕಾರಿಗಳೆಂದಲ್ಲ, ತ್ರಿವರ್ಣ ಬಾಹ್ಯರಾದ ಶೂದ್ರರನ್ನಾರಂಭಿಸಿ ಪುಲ್ಕಸ ಇತ್ಯಾದಿ ಅಂತ್ಯಜ ಅತಿಶೂದ್ರರೂ ಬ್ರಹ್ಮಜ್ಞಾನ ಅಧಿಕಾರವಿಲ್ಲದಿದ್ದಾಗ್ಯೂ ಸರ್ವೋತ್ತಮನಾದ ವಿಷ್ಣುಭಕ್ತರಾಗಿರುವದರಿಂದ ವಿಷ್ಣು ಮೊದಲಾದ ನಾಮಜ್ಞಾನದಲ್ಲಿಯೂ, ಭಾಷಾತ್ಮಕ ಪ್ರಬಂಧಾಧ್ಯಯನದಲ್ಲಿಯೂ ಅದರಿಂದುಂಟಾದ ಬ್ರಹ್ಮಜ್ಞಾನದಲ್ಲಿಯೂ, ಅಧಿಕಾರಿಗಳು ಎಂದು ಉಕ್ತವಾಗಿದೆ. ಯಾಕಂದರೆ ಅವರೂ ಮುಕ್ತಿಯೋಗ್ಯರೇ ಮತ್ತು ಶ್ರೀ ಸರ್ವಜ್ಞರು "ಸ್ತ್ರೀ ಶೂದ್ರಬ್ರಹ್ಮ ಬಂಧೂನಾಂ ತಂತ್ರಜ್ಞಾನಾಧಿಕಾರಿತಾ |

ಏಕದೇಶೇ ಪರೋಕ್ತೇತುನತುಗ್ರಂಥಪುರಸ್ಸರೇ ||

ಬ್ರಾಹ್ಮಣಾದಿ ಸ್ತ್ರೀಯರಿಗೂ ಶೂದ್ರರಿಗೂ, ಬ್ರಹ್ಮ ಬಂಧುಗಳಾದ ಬ್ರಾಹ್ಮಣಾಭಾಸಕರಿಗೂ, ಪರಂಪರಾ ಒಬ್ಬರಿಂದ ಇನ್ನೊಬ್ಬರಿಗೆ ಪ್ರಾಪ್ತವಾದ ಏಕದೇಶ ಪಂಚರಾತ್ರಾದಿಗಳಿಂದ ಉತ್ಪನ್ನವಾದ ಅರ್ಥವತ್ತಾದ ಬ್ರಹ್ಮಜ್ಞಾನದಲ್ಲಿಯೇ ಅಧಿಕಾರವು ಹೊರ್ತಾಗಿ **ವೇದವಿದ್ಯಾ ಅಧಿಕಾರವಿಲ್ಲ.** ಇಂಥವರು ವಿಷ್ಣು ಭಕ್ತರಾಗಿದ್ದರೆ ನಾಮಾಧಿಕಾರವು ಇದೆ. "ಆವಕುಲದವನಾದಡೇನು ಶ್ರೀ ವಾಸುದೇವನೆಂದವನೆ ಧನ್ಯ" ಎಂಬ ದಾಸರವಚನದಂತೆ ಭಕ್ತಿಯೇ ಮುಖ್ಯ ಪ್ರಾಧಾನ್ಯ. ಇದನ್ನು ಶ್ರೀ ವಿಜಯದಾಸಾರ್ಯರು ಅಂತ್ಯಜ ಹೊಲೆಯ ಹೊಲತಿಯಾರೆಂಬುದನ್ನು ೨ ಸುಳಾದಿಯಲ್ಲಿ ವಿವರಿಸುತ್ತಾರೆ. "ಅಂತ್ಯಜಾ ಪ್ರಿಯೇಭಕ್ತಾ" ಎಂಬುವ ಅರ್ಥವನ್ನು ಬಹು ಸ್ವಾರಸ್ಯವಾಗಿ ವರ್ಣಿಸಿರುತ್ತಾರೆ. ಯಾರು ಹರಿಯ ಭಕ್ತರಲ್ಲೋ ಅವರೇ ಹೊಲೆಯರು. ಅವರಿಗೆ ನಾಮಾಧಿಕಾರವೂ ಇಲ್ಲ.

೧. ಬಲು ದೈವವಿಜಯವಿಠಲನ ಪಾದಾಬ್ಜಕೆ (ಭಕ್ತಿ) | ವಿಳಿಯದವಳು ಶುದ್ಧ ಹೊಲತಿ ಕಾಣಿರೋ ||
೨. ರಕ್ಕಸಾಂತಕ ನಮ್ಮ ವಿಜಯವಿಠಲ ಹರಿಯ | ಭಕ್ತರಲ್ಲಿ ದ್ವೇಷಮಾಡುವವಳೆ ಹೊಲತಿ ||

೩. ಶಾಂತಮೂರುತಿ ನಮ್ಮ ವಿಜಯವಿಠಲನಂಘ್ರಿ ಸಂತತ ನೆನೆಯದವಳಿ ಹೀನ ಹೊಲತಿ.

೪. ಸಿದ್ಧ ಮಹಿಮಸ್ವಾಮಿ ವಿಜಯವಿಠ್ಠಲ ಹರಿಯ ಸದ್ಭಕ್ತಿಗಳೀಗ ಇಲ್ಲದವಳು ಹೊಲತಿ ॥

೫. ಥಿಟ್ಟ ಮೂರುತಿ ನಮ್ಮ ವಿಜಯವಿಠ್ಠಲನ ಪಟ್ಟಣ ಸೇರುವಂಥ ಮನ ಮಾಡದವಳು ಹೊಲತಿ.

೬. ಸಂತತವೆಸಗಿರ್ದ ಕರ್ಮ ತನ್ನ ಪತಿಯ । ಕಾಂತ ವಿಜಯವಿಠಲಗೀಯದವಳಿ ಹೊಲತಿ ॥ ಮತ್ತು ಹರಿಯಲ್ಲಿ **ಭಕ್ತಿವಿಹೀನನಾದವ ಹೊಲೆಯನೆಂದು** ಆಜ್ಞಾಪಿಸಿದ್ದಾರೆ.

ಸುಳಾದಿ ತಾಳಗಳ ಕೊನೆಭಾಗ ಮಾತ್ರ ಕೊಟ್ಟಿದೆ.

೧. ಇಳೆಯವಲ್ಲಭ ನಮ್ಮ ವಿಜಯವಿಠಲರೇಯನ । ತಿಳಿದು ಪೂಜಿಸದವ ಮಲ ಭಕ್ಷಿಸುವ ಹೊಲೆಯ ॥೧॥

೨. ಪನ್ನಗಶಯನ ಶ್ರೀ ವಿಜಯವಿಠ್ಠಲನ್ನ ಸನ್ನುತಿಸಿ ಜ್ಞಾನಪಡೆಯದಿದ್ದವ ಹೊಲೆಯ ॥೨॥

೩. ಪವನನುತ ನಮ್ಮ ವಿಜಯವಿಠ್ಠಲನಂಘ್ರಿ **ನವಭಕುತಿಯಿಂದ ಅರ್ಚಿಸದವ** ಹೊಲೆಯ.

೪. ರತಿಪತಿ ಪಿತ ನಮ್ಮ ವಿಜಯವಿಠ್ಠಲನ ಬಿಟ್ಟು । ಸತತ ಸಂಸಾರಾಸಕ್ತನು ಹೊಲೆಯ ॥

೫. ಅಸುರಾರಿ ವಿಜಯವಿಠ್ಠಲ ಪರದೈವವೆಂದು । ಕುಶಲದಲಿ ಹಾಡಿ ಪಾಡದವನು ಹೊಲೆಯ ॥

೬. ಇದರೊಳು ಕ್ರಮ ಉಂಟು ವಿಜಯವಿಠ್ಠಲನ್ನ **ಪದಗಳರ್ಚಿಸದವ ಎಂದಿಗೂ ನಿಜ ಹೊಲೆಯ ॥** ನೆಂದು ಹೇಳಿರುವದು ಸುಳ್ಳಲ್ಲ.

ನಿಜವಾಗಿಯೂ ಯಾರಿಗೆ ಭಗವಂತನಲ್ಲಿ ಭಕ್ತಿ ಆತ್ಮಾರ್ಪಣ ಬುದ್ಧಿ ಇಲ್ಲವೋ-ಶಮದಮಾದಿ ಸಂಪನ್ನ ವಿಪ್ರನಾದರೂ, ಭಗವದ್ವಿಮುಖನೂ, ದುರಾಭಿಮಾನಿಯೂ ಆದ ಬ್ರಾಹ್ಮಣನಿಗಿಂತಲೂ, ಮನೋವಾಕ್ ಕಾಯ ಪ್ರಾಣಗಳನ್ನು ಭಗವಂತನಲ್ಲಿ ಸಮರ್ಪಿಸುವ ಆತ್ಮಾರ್ಪಣ ಬುದ್ಧಿಯುಳ್ಳ ಚಾಂಡಾಲನೇ ಶ್ರೇಷ್ಠ ಉತ್ತಮನೆಂದು ತಿಳಿಯುತ್ತೇನೆ. ಅವನು ತನಗೆ ಗೋಚರವಾದ ಸಕಲ

ವಸ್ತುವನ್ನೂ ಪವಿತ್ರಗೊಳಿಸುವನು. "ನತು ಭೂರಿಮಾನ" ದುರಾಭಿಮಾನಿಯಲ್ಲ ವೆಂದು ಶ್ರೀ ಪ್ರಲ್ಹಾದರಾಜರು ಶ್ರೀನೃಸಿಂಹ ದೇವರನ್ನು ಸ್ತೋತ್ರಮಾಡಿದ್ದಾರೆ. ಹೊಲೆಯನಿಗಾದರೂ **ಭಕ್ತಿ ಪ್ರಾಧಾನ್ಯವೇ** ಮುಖ್ಯ. "ಭಾಗವತಸಪ್ತಮ."

ಅಂತ್ಯಜ ಸ್ತ್ರೀ ಸಹಸವಾಸದಿಂದ ಅಜಾಮಿಳನೆಂಬೊ ವಿಪ್ರನು ೧೦ ಜನ ಮಕ್ಕಳನ್ನು ಪಡೆದ. ಪ್ರಾಣಾಂತಿಮ ಕಾಲದಲ್ಲಿ ದೂರದಲ್ಲಿ ಆಡುವ ಕಡೆಯ ಪುತ್ರನನ್ನು ಸ್ನೇಹದಿಂದ ನಾರಾಯಣನೆಂದು ಕರೆಯಲು, ವಿಷ್ಣು ದೂತರು ಬಂದು ಯಮದೂತರನ್ನು ಹೆದರಿಸಿ, ವೈಕುಂಠಕ್ಕೆ ಕರದೊಯ್ದರೆಂಬು ದನ್ನು ಭಾಗವತ ೬ನೇ ಸ್ಕಂದದಲ್ಲಿ ಓದಿದ್ದು, ತಾವು ಮರೆತಿರಲಿಕ್ಕಿಲ್ಲ.

ಇಲ್ಲಿ ಭಾಗವತ ಸಾರೋದ್ಧಾರಕಾರರು ಬಹು ರಹಸ್ಯವಾಗಿ ವಿಚಾರ ಮಾಡಿದ್ದಾರೆ. "ನನ್ವೇವಂ ನಾಮಕೀರ್ತನರೂಪ ಭಾಗವತ ಧರ್ಮಾನು ಷ್ಠಾನಸ್ಯ ಈ ದೃಶಮಾಹಾತ್ಮ್ಯಚೇತ್ ಕಿಮಿತಿ ಲೋಕೋನಾರಕಂ ದುಃಖ ಮನುಭವತೀತ್ಯತಃ ಸತ್ಯಂ। ತಥಾಪಿನೇದಾಂ ಸರ್ವೇಷಾಂಲಭ್ಯೇ, ಕಿಂತುಯೇ ಜನ್ಮಾಂತರೇಷು ಮಹತ್ಪಾದರಜೋಭಿಷಿಕ್ತಾಸ್ತತ್–ಏವ ಸಂಪಾದಿತ ಭಾಗವತ ಧರ್ಮಾನುಷ್ಠಾನ ಪರಿನಿಷ್ಟಿತ ಬುದ್ಧಯಸ್ತೇಷಾಮೇ ವೇದಂ ಭಗವನ್ನಾಮ ಕೀರ್ತನಲಭ್ಯತೇ। ಅನ್ಯೇತು ಪುನಃ ಭಾಗವತ ಜನಸಂಗ ವಿಧುರಾಃ ಭಗವ ನ್ಮಾಯಾ ಮೋಹಿತ ಬುದ್ಧಯಃ ಅನ್ಯತ್ರೇವ ಶ್ರದ್ಧಾಜ್ಯಾಡ್ಯೇನ ನೇದಂ ನಿರೀಕ್ಷ್ಯಂತೆ ಇತ್ಯಾದಿ ॥

ಜನ್ಮ ಜನ್ಮಾಂತರದಲ್ಲಿ ಮಹತ್ಪಾದ ರಜೋಭಿಷೇಕದಿಂದ ದುಷ್ಕರ್ಮ ಹೋಗಾಡಿದವರಿಗೆ ಭಗವನ್ನಾಮ ದೊರಕುವದೆಂದು ಶ್ರೀ ಪುರಂದರದಾಸರು ಕೊಂಡಾಡಿದ್ದಾರೆ. "ಸುಮ್ಮನೆ ದೊರಕುವದೇನೋ ಶ್ರೀರಾಮನ ದಿವ್ಯ ನಾಮವು ಜನ್ಮ ಜನ್ಮಾಂತರದಾ ದುಷ್ಕರ್ಮ ಹೋದವಗಲ್ಲದೆ ॥ ಭಕ್ತಿರಸದಲ್ಲಿ ತನ್ನ ಚಿತ್ತ ಪರಿಶುದ್ಧನಾಗಿ । ಅಚ್ಯುತನ್ನ ನಾಮವ ಬಚ್ಚಿಟ್ಟುಕೊಂಡವ ಗಲ್ಲದೆ ॥ ೧ ॥ ಕಂತುಪಿತನ ದಿವ್ಯನಾಮ ಅಂತರಂಗದೊಳಿಟ್ಟು ॥ ಚಿಂತೆಯೆಲ್ಲವ ಬಿಟ್ಟು ನಿಶ್ಚಿಂತನಾದವಗಲ್ಲದೆ ॥ ೨ ॥ ಕಣ್ಣೊಳಗಿದ್ದ ಮೂರುತಿ ತನ್ನೊಳಗೆ ತಂದು ॥ ಘನ್ನಪೂರ್ಣ ಪುರಂದರವಿಠಲನ್ನ ಕೊಂಡಾಡದೇ ॥ ೩ ॥

ಇಂತು ಜನ್ಮ ಜನ್ಮದಲ್ಲಿದ್ದ ದುಷ್ಕರ್ಮ ಹೋದವಗಲ್ಲದೇ ಎಂಬುದು, ಇದು ಸತ್ಯ ಸತ್ಯ ಸತ್ಯ. ಆದರೆ ಹರಿಯಲ್ಲಿ ಭಕ್ತಿ ಇಲ್ಲದೇ ಇತರ ಕೆಲ ಮುಕ್ತೀ

ಯರು ರಾಮನಾಮ ಭಜಿಸಲಿಲ್ಲವೇ ? ಅದ್ಯಾಪಿ ವಿಠಲನನಾಮ ಪಂಢರಿಯಲ್ಲಿ ಭಜಿಸುತ್ತಲೆ ಇರುವರು. ಅವರಿಗೆ ಮುಕ್ತಿ ಇಲ್ಲವೇ, ರಾಮವಿಠ್ಠಲ ನಾಮವು ಭಜಿಸಿದ್ದಕ್ಕೆ ರಾಮನಾಮ ವ್ಯರ್ಥವೇ ಎಂದು ಹಲವಾರು ಪ್ರಶ್ನೆಗಳು ಆಕ್ಷೇಪ ಗಳು ಬಂದೇ ಬರುತ್ತವೆ. ಶ್ರೀ ವಿಜಯದಾಸರಾಯರು ಒಂದೇ ಮಾತಿನಲ್ಲಿ ಇದನ್ನು ಪರಿಹರಿಸಿದ್ದಾರೆ. "ಯಜ್ಞವಧದಲ್ಲಿ ಯೂಪಸ್ತಂಭಕ್ಕೆ ಕಟ್ಟಿದ ಮೇಕೆಯು ಇನ್ನೊಂದು ಕ್ಷಣದಲ್ಲಿ ತನ್ನ ವಧವಾಗುವದೆಂದು ಅರಿಯದೇ ಹೇಗೆ ಸ್ತಂಭಕ್ಕೆ ಕಟ್ಟಿದ ತಳಿರು ತೋರಣಗಳನ್ನು ತಿನ್ನುತ್ತಿದೆಯೋ, ಅದರಂತೆ, ತಾಮಸರು ಸರ್ವೋತ್ತಮನೆಂಬ ಜ್ಞಾನವಿಲ್ಲದೇ ರಾಮನಾಮ ಭಜಿಸಿದ್ದಕ್ಕೆ ಮೇಕೆ ತಳಿರು ತೋರಣವೆದ್ದಂತೆ ಇಹದಿ ಕಿಂಚಿತ ಸೌಖ್ಯಕೊಟ್ಟು ಕೊನೆಗೆ ವಧಮಾಡಿ ತಾಮಸರಿಗೆ ಅಂಧ ತಮಸ್ಸೇ ಕೊಡುವನು ನಿಜ. ಈ ತತ್ವವನ್ನರಿತ ಶ್ರೀ ಜಗನ್ನಾಥದಾಸಾರ್ಯರ ಸಾಕ್ಷಾತ್ ಶಿಷ್ಯರೂ ಅಪರೋಕ್ಷಜ್ಞಾನಿಗಳೂ ಆದ ಶ್ರೀ ಶ್ರೀದವಿಠಲರು ( ಕರ್ಜಗಿ ದಾಸಪ್ಪದಾಸರು ) ಶ್ರೀ ವಿಠಲದೇವರು ಪಂಡರಪುರದಿಂದ ವಿಜಯನಗರ ವಿಠಲ ದೇವಾಲಯಕ್ಕೆ ತಾವಾಗಿ ಅನುಗ್ರಹಿಸಿ ದಯಮಾಡಿದ್ದನ್ನು ಒಂದು ಪದದಲ್ಲಿ ವರ್ಣಿಸಿದ್ದಾರೆ.

"ಏನಿದು ಕೌತುಕವೋ ವಿಠಲಾ ನೀನಿಲ್ಲಿಗೆ ಬಂದ್ಯಾ
ವಿಠಲ ಪಂಡರಿಯನು ಬಿಟ್ಟು । ವಿಠಲ ನೀನಿಲ್ಲಿಗೆ ಬಂದ್ಯಾ ॥ ಪಲ್ಲ ॥
ಮಧ್ವದ್ವೇಷಿಗಳು ಮಾಡುವ ಪದ್ಧತಿಯನೆ ಕಂಡು ವಿಠಲಾ ।
ಸದ್ದು ಮಾಡದೇ ಕದ್ದು ಕಳ್ಳ ನಿಂತಿದ್ದಿಲ್ಲಿಗೆ ಬಂದ್ಯಾ ವಿಠಲಾ ॥ ೧ ॥
ಮಿಥ್ಯಾವಾದಿಗಳು ನಿನ್ನನು ಸುತ್ತು ಮುತ್ತಿಕೊಂಡು ವಿಠಲ ।
ಅತ್ತು ಕರೆದು ಕೂಗುತ್ತಿರೆ ಬಹು ಬ್ಯಾಸತ್ತು ಹೊರಟುಬಂದ್ಯಾ ॥ ೨ ॥
ಶ್ರೀದವಿಠಲ ನಿನ್ನ ಸದ್ಗುಣ ವೇದಶಾಸ್ತ್ರಗಳಲಿ ವಿಠಲಾ ।
ಶೋಧಿಸಿನೋಡಲು-ಭೂದೇವರಿಗೊಲಿದಾದರಿಸಲು ಬಂದ್ಯಾವಿಠಲ ॥ ೩ ॥

ಮಿಥ್ಯಾಮತದವರು ಏನು ಸ್ತೋತ್ರಮಾಡಿದರೂ ಅವರ ಆ ಸ್ತೋತ್ರವು ಅಳು ವದು ಕರೆಯುವದು ಕೂಗುವದೇ ಅಲ್ಲದೆ ವಿಠಲನಿಗೆ ಪ್ರೀತಿಕರವಲ್ಲ.

ಇದೇ ವಿಷಯವನ್ನು ಶ್ರೀ ವಿಜಯದಾಸರು ಭಗವನ್ನಾಮೋಚ್ಚಾರಕ್ಕೆ ಅಧಿಕಾರಿ ಯಾರೆಂಬುದನ್ನು ಸಾಧನ ಸುಳಾದಿ ೨೪, ಪುಟ ೫೦ ಧ್ರುವತಾಳದಲ್ಲಿ "ನಾಮವ ನೆನೆಯುವದು ನಾಮಧಾರಿಯಾಗಿ । ನೇಮವ ಬಿಡದೇಕಮೇವ

ಹರಿಯೆಂದು । ಕಾಮಕ್ರೋಧ ಮತ್ಸರಾದಿ ಮರಿಯಾದಿಗಳ ನೀ । ಮರೆದು ನಿತ್ಯ ರೋಮಾಂಚನದಿಂದ । ತಾಮಸ ಗುಣಗಳ ಕಾಮಿಸದಲೆ ನಿ । ಷ್ಕಾಮ ದಲ್ಲಿ ಬಾಷ್ಪೋದಕ ಸುರಿಸುತ್ತ । **ಶ್ರೀ ಮಾರುತನ ಮತವಾ ಮಹೋದಧಿ ಯೊಳು ಉ । ತ್ತಮ ಮನಸಿನಲ್ಲಿ** ಶ್ರೀ ಮುದ್ರೆಯನ್ನೆ ಧರಿಸಿ । ಕೋಮಲ ನೀನಾಗಿ ತುಲಸಿ ಮಾಲಿಕೆಯಿಂದ ಶ್ರೀ । ರಮಣ ವಿಜಯವಿಠ್ಠಲ ಸರ್ವ ಸ್ವಾಮಿಯ ಒಂದೇ ಸಾರಿ ನಾಮವ ನೆನೆವುದು ॥೧॥ ಹರಿಸರ್ವೋತ್ತಮ ಜ್ಞಾನ ಕಾಮಕ್ರೋಧ ಮದಮತ್ಸರಾದಿಗಳ ತ್ಯಾಗ, ಭಕ್ತಿರಸದಿಂದ ಭಗವನ್ನಾಮ ಉಚ್ಚರಿಸುವಾಗ್ಗೆ ರೋಮಾಂಚನ ಏಳುವದು, ತಾಮಸಾದಿ ದುರ್ವಿಷಯಗಳನ್ನು ಕಾಮನಾಮಾಡದೆ ಬಿಡುವದು ನಿಷ್ಕಾಮ ಭಕ್ತಿಯಿಂದ ಕಣ್ಣಿನಿಂದ ಆನಂದ ಬಾಷ್ಪಗಳನ್ನು ಸುರಿಸುತ್ತ ಎಲ್ಲಕ್ಕಿಂತಲೂ ಹೆಚ್ಚಿಗೆ ಶ್ರೀ ಮಾರುತ ಮತ ಪಂಚ ಭೇದ ತಾರತಮ್ಯ ಜ್ಞಾನದಿಂದ ಈ ಉತ್ತಮ ಮತ ಮಹೋದಧಿಯಲ್ಲಿ ಉತ್ತಮ ಮನಸಿನಿಂದ ಚರಿಸುತ್ತ ಶ್ರೀ ಗೋಪಿಚಂದನ ಶ್ರೀ ಮುದ್ರೆ ತುಲಸಿ ಮಾಲೆಯ ಧರಿಸಿ ಶ್ರೀದೇವಿಗೆ ಒಡೆಯನಾದ ವಿಜಯವಿಠಲನು ಸರ್ವಸ್ವಾಮಿ ಮಮಸ್ವಾಮಿ ಎಂದು ಒಂದೇ ಸಾರಿ ನಾಮವನ್ನು ನೆನೆಯಬೇಕೆಂದು ಆಜ್ಞಾಪಿಸಿದ್ದಾರೆ.

ಮುಂದೆ ಸುಳಾದಿ ೩೨ ಆದಿತಾಳದಲ್ಲಿ—"ದ್ವೇಷದಲಿಯಾಗಲಿ ಪರಿಹಾಸ್ಯ ದಲಿಯಾಗಲೀ । ಭಾಸದಲಿ ಆಗಲೀ ಆಭಾಸದಲಿ ಆಗಲೀ । ಕ್ಲೇಶದಲಿ ಆಗಲೀ ಅಕ್ಲೇಶದಲಿಯಾಗಲಿ । ಮಾಸಲಾದ ಜ್ಞಾನ ಅಜ್ಞಾನದಲಿ ಆಗಲೀ । **ಆಶೆ ಯನು ಬಿಟ್ಟು** ವಿಶೇಷ ಭಕುತಿಯಿಂದಲಿ । **ದಾಸ ನಾನೆಂದು ಕೈಮುಗಿದು** ನೀ ಸಲಹೊ ಹರಿಯೆನಲು । ಏಸೇಸು ಜನ್ಮದ ಅಘನಾಶವಾಗುವದು । ಈಶ ನಹುಷ ವಿಜಯವಿಠ್ಠಲ ಅ । ಶೇಷ ದೋಷ ದೂರ । ವಾಸವಾಗಿ ಹೃದಯ ದೊಳು । ವಾಸನಾಮಯನೆನಿಸುವ ॥೫॥ ಭಕ್ತಿಯ ವಿಕಾಸ ಹರಿದಾಸ್ಯ ಭಾವ ಹರಿನಾಮ ನೆನೆಯಲು ಮುಖ್ಯವಾದದ್ದು ಅಧಿಕಾರ ವಿವೇಚನೆ ಇದನ್ನು ಶ್ರೀ ದಾಸರಾಯರು ಈ ಸಂಧಿಯಲ್ಲಿ ಪದ್ಯ ೫ ಆರಂಭಿಸಿ, ಪದ್ಯ ೨೧ ವರೆಗೆ ಒಳ್ಳೇ ರಸಭರಿತ–ಅರ್ಥಗರ್ಭಿತವಾಗಿ ನಿರೂಪಿಸಿದ್ದಾರೆ. ಟೀಕಾಕಾರರಾದ ಶ್ರೀ ವ್ಯಾಸ ದಾಸ ಸಿದ್ಧಾಂತ ಕೌಮುದೀಕಾರರು ಜ್ಞಾನಿಗಳು ಪದ್ಯ (೧) ಟೀಕಾದಲ್ಲಿ ಈ ವಿಷಯ ಚೆನ್ನಾಗಿ ವಿಸ್ತರಿಸಿದ್ದಾರೆ ನೋಡುವದು. "ಅಭಕ್ತ ಪಠಿತಂ ನಾಮ ಶ್ರುತಂಚ ನರಕಾವಹಮ್"

## ಹರಿನಾಮ ಹೇಗೆ ಉಚ್ಚರಿಸಬೆಕು?

ಎಂಬುದನ್ನು ಮೊದಲಿಗೆ ವರ್ಣಗಳ ವ್ಯಕ್ತತೆ, ವೇದವರ್ಣಗಳು ನಿತ್ಯಾದಿ, ಅಪರಿಛತ್ವ ವ್ಯಾಪ್ತತ್ವ ಚನ್ನಾಗಿ ತಿಳಿಯಬೇಕು. ಅಜಾದಿ ೫೧ ಜಡವರ್ಣಗಳಲ್ಲಿ ಒಂದೊಂದರಲ್ಲಿ ೬೪ ಭಗವದ್ರೂಪಗಳನ್ನು ಚಿಂತಿಸಬೇಕು. ವರ್ಣಗಳಿಗೆ ಒಬ್ಬೊಬ್ಬ ಅಭಿಮಾನಿದೇವತೆ ನಾಮಾಭಿಮಾನಿ ಉಷಾ ಪ್ರಾರಂಭಿಸಿ ಪ್ರಾಣ ಪರಿಯಂತರವಾಗಿ ಅಕ್ಷರಾಭಿಮಾನಿ ಅಕ್ಷರ ಪ್ರತಿಪಾದ್ಯ ಭಗವನ್ಮೂರ್ತಿಗಳನ್ನು ನೆನೆಯುತ್ತ ಶ್ರೀಹರಿ ರಾಮಕೃಷ್ಣ ಗೋವಿಂದ ಅಚ್ಯುತಾನಂತ ಮುರಾರೇ ಇತ್ಯಾದಿ ನಾಮಗಳ ಸರಿಯಾದ ಅರ್ಥವನ್ನು ಬುಧರಿಂದ ಉಪದೇಶ ಕೊಂಡು ಹರಿನಾಮ ರೂಪಗುಣೋತ್ಕರ್ಷಣಪೂರ್ವಕ ನಾಮಸ್ಮರಣೆ ಮಾಡಿದರೆ ಹರಿ ಯೊಲಿವ.

ಇಂದು ನಾಳೆ ಈಗಲೂ ಕಲಿಸಂತರಣೋಪನಿಷತ್ತಿನಲ್ಲಿದೆ ಎಂದು ಹಲ ವಾರು ಜನರು ಪ್ರಚುರಗೊಳಿಸಿ ಉತ್ತರ ದೇಶದವರು ಪತ್ರಿಕೆಗಳು ಹಂಚಹತ್ತಿ ದ್ದಾರೆ. ನಮ್ಮಲ್ಲಿಯೂ ಕೆಲವರು ತಾರತಮ್ಯ ಜ್ಞಾನವಿಲ್ಲದೇ "ಹರೇರಾಮ ಹರೇರಾಮ ಹರೇರಾಮ ಹರೇಹರೇ ॥ ಹರೇಕೃಷ್ಣ ಹರೇಕೃಷ್ಣ ಹರೇಕೃಷ್ಣ ಹರೇಹರೇ ॥" ಎಂದು ಸ್ಮರಣೆ ಮಾಡಿದರೂ ಶ್ರೀ ವಿಜಯರ ವಚನದಂತೆ ಅವರಿಗೆ ಅಹಿಕಫಲ.

ಈ ನಾಮವನ್ನು ಮೇಲೆ ವಿವರಿಸಿದಂತೆ ಅರಿತು ಚೆನ್ನಾಗಿ ನಾಮೋ ಚ್ಚಾರಣೆ ೧೬ ಸಲ ಮಾಡಬೇಕೆಂದು ಶಾಸ್ತ್ರಸಮ್ಮತ. ಅರ್ಥವಿಚಾರ ನಾಮ ವಿಚಾರ ಅದೆಲ್ಲ ಈಗಿನ ಕಾಲದವರಲ್ಲಿ ಎಲ್ಲಿ? ಯಾರಲ್ಲಿಯೂ ಇರುವದಿಲ್ಲ. ತಕ್ಕ ಫಲವೂ ಇಲ್ಲ. ಇದೇ ನಾಮೋಚ್ಚಾರದ ವಿಧಾನ ನಾಮ ಸಂಕೀರ್ತನ ಮಹಿಮೆ ಇನ್ನು ಹೆಚ್ಚಿಗೆ ಶ್ರೀಮದ್ಭಾಗವತದಲ್ಲಿ ಹೇಳಿದೆ.

## ಯಾವ ಕಾಲಗಳಲ್ಲಿ ಯಾವ ಯಾವ ಭಗವನ್ನಾಮೋಚ್ಚಾರಣೆ ಮಾಡಬೇಕು

ಶ್ರೀ ವಿಜಯದಾಸಾರ್ಯರು ೪-೬ ಸುಳಾದಿಲಿ ವಿವರಿಸಿದ್ದಾರೆ. ಯಾವ ಕಾಲದಲ್ಲಿ ಯಾವ ಭಗವದ್ರೂಪಗಳನ್ನು ಸ್ಮರಣಮಾಡಬೇಕೆಂದು ವಿವರಿಸಿದ್ದಾರೆ.

ಗರುಡಪುರಾಣ ಬ್ರಹ್ಮಕಾಂಡದಲ್ಲಿಯೂ ಹೇಳಿದೆ. ಉಪಾಸನಾಭಾಗ ಸುಳಾದಿ ೪೨. "ಗುಣಕಾಲ ದೇಶಕರ್ಮ ಕ್ರೀಯನಾಮತೀರ್ಥ ದೇಹ ಜನನ ಮಿಕ್ಕಾದ ನಾಲ್ಕು ಬಗೆ ವ್ಯಾಪಾರ" ಈ ಸುಳಾದಿಲಿ. ಸಕಲಕ್ರಿಯೆಗಳಲ್ಲಿ ಸ್ಮರಿಸತಕ್ಕ ಭಗವದ್ರೂಪಗಳನ್ನು ಹೇಳಿದ್ದಾರೆ. ಇದರ ವಿವರ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಪದ್ಯ ೨ರಲ್ಲಿ ಆಯಾ ಭಗವದ್ರೂಪ ನಾಮಗಳನ್ನು ಚೆನ್ನಾಗಿ ವಿವರಿಸಿದ್ದಾರೆ. ಮುಂದೆ ಟೀಕಾ ನೋಡಿರಿ. ಮತ್ತು ವೇದೋಪನಿಷತ್‌ಗಳ ನಿಯಾಮಕರೂಪ ನಾಮಗಳ ವಿವರ ಉಪಾಸನಾಭಾಗ ಸುಳಾದಿ ೪೧ರಲ್ಲಿ ಹೇಳಿದ್ದು ಇದೆ. "ಪ್ರತಿಪಾದ್ಯ ಭಗವನ್ಮೂರ್ತಿಗಳುಂಟು. ನಿತ್ಯಾನಿತ್ಯ ಶ್ರುತಿ ಪುರಾಣ ಮಿಗಿಲಾದ ಓದಿನಲ್ಲಿ." ಇದರಲ್ಲಿ ೧ ಋಗ್ವೇದಕ್ಕೆ = ವಾಸುದೇವ, ೨ ಯಜುರ್ವೇದಕ್ಕೆ ಸಂಕರ್ಷಣ, ೩ ಸಾಮವೇದಕ್ಕೆ ಪ್ರದ್ಯುಮ್ನ, ೪ ಇತಿಹಾಸ ಪುರಾಣ ಅಥರ್ವಣ ವೇದಕ್ಕೆ ಅನಿರುದ್ಧ, ೫ ಸರ್ವ ಆಗಮಗಳಿಗೆ ನಾರಾಯಣ, ೬ ವೇದಸಂಹಿತಾಕ್ಕೆ ಪೃಥ್ವಿಸ್ಥ ವರಾಹ, ೭ ಪದಕ್ಕೆ ಆಕಾಶಸ್ಥ ವಾಮನ, ೮ ಕ್ರಮಕ್ಕೆ ಅಂತರಿಕ್ಷಸ್ಥಿತ ಚತುರಾನನ, ನರಹರಿ, ಇರುವರೆಂದು ನಾಮೋಚ್ಚಾರ ಮಾಡು.

### ಇನ್ನು ಉಪನಿಷತ್ತುಗಳಿಗೆ

೧ ಈಶಾವಾಸ್ಯಕ್ಕೆ ಯಜ್ಞನಾಮಕದೇವ, ೨ ಅಥರ್ವಣಕ್ಕೆ ಪುರುಷೋತ್ತಮ, ೩ ಷಟ್‌ಪ್ರಶ್ನಕ್ಕೆ ವಾಸುದೇವ, ೪ ತಳವಕಾರಕ್ಕೆ ನಾರಾಯಣ, ೫ ಕಾಠಕಕ್ಕೆ ವಾಮನ, ೬ ತೈತರೇಯಕ್ಕೆ ಕೋಶರೂಪದಲ್ಲಿರುವ ಅನಿರುದ್ಧಾದಿ ೫ ರೂಪಗಳು, ೭ ಐತರೇಯಕ್ಕೆ ವಿಷ್ಣು, ೮ ಶ್ರೀಶನು ಬೃಹದಾರಣ್ಯಕ್ಕೆ, ೯ ಶೇಷಶಾಯಿರೂಪ ಛಾಂದೋಗ್ಯಕ್ಕೆ, ೧೦ ಮಾಂಡೂಕ ಉಪನಿಷತ್ತಿಗೆ ಹರಿ. ಈ ಪ್ರಕಾರ ಚಿಂತಿಸಬೇಕೆಂದು ಹೇಳಿದ್ದಾರೆ. ಇನ್ನು ವೇದ ವಿಭಾಗ ಶಾಖಾ ಭೇದ ಕರ್ಮಭೇದ, ಭಾರತ ಭಾಗವತ, ಪುರಾಣಾದಿಗಳು, ಸಚ್ಛಾಸ್ತ್ರ ನಿರ್ಣಯ ಬ್ರಹ್ಮ ಮೀಮಾಂಸಾ ಈ ಗ್ರಂಥಗಳಿಗೆಲ್ಲ, ಶ್ರೀ ವೇದವ್ಯಾಸನನ್ನು ಸ್ಮರಿಸಬೇಕು.

### ಓಂಕಾರ ೮ ವರ್ಣಗಳಲ್ಲಿ

೧ ಅಕಾರವಾಚ್ಯ ಪದ್ಮನಾಭ, ೨ ವೈಕುಂಠಸದನ ಉಕಾರವಾಚ್ಯ, ೩ ಮಕಾರವಾಚ್ಯ ನಾರಾಯಣ, ಉಳಿದ ಬಿಂದುನಾದ ಘೋಷಗಳು ಐದರಲ್ಲಿ,

ಅನಿರುದ್ಧಾದಿ ೫ ರೂಪಗಳನ್ನು ಪ್ರಾತಃಕಾಲದಲ್ಲಿ ಧೇನಿಸುವದು. ಹೀಗೆ ಋಗ್ವೇದಾದಿಗಳಲ್ಲಿ ತಿಳಿದು ಕಾಲಗ್ರಾ ಖಂಡಿಸಿ ವಿಜಯವಿಠಲನ್ನ ನೆನೆಸು ॥ ಎಂದು ಹೇಳಿದ್ದಾರೆ.

## ಇನ್ನು ಕಾಲನಿಯಾಮಕ ಭಗವನ್ನಾಮ

ಸೃಷ್ಟಿಪ್ರಕರಣ ಸುಳಾದಿ (೧೧) ಪುಟ ೫೧ರಲ್ಲಿ ವಿವರಿಸಿದ್ದಾರೆ. ೧ ಉದಯ ಕಾಲದಲ್ಲಿ ಕೌಮೋದಕೀಧರ ಕೇಶವ, ೨ ಸಂಗಮ ಕಾಲದಲ್ಲಿ, ವೇಣುಧರ ಗೋವಿಂದ, ೩ ಪೂರ್ವಾಹ್ಣ ಕಾಲದಿ ಸಿರಿನಾರಾಯಣ, ೪ ಮಧ್ಯಾಹ್ನ ಕಾಲದಲ್ಲಿ ಅರಿಪಾಣಿ ವಿಷ್ಣು, ೫ ಅಪರಾಹ್ಣ ಕಾಲಕ್ಕೆ ಚಾಪಧರ ಮಧುಸೂದನ, ೬ ಸಾಯಂಕಾಲಕ್ಕೆ ಮಾಧವಮೂರ್ತಿ, ೭ ಪ್ರದೋಷ ಕಾಲದಲ್ಲಿ ಹೃಷೀಕೇಶ ಮೂರ್ತಿ, ೮ ನಿಶೀಥ ಅರ್ಧರಾತ್ರಿ ಕಾಲದ್ವಯಕೆ ಪದ್ಮನಾಭ, ೯ ಅಪರಾತ್ರ ಕಾಲಕ್ಕೆ ಶ್ರೀವತ್ಸನ್ನ ನಾಮನೆನಿಸು ಮತ್ತು ೧೦ ಉಷಃಕಾಲದಲ್ಲಿ ಜನಾರ್ದನ, ೧೧ ಅನುಸಂಧ್ಯಾಕಾಲ (ಹಿಂದುಗಳೆದ ಸಂಧ್ಯಾಕಾಲ) ದಾಮೋದರ, ೧೨ ಅರುಣೋದಯ ಕಾಲದಲ್ಲಿ ನಾರಾಯಣ, ೧೩ ಪ್ರಭಾತಕಾಲ, ವಿಶ್ವಾತ್ಮಕ ಹರಿ, ೧೪ ಸೂರ್ಯೋದಯ ಕಾಲಕ್ಕೆ ಮತ್ಸ್ಯಮೂರ್ತಿ ನೆನೆಸುವದು.

## ಸಪ್ತನಾಮ (ಕಾಲರೂಪಗಳು)

೧೫ ಉದಯಾತ್ಪೂರ್ವದಲ್ಲಿ, ಪಶ್ವಾಧಾರಕ ಪ್ರದ್ಯುಮ್ನ.

೧೬ ಉದಯಕಾಲ—ತೃಣಾಶ್ರಯ—ವಾಸುದೇವ.

೧೭ ಸಂಗಮಕಾಲ—ಪಕ್ಷ್ಯಾಶ್ರ ವರಹಮೂರ್ತಿ.

೧೮ ಮಧ್ಯಾಹ್ನ ಕಾಲ—ತ್ರಿದಶರಾಶ್ರಯ—ನಾರಾಯಣ.

೧೯ ಅಪರಾಹ್ಣ ಕಾಲ—ಗರ್ಭಾಶ್ರಯ—ಅನಿರುದ್ಧ.

೨೦ ಪ್ರದೋಷಕಾಲ—ಅರಣ್ಯಾಶ್ರಯ—ನರಸಿಂಹ.

೨೧ ಸೂರ್ಯಾಸ್ತನಾಗಲು—ಪಿತ್ರಾಶ್ರಯ—ಸಂಕರುಷಣ.

ಪರಮಾಣು, ಕಾಲ - ದೇಶ - ಗುಣ - ಕರ್ಮ ಶುಭವಕ್ಕು ಹೀಗೆ ಸಪ್ತಸಾಮ ಮೂರ್ತಿಗಳು ಪ್ರದ್ಯುಮ್ನಾದಿ ಸಪ್ತ ಮೂರ್ತಿಗಳು ಇರುವವೆಂದು ತಿಳಿದು, ಕಾಲಾಧಿಷ್ಠಾನದಲ್ಲಿ ಕಾಲನಾಮಕನಾದ । ಶ್ರೀಲೋಲ ವಿಜಯವಿಠ್ಠಲನ ಧ್ಯಾನಮಾಡೆಂದು ಬೋಧಿಸಿದ್ದಾರೆ ಮತ್ತು ಉಪಾಸನಾಭಾಗ ೨೬ನೇ ಸುಳಾದಿ. ಪುಟ ೮೯.

ಭಗವಧ್ಯಾನಮಾಡು ಭಕುತಿಪೂರ್ವಕದಿಂದ ಈ ಸುಳಾದಿಯಲ್ಲಿ ವೇದ-ಪಂಚರಾತ್ರಾ ಯುಗ-ಕಾಲ ದೇಶ ಚತುರ್ದಶ ಮನ್ವಾದಿಗಳಲ್ಲಿದ್ದು ಜಗದ್ವ್ಯಾಪಾರಮಾಡುವ ಹರಿಯನಾಮ ರೂಪಕ್ರಿಯಾ ರೂಪ ಅನಂತ ರೂಪಗಳು ಏಕಬಿಂಬನಾದ ಒಬ್ಬನೇ ಎಂದು ಒಂದೊಂದು ವ್ಯೂಹರೂಪ ನಾಮಗಳನ್ನು ಸ್ಮರಣೆ ಮಾಡಿರೆಂದು ಹೇಳುತ್ತಾರೆ.

**ಮಟ್ಟ ತಾಳದಲ್ಲಿ ಪಂಚರಾತ್ರಾಗನು ಅವಕಾಶಕ್ಕೆ ನಾಮಗಳು**

ನರ, ನಾರಾಯಣ, ಹಯಗ್ರೀವ ಕಪಿಲ । ವರದತ್ತ ವ್ಯಾಸ ಅನಿರುದ್ಧ ಪ್ರದ್ಯುಮ್ನ ಸಂ । ಕರುಷಣ ವಾಸುದೇವ ಹರುಷ ಉತ್ಕೃಷ್ಟ ಜ್ಞಾನರೂಪತ್ವ ಹರಿಯೆ ಗುಣಪೂರ್ಣ ವಿಭೂತಿ । ಪರಿಮಿತರಹಿತ ಸುಖ ಸಂಗೀತ ಜನಪಾಲ । (ಕ್ರಿಯಾರೂಪ) ನಾರಾಯಣ – ವಾಸುದೇವ ವೈಕುಂಠ । ವರ ಅನಿರುದ್ಧ ಸಂಕರುಷಣ ಪ್ರದ್ಯುಮ್ನ । ತರುಣಿ ರಮಾಂತರ್ಗತ ವಾಸುದೇವ ದೇವ । ಪರಶುರಾಮ ಮುಸಲಧರ ಪ್ರದ್ಯುಮ್ನ । ನಾರಾಯಣ ಅನಿರುದ್ಧ ಕರಸಿಕೊಂಬವು ಇವೆ ವಾಸುದೇವಸಹಿತ ಮಿರುಗುವ ಪಂಚರಾತ್ರಾ ಅವಕಾಶಪ್ರದಕೆ ಸ್ಮರಿಸು ಈ ಮೂರ್ತಿಗಳ ನಾಮಕೀರ್ತನಮಾಡು ಸರುವವ್ಯಾಪ್ತ ಸ್ವಾಮಿ ವಿಜಯವಿಠ್ಠಲರೇಯ । ಪರಿಪರಿ ಬಗೆಯಿಂದ ಪ್ರತಿಪಾದ್ಯನಾಗಿಪ್ಪ ॥ ೨ ॥

( ದೇಶಗತ ನಾಮರೂಪ )

**ರೂಪಕ ತಾಳದಲ್ಲಿ ನವವರ್ಷ ಸರ್ವದ್ವೀಪಗತ ರೂಪಗಳು**

ಅನಂತ ಅನಂತರೂಪ ಸಚ್ಚಿದಾನಂದ ದೇಹ । ಅನಂತ ಶೀರ್ಷಪಾದಾದಿ ಸರ್ವಾಂಗಾ । ಅನಂತ ಗುಣಗಣ ಮಹಾತ್ಮ ಪುರುಷಾ । (ಗುಣರೂಪ) ಏನಂಬೆ ವರಹನಾರಸಿಂಹ ವಾಮನ । ಮಾನಸೋತ್ತರ ಶೈಲಸ್ಥಿತ ವಾಸುದೇವಾದಿ । ಆನನ ಚತುಷ್ಟಯ ನೀಲ ವರುಣಾಗ್ನಿ ಸೋಮ । ಭಾನು ಉದಯದೇವ ಇವರಂತರ್ಗತ । ಶ್ರೀನಿವಾಸರೂಪ ವಾಸುದೇವ ವಿಷ್ಣು । ಭಾನು ಭಾರ್ಗವ ವಟು ನಾರಾಯಣ ಜಯಾನಾಥ । ಈ ನೀತಿ ಹಯವದನ ನರಸಿಂಹ ಪ್ರದ್ಯುಮ್ನ । ಜ್ಞಾನಮತ್ಸ್ಯನು ಕೋಲ ಕೂರ್ಮಮೂರುತಿ । ಜಾನಕಿರಮಣ ಬದರಿನಾರಾಯಣ । ರೇಣುಕಾನಂದನ ಜಯಂತ ನರಸಿಂಹ । ಈ ನವವರುಷ ಸರ್ವದ್ವೀಪದಲ್ಲಿ ನೋಡು । ಜ್ಞಾನಗಾತುರ ಹರಿ ವಿಜಯವಿಠಲರೇಯ । ನಾನಾ ರೂಪಗಳಿಂದ ಅರ್ಚನೆ ಕೈಕೊಂಬ ॥ ೩ ॥

**ಝುಂಪೆ ತಾಳದಲ್ಲಿ ವಿಭೂತಿ ಪ್ರತ್ಯಕ್ಷ ಪರಂಪರೆ ನಾಮರೂಪಗಳು**

ಸಿರಿಮಾಧವ ವೀರನಾರಾಯಣ ಕೃಷ್ಣ । ತರುಣಿ ಮೋಮ್ಮಗರಾಯ ಚಂದ್ರ ಮಹಾವಿಷ್ಣು ವರಹ ಕ್ಷೀರ । ಶರಧಿಶಯನ ನರಹರಿ ತ್ರಿವಿಕ್ರಮದೇವ । ಹರಿಗ್ರೀವ ಸಿರಿಧರಾನಂತ ಜನಾರ್ದನ । ಪರಮೇಷ್ಟಿ ಈಶದೇವ, ಕೇಶವಾದಿ। ವರದತ್ತಾತ್ರಯ ವೇಂಕಟೇಶ ಕೋಲ ಗದಾ । ಧರ, ಲಕ್ಷ್ಮೀನಾರಾಯಣ ಅಚ್ಯುತ ಚಕ್ರಿ ಸ್ಥಿರವಾಸುದೇವ ವಿಷ್ಣುನಾರಾಯಣ ದೇವ । ಪರವಿಷ್ಣು ಬ್ರಹ್ಮೇಶ ಪರಮಪುರುಷ । ಮೆರೆವ ವಾಸುದೇವ ಸಂಕರುಷಣ ಕೃತಿಪ । ವರ ಅನಿರುದ್ಧ ರೂಪಗಳ ನೆನೆಸು । ತಿರುಗಿ ಇವೆ ರೂಪಗಳು ನಾರಾಯಣ ಸಹಿತ । ಎರಡೊಂದು ಗುಣ ವಾಸುದೇವ ರಾಮ । ವರಹ ಪ್ರವರ್ತಕ ವಿಶ್ವ ತೈಜಸ ಪ್ರಾಜ್ಞ । ಭರಿತ ವಿಮಲಾದಿ ಶಕ್ತಿನವ-ರಾಜರಾಜೇಶ್ವರಿ **ವಿಭೂತಿರೂಪ** ಪ್ರತ್ಯಕ್ಷ ಪರಂಪರೆ ಇರತಕ್ಕವು **ಇತ್ತ ತತ್ತತ್ಕಾಲಾಭಿಧಾನ ಪರಮಾಣು ಮಹಾಕಾಲವೊಪ್ಪುತ** ಗದಾ । ಧರ ಕೇಶವಾತ್ಮಕ ಗೋವಿಂದ ನಾರಾಯಣ । ಅರಿಧರವಿಷ್ಣು ಮಧುಹಾಮಾಧವ । ಕರುಣೇಶಾಂಬುಜನಾಭಿ ಶ್ರೀವತ್ಸದೇವ ಸುಂ । ದರ ಜನಾರ್ದನ ದಾಮಜಠರ ವಿಶ್ವಾ । ಶರ ಸಂಚಾರ ವಟುತ್ರಿವಿಕ್ರಮ ನರಸಿಂಗ ಭೂ । ವರಾಹ ಲಕ್ಷ್ಮಣಾಗ್ರಜರಾಮ । ನರನಾರಾಯಣ ನರದತ್ತ ಕಪಿಲ ಮುನೀ । ಶ್ವರ ಸನತ್ಕುಮಾರ ಹಯವದನ । ಹರಿಮಿತ್ರಾ ಮಹಿದಾಸ ಕಮಠಮೂರುತಿ ಧನ್ವಂ । ತರಿ ವೃಷಭಯಜ್ಞ ಬಲಭದ್ರ ವ್ಯಾಸ । ನಿರುಪಮ ಬುದ್ಧ ಕಲ್ಕಿ ಗಂಗೆಯಪೆತ್ತನ । **ಸ್ಮರಿಸು ಪಾಷಂಡಗಣಾತ್ಮವಾದಕ್ಕೆ** । ಪರಮಪಾವನರಂಗ ವಿಜಯವಿಠ್ಠಲರೇಯ ಸರುವ ಕಾಲದಲ್ಲಿ ಭಕ್ತರಿಗೊಲಿದಿಪ್ಪ ॥ ೪ ॥

**ತ್ರಿವಿಡಿತಾಳ ಮಧುವಿದ್ಯಾವಾಸಿಗಳ ನಾಮರೂಪ**

ಸದಮಲ ಅಜ ಅಣಿಮಾಯಜ್ಞ ಅಚ್ಯುತ ಹಯ । ವದನ ಕೇಶವ ಈಶಸ್ವಾತ್ಮ ವಿಷ್ಣುರುರುಕ್ರಮ । ಮುದದಿಂದ ಕೇಶ್ವರ ಚಕ್ರಿಗದಿ ಧನುರಾಸ್ಯ (ಕೇಶ್ವರ ಧನುರಾಸ್ಯ ಈ ಎರಡು ರೂಪಗಳು ಜ್ಞಾನಿಗಳಿಂದ ವಿಚಾರಾಂಶ) ಮಧುಸೂದನ ಇಂಪ್ರವರಜಾತ ರಕ್ಷಾತ್ಮ । ಚದುರಹಲಧರ ಹೃಷೀಕನಾಥ ನಾರಾಯಣ । ಉದಧಿ ನಿವಾಸಯೋಗೇಶ್ವರ ಪ್ರಶ್ನಿಜ । ಒದಗಿ ಪರಮಪುರುಷ ಗೋವಿಂದ ಮಾಧವ । ನಿಧಿವೈಕುಂಠಾತ್ಮಕ ಶ್ರೀಪತಿಯು ಯಜ್ಞ । ಇದರ

ತರುವಾಯ ವಿಶ್ವೇಂದ್ರನಾಮಕ । ಪದವೀವ ಪ್ರಾದೇಶ ನಾಮಕಂಗುಟಮಾತ್ರ ಜೀವಸ್ಥ । ತದುಪರಿ ಏಕಪಂಚಾನ್ಮೂರ್ತಿಗಳೆನ್ನು । **ಮಧು ವಿದ್ಯಾವಾಸಿಗಳ ಚಿಂತಿಸು ಬಿಡದೆ ॥**

## ಹದಿನಾಲ್ಕು ಮನ್ವಂತರದಲ್ಲಿ ಅವತಾರಗಳು

ಮೊದಲು ಯಜ್ಞ–ವಿಭು–ಸತ್ಯಸೇನ–ತಾಪಸ– । ಇದೆ ಸಿದ್ಧ ವೈಕುಂಠ–ಅಜಿತಾಖ್ಯ ವಾಮನ । ಅಧಟ ಸಾರ್ವಭೌಮ ವೃಷಭ ಶಾಂತಾಖ್ಯಾ । ನಿಧಿ ಧರ್ಮಸೇತು ಯೋಗೇಶ್ವರ । ತುದಿಗೆ ಬೃಹದ್ಭಾನು ಗುಣಿಸಿ ಎಣಿಸಿ ಮುಂದೆ । ಉದಯಾರ್ಕ ಸನ್ನಿಭ ವಿಜಯವಿಠ್ಠಲರೇಯ । ಹೃದಯದೊಳಗೆ ಪೊಳೆವ ಕಾರುಣ್ಯವನು ಮಾಡಿ ॥೮॥

## ಅಟ್ಟತಾಳದಲ್ಲಿ ಅವತಾರ ರೂಪನಾಮಗಳು

ಅವನಿಯೊಳಗೆ ಕೇಳು ಮನು ಮುನಿನೃಪರಲ್ಲಿ । ಅವತರಿಸಿದ ರೂಪ ಹಿಂದೆ ಮನ್ವಾದಿಯಲಿ । ಸ್ತವನಮಾಡಿದ ರೂಪ ಹದಿನಾಲ್ಕರಲಿ ನಾ । ವಿವರಿಪೆ ಮಹಿದಾಸ–ದತ್ತ–ವೇದವ್ಯಾಸ । ರವಿಜಾತ್ಮ ಕೃಷ್ಣ ನರನಾರಾಯಣ ಹರಿ । ರವಿಕುಲಾಗ್ರಣಿ ರಾಮಪ್ರಶ್ನಿ ಗರ್ಭ । ಯಾದವ ವಿಷ್ವಕ್‌ಸೇನ ಭಾರ್ಗವ ಬುದ್ಧ ಕಲ್ಕಿ ಮೆ । ರೆವ ಶಿಂಶುಮಾರ–ಧನ್ವಂತರಿ ಋಷಭ ಮಹಾ । ಕವಿ ಕಪಿಲ – ಮಿಕ್ಕ ಹರಿಯವತಾರ ಮಾನವರಲಿ ಉದ್ಭವವಾದ ಮಹಿಮೆ ಮ । ತ್ತಿವ ಕೋ ಮತ್ಸ್ಯ ಕೂರ್ಮ ವರಹ ನರಸಿಂಹ । ಧವಳವರ್ನ ಹಂಸ ಹಯಗ್ರೀವ ನಾನಾ ಪ್ರಾದು । ರ್ಭಾವ ಯುವತಿ ನಾರಾಯಣ ರೂಪ–ಬಲರೂಪ–ಭುವಿತತ್ವ ನಾನಾ ಮಂತ್ರ ವರಣದೇವತಾ । ಅವಕಾಶ ಪರಿಯಂತ ಭಗದ್ರೂಪಗಳೆನ್ನು । ನವ ನವಮೋಹನ್ನ ವಿಜಯವಿಠ್ಠಲರೇಯಾ । ಭವದಿಂದಲೆತ್ತುವ ಇನಿತು ಭಜನೆ ಮಾಡೆ ॥೬॥

ಮುಂದೆ ಆದಿತಾಳದಲ್ಲಿ ಈ ಎಲ್ಲ ಭಗವನ್ನಾಮ ರೂಪಗಳ ಧ್ಯಾನಮಾಡು ಋಕ್ ಯಜುಸ್ಸಾಮ ಅಥರ್ವಣವೇದ ಅಕಳಂಕವಾಗಿ ವರ್ಣಿತವಾಗಿದೆ. ಇದೇ ಸಿದ್ಧಾಂತ. ಮಹಾ ಪ್ರಮೇಯ ರುಕುಮಿಣಿ ಪತಿಯಾದ ವಿಜಯವಿಠ್ಠಲ ಪ್ರೇರಕ ನೆಂದು ನಿತ್ಯ ನಂಬಿದರೆ ನಾನಾ ವಿದ್ಯ ಬಪ್ಪದು ಎಂದು ವರ್ಣಿಸಿದ್ದಾರೆ. ಶ್ರೀಹರಿಯ ಅನಂತ ನಾಮುಗಳು. ವಿಷ್ಣು ಸಹಸ್ರನಾಮ–ರಾಮಸಹಸ್ರನಾಮ – ನರಸಿಂಹ ಸಹಸ್ರನಾಮ ಇತ್ಯಾದಿ. ಅನಂತ ನಾಮುಗಳಲ್ಲಿ ಇಷ್ಟವಾದದ್ದು

ಬಿಡದೇ ಸದಾಕಾಲ ಸ್ಮರಿಸಬೇಕೆಂದು ಹೇಳಿದ್ದಾರೆ ಮತ್ತು ಉಪಾಸನಾಭಾಗ ಸುಳಾದಿ ೪೩ ಮಟ್ಟತಾಳದಲ್ಲಿ **ರಕ್ಷಕಮೂರ್ತಿಗಳ ನಾಮ.** ಸ್ಥಳದಲ್ಲಿ ವಾಮನ ಆಟವ್ಯ ನರಸಿಂಹ ಜಲದಲ್ಲಿ ಮತ್ಸ್ಯ ಗಗನದಿ ತ್ರಿವಿಕ್ರಮ ಕುಲಗಿರಿಯಲ್ಲಿ ಪರಶುರಾಮ ಮಾರ್ಗದಲ್ಲಿ ಭೂವರಹಾತ್ಮಾ ಪ್ರವಾಸದಲಿ ಸಲಕ್ಷ್ಮಣ ಭರತಾಗ್ರಜ ಜಾನಕಿಪತಿರಾಮ ಈ ವಿಧವಾಗಿ ರಕ್ಷಕ ಮೂರ್ತಿಗಳು ಮತ್ತು ೧ ಪ್ರಮಾದರಕ್ಷಕ ನಾರಾಯಣ, ೨ ಉನ್ಮತ್ತ ಉಮಾದಹ್ರಾಸಕ್ಕೆ ನರನಾಮಕ, ೩ ಅಲೋಗರಕ್ಷಕದತ್ತ, ೪ ಕರ್ಮಾಕರ್ಮ ಬಂಧಮೋಚಕ, ಕಪಿಲ, ೫ ಯೋಗ್ಯತೆಮಿಾರಿ ಅವಕಾಮಕ್ಕೆ ರಕ್ಷಕ ಸನತ್ಕುಮಾರ, ೬ ಭೃತ್ಯಧರ್ಮ ಮರೆದು ಪತಿದೇವತಾ ಹೇಳನ ಕೃತ್ಯ ರಕ್ಷಕ, ಹಯಗ್ರೀವ, ೭ ತತ್ವೇಶರಿಂದ ಸಹಿತನಾದ ಹರಿಯಪೂಜಾ ಮಾಡುವದು ಮರೆದ ದೋಷರಕ್ಷಕ ಮಹಿದಾಸ ೮ ಅಶೇಷ ನಿರಯವನ್ನು ಉತ್ತರಿಸೆ ಕೂರ್ಮ, ೯ ಆಪತ್ಯರಕ್ಷಕ ಧನ್ವಂತ್ರಿಹರಿ, ೧೦ ದ್ವಂದ್ವಭಯ ಪರಿಹಾರಕ ಋಷಭ, ೧೧ ಯಜ್ಞಕೃತ ಫಲದ ಯಜ್ಞನಾಮಕ, ೧೨ ಕ್ರೋಧಾವೇಶ ಕಳೆವನು ಬಲಭದ್ರಾತ್ಮಕ, ೧೩ ಸಂಪ್ರಮೋಹ ಬಿಡಿಸಿ ಮಿಥ್ಯಾಜ್ಞಾನಿಗಳ ಸಂಹರಿಸಿ ರಕ್ಷಿಸುವ =ವೇದವ್ಯಾಸನು, ೧೪ ಚಿತ್ತದಲಿ ಕಲಿಕಲ್ಮಷ ದೋಷಹರ - ಕಲ್ಕಿ ಹೀಗೆ ಶ್ರೀ ವಿಜಯವಿಠಲನು ಸರ್ವತ್ರದಲಿ ಇದ್ದು ಅಘನಾಶಮಾಡಿ ರಕ್ಷಿಪನಲ್ಲದೇ ಮತ್ತು ಪದ - ಜಾನು - ಉರುದಲ್ಲಿ ರಕ್ಷಿಸುವ, ಕ್ರಮವಾಗಿ ಅಜನಾಮಕ, ಅಣಿಮಾ, ಯಜ್ಞರೂಪಗಳು ಕಟಿಯಲ್ಲಿ ಅಚ್ಯುತ, ಜಠರರಕ್ಷ ಹಯಗ್ರೀವ, ನಾಭಿಯಲಿ ಪದ್ಮನಾಭ, ಗುಹ್ಯೇಂದ್ರಿಯದಲ್ಲಿ ಅನಿರುದ್ಧ, ಹೃದಯದಿ ಕೇಶವ, ವಕ್ಷಸ್ಥಳದಿ ಈಶಾನಾ, ಕಂಠದಿ = ಆತ್ಮನಾಮ, ಭುಜದಲ್ಲಿ ವಿಷ್ಣು, ವದನದಿ ಉರುಕ್ರಮ, ಶಿರೋರಕ್ಷಕ ಈಶ್ವರ, ಚತುರ ದಿಕ್ಕುಗಳಲ್ಲಿ ಎದುರಿಗೆ ಚಕ್ರಿಯಾತ್ಮಕ - ಪೃಷ್ಟಭಾಗಕ್ಕೆ ಗದಾಧರ, ಪಾರ್ಶ್ವಗಳಲ್ಲಿ = ಧನುರ್ಧಾರಿ, ಉಪರಿ = ಉಪೇಂದ್ರ, ಕ್ಷಿತಿಗೆ ತಾರಕ್ಷ, ಸಮಾಂತಿಗೆ ಹಲಧರ, ಇಂದ್ರಿಯಗಳಿಗೆ ಹೃಷೀಕೇಶ, ಪ್ರಾಣಕ್ಕೆ ಪದುಮೇಶ, ಚಿತ್ತಕೆ ನಾರಾಯಣ, ಮನೋ = ಶ್ವೇತದ್ವೀಪವಾಸಿ, ಬುದ್ಧಿಗೆ = ಯೋಗೇಶ್ವರ ಪ್ರಶ್ನಗರ್ಭ, ಆತ್ಮನಿಗೆ ಪರಶುರಾಮ, ಕ್ರೀಡಿಗೆ - ವ್ರಜಾಸಿನ ಕೃಷ್ಣ, ವಿಧಕೆ (ವಿಧಿವತ್ತಾದ ಕ್ರಿಯಗಳಿಗೆ) ಗೋವಿಂದ ಮಾಧವ ವೈಕುಂಠ ಶ್ರೀಪತಿಯು, ಇರುವನು. ಮತ್ತು ಭೋಕ್ತಾರಕ್ಷಕ ಯಜ್ಞಭೋಕ್ತ ಉನ್ಮಾದ-ಅಪಸ್ಮಾರಗ್ರಹ,

ಯಾತುಧನ್ಯ-ಕುಷ್ಮಾಂಡ, ಭೂತ ಪ್ರೇತ ಪಿಶಾಚ ಡಾಕಿನಿ ಶಾಕಿನಿ, ದೇಹ ಪ್ರಾಣೇಂದ್ರಿಯಗಳಿಗೆ ಭಿನ್ನವಾದ ದುಸ್ವಪ್ನ, ಮಹೋತ್ಪಾತ ಬಾಲಯುವ್ವನ-ವೃದ್ಧಾಪ್ಯದ ನಾನಾ ವಿಚಿತ್ರಭಯ, ಬಂದಿರೇ **ವಿಶ್ವನಾಮಕನ** ಚೆನ್ನಾಗಿ ನೆನೆಯುವದು. ಇವೆಲ್ಲ ಆಪತ್ತು ರಕ್ಷಕರೂಪ ನಾಮುಗಳನ್ನು ಸ್ಮರಿಸಬೇಕು. ಅನಂತ ರೂಪಗಳಿದ್ದರೂ, ಈ ಅನಂತ ರೂಪನಾಮುಗಳಲ್ಲಿ ಜ್ಞಾನಕ್ಕೆ ಒದಗಿ ನಿನ್ನ ಚಿತ್ತಕ್ಕೆ ಬಂದದ್ದು ಸ್ಮರಿಸಬೇಕು. ಇಂತು ಭಗವನ್ಮೂರ್ತಿಗಳನ್ನು ಅಲ್ಲಲ್ಲೆ ಚಿಂತಿಸು. ಅಘನಿರ್ಲೇಪನಾಗು, ವಿಜಯವಿಠಲ ಪೊಳೆವನೆಂದು ಇಷ್ಟು ವಿಸ್ತಾರವಾಗಿ ವೇದ ಉಪನಿಷತ್ತುಗಳಲ್ಲಿದ್ದ ಭಗವನ್ನಾಮುಗಳನ್ನು ಸ್ಮರಿಸಲು ಆಜ್ಞೆ ಇತ್ತಿರುವರು.

**ಇನ್ನು ಕ್ರಿಯಾನಂತ ರೂಪಗಳು** ಉ. ಸು. ಪುಟ ೧೧೩

ವ್ಯಾಪಕ ಆವರ್ಕ ಆವಿಷ್ಟ ಕ್ಷೋಭಕ ಪ್ರತಿಪಾದ್ಯ ಸ್ಥಿತಾ ನಿಯಾಮಕ ಪ್ರವರ್ತಕ ಸರ್ಗ ಪಾಲನ ಸಂಹೃತಿ ಅವತಾರ ಅವಕಾಶ ಭಯಮೋಚಕ ಉಪಶಾಶ್ರಯ ಕರ್ತೃಮುಕ್ತ ವಿಭಾಗದಕರ್ತೃ, ಆಪದ್ರಕ್ಷಕ ಅಭೀಷ್ಟಪ್ರದ ಸಂಪ್ರಾಪುತ ಸಂಯೋಗ ವಿಯೋಗ ಅವಸ್ಥಾಪ್ರೇರಕ ಪಾಪಪುಣ್ಯ ಬಂಧಕ ಮೋಚಕ, ತತು ತದಾಕಾರ ಈ ಪರಿಯಲಿ, ೨೧ ಮೂರ್ತಿಗಳು ಒಂದೊಂದು ಬಗೆ ವ್ಯಾಪಾರಮಾಡುವ ಶ್ವೇತ ದ್ವೀಪಗತವಾದ ಇಪ್ಪತ್ತೆರಡು ಮೂರ್ತಿಗಳು ಅನಂತಾನಂತಗುಣ, ರೂಪ, ಕ್ರಿಯಾ ಪರಿಪೂರ್ಣವಾಗಿರುವವು. ಪೋಪ ಬರುವ ಕುಳಿತು, ಪವಡಿಸುವ, ಓಡುವ ಕ್ರಿಯ ಅನಂತ ರೂಪಗಳನ್ನೂ ಸಮಸ್ತ ಗುಣಗಳನ್ನು ಸ್ಮರಿಸಲು ವಿಜಯವಿಠಲನು ತಾಪತ್ರಯ ವಿನಾಶಮಾಡಿ, ಮೋಕ್ಷಾನಂದಕೊಡುವನೆಂದು ಉಪದೇಶಿಸಿದ್ದಾರೆ. ಇದೇ ವಿವರವನ್ನೇ-ಸಾಮೋಪನಾ ಸುಳಾದಿ (೮) ಪುಟ ೨೦ ರಲ್ಲಿಯೂ, ಒಂದೆರಡು ಮೂರು ನಾಲ್ಕು | ಮುಂದ್ಯೆದು ಆರೇಳೆಂಟು ನಂದಾನ ಹತ್ತು ಹನ್ನೊಂದು ಇಂ | ತೆಂದು ಈ ಪರಿ ಇಪ್ಪತ್ತೆರಡು ಪರಿಯಂತ ಸುನಂದಾದಿ ಎಣಿಸು ಸಾಮೋಪಾಸನೆ ಮಾಡು || ಮತ್ತು ಇದೆ ವಿವರವೆ ಉ. ಸು. ೯೨ ರಲ್ಲಿಯೂ, ಸಕಲ ಪ್ರತಿಪಾದ್ಯ ಸರ್ವದ ಸ್ಥಿತಿ ನಿಯಾಮಕ ಅವತಾರ, ಪ್ರಾದುರ್ಭಾವ, ಆವೇಶ, ಪ್ರವರ್ತಕ, ಉಪಾಸ್ಯಾಶ್ರಯ, ಅಭೀಷ್ಟಪ್ರದ, ಮುಕ್ತಾಶ್ರಯ, ಕರ್ಮಮೋಚಕ, ಭೋಕ್ತ ಭೋಗ, ಅಖಿಲಾಧಾರ ಶಕ್ತ ಸರ್ವಲೋಕಾಶ್ರಯ ಸರ್ವ ಅಭಿನ್ನ ಲಕುಮಿಾ

ರಮಣ ಸೂಕ್ಷ್ಮ ಸ್ಥೂಲಕಾಲ ಜಡದಲ್ಲಿಪ್ಪ ರೂಪ ಸುಖಪೂರ್ಣ ಜ್ಞಾನಾನಂದಾತ್ಮಕ ವ್ಯಾಪಾರಮಾಡಿಸುವನೆಂದು ಈ ಕ್ರಿಯಾನಂತರೂಪ ಪ್ರೇರಕ ಪ್ರೇರ್ಯರೂಪ ವಿಜಯವಿಠಲನೆಂದು ಧೇನಿಸಲು ಸರ್ವವಿದ್ಯಾ ಬಪ್ಪುದೆಂದು ಇನ್ನು ಅನೇಕ ಗುಣೋತ್ಕರ್ಷಣಗಳನ್ನು ಹರಿನಾಮ ಮಹಿಮಾಸ್ಮರಣ ಪೂರ್ವಕ ಮಾಡುವದೆಂದು ಉಪದೇಶಿಸಿದ್ದಾರೆ. ವಿಜಯದಾಸರೇ ಅನುಗ್ರಹಿಸಿ ಸಜ್ಜನರಿಗೆ ಜ್ಞಾನವನ್ನೀಯರಿ. ಆವಧರೆಯೊಳಗರಸಲು ವಿಜಯನಾಮಗಳನ್ನು ಬೀರಿ ಸರ್ವೋತ್ತಮನೆಂದು ಸಾರಿದವರು ತಾವೊಬ್ಬರೇ ಅಲ್ಲವೆ ?

## ಉಪಸಂಹಾರ

ಇಂತು ಹರಿನಾಮಸ್ಮರಣ ನಾಮೋಚ್ಚಾರಮಹಿಮೆ ಅನಂತ ಬಗೆಯಾಗಿ ವರ್ಣಿಸಿದ ಶ್ರೀ ವಿಜಯರ ವಚನಗಳೇ ಮನೋವಾಚಾಕಾಯಶುದ್ಧಿಗೆ ಕಾರಣವಾಗಿ ನಾಮಸ್ಮರಣ ಸಂಧಿಯ ಸಾರವನ್ನು ವೊದಗಿಸಿಕೊಡಲಿ, ಇದೇ ಹರಿನಾಮಸ್ಮರಣೆ.

ಅನಂತ ನಾಮಗಳಿರಲು ಹರಿನಾಮಸ್ಮರಣವೆ ಮುಖ್ಯವೆಂದು ಸಂಧಿಯ ೨ನೇ ಪದ್ಯದಲ್ಲಿ ನಿರೂಪಿಸಿದ್ದಾರೆ. ಶ್ರೀಬಿಂಬರೂಪ ಶ್ರೀಹರಿನಾಮವು, ಬಿಂಬನ ಗುಣರೂಪ ನಾಮಕ್ರಿಯಾ ಸ್ಮರಣವೆ ಮುಖ್ಯ. " ಕೇಶವಃ ಕೇಶವೋಹರಿಃ ಎಂದು ವಿಷ್ಣುಸಾಸಿರನಾಮ ಹರಿಃ " ಸರ್ವಯಜ್ಞಾನಾಂ ಭಾಗಹಾರಿತ್ವಾದ್ಧರಿಃ ‖ ಇಂದ್ರೋಪಹತಂಹಿ ಹರೇ ಯಜ್ಞಭಾಗಂ ಕೃತುಷ್ವಹಂ । ವರ್ಣಾನಿಹರಿತಃ ಶ್ರೇಷ್ಠ ತಸ್ಮಾದ್ಧರಿ ಇತಿಸ್ಮೃತಃ ಇತಿ ಮೋಕ್ಷಧರ್ಮೇ ‖ (ವಿದ್ಯಾಧಿರಾಜೀಯ) ಇಂತು ಗುಣ ರೂಪ ನಾಮಕ್ರಿಯೆ ಹರಿಯಲ್ಲಿ ಇರುವವೆಂದು ಆ ಬಿಂಬನ ಹರಿರೂಪ ನಾಮಸ್ಮರಣೆ ಮುಖ್ಯವೆಂದು ಪೇಳಿದಂತಾಯಿತು.

ಶ್ರೀಮದ್ಭಾಗವತದಲ್ಲಿ " ಏತಾವತಾಲಮಘನಿರ್ಹರಣಾಯಪುಂಸಾಂ ।

**ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಮ್ ‖**

ಎಂದು ಹೇಳಿರುವಂತೆ ಮೇಲೆ ವಿವರಿಸಿದಂತೆ ಶ್ರೀ ಭಗವಂತನ ನಾಮ ಸಂಕೀರ್ತನವು ಆತನ ಗುಣಕ್ರಿಯಾ, ನಾಮರೂಪಗಳನ್ನು ಅರ್ಥವತ್ತಾಗಿ ಗುರುಗಳಿಂದ ತಿಳಿವುದು ನಾಮಸ್ಮರಣೆ ಮಾಡುವದೆಂದು ಫಲಿತಾರ್ಥ, ಸಂಧಿಯ ಸಾರವು ಇದರಲ್ಲಿಯೇ ಅಡಕವಾಗಿದೆ. ಪದ್ಯಗಳಲ್ಲಿ ಸಾರಾಭಿಪ್ರಾಯವು ತೋರಿಸಿದೆ.

## ಕ್ಷಮಾಪಣೆ

ಹಿಂದಿನ ಸಂಧಿಗಳ ಸಾರಕ್ಕಿಂತಲೂ ಬೇರೆ ವಿಧವಾಗಿ ದಾಸಾರ್ಯರು ಈ ವಿಷಯ ಪ್ರೇರಿಸಿ ಬರೆದು ಬರೆಸಿ ನಾಮಸ್ಮರಣೆಗೆ ಯೋಗ್ಯ ಕಾಲವೆಂದು ತೋರಿದರು. ದಾಸರ ವಚನಗಳಿಂದಲೇ ತುಂಬಿದೆ. ನನ್ನ ಸ್ವಮತಿಯ ಹಾಳು ಹರಟೆಯಲ್ಲ; ಎಷ್ಟೊ ಹರಟೆಯೆಂದು ಭಾವಿಸದೇ ಸಕಲ ಅಕ್ಷರವೂ ನಾಮ ಪ್ರತಿ ಪಾದ್ಯನಾದ ಹರಿಯಲ್ಲಿ ಅಡಕವಾಗಿ "ಒಂದೇ ನಾಮದೊಳಡಗಿದವು" ಎಂಬು ವಂತೆ ಭಾವಿಸಿ ದೋಷಗಳಿದ್ದರೆ ತಿದ್ದಿ ತಿಳಿಸಿ ಪುನೀತನನ್ನಾಗಿ ಮಾಡುವಿರೆಂದು ಸಜ್ಜನರಲ್ಲಿ ತಲೆಬಾಗಿ ನಮಿಸಿ ಮದ್‌ಹೃದಯಾಂತಸ್ಥ ಮಧ್ವೇಶನ ಅಡಿದಾವರೆ ಗಳಿಗೆ ಕೃಷ್ಣಾರ್ಪಣ ಪೂರ್ವಕವಾಗಿ ಅರ್ಪಿಸಿ ನಮಿಸುವೆ. ಹರಿನಾಮ ಮಹಿಮೆ ರಸವೀಂಟಿಸಿದ ದಾಸರ ದಾಸ.

ಶಕೆ ೧೮೮೨ ಜೇಷ್ಠ ವ॥ ೧೪
ಶ್ರೀಪಾದರಾಜರ ಪುಣ್ಯದಿನ



# ೧೩ ನಾಮಸ್ಮರಣ ಸಂಧಿ

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

**ಮೂಲ :**

**ಮಕ್ಕಳಾಡಿಸುವಾಗ ಮಡದಿಯೊ ।**
**ಳಕ್ಕರದಿ ನಗುವಾಗ ಹಯ ಪ ।**
**ಲ್ಲಕ್ಕಿ ಗಜ ಮೊದಲಾದ ವಹನಗಳೇರಿ ಮೆರೆವಾಗ ॥**
**ಬಿಕ್ಕುವಾಗಾಕಳಿಸುತಲಿ ದೇ ।**
**ವಕ್ಕಿತನಯನ ಸ್ಮರಿಸುತಿಹ ನರ ।**
**ಸಿಕ್ಕ ಯಮದೂತರಿಗೆ ಆವಾವಲ್ಲಿ ನೋಡಿದರು ॥ ೧ ॥**

**ಅವತರಣಿಕಾ :** ಹಿಂದಿನ ೧೧ ನೇ ಸಂಧಿಯಲ್ಲಿ ಜಡವಾದ ಅಷ್ಟಪ್ರಕೃತಿಯಲ್ಲಿ ಧ್ಯಾನೋಪಾಸನೆ ಗೈವ ಬಗೆ ಪೇಳಿವರು. ೧೨ ನೇ ಸಂಧಿಯಲ್ಲಿ ಪ್ರಕೃತಿಸಂಬಂಧ ಬಿಡುಗಡೆಯಾಗಲು ತೇಜೋಮಯ ನಾಡಿಗಳು ಅತೀಂದ್ರಿಯ ಪ್ರಾಕೃತವಾದರೂ ಸ್ಥೂಲದೇಹದಲ್ಲಿಪ್ಪ ನಾಡಿ, ತದ್ಗತಕಮಲ, ಕಮಲಗತ ಶ್ರೀಹರಿರೂಪಗಳೇ ಅದರಲ್ಲಿ ಹೃದಯಾಷ್ಟದಳ ಕಮಲಗತ ಬಿಂಬೋಪಾಸನೆಯೇ ಮೋಕ್ಷಕ್ಕೆ ಕಾರಣವೆಂಬುದನ್ನು ಅರುಹಿದ್ದಾರೆ. ಈಗ ಆ ಬಿಂಬರೂಪಿ ಹರಿಯ ನಾಮಮಹಿಮೆಯೇನು? ನಾಮ ಉಚ್ಚಾರವನ್ನು ಹೇಗೆ ಮಾಡುವದು, ಈ ನಾಮಗಳ ವಿವರ ಹೇಗೆ ಎಲ್ಲಿಂದ ಪ್ರಾದುರ್ಭೂತವಾಯಿತು. ಇದರ ತಿಳುವಿಕೆ ಹೇಗೆ? ಭಗವಂತನು ಅನಾದಿನಿತ್ಯನು, ವೇದಗಳು ಅನಾದಿನಿತ್ಯವಾದವು. ಈ ವೇದಗಳು ಜಡವಾದರೂ ಇವುಗಳಿಗೆ ವ್ಯಂಜಕಪ್ರೇರಕ ವೇದಾಭಿಮಾನಿಯಾದ ಅಂಭೃಣಿದ್ವಾರಾ ಸಕಲ ವ್ಯಂಜಕಶಕ್ತಿ ಇತ್ತನು. ಈ ವೇದಗಳಿಗೆ ಮೂಲವಾದುದು ಓಂಕಾರ, ಈ ಓಂಕಾರದಿಂದ ಅಜಾದಿ ೫೧ ವರ್ಣಗಳ ಉತ್ಪತ್ತಿ. ಈ ಅಜಾದಿ ೫೧ ವರ್ಣಗಳೇ ನಿತ್ಯವಾಗಿ ಏಕಪ್ರಕಾರವಾಗಿ ಸರ್ವತ್ರ ವ್ಯಾಪ್ತಿ- ಸಕಲ ವೇದಗಳಿಗೆ ಮುಖ್ಯ ಕಾರಣವಾದವು. ಈ ಅಜಾದಿ ೫೧ ವರ್ಣಗಳೇ ರಾಮ ಕೃಷ್ಣ ಅಚ್ಯುತಾನಂತ ಗೋವಿಂದ ಎಂಬಿವೇ ಅನೇಕ ಶ್ರೀಹರಿನಾಮಗಳಿಗೆ ಮೂಲಬೀಜವಾದವು. ನಿತ್ಯವಾದ ವೇದಪ್ರಣೀತವಾದ ಹರಿನಾಮ ಮಾಹಾತ್ಮೆ ಹೇಗೆ? ನಾಮೋಚ್ಚಾರಣ ಹೇಗೆ ಮಾಡಬೇಕು? ಸಕಲ ಕಾಲದಲ್ಲಿ ಹರಿನಾಮ ಉಚ್ಚಾರಣೆ

ಹರಿಯ ಗುಣ, ರೂಪ ಕ್ರಿಯಾ ಉತ್ಕರ್ಷಪೂರ್ವಕ ಹರಿಸರ್ವೋತ್ತಮತ್ವ ಜ್ಞಾನದಿಂದ ನಾಮಸ್ಮರಣೆ ಮಾಡಬೇಕು. ಅದಕ್ಕೆ ಯಾವ ಕಾಲವೂ ನಿರ್ಬಂಧವಿಲ್ಲ. ಸದಾ ಕಾಲ ಮಾಡುವದೆಂದು ಸೂಚಿಸುತ್ತಾ-“ ಸ್ಮರಣಂ ಸರ್ವದಾ ಯೋಗ್ಯಂ ” ಎಂಬ ಹಿರಿಯರ ವಚನ. ನಾಮವೆಂದರೆ ಹೆಸರು ಸಾಮಾನ್ಯ ಅರ್ಥ, ಆದರೆ ನಾಮವೆಂದರೆ “ನಮ್ಯತೇ ಅಭಿಧೀಯತೇ ಅರ್ಥೋನೇನ ನಾಮ” ಅಥವಾ “ ನಮಯಂತ್ಯನೇನೇತಿ ನಾಮ ” ನಮಸ್ಕಾರಾದಿ ಕಾಲದಲ್ಲಿ ಉಚ್ಚಾರಮಾಡುವದು ನಾಮ. ಮತ್ತು ಅದರಿಂದ ಯಾವ ಉತ್ತಮ ಅರ್ಥವು ಹೇಳಲ್ಪಡುತ್ತದೆಯೋ ಅದು ನಾಮ. ಅಂದರೆ ಎರಡೂ ವಿಧವಾಗಿ ಆ ನಾಮದಲ್ಲಿ ಮಾಹಾತ್ಮ್ಯೆಯನ್ನೂ ಅದರ ಅರ್ಥವನ್ನೂ ಉತ್ತಮತ್ವೇನ ಕೊಡುವ ದಾಗಿರುವದೇ ನಾಮವು. ಸ್ಮರಣ = ಚಿಂತನಾ, ನೆನಸಲು ಯೋಗ್ಯವಾದುದೆಂದು ತಿಳಿ ದಂತಾಯಿತು. ಇಂಥ ಬಿಂಬರೂಪಿ ಹರಿಯ ನಾಮ ತಿಳಿಸಿಕೊಡುವದು ಯಾವದು? ವೇದೋಪನಿಷತ್ತುಗಳು. ವೇದ ವಿದ್‌ಜ್ಞಾನ ತಿಳುವಳಿಕೆ ಮುಖ್ಯವಾದುದು. ಅನಾದಿ ನಿತ್ಯನಾದ ಶ್ರೀಹರಿಯ ಅನಂತನಾಮವು ನಿತ್ಯವಾದವು. ಇಂತಹ ಸ್ಮರಣೀಯವಾದ ಹರಿನಾಮವು ಸದಾ ಮಾಡುವದೆಂದು ನಾಮಸ್ಮರಣ ಸಂಧಿ ಪ್ರಾರಂಭಿಸುತ್ತಾರೆ. ಅಂದರೆ ವೇದ-ವೇದದಲ್ಲಿ ನಿತ್ಯವಾಗಿ ಒಂದೇ ರೀತಿಯಾಗಿರುವ ಪೂರ್ಣ ವರ್ಣಗತ ಅಜಾದಿ ಭಗವದ್ರೂಪಗಳನ್ನು ತಿಳಿದು ಆ ನಾಮ ಮಹಿಮ ತಿಳಿದು ಸ್ಮರಣೆಮಾಡುವದೇ ಮುಖ್ಯ; ಇದೇ ನಿತ್ಯವಾದ ವೇದವಿಚಾರ.

**ಪದ್ಯಾರ್ಥ :** ಮಕ್ಕಳಾಡಿಸುವಾಗ = ಸಂತೋಷಕಾಲದಲ್ಲಿ ಮಕ್ಕಳನ್ನು ತೊಡೆಯಮೇಲೆ ಕುಳ್ಳಿರಿಸಿ ಆಡಿಸುವಾಗ - ಮಡದಿಯೊಳಕ್ಕರದಿ ನಗುವಾಗ = ತನ್ನ ಹೆಂಡತಿಯಲ್ಲಿ ಪ್ರೀತಿ, ಒಲುಮೆ, ಪ್ರೇಮದಿಂದ ನಗುವಾಗ ಹಸನ್ಮುಖ ನಾಗಿ ನಕ್ಕು ಮಾತಾಡುವಾಗ, ಹಯ = ಕುದುರೆ, ಗಜ = ಆನೆ, ಪಲ್ಲಕ್ಕಿ = ಪಾಲಕಿಯೆ, ಮೊದಲಾದ ವಹನಗಳೇರಿ ಮೆರೆವಾಗ = ಅನೇಕ ಉತ್ತಮವಾದ ವಾಹನಗಳನ್ನು ಏರಿಕೊಂಡು ಮೆರೆಯುವಾಗ ಅಂತರ ಬಹಿರ್ ಸಂತೋಷಕಾಲ ಗಳಲ್ಲಿ, ಬಿಕ್ಕುವಾಗ = ಎಕ್ಕುವಾಗ, ಬಿಕ್ಕುಹಿಡಿದಾಗ ಇದು ಪ್ರಸಿದ್ಧ, ಆಕಳಿ ಸುತಲಿ = ನಿದ್ರೆ ಬರುವ ಕಾಲ ಬಾಯಿತೆಗದು ಶ್ವಾಸ ತೆಗೆದುಕೊಳ್ಳುವದು ಆಕಳಿಸುವಿಕೆ, ಇಂಥ ಕಾಲಗಳಲ್ಲಿ, ದೇವಕ್ಕಿತನಯನ = ದೇವಕಿ ಮಗ ನಂದನ ಶ್ರೀಕೃಷ್ಣನನ್ನು, ಸ್ಮರಿಸುತಿಹ ನರ = ಸ್ಮರಣೆ, ಚಿಂತನೆ, ನೆನೆಸುತ್ತಿರುವ ನರನು, ಮನುಜನು, ಆವಾವಲ್ಲಿ ನೋಡಿದರೂ ಯಾವ ಕಾಲ ಯಾವ ದೇಶದಲ್ಲಿ ನೋಡಿದರೂ, ಯಮದೂತರಿಗೆ ಸಿಕ್ಕನು. ಯಮ ಪುಣ್ಯ ಪಾಪಗಳನ್ನು ವಿಚಾರಿಸುವ ಯಮದೇವನು ಮರಣಕಾಲದಲ್ಲಿ ತನ್ನ ದೂತರನ್ನಟ್ಟಿ ಪಾಶದಿಂದ

ಪಾಪಿಷ್ಠರಾದ ಜೀವರನ್ನು ಕಟ್ಟಿ ಎಳೆಯುವ ಯಮದೇವರ ಸೇವಕರಿಗೆ ಎಂದಿಗಾದರೂ ಸಿಗುವನೆ? ಸಿಗುವದಿಲ್ಲ. ಸಂತತ ಹರಿನಾಮಸ್ಮರಣೆ ಮಾಹಾತ್ಮೆ ಇಂಥದು. ಸದಾಚಾರಿಯೂ, ಹರಿಸರ್ವೋತ್ತಮನು ಜ್ಞಾನವುಳ್ಳವನೂ ನಾಮಸ್ಮರಣೆಗೆ ಯೋಗ್ಯನೆಂದು ವ್ಯಾಸದಾಸ ಕೌಮುದೀಕಾರರು ವಿಸ್ತರಿಸಿರುವರು.

**ದ್ರೌಪದೀಶಪತಿ ವಿಠಲರು :** ಮಕ್ಕಳಾಡಿಸುವಾಗ = ಪದ್ಯ ೧, ೨, ೩, ೪, ೫, ೬, ೭ ಇವು ಇಷ್ಟೇ ಬರೆದು ಅರ್ಥ ಬರೆದಿಲ್ಲ.

**ಭಾವಸೂಚನ :** ಮಕ್ಕಳಾಡಿಸುವಾಗೇತಿ ॥ ಪುತ್ರಾದೀನಾಂ ಚುಂಬನೇ ಚೈವಕಾಲೇ ಸವೇಣು ಹಸ್ತಂ ಸಂಸ್ಮರೇತ್ ಕೃಷ್ಣಮೇವ ॥ ಸುಸಂಗಕಾಲೇಸ್ವಸ್ತ್ರೀಶ್ಲೇಷೇವನಿತ್ಯಂ । ಗೋಪಸ್ತ್ರೀಣಾಂಪೀನಪಯೋಧರಂ ಧೃತಂ ॥ ಪ್ರಯಾಣಕಾಲೇಸಂಸ್ಮರೇತ್ ತಾರ್ಕ್ಷ್ಯವಾಹನಮಿತಿ ॥ ಮಂಜೂಷಾಯಾಂ ॥

ವಿಷ್ಣುದಾಸರ ಮುಟ್ಟಲಾರದೆ ।
ಕೆಟ್ಟಕಲಿ ಕಂಗೆಟ್ಟು ಪೋಪನೆಂ ।
ದೆಷ್ಟುಮರ್ಮವನರಿಪುದಕೆ ಜಗನ್ನಾಥಗುರುವರ್ಯ ॥
ವಿಟ್ಠಲಾನೆಂದೊಮ್ಮೆ ನೆನೆಯಲು ।
ಅಟ್ಟಸುತ ಭವಜಲಧಿ ತನುತಾ ।
ಸ್ಪಷ್ಟ ತೋರ್ಪನು ಇದಕೆ ಸಂದೇಹವಿಲ್ಲೆನುತ ಪೇಳ್ದ ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಭ್ಯರ್ಹಿತನ್ಯಾಯ್ಯೇನ ಕೋಮಲಾಂಗಧ್ಯಾನಂ ಆಸನಾದ್ಯಪೇಕ್ಷಂ ಉಕ್ತಂ ಪೂರ್ವತ್ರ ॥ ಅತ್ರ ತು ತದನಪೇಕ್ಷಂ ಸರ್ವದಾ ಯೋಗ್ಯಮುಮೂಕ್ಷೂದ್ಧಾರಕ ಲಕ್ಷ್ಮೀವಕ್ಷೋಜಾಶ್ಲಿಷ್ಟ ವಕ್ಷಃಸ್ಮರಣಂ ವಕ್ತುಂ ಏತತ್ಸಂಧಿ ಮುಪಕ್ರಮತೇ–**"ಮಕ್ಕಳ"** ಇತಿ ॥ ಅತ್ರ ಇದಂ ಬೋಧ್ಯಮ್ – "ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯಃ ನ ಜಾತುಚಿತ್ ॥" ಇತ್ಯುಕ್ತೇಃ ಸ್ಮರಣಂ ಆವಶ್ಯಕಮ್ ॥ ಕೇವಲಂ ತತ್ ಉದ್ಧಾರಣಾಯ ನ ಅಲಮ್ ॥ ಗುಣೋತ್ಕರ್ಷಜ್ಞಾತ (ನ) ರೀತಿ ವಿರೋಧಾತ್ ॥ ಕೇವಲಂ ನಾಮಾರ್ಥಧೀಃ ಅಪಿ ಮುಕ್ತಯೇ ನ ಕ್ಷಮಾ ॥ **" ಅಭಕ್ತಪಠಿತಂ ನಾಮ ಶ್ರುತಂ ಚ ನರಕಾವಹಮ್ ॥ "** ಇತ್ಯುಕ್ತೇಃ ॥ " ಭಕ್ತಸ್ಯಾತೋ ನಾಮಕೀರ್ತಿಃ " ಇತಿ ಚ ॥ " ಅಭಕ್ತೋದಾಹೃತಂ ನೈವ ಫಲದಾತೃ ಭವಿಷ್ಯತಿ ॥ " ಇತಿ ಚ ತುಷ್ಯತ್ಯನ್ಯಥಾ ಭಕ್ತಿ ಪೂರ್ವಂ ನಾಮ

ಬುದ್ಧಿಃ ಅಪಿ ಸೇತಿ ಕರ್ತವ್ಯತ್ವೇನರ್ಘುಟಿತಿ ಜನಯತಿ ಫಲಂ ಕಾಲವಿಶೇಷೆ ಮೂರ್ತಿ ವಿಶೇಷ ಸ್ಮೃತಿರೇವ ಸಾ ॥ ಏತತ್ಸ್ ಸರ್ವಂ ಅತ್ರೈವ "ದೇವಕೀ ತನಯು" ಪದೇನ ಪಂಚಮ ಪದೇನ ಚ ಸೂಚಿತಮ್ ॥ "ದೇವಕೀನಂದನ" (ತನಯ) – ಓಂ* ಉತ ವಾ ಸಂತಿ ಭೂಯಸೀಃ ಪಿಬಾ ಸೋಮಮಿಂದ್ರ ಮದಂತು ತ್ವಾಯಂ ತೇ ಸುಷಾ(ಶ್ರಾ)ವ ಹರ್ಯಶ್ವಾದ್ರಿಃ ॥ ಸೋತು(ತ)ರ್ಬಾ ಹುಭ್ಯಾಂ ಸುಯತೋ ನಾರ್ವಾ ॥ * ಓಂ * ॥ ದೇವಾನಾಂ ಸ್ವಮುಖಾನಾಂ ಸುಖಂ ಅನೇನ ಅರ್ಪಿತೇನ ಸೋಮೇನ ತದ್ವತ್ ಆಹ್ಲಾದಕಾತ್ಮೀಯೇನ ಭಾರ್ಯಾಪತ್ಯಾದಿನಾ ಅಸ್ತಿ ಇತಿ ದೇವಕಿಃ ಸೋಮಃ ॥ ತೇನ ನಂದತಿ ಮೋದ ಯತಿ ಇತಿ ದೇವಕೀನಂದನಃ ॥ ೧ ॥

"ಮಡದಿ" – ಹೆಂಡತಿ, "ಅಕ್ಕರ" – ಅಕ್ಕರತೆ.

## ಕನ್ನಡಾರ್ಥ

"ಅಭ್ಯರ್ಹಿತಂ ಪೂರ್ವಂ" – "ಮುಖ್ಯವಾದುದು ಮೊದಲು" ಎಂದು ಹೇಳಿರುವ ಯುಕ್ತಿಯಂತೆ ಕೋಮಲಾಂಗನಾದ ಪರಮಾತ್ಮನ ಹರಿಯ ಆಸನಾ ದಿಕ್ರಮಗಳನ್ನೊಳಗೊಂಡ ಧ್ಯಾನಕ್ರಮವನ್ನು ಹಿಂದಿನ ಧ್ಯಾನಪ್ರಕ್ರಿಯಾ ಸಂಧಿ ಯಲ್ಲಿ ನಿರೂಪಿಸಿಯಾಯಿತು. ಆಸನ ಮುಂತಾದವುಗಳಿರದಿದ್ದರೂ ಸಹ ಮಾಡಲು ಬರುವಂಥ (ಆಸನಾದಿಗಳ ನಿರ್ಬಂಧ – ನಿಯಮರಹಿತವಾದ) ಎಲ್ಲ ಕಾಲದಲ್ಲಿಯೂ ಸುಲಭವಾದ ಸಕಲಯೋಗ್ಯ ಮುಮುಕ್ಷುಗಳನ್ನೂ ಉದ್ಧರಿಸುವ ರಮಾರಮಣನ ನಾಮಸ್ಮರಣವನ್ನು ನಿರೂಪಿಸಲು ಈ ಸಂಧಿಯನ್ನು ಪ್ರಾರಂಭಿ ಸುತ್ತಾರೆ. "ಮಕ್ಕಳಾಡಿಸುವಾಗ" ಎಂಬ ಪದ್ಯದಿಂದ ಇಲ್ಲಿ ತಿಳಿಯಬೇಕಾದ ಮಹತ್ವದ ಸಂಗತಿಯು ಇದು. "ಯಾವಾಗಲೂ ವಿಷ್ಣುವನ್ನು ಸ್ಮರಿಸಬೇಕು, ಅವನನ್ನು ಯಾವಾಗಲೂ ಮರೆಯಬಾರದು" ಎಂದು ಹೇಳಿರುವದರಿಂದ ವಿಷ್ಣುಸ್ಮರಣವು ಅತ್ಯಂತ ಆವಶ್ಯಕವಿರುತ್ತದೆ. ಆದರೆ ಬರಿಯ ವಿಷ್ಣುಸ್ಮರಣ ವಷ್ಟೇ ಸಾಲದು. ಬರಿಯ ವಿಷ್ಣುಸ್ಮರಣವು ಅಂದರೆ ಪರಮಾತ್ಮನ ಸರ್ವೋ ತ್ಕರ್ಷ ಜ್ಞಾನವಿಲ್ಲದ ಸ್ಮರಣವು ಶಾಸ್ತ್ರಸಮ್ಮತವಲ್ಲ. ಪರಮಾತ್ಮನ ನಾರಾ ಯಣನ ಸರ್ವೋತ್ತಮತ್ವವನ್ನು ತಿಳಿಯದ ಮನುಷ್ಯನನ್ನು ಯಾವ ತೀರ್ಥ ವ್ರತೋಪವಾಸಗಳೂ ಪವಿತ್ರಗೊಳಿಸಲಾರವು ಎಂದು ಶಾಸ್ತ್ರವು ಹೇಳುತ್ತದೆ. ಆದುದರಿಂದ ಕೇವಲ ನಾಮಾರ್ಥಸ್ಮರಣವು ಮುಕ್ತಿಗೆ ಕಾರಣವೆನಿಸುವದಿಲ್ಲ.

ವಿಷ್ಣುಭಕ್ತಿಯಿಲ್ಲದವನು ಮಾಡುವ ನಾಮೋಚ್ಚಾರಣದ ಶ್ರವಣ ಪಠಣಗಳು ನರಕಕ್ಕೆ ಕಾರಣವಾಗುತ್ತವೆ. ಅಭಕ್ತನಿಂದ ಉಪದೇಶವು ಫಲದಾಯಕವಾಗುವದಿಲ್ಲ. ವಿಷ್ಣುಭಕ್ತಿಯು ನಾಮಸ್ಮರಣದಿಂದ ಮೋಕ್ಷವಾಗಲಿಕ್ಕೆ ಇತಿ ಕರ್ತವ್ಯತಾ ರೂಪವಾಗಿರುತ್ತದೆ. ಸಹಕಾರಿ ಕಾರಣವಾಗುತ್ತದೆ. ವಿಷ್ಣುಭಕ್ತಿಯಿಂದ ಸಹ ಕೃತವಾದ ಭಗವನ್ನಾಮ ಸಂಸ್ಮರಣವು ಮುಕ್ತಿಯನ್ನು ತೀವ್ರವಾಗಿ ದೊರಕಿಸಿ ಕೊಡುತ್ತದೆ. ಕಾಲಕ್ಕೆ ತಕ್ಕಂತೆ ಭಗವನ್ಮೂರ್ತಿಯನ್ನು ವಾಯು ವಿಷ್ಣುಭಕ್ತಿಃ ಪುರಃಸ್ಸರವಾಗಿ ಉಪಾಸಿಸಿದರೆ ಶೀಘ್ರವಾಗಿ ಮೋಕ್ಷ ಮುಂತಾದ ಫಲಗಳು ಲಭಿಸುತ್ತವೆ." ಇವೆಲ್ಲ ಸಂಗತಿಗಳು " ದೇವಕೀತನಯ "-ಮುಂತಾದ ಐದನೆಯ ಚರಣ ಪದಗಳಿಂದ ಸೂಚಿತವಾಗುತ್ತವೆ.

" ದೇವಕೀತನಯ " ವೆಂಬುದು " ದೇವಕೀನಂದನ " ವೆಂಬ ನಾಮಕ್ಕೆ ಸಮಾನವಾದುದು. ದಾರಾಪುತ್ರ ಮುಂತಾದ ಸರ್ವ ಸಮರ್ಪಣ ಭಕ್ತಿಯೆಂಬ ಸೋಮವನ್ನು ಹರಿಯಲ್ಲಿ ಅರ್ಪಿಸುವದರಿಂದ ಸುಖವಾಗುವುದರಿಂದ " ದೇವಕಿ " ಯೆಂದರೆ ಸೋಮವೆಂದು ಅರ್ಥ. ಅದರಿಂದ ಆನಂದಗೊಳಿಸುವದರಿಂದ ಅಥವಾ ಆನಂದಪಡುವದರಿಂದ ದೇವಕೀನಂದನನೆಂದು ಕರೆಯುತ್ತಾರೆ. ಇದು ಬೃಹತೀಮಂತ್ರಾನುಗುಣವಾದ ಅರ್ಥವು. ॥ ೧ ॥

**ಅವತರಣಿಕಾ :** ಹರಿನಾಮ ಸ್ಮರಣೆ ಸಕಲ ಕ್ರಿಯೆ ಸಕಲ ಕಾಲಗಳಲ್ಲಿ ಮಾಡುವದರಿಂದ ಸಕಲ ದುರಿತಗಳೂ ಪರಿಹಾರವಾಗುತ್ತವೆಂದು ನಿರೂಪಿಸುತ್ತಾರೆ.

ಮೂಲ :

**ಸರಿತುತ್ಪ್ರವಹಗಳಲ್ಲಿ ದಿವ್ಯಾಂ ।**
**ಬರದಿ ಪತ್ರಾದಿಯಲ್ಲಿ ಹರುಷಾ ।**
**ಮರುಷ ವಿಸ್ಮೃತಿಯಿಂದಲಾಗಲಿವೊಮ್ಮೆ ಬಾಯ್ದೆರೆದು ॥**
**ಹರಿಹರೀ ಹರಿಯೆಂಬ ಎರಡ ।**
**ಕ್ಷರ ನುಡಿದ ಮಾತ್ರದಲಿ ದುರಿತಗ ।**
**ಳಿರದೆ ಪೋಪವು ತೂಲರಾಶಿಯೊಳನಲ ಪೊಕ್ಕಂತೆ ॥ ೨ ॥**

**ಪದ್ಯಾರ್ಥ :** ಸರಿತ್ ಪ್ರವಾಹಗಳಲ್ಲಿ = ನದ್ಯಾದಿಗಳ ಪ್ರವಾಹ ಹರಿಯುವದರಲ್ಲಿ ನದಿಯು ಹರಿವು, ದಿವ್ಯಾಂಬರ = ಒಳ್ಳೇ ಉತ್ತಮವಾದ ನೂತನ ಸ್ತ್ರ ಉಡುವ ಕಾಲದಲ್ಲಿ ವಸ್ತ್ರಹರಿ ಅಂದರೆ ಧೋತರ ಹರಿದು ಹರಿಗೆ ಅರ್ಪಿಸಿ

ಧರಿಸುವಾಗ್ಗೆ ವಸ್ತ್ರಹರಿ, ಪತ್ರಾದಿಯಲಿ = ತುಲಸಿ-ಬಿಲ್ವ-ಬನ್ನಿ-ಪುಷ್ಪಗಳನ್ನು ಹರಿಯುವ ಕಾಲದಿ ತುಲಸಿಹರಿ ಇತ್ಯಾದಿ ಸಾಮಾನ್ಯ ಕಾಲದಲ್ಲಿ ಹರಿ ಶಬ್ದ ಪ್ರಯೋಗಿಸುವದು ಸಹ ಈ ಹರಿಶಬ್ದ ಭಗವಂತನ ಸ್ಮರಣೆಯಾಗಬೇಕು. ಹರುಷ = ಸಂತೋಷ, ಅಮರುಷ = ಕೋಪಮತ್ಸರ ಹಟದಿ ಅವನನ್ನು ಇರಿ-ಹರಿ ತಿಕ್ಕು ಇತ್ಯಾದಿ ಹರಿಶಬ್ದಗಳು, ವಿಸ್ಮೃತಿಯಿಂದಲಾಗಲಿ = ಮೈಮೇಲೆ ಎಚ್ಚರಿಕೆ ಇಲ್ಲದೆ ಹೂಂ ಹರಿ ಎಂದು, ಒಮ್ಮೆ ಬಾಯ್ದೆರದು = ಒಂದು ವೇಳೆ ಬಾಯಿತೆರದು ಹರಿಹರಿ ಎಂಬ ಯೆರಡಕ್ಷರ ನುಡಿದ ಮಾತ್ರದಲಿ = ಹರಿಶಬ್ದ ವಾಚ್ಯನಾದ ಪರಮಾತ್ಮನ ನಾಮದ ಎರಡೆ ಅಕ್ಕರ = ಅಕ್ಷರ, ನುಡಿದ ಮಾತ್ರ ದಲಿ = ನುಡಿದಾಕ್ಷಣವೇ, ದುರಿತರಾಶಿಗಳಿರದೆ ಪೋಪವು = ಪಾಪರಾಶಿಗಳು ಇರಲಾರದೆ ಬಿಟ್ಟು ದೂರೋಡುವವು. ಹೇಗಂದರೆ, ತೂಲರಾಶಿಯೊಳನಳ ಪೊಕ್ಕಂತೆ = ಅರಳಿಯ ರಾಶಿ-ಗುಂಪು ಸಮೂಹದಲ್ಲಿ ಬೆಂಕಿಕಿಡಿ ಬಿದ್ದರೆ ಹೇಗೆ ಅರಳಿಯು ಸುಟ್ಟು ನಾಶವಾಗುತ್ತದೆಯೋ ಅದರಂತೆ ಹರಿಹರಿ ಎಂದು ನುಡಿ ಯಲು ಪಾಪರಾಶಿ ಭಸ್ಮವಾಗುತ್ತವೆ.

**ಭಾವಸೂಚನ:** ಸರಿದಿತಿ ನಾಮಸ್ಮರಣ ಮಾಹಾತ್ಮ್ಯಂ ಅಗ್ನೇಯ ಉತ್ತರಖಂಡೇ ಅಷ್ಟಾವಿಂಶಾಧ್ಯಾಯೇ ಶ್ರೀರಾಮರಾಮೇತಿ ಇತ್ಯಾರಭ್ಯ, ಮಹತ್ಯಾಪದಿ ಸಂಪ್ರಾಪ್ತೌ ಸ್ಮೃತ್ತ್ಯೋ ಭಗವಾನ್ ಹರಿರಿತ್ಯಂತೇ ಸವಿಸ್ತರಂ ಪ್ರದಿಪಾದಿತಂ ॥ ಯಮಧರ್ಮರಾಜೇನ ॥ ಸರ್ವದಾಸ್ಮರ್ತವ್ಯೋಪಿ ಕಾಲ ವಿಶೇಷೇಷು ವಿಶೇಷತೋ ಧ್ಯೇಯೇತ್ಯಾಶಯೇನಾಹ ॥ ದಿವ್ಯಾಂಬರೇತಿ ॥ ೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸರಿತ್" ಇತಿ ॥ "ಹಸತ್ಯಥೋ ರೋದಿತಿ" ಇತಿ "ವಾಗ್ಗದ್ಗದಾ ದ್ರವತೇ ಯಸ್ಯ ಚಿತ್ತಂ ನೇತ್ರೇಜಲಂ ಗಾತ್ರರುಡೇಷು ಹರ್ಷಃ" ॥ ಇತ್ಯೇತಲ್ಲಕ್ಷಣ ಲಕ್ಷಿತಾಶೇಷಭಗವತ್ಪ್ರಿಯೋಚ್ಚರಿತ ಹರಿನಾಮ ಏವ ತೂಲರಾಶಿಂ ಅನಲವತ್ ಪಾಪರಾಶಿಂ ದಹತಿ ನಾಪರಥಾ ॥ "ತೂಲರಾಶಿರಥಾಗ್ನೇಯೇ ಧರ್ಮಪ್ರಶ್ನೇ ದ್ವಿತೀಯತೇ ॥ ವೇದ(ವದೇ) ರಾಶೇ ರು ಪಾ ಖ್ಯಾ ನೇ ಖಂಡೇವ್ಯಕ್ತೇ ಬ್ರವೀಮಿ ತತ್" ॥ ಪಂಚಮ(ಮಃ) ವೇದರಾಶಿಃ ॥ "ಸ್ತೇನಃ ಸುರಾಪಃ ಮಿತ್ರಧ್ರುತ್ ಬ್ರಹ್ಮಹಾ ಗುರುತಲ್ಪಗಃ ॥ ಸ್ತ್ರೀರಾಜಪಿತೃಗೋಹಂತಾ ಯೇ ಚ ಪಾತಕಿನೋಪರೇ ॥ ದಗ್ಧ ಪಾಪಾಃ ಸ್ಯುಃ ಉಚ್ಚಾರ್ಯ ಹರಿಃ ಇತ್ಯಕ್ಷರ

ದ್ವಯಮ್" ||೨|| ಸ್ನಾನಂ ನ ಕುರ್ಯಾತ್ ಯೋ ಮಾಘೇ ಮಾಧವೇ ಮಾಧವಪ್ರಿಯೇ || ಔಪಾಸನವಿಹೀನಾಃ ಚ ಪ್ರಾತಃಸ್ನಾನ ವಿವರ್ಜಿತಾಃ || ಪಂಚಯಜ್ಞವಿಹೀನಾ | ಚ ಗಾಯತ್ರ್ಯತಿಥಿವರ್ಜಿತಾಃ || ದಗ್ಧಪಾಪಾಃ ಸ್ಯುಃ ಉಚ್ಚಾರ್ಯ ಹರಿರಿತ್ಯಕ್ಷರದ್ವಯಮ್ ||೩|| ಪರಾರ್ಥಘಾತಕಾಃ ಪಾಪಾಃ ಪರನಿಂದಾಸು ತತ್ಪರಾಃ || ದಗ್ಧಪಾಪಾಃ ||೪|| ಅಸದ್ವಾರ್ತಾರತಾಃ ವಿಷ್ಣುಕಥಾಶ್ರವಣವರ್ಜಿತಾಃ || ದಗ್ಧಪಾಪಾ ||೫|| ನಿತ್ಯನೈಮಿತ್ತಿಕಭ್ರಷ್ಟಾಃ ತೀರ್ಥಯಾತ್ರಾವಿವರ್ಜಿತಾಃ ದ್ವಾದಶಾಕ್ಷರಹೀನಾ(ಹಿ) ಚ ಅಷ್ಟಾಕ್ಷರ ವಿವರ್ಜಿತಾಃ || ಅರಾಮಾಯಣಗಾಥಾಃ ಚ ಪ್ರಾತಃ ಭಾರತವರ್ಜಿತಾಃ || ದಗ್ಧಪಾಪಾಃ || ಶಾಲಗ್ರಾಮಾರ್ಚನಾಹೀನಾಃ ಭಗವದ್ಭಕ್ತನಿಂದಕಾಃ || ಸಂಕಲ್ಪ ಕರ್ಮಕರ್ತಾರಃ ಸದಾ ಶೂದ್ರಾನ್ನಭೋಜಿನಃ || ನಿಜಧರ್ಮ ಪ್ರವತ್ತಾರಃ ನಿಜಪಾಪನಿ(ವಿ)ಗೂಹತಾಃ || ದಗ್ಧಪಾಪಾ || ಅದ್ವಾದಶೀವ್ರತಾಃ ಮೂರ್ಖಾಃ ಏಕಾದಶ್ಯನ್ನಭೋಜಿನಃ || ದುಷ್ಪ್ರತಿಗ್ರಹಕರ್ತಾರೋಽಸ್ಯವೇದಾಃ ವೇದವಿಕ್ರಯಾಃ || ಪಂಚಾಕ್ಷರವಿಹೀನಾಃ ಚ ಶೂದ್ರದ್ರವ್ಯೈಃ ಚ ಯಾಜಕಾಃ || ಊರ್ಧ್ವಪುಂಡ್ರವಿಹೀನಾಃ ಚ ಅಪವಿತ್ರಕರಾಃ ತಥಾಃ || ದಗ್ಧಪಾಪಾಃ || ಅಮಹಾಲಯಕರ್ತಾರಃ ಅಮಾಶ್ರಾದ್ಧವಿವರ್ಜಿತಾಃ || ಗುರುದ್ರುಹಃ ಪಿತೃಘ್ನಾಃ ಚ ಮಾತಾಪಿತೃವಿನಿಂದಕಾಃ || ದಗ್ಧಪಾಪಾಃ || ಅದತ್ವಾಭೋಜನಃ ಅಸತ್ಯಾಃ ಅತಿಥಿಭ್ಯಃ ಅಗ್ರಭೋಜಿನಃ|| ಯೇತೇಚಿತ್ ಪಾಪಕರ್ತಾರಃ ಪಙ್ಕ್ತಿಭೇದಕರಾಃ || ಚ ಯೇ || ಸರ್ವೇ ಚ ಮುಕ್ತಿಭಾಜಃ || ಇತ್ಯನೇನ ಉಕ್ತಂ ಪ್ರಮಾಪಿತಂ ಚ || ಚತ್ವಾರಿಂಶಾಧ್ಯಾಯೇ ಬ್ರಹ್ಮಕಾಂಡೇ ಗಾರುಡೇ.

"ಹರಿಪ್ರೀತಿಕರಾನ್ ಧರ್ಮಾನ್ ವಕ್ಷ್ಯೇ ಶ್ರುಣು ಖಗಾಧಿಪ" ಇತ್ಯಾರಭ್ಯ ಅಧ್ಯಾಯ ಪೂರ್ತಿಪರ್ಯಂತಂ **ಕಾಲವಿಶೇಷೇ ಮೂರ್ತಿವಿಶೇಷಾಂ ಉಕ್ತಾಃ ಕೃಷ್ಣೇನ** ವಾಹನಂ ಪ್ರತಿ — "ಪ್ರಾತಃಕಾಲೇ ಸಮುತ್ಥಾಯ ಸ್ಮರೇತ್ ನಾರಾಯಣಂ ಹರಿಮ್" || ಇತ್ಯಾದಿನಾ || ತುಲಸೀವಂದನೇ ಶ್ರೀಕೃಷ್ಣಃ ||೨|| ವಿಣ್ಮೂತ್ರೋತ್ಸರ್ಗೇ ಅಪಾನಾತ್ಮಕ ಕೇಶವಃ ||೩|| ಶೌಚಕಾಲೇ ಗಂಗಾಜನಕ ತ್ರಿವಿಕ್ರಮಃ ||೪|| ದಂತಧಾವನೇ ಚಂದ್ರಾಂತರ್ಯಾಮೀ ಹರಿಃ ||೫|| ಮುಖಪ್ರಕ್ಷಾಲನೇ ಮಾಧವಃ ||೬|| ಗವಾಂ ಕಂಡೂಯನೇ ಗೋವರ್ಧನಧೃತ್ ||೭|| ವತ್ಸಸ್ತನಪಾನೇ ಬಾಲಕೃಷ್ಣಃ ||೮|| ಗೋದೋಹನೇ ಗೋಪಾಲ

ಕೃಷ್ಣಃ ॥೯॥ ದಧಿನಿರ್ಮಥನೇ ಮಂಥಧರಃ ॥೧೦॥ ಮೃತ್ತಿಕಾಸ್ನಾನೇ ವರಾಹಃ ॥೧೧॥ ಪುಂಡ್ರಧಾರಣೇ ಕೇಶವಾದಿ ದ್ವಾದಶರೂಪಾಣಿ ॥೧೨॥ ಚಕ್ರಾದಿಮುದ್ರಾಧಾರಣಕಾಲೇ ಕೃದ್ಧೋಲ್ಕಾದಿಮೂರ್ತಿಃ ॥೧೩॥ ಪ್ರಾಣಾಗ್ನಿಹೋತ್ರೇ ಅನಿರುದ್ಧಾದಿ ಪಂಚಕಮ್ ॥೧೪॥ ವಸ್ತ್ರಪ್ರಾವರಣೇ ವಾಸುದೇವಃ ॥೧೫॥ ಶ್ರೀರಾಮಂ ಸಂಧ್ಯಾಯಾಮ್ ॥೧೬॥ ಶ್ರಾದ್ಧೇ ಅಚ್ಯುತಾನಂತ ಗೋವಿಂದಾನ್ ॥೧೭॥ ಪೂರ್ವೋತ್ತರಾಪೋಶನಯೋಃ ವಾಯುಯುಗಮ್ ॥೧೮॥ ವಸ್ತ್ರಧಾರಣೇ ಉಪೇಂದ್ರಮ್ ॥೧೯॥ ಯಜ್ಞೋಪವೀತಧಾರಣೇ ನಾರಾಯಣ ವಾಮನೌ ॥೨೦॥ ಆರ್ತಿಕ್ಯಗ್ರಹಣೇ ಪರಶುರಾಮಃ ॥೨೧॥ ಔಪಾಸನ–ವೈಶ್ವದೇವ–ಹೋಮಭಸ್ಮಧಾರಣಾದಿಷು ಜಾಮದಗ್ನ್ಯಃ ॥೨೨॥ ತ್ರಿವಾರತೀರ್ಥಗ್ರಾಹಣೇ ಕೃಷ್ಣರಾಮ ವಾಸುದೇವಾಃ ॥೨೩॥ ಶಂಖೋದಕಧಾರಣೇ ಮುಕುಂದಃ ॥೨೪॥ ಏಕೈಕಗ್ರಾಸೇ ಗೋವಿಂದಃ ॥೨೫॥ ಭಕ್ಷ್ಯಭಕ್ಷಣೇ ಅಚ್ಯುತಃ ॥೨೬॥ ಶಾಖಾದಿಭಕ್ಷಣೇ ಧನ್ವಂತರಿಃ ॥೨೭॥ ಪರಮಾನ್ನ ಭೋಜನೇ ಪಾಂಡುರಂಗಃ ॥೨೮॥ ನವನೀತ ಭಕ್ಷಣೇ ತಾಂಡವಕೃಷ್ಣಃ ॥೨೯॥ ದಧ್ಯನ್ನೇ ಗೋಪಾಲಕೃಷ್ಣ ॥೩೦॥ ದುಗ್ಧಾನ್ನಭೋಜನೇ ಶ್ರೀನಿವಾಸಃ ॥೩೧॥ ತೈಲಂಘೃತಪಕ್ವಾಶನೇ ವೆಂಕಟೇಶಃ ॥೩೨॥ ಕದಲೀ ಜಂಬೂ ದ್ರಾಕ್ಷಾ ಖರ್ಜೂರ ಚೂತ ನಾರಂಗ ಪೂಗದಾಡಿಮಕಿಂ ತಳ ನಾರಿಕೇಳಧಾತ್ರೀ ಭಕ್ಷಣೇ ಬಾಲಕೃಷ್ಣಃ ॥೩೩॥ ಪಾನಕಪಾನೇ ನಾರಸಿಂಹಃ ॥೩೪॥ ಗಂಗಾಮೃತಪಾನೇ ಗಂಗಾಜನಕಃ ॥೩೫॥ ಪ್ರಯಾಣೇ ಗರುಡಧ್ವಜ ನಾರಾಯಣಃ ॥೩೬॥ ಪುತ್ರಚುಂಬನೇ ವೇಣುಹಸ್ತ ಕೃಷ್ಣಃ ॥೩೭॥ ಸ್ವಸ್ತ್ರೀಸಂಸರ್ಗೇ ಗೋಪಸ್ತ್ರೀ ಪೀನಪಯೋಧರಧರ್ತಾ ॥೩೮॥ ಪ್ರದ್ಯುಮ್ನ ವಾಸುದೇವೌ ತಾಂಬೂಲಕಾಲೇ ॥೩೯॥ ಸಂಕರ್ಷಣವಿಷ್ಣೂ ಶಯ್ಯಾಯಾಮ್ ॥೪೦॥ ಸಿದ್ರೋದಯೇ ಪದ್ಮನಾಭಃ ॥೪೧॥ ಕಥಾಯಾಂ ವ್ಯಾಸಕೃಷ್ಣ ಹಯಾಸ್ಯಾಃ ॥೪೨॥ ಗೋಪೀಕಾಂತಃ ಗಾನೇ ॥೪೩॥ ಪ್ರತಿಪಾದೇ ಲಕ್ಷ್ಮ್ಯೈ ಶ್ರೀಕಾಂತೌ ದಕ್ಷಿಣಾದಾನೇ ॥೪೪॥ ರಾಮರಾಮ ಇತಿ ತುಲಸೀಛೇದನೇ ॥೪೫॥ ಪುಷ್ಪಚ್ಛೇದನೇ ಶ್ರೀಕೃಷ್ಣ ಕೃಷ್ಣ ಇತಿ ॥೪೬॥ ಅನಂತಶಾಯೀ ಪತ್ರಚ್ಛೇದನೇ ॥೪೭॥ ದೂರ್ವಾಚ್ಛೇದನೇ ಕಪಿಲಃ ॥೪೮॥ ಗರುಡಾಂತರ್ಗತೇ ಪ್ರದಕ್ಷಿಣೇ ॥೪೯॥ ಶೇಷಾಂತರ್ಯಾಮೀ ಪ್ರಣಾಮೇ ॥೫೦॥ ಭೀತಿಕಾಲೇ ನೃಸಿಂಹಃ ॥೫೧॥ ಸದಾ ನಾರಾಯಣಃ ॥೫೨॥ ಉದರಪೂರ್ತೌ(ರ್ತೇಃ) ವಾಸುದೇವಃ ॥೫೩॥

ಇತ್ಯಾದೀನಿ ಚ ಕರ್ಮಾಣಿ ವಿಷ್ಣುಪ್ರೀತಿಕರಾಣಿ ಇತ್ಯುಕ್ತ್ವಾ "ಯಃ ಶೃಣೋತಿ ಆಚರತಿ ಚ ಇಮಾನಿ । ಹರಿಪ್ರೀತಿಕರೇ ಧರ್ಮೇ ಪ್ರವಣೋ ಭವಿತಾ ಸದಾ" ॥ ಇತ್ಯತ್ರ ಅಧ್ಯಾಯಃ ಪರ್ವವಸಿತಃ ॥೪೦॥ ತ ॥೨॥ "ಸರಿತ್"–ನದೀ "ಅಂಬರ" –ಧೋತರ.

## ಕನ್ನಡಾರ್ಥ

"ಪರಮಾತ್ಮನ ಭಕ್ತಿಯ ಭರದಲ್ಲಿ ಮೈಮರೆದು ಒಮ್ಮೆ ನಗುವನು, ಒಮ್ಮೆ ಅಳುವನು, ಒಮ್ಮೆ ಕುಣಿಯುವನು." "ವಾಕ್ಕು ನುಡಿಯು ಗದ್ಗದಿಸುವದು, ಚಿತ್ತವು ದ್ರವಿಸುತ್ತದೆ, ನಯನಗಳಲ್ಲಿ ಬಾಷ್ಪಗಳು, ರೋಮಗಳಲ್ಲಿ ಹರ್ಷವು ಅಂದರೆ ರೋಮಾಂಚನವು ಉದಯಿಸುತ್ತವೆ" ಎಂದು ಮುಂತಾಗಿ ಉಕ್ತವಾಗಿರುವ ಭಗವದ್ಭಕ್ತ ಲಕ್ಷಣಗಳಿಂದ ಕೂಡಿರುವ ಹರಿಭಕ್ತನುಚ್ಚರಿಸಿದ ನಾಮವೇ ಅರಳೆಯ ರಾಶಿಯನ್ನು ಬೆಂಕಿಯು ಸುಡುವಂತೆ ಪಾಪರಾಶಿಗಳನ್ನು ಸುಡುತ್ತದೆ. ಹಿಂದೆ ಹೇಳಲ್ಪಟ್ಟ ಭಗವದ್ಭಕ್ತಿರಹಿತವಾದ ನಾಮಸಂಕೀರ್ತನವು ಪಾಪರಾಶಿಗಳನ್ನು ಸುಡುವದಿಲ್ಲ. ಪರಮಾತ್ಮನಲ್ಲಿ ಭಕ್ತಿಯುಕ್ತವಾದ ನಾಮೋಚ್ಚಾರಣವು ಪಾಪರಾಶಿಗಳನ್ನು ಅರಳೆಯನ್ನು ಸುಡುವ ಅಗ್ನಿಯಂತೆ ದಹಿಸುವದು. ಈ ವಿಷಯದಲ್ಲಿ ಉದಾಹೃತ ವಚನಗಳು ಆಧಾರವಾಗಿರುತ್ತವೆ.

"ಕಳವು ಮಾಡುವವ–ಸುರಾಪಾನಿಯ (ಸುರೆಯನ್ನು ಕುಡಿಯುವವನ) ಮಿತ್ರದ್ರೋಹಿ, ಬ್ರಹ್ಮಘಾತಿ, ಗುರುಪತ್ನಿಗಾಮಿ, ಸ್ತ್ರೀ–ರಾಜ–ಪಿತೃ ಗೋವುಗಳ ಘಾತುಕ, ಇದಲ್ಲದೇ ಇನ್ನುಳಿದ ಪಾಪಿಗಳು, ಇವರೆಲ್ಲರೂ ಹರಿಯೆಂಬ ಎರಡು ಅಕ್ಷರಗಳನ್ನು ಉಚ್ಚರಿಸಿ (ಭಕ್ತಿಯಿಂದ) ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಮಾಧವ ಪ್ರಿಯವಾದ ಮಾಘದಲ್ಲಿ ಸ್ನಾನಮಾಡದವನೂ, ಔಪಾಸನ, ಪ್ರಾತಃಸ್ನಾನ, ಗಾಯತ್ರೀ ಜಪ, ಪಂಚಮಹಾ ಯಜ್ಞಗಳನ್ನು ಅನುಷ್ಠಿಸದವನೂ ಹರಿನಾಮ ಸಂಕೀರ್ತನದಿಂದ ಪಾಪಗಳನ್ನು ಕಳೆದುಕೊಳ್ಳುತ್ತಾನೆ.

ಪರಾರ್ಥಘಾತುಕರು, ಪರನಿಂದಾನಿರತರು, ದುಷ್ಟವರ್ತನದವರು ಭಗವತ್ಕಥಾಶ್ರವಣವಿಲ್ಲದವರು, ನಿತ್ಯನೈಮಿತ್ತಿಕ ಕರ್ಮಾನುಷ್ಠಾನ ವಿವರ್ಜಿತರು, ತೀರ್ಥಯಾತ್ರಾ ವಿಹೀನರು, ವಾಸುದೇವ ದ್ವಾದಶಾಕ್ಷರ ನಾರಾಯಣಾಷ್ಟಾಕ್ಷರ ಮಂತ್ರಗಳನ್ನು ಜಪಿಸದವರು, ಪ್ರಾತಃ ಸಾಯಂಕಾಲಗಳಲ್ಲಿ ಭಾರತ ರಾಮಾಯಣಗಳನ್ನು ಶ್ರವಣ ಪಠಣಮಾಡದವರು, ಶಾಲಗ್ರಾಮಗಳನ್ನು ಪೂಜಿಸ

ದವರು, ಭಗವದ್ಭಕ್ತರ ನಿಂದಕರು, ಫಲಸಂಕಲ್ಪದಿಂದ ಕರ್ಮಮಾಡುವರು. (ಯಾವಾಗಲೂ) ಶೂದ್ರಾನ್ನವನ್ನುಣ್ಣುವವರು, ತಮ್ಮ ಪಾಪವನ್ನು ಬಚ್ಚಿಟ್ಟು ಪುಣ್ಯವನ್ನಷ್ಟೇ ಹೊಗಳಿ ಹೇಳಿಕೊಳ್ಳುವವರು, ದ್ವಾದಶೀವ್ರತರಹಿತರು ಏಕಾದಶಿಯಲ್ಲಿ ಅನ್ನವನ್ನುಣ್ಣುವ ಮೂರ್ಖರು, ದುಷ್ಟವಾದ ದಾನವನ್ನು ಸ್ವೀಕರಿಸುವವರು, ವೇದಾಧ್ಯಯನರಹಿತರು ವೇದವನ್ನು ದ್ರವ್ಯಕ್ಕೆ ಮಾರುವವರು, ಪಂಚಾಕ್ಷರ ಮಂತ್ರವನ್ನು ಜಪಿಸದವರು, ಶೂದ್ರನ ಧನದಿಂದ ಯಾಗಮಾಡಿಸುವವರು, ಊರ್ಧ್ವ ಪುಂಡ್ರಗಳಿಲ್ಲದವರು, ಅಪವಿತ್ರ ಕರ್ಮಮಾಡುವವರು, ಮಹಾಲಯ ಶ್ರಾದ್ಧಮಾಡದವರು, ದರ್ಶಶ್ರಾದ್ಧವನ್ನು ಬಿಟ್ಟವರು, ಗುರುದ್ರೋಹಿಗಳು, ಪಿತೃಸಂಹಾರಕರು, ತಂದೆತಾಯಿಗಳ ನಿಂದಕರು, ಪರರಿಗೆ ಕೊಡದೆ ಊಟಮಾಡುವವರು, ಸತ್ಯ ನುಡಿಯದವರು, ಅತಿಥಿಗಳಿಗಿಂತ ಮುಂಚೆಯೇ ಉಣ್ಣುವವರು, ಪಂಙ್ತಿಭೇದಮಾಡುವವರು, ಇವರೆಲ್ಲರೂ ಇಂಥವರೇ ಆದ **ಸುಜೀವಿಗಳ ಈ ಎಲ್ಲ ಪಾಪಗಳು ಭಕ್ತಿಯುಕ್ತವಾದ ಹರಿನಾಮಸಂಕೀರ್ತನಗಳಿಂದ ನಾಶವಾಗುತ್ತವೆ** ಎಂಬುದಾಗಿ ಪುರಾಣಗಳಲ್ಲಿ ಹೇಳಲಾಗಿರುತ್ತದೆ.

ಇದೇ ವಿಷಯವು ಗರುಡಪುರಾಣ-ಬ್ರಹ್ಮಕಾಂಡದ ೪೨ನೆಯ ಅಧ್ಯಾಯದಲ್ಲಿಯೂ ಸಹ ಹೇಳಲಾಗಿರುತ್ತದೆ.

" ಹರಿಪ್ರೀತಕರವಾದ ಧರ್ಮಗಳನ್ನು ಹೇಳುವೆ. ಗರುಡ! ಕೇಳು!" ಎಂದು ಪ್ರಾರಂಭಿಸಿ ಅಧ್ಯಾಯ ಕೊನೆಯವರೆಗೂ ಒಂದೊಂದು ಕಾಲದಲ್ಲಿ ಧ್ಯಾನಮಾಡಬೇಕಾಗಿರುವ ಮೂರ್ತಿಗಳನ್ನು ನಿರೂಪಿಸಿರುತ್ತಾರೆ. ಕೃಷ್ಣನು ಗರುಡನನ್ನು ಕುರಿತು ಹೇಳಿರುತ್ತಾನೆ. ೧. "ಮುಂಜಾವಿನಲ್ಲಿ ಎದ್ದು ನಾರಾಯಣನನ್ನು ಚಿಂತಿಸಬೇಕು. ೨. ತುಲಸಿಯನ್ನು ವಂದಿಸುವಾಗ ಶ್ರೀಕೃಷ್ಣ. ೩. ಮಲಮೂತ್ರ ವಿಸರ್ಜನ ಕಾಲದಲ್ಲಿ ಅಪಾನಾತ್ಮಕ ಕೇಶವ. ೪. ಮೃತ್ತಿಕಾ ಶೌಚ ಕಾಲದಲ್ಲಿ ಗಂಗಾಜನಕವಾದ ತ್ರಿವಿಕ್ರಮ. ೫. ದಂತಧಾವನದಲ್ಲಿ ಚಂದ್ರಾಂತರ್ಯಾಮಿಯಾದ ಹರಿ. ೬. ಮುಖವನ್ನು ಪ್ರಕ್ಷಾಲಿಸುವಾಗ (ತೊಳೆಯುವಾಗ) ಮಾಧವ. ೭. ಗೋವುಗಳನ್ನು ತುರಿಸುವಾಗ ಗೋವರ್ಧನಧಾರಿ. ೮. ವತ್ಸಕ್ಕೆ ಮೊಲೆಯುಣಿಸುವಾಗ ಬಾಲಕೃಷ್ಣ. ೯. ಗೋವುಗಳನ್ನು ಕರೆ (ಹಿಂಡು) ಯುವಾಗ ಗೋಪಾಲಕೃಷ್ಣ. ೧೦. ಮೊಸರು ಕಡೆಯುವಾಗ

ಕಡಗೋಲಕೃಷ್ಣ. ೧೧. ಮೃತ್ತಿಕಾಸ್ನಾನದಲ್ಲಿ ವರಾಹ. ೧೨. ಊರ್ಧ್ವ ಪುಂಡ್ರಧಾರಣ ಕಾಲದಲ್ಲಿ ಕೇಶವ ಮುಂತಾದ ೧೨ ರೂಪಗಳು. ೧೩. ಚಕ್ರ ಮುಂತಾದ ಪಂಚಮುದ್ರಾಧಾರಣ ಕಾಲದಲ್ಲಿ ಕೃದ್ಧೋಲ್ಕ ಮುಂತಾದ ಪಂಚ ಮೂರ್ತಿಗಳು. ೧೪. ಪ್ರಾಣಾಗ್ನಿಹೋತ್ರ ಕಾಲದಲ್ಲಿ ಅನಿರುದ್ಧ ಮುಂತಾದ ಪಂಚಮೂರ್ತಿಗಳು. ೧೫. ವಸ್ತ್ರಪ್ರಾವರಣದಲ್ಲಿ (ಹೊದಿಸುವಾಗ-ಹೊದಿಯು ವಾಗ) ವಾಸುದೇವನು. ೧೬. ಸಂಧ್ಯಾವಂದನ ಕಾಲದಲ್ಲಿ ಶ್ರೀರಾಮನು. ೧೭. ಶ್ರಾದ್ಧ ಕಾಲದಲ್ಲಿ ಅಚ್ಯುತಾನಂತ ಗೋವಿಂದರು. ೧೮. ಮೊದಲಿನ ಹಾಗೂ ಕೊನೆಯ ಆಪೋಶನಗಳಲ್ಲಿ ಎರಡು ಪ್ರಾಣರೂಪಗಳು. ೧೯. ವಸ್ತ್ರಧಾರಣ ಕಾಲದಲ್ಲಿ ಉಪೇಂದ್ರ. ೨೦. ಯಜ್ಞೋಪವೀತಧಾರಣ ಕಾಲದಲ್ಲಿ ನಾರಾಯಣ ವಾಮನ ರೂಪಗಳು. ೨೧. ಆರ್ತಿಕ್ಯವನ್ನು ಸ್ವೀಕರಿಸುವಾಗ ಪರಶುರಾಮನು. ೨೨. ಔಪಾಸನ ವೈಶ್ವದೇವ ಹೋಮ ಭಸ್ಮಧಾರಣ ಈ ಕಾಲಗಳಲ್ಲಿ ಪರಶು ರಾಮ. ೨೩. ಮೂರುಸಲ ತೀರ್ಥವನ್ನು ಸ್ವೀಕರಿಸುವಾಗ ರಾಮಕೃಷ್ಣ ವಾಸುದೇವ ರೂಪಗಳು. ೨೪. ಶಂಖೋದಕವನ್ನು ಧರಿಸುವಾಗ ಮುಕುಂದ. ೨೫. ಒಂದೊಂದು ತುತ್ತನ್ನು ತಿನ್ನುವಾಗ ಗೋವಿಂದ. ೨೬. ಭಕ್ಷ್ಯಗಳನ್ನು ಭಕ್ಷಿಸುವಾಗ ಅಚ್ಯುತ. ೨೭. ಕಾಯಿಪಲ್ಯೆಗಳನ್ನು ತಿನ್ನುವಾಗ ಧನ್ವಂತರಿ. ೨೮. ಪರಮಾನ್ನವನ್ನು ಭುಂಜಿಸುವಾಗ ಪಾಂಡುರಂಗ. ೨೯. ನವನೀತ ಭಕ್ಷಣ ದಲ್ಲಿ ತಾಂಡವಕೃಷ್ಣ. ೩೦. ಮೊಸರು ಬುತ್ತಿಯಲ್ಲಿ ಗೋಪಾಲಕೃಷ್ಣ. ೩೧. ಹಾಲು ಅನ್ನ ಭೋಜನದಲ್ಲಿ ಶ್ರೀನಿವಾಸನು. ೩೨. ತುಪ್ಪ ಎಣ್ಣೆಗಳಲ್ಲಿ ಸಿದ್ಧ ಪಡಿಸಿದುದನ್ನು ತಿನ್ನುವಾಗ ವೆಂಕಟೇಶನು. ೩೩. ಬಾಳೇಹಣ್ಣು, ನೇರಲ, ದ್ರಾಕ್ಷಿ, ಖರ್ಜೂರ, ಮಾವು, ನಾರಂಗಿ (ಕಿತ್ತಳೆ) ಅಡಿಕೆ, ದಾಳಿಂಬ, ಕೊಬ್ಬರಿ, ನೆಲ್ಲಿಗಳ ಫಲಗಳನ್ನು ತಿನ್ನವಾಗ ಬಾಲಕೃಷ್ಣ. ೩೪. ಪಾನಕವನ್ನು ಕುಡಿಯುವಾಗ ನರಸಿಂಹ. ೩೫. ಗಂಗಾಪಾನದಲ್ಲಿ, ಗಂಗಾಜನಕ ತ್ರಿವಿಕ್ರಮ. ೩೬. ಪ್ರಯಾಣ ಕಾಲದಲ್ಲಿ ಗರುಡಧ್ವಜ ನಾರಾಯಣ. ೩೭. ಮಕ್ಕಳನ್ನು ಮುದ್ದಿ ಸುವಾಗ ವೇಣುಧರ ಕೃಷ್ಣನು. ೩೮. ಸ್ವಸ್ತ್ರಿ ಸಂಭೋಗ ಕಾಲದಲ್ಲಿ ಗೋಪಿಕಾ ರಮಣ ಗೋಪಾಲಕೃಷ್ಣ. ೩೯. ತಾಂಬೂಲವನ್ನು ಸೇವಿಸುವಾಗ ಪ್ರದ್ಯುಮ್ನ ವಾಸುದೇವ ರೂಪಗಳು. ೪೦. ಶಯನದಲ್ಲಿ ಸಂಕರ್ಷಣ – ವಿಷ್ಣು ರೂಪಗಳು. ೪೧. ನಿದ್ರೆಯಿಂದ ಏಳುವಾಗ ಪದ್ಮನಾಭ. ೪೨. ಕಥೆಯನ್ನು ಕೇಳುವಾಗ ವ್ಯಾಸ

ಕೃಷ್ಣ-ಹಯಗ್ರೀವ ಮೂರುತಿಗಳು. ೪೩. ಗಾನಕಾಲದಲ್ಲಿ ಲಕ್ಷ್ಮೀಕಾಂತನು (ಯೋಗೇಶ್ವರ) ೪೪. ದಕ್ಷಿಣೆಯನ್ನು ಕೊಡುವಾಗ ಶ್ರೀ ಲಕ್ಷ್ಮೀಪತಿಗಳು. ೪೫. ಹೂವು ಕೊಯ್ಯುವಾಗ ಕೃಷ್ಣ. ೪೬. ಪತ್ರಗಳನ್ನು ಹರಿಯುವಾಗ ಅನಂತ ಶಯನ. ೪೭. ಗರಿಕೆ(ದೂರ್ವಾ) ಯನ್ನು ಹರಿಯುವಾಗ ಕಪಿಲ. ೪೮. ಪ್ರದಕ್ಷಿಣ ಕಾಲದಲ್ಲಿ ಗರುಡಾಂತರ್ಗತ ಹರಿ. ೪೯. ನಮಸ್ಕರಿಸುವಾಗ ಶೇಷಾಂತರ್ಯಾಮಿ ಸಂಕರ್ಷಣರೂಪ. ೫೦. ಭಯಬಂದಾಗ ನರಸಿಂಹ. ೫೧. ಎಲ್ಲ ಕಾಲಗಳಲ್ಲಿ ನಾರಾಯಣ. ೫೨. ಉದರ ಪೂರ್ಣವಾಗುವಾಗ ವಾಸುದೇವ. ಹೀಗೆ ರೂಪಗಳನ್ನು ಚಿಂತಿಸಬೇಕು. ಈ ಮುಂತಾದ ಕರ್ಮಗಳು ವಿಷ್ಣುವಿನ ಪ್ರೀತಿಯನ್ನುಂಟುಮಾಡುವವು" ಎಂದು ಹೇಳಿ "ಈ ಧರ್ಮಗಳನ್ನು ಕೇಳುವ ಹಾಗೂ ಆಚರಿಸುವವರು ಶ್ರೀ ಭಗವತ್ಪ್ರೀತಿಕರ ಧರ್ಮಗಳಲ್ಲಿ ಸದಾ ನಿರತರಾಗುತ್ತಾರೆ" ಎಂಬುದಾಗಿ ಅಧ್ಯಾಯವನ್ನು ಪರಿಸಮಾಪ್ತಿಗೊಳಿಸಿರುತ್ತಾರೆ. ॥ ೨ ॥

**ಅವತರಣಿಕಾ:** ಮತ್ತೂ ಸಕಲ ಕ್ರಿಯೆ ಎಂದರೆ ಕೆಲಸಗಳನ್ನು ಮಾಡುವಾಗ ಸಕಲ ಠಾವಿನಲ್ಲಿ ತತ್ತನ್ನಾಮ ಗುಣರೂಪ ತಿಳಿದು ದೋಷದೂರನಾದ ಶ್ರೀಹರಿಯನ್ನು ಸರ್ವದಾ ಸ್ಮರಿಸಲು ಶ್ರೀಹರಿಯು ಸ್ಮರಿಸುವವರ ಹತ್ತಿರವೇ ಇರುವನೆಂದು ಉಪದೇಶಿಸುತ್ತಾರೆ. ಹಿಂದಿನ ಪದ್ಯದಲ್ಲಿ ಈ ನಾಮಗಳನ್ನೆಲ್ಲ ವಿವರಿಸಿದ್ದಾರೆ. ಇಲ್ಲಿ ಹರಿನಾಮ ಸ್ಮರಣ ಫಲಶ್ರುತಿ ಹೇಳುತ್ತಾರೆ.

ಮೂಲ:

**ಮಲಗುವಾಗಲಿ ಏಳುವಾಗಲಿ ।**
**ಕುಳಿತು ಮಾತಾಡುತಲಿ ಮನೆಯೊಳು ।**
**ಕೆಲಸಗಳ ಮಾಡುತಲಿ ನೈದೊಳೆವಾಗ ಮೆಲುವಾಗ ॥**
**ಕಲುಷದೂರನ ಸಕಲ ಠಾವಿಲಿ ।**
**ತಿಳಿಯೆ ತತ್ತನ್ನಾಮ ರೂಪವ ।**
**ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ॥ ೩ ॥**

**ಪದ್ಯಾರ್ಥ:** ಮಲಗುವಾಗಲಿ = ನಿದ್ರೆಮಾಡಲು ಶಯನಮಾಡುವ ಕಾಲಕ್ಕೆ ಮುಂಚೆ ಎಚ್ಚರಿಕೆ ಇರುವಾಗ್ಗೆ, ಏಳುವಾಗಲಿ = ನಿದ್ರೆಯಿಂದ ಎಚ್ಚರವಾಗುವ ಕಾಲದಲ್ಲಿ, ಕುಳಿತು ಮಾತಾಡುತಲಿ = ಎಲ್ಲಿ ಬೇಕಾದ ಸ್ಥಳದಲ್ಲಿ

ಕುಳಿತುಕೊಂಡು, ಮಾತಾಡು = ಹರಟೆ ಬಡಿಯುವ ಕಾಲದಲ್ಲಾದರೂ, ಮನೆಯೊಳು ಕೆಲಸಗಳ ಮಾಡುತ್ತಲಿರುವಾಗಲೂ, ಮೈದೊಳೆವಾಗ = ಸ್ನಾನ ಸಂಕಲ್ಪಾದಿಗಳಿಲ್ಲದೇ ಬರಿ ಮೈಯನ್ನು ತೊಳೆದುಕೊಳ್ಳುವಾಗ, ಮೆಲುವಾಗ = ಊಟಮಾಡುವ ಕಾಲ, ಇನ್ನು ಅನೇಕ ಪದಾರ್ಥ ಹಣ್ಣುಹಂಪಲ ಫಲಾಹಾರಾದಿಗಳನ್ನು ತಿನ್ನುವ ಕಾಲದಲ್ಲಿ ಅಂದರೆ ಸಕಲ ಕಾಲದಲ್ಲಿ, ಸಕಲ ಠಾವಿನಲಿ = ಎಲ್ಲ ಜಾಗದಲ್ಲಿ ಸರ್ವತ್ರ, ಕಲುಷದೂರನ = ಲೇಶ ದೋಷವಿಲ್ಲದವನ, ಶ್ರೀಹರಿಯ, ತಿಳಿಯೆ ತತ್ತನ್ನಾಮರೂಪವ = ಪ್ರತಿಯೊಂದು ಕ್ರಿಯೆ ಪ್ರತಿಸ್ಥಳದಲ್ಲಿ ಶ್ರೀಹರಿಯ ಆಯಾ ನಾಮ, ಹರಿಯ ರೂಪ, ಹರಿಯ ಗುಣ ಇವುಗಳನ್ನು ತಿಳಿದು ಸದಾ ಸ್ಮರಿಸಲು, ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ = ಇಂತಹ ಜ್ಞಾನದಿಂದ ಸ್ಮರಿಸುವವರ ಹತ್ತಿರವೇ ಪ್ರತ್ಯಕ್ಷ ಅಂತರಂಗ ಬಹಿರಂಗ ಗೋಚರನಾಗಿ ಒಂದು ಅರಗಳಿಗೆ ಕ್ಷಣವಾದರೂ ಬಿಡದೇ ಹತ್ತಿರವೇ ಇರುವನು ॥ ೩ ॥

**ಭಾವಸೂಚನ :** ಮಲಗುವೇತಿ ॥ ತದಾ ಪದ್ಮನಾಭಸ್ಮೃತಾಃ ಸಂಭಾಷಣಕಾಲೇ ವ್ಯಾಸಕೃಷ್ಣ ಹಯಾಸ್ಯಾಃ ॥ ಸಕಲ ಕರ್ಮ ಕರಣಕಾಲೇ ನಾರಾಯಣಃ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಲಗಿ" ಇತಿ ॥ "ಮೆಲುವಾಗ"–ತಿಂಬುವಾಗ, "ತತ್ತತ್" ಇತಿ ಬ್ರಹ್ಮಕಾಂಡೇನ (ಬ್ರಹ್ಮಕಾಂಡೋಕ್ತ ಪ್ರಕಾರೇಣ) ॥ ೩ ॥

## ಕನ್ನಡಾರ್ಥ

"ಮಲಗಿ ಎದ್ದು ಪುನಃ ಮಲಗುವವರೆಗೆ ಮಾಡುವ ಅನೇಕ ವ್ಯಾಪಾರಗಳಲ್ಲಿ ಬ್ರಹ್ಮಕಾಂಡದಲ್ಲಿ ಹೇಳಿದಂತೆ ಆಯಾ ವ್ಯಾಪಾರ–ಕಾಲಗಳಿಗನುರೂಪವಾದ ಭಗವದ್ರೂಪ ನಾಮಗಳಿಂದ ಶ್ರೀಹರಿಯನ್ನು ಸ್ಮರಿಸಿದರೆ, ಶ್ರೀಹರಿಯು ಅವರನ್ನು ಎಲ್ಲ ಠಾವುಗಳಲ್ಲಿ ಒಂದರಕ್ಷಣ ಕೂಡ ಬಿಡದೆ ಸಂರಕ್ಷಿಸುವನು" ಎಂದು ಈ ಪದ್ಯದಿಂದ ದಾಸವರ್ಯರು ನಿರೂಪಿಸುತ್ತಾರೆ. "ಮೆಲುವಾಗ" – ತಿನ್ನುತ್ತಿರುವಾಗ, "ತತ್ತನ್ನಾಮರೂಪವ ತಿಳಿಯೇ ಎಂದರೆ "ಬ್ರಹ್ಮಕಾಂಡದಲ್ಲಿ ಹೇಳಿದಂತೆ ಆಯಾ ವ್ಯಾಪಾರಗಳಲ್ಲಿ ಭಗವಂತನ ರೂಪನಾಮಗಳನ್ನು ತಿಳಿದರೆ" ಎಂದು ಅರ್ಥ ॥ ೩ ॥

**ಅವತರಣಿಕಾ :** ಭಗವನ್ನಾಮ ಸ್ಮರಣಕ್ಕೆ ಯಾವ ಕುಲಗೋತ್ರ, ಜಾತಿ ಧರ್ಮದವನಾದರೇನು ಶ್ರೀಹರಿಗೆ ಕುಲ ಬೇಕಾಗಿಲ್ಲ, ಜಾತಿ ಬೇಕಾಗಿಲ್ಲ, ಭಕ್ತಿ ಮಾತ್ರದಿಂದ ಸ್ಮರಿಸಿದರೆ ಸಾಕು ಅವರ ಭಯ ದುಃಖಾದಿ ದೋಷಗಳನ್ನು ಪರಿಹರಿಸುವನೆಂದು ಉಪದೇಶಿಸುತ್ತಾರೆ.

**ಮೂಲ :**

**ಆವಕುಲದವನಾದಡೇನಿ |**
**ನ್ನಾವ ದೇಶದೊಳಿದ್ದಡೇನಿ |**
**ನ್ನಾವಕರ್ಮವಮಾಡಲಿನ್ನೇನಾವಕಾಲದಲಿ ||**
**ಶ್ರೀವರನ ಸರ್ವತ್ರದಲಿ ಸಂ |**
**ಭಾವಿಸುತ ಪೂಜಿಸುತ ಮೋದಿಪ |**
**ಕೋವಿದರಿಗುಂಟೇನೊ ಭಯದುಃಖಾದಿ ದೋಷಗಳು || ೪ ||**

**ಪದ್ಯಾರ್ಥ :** ಆವಕುಲದವನಾದಡೇನು = ಯಾವ ಕುಲದಲ್ಲಿ ಜನಿಸಿದರೇನು, ಬ್ರಾಹ್ಮಣನೇ ಹರಿನಾಮಸ್ಮರಣೆಗೆ ಯೋಗ್ಯನೆಂಬ ನಿಯಮವಿಲ್ಲ. "ಯಾವ ಕುಲವಾದರೇನು ಶ್ರೀವಾಸುದೇವನ ಭಜಿಸಿದವನೆ ಧನ್ಯ" ಎಂಬ ಕನಕದಾಸರ ವಚನ ಇನ್ನಾವದೇಶದೊಳಿದ್ದರೇನು = ಪವಿತ್ರವಾದ ಗಂಗಾದಿ ತೀರ್ಥಗಳಲ್ಲದೇ ಬೇಕಾದ ದೇಶದೊಳಿದ್ದರೂ, ಹರಿನಾಮಸ್ಮರಣೆ ಬರುವದೋ ಅಪವಿತ್ರವಾದ ಸ್ಥಳವಿದ್ದರೂ, ಹರಿಸ್ಮರಣೆಯಿಂದ ಪವಿತ್ರವೆನಿಸುತ್ತದೆ. ಇನ್ನಾವ ಕರ್ಮವ ಮಾಡಲಿನ್ನೇನು = ಬೇಕಾದ ಧರ್ಮವನುಸರಿಸಿ ಜಾತಿಯ ಧರ್ಮ ಮಾಡಿದರೂ, (ಬೇಡರವನು ಮಾಂಸ ಮಾರುತ್ತ .ಉಪದೇಶಿಸಿದ ಚರಿತ್ರೆ ಭಾರತದಲ್ಲಿ ಓದಿದ್ದು ಮರೆಯದಿರಿ.) ಇನ್ನಾವಕಾಲದಲಿ = ಬೇಕಾದ ಕಾಲದಲ್ಲಿ ಇಂತಹ ಕಾಲವೆಂದೂ ಇಂತಹ ಸ್ಥಳ ಇಂತಹ ಕುಲ ಜಾತಿ ಎಂದೂ ನಿಯಮವಿಲ್ಲ. ಯಾವ ಭಕ್ತನು ಸದ್ಭಕ್ತಿಯಿಂದ ಶ್ರೀವರನ ಸಂಭಾವಿಸುತ = ಆದರ ಗೌರವದಿಂದ ಪೂಜಿಸುತ = ಪೂಜಾಮಾಡುತ್ತ, ಹರಿನಾಮ ಮಾಹಾತ್ಮೆ ಸರ್ವೋತ್ತಮತ್ವೇನ ಅರಿತು ನಿರುತಸ್ಮರಣೆಮಾಡಿ, ಮೋದಿಪ = ಆನಂದಬಡುವ, ಕೋವಿದರಿಗೆ = ಜ್ಞಾನಿಗಳಿಗೆ, ಭಯದುಃಖಾದಿ ದೋಷಗಳು ಉಂಟೇನೋ = ಸದಾ ಹರಿಸ್ಮರಣೆರತರಿಗೆ, ಇತರರ ಅಂಜಿಕೆ, ಕ್ಲೇಶ ದುಃಖ ಪಾಪಾದಿಗಳು ಇರುವವೆ ? ಇರುವದೇ ಇಲ್ಲವೆಂದು ಭಾವ.

**ಭಾವಸೂಚನ :** ಆವೇತಿ ॥ ಆಜ್ಞೇ(ಗ್ನೇ)ಯಚಾ ॥ ನವಿದ್ಯಾಂ ನಕುಲಂ ರೂಪಂ ನಧನಂ ನಬಹುಶ್ರುತಾ(ತೌ) ॥ ನಹರೇಪ್ರೀಣ ನಾಯಸ್ಯಾಧ್ಭಕ್ತಿಮಾತ್ರ ಪ್ರಿಯೋಹರಿರಿತಿ ॥ ೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಆವ" ಇತಿ ॥ "ಆದೊಡೆ" = ಆದರೆ ॥ ೪ ॥

**ಕನ್ನಡಾರ್ಥ**

ಶ್ರೀವರನನ್ನು ಸರ್ವತ್ರದಲಿ ಸಂಭಾವಿಸುತ್ತ ಪೂಜಿಸುತ್ತ ಮೋದಪಡುವ ಕೋವಿದನಿಗೆ ಭಯ ದುಃಖ ಮುಂತಾದವುಗಳು ಉಂಟಾಗುವದಿಲ್ಲವೆಂದು ತಿಳಿಸುತ್ತಾರೆ – "ಆವಕುಲದವನಾದೊಡೇನು" ಎಂಬ ಪದ್ಯದಿಂದ. ॥ ೪ ॥

**ಅವತರಣಿಕಾ :** ಸದ್ಭಕ್ತಿಯಿಂದ ವಾಸುದೇವನ ನಾಮ ರೂಪಗುಣಗಳ ಸ್ಮರಣೆಯಲ್ಲಿ ಮಗ್ನನಾದವನು ಸಂಸಾರ ಸಮುದ್ರವನ್ನು ಅನಾಯಾಸದಿಂದ ಈಸುತ್ತ ಪಾರಾಗುವನು. ದುರ್ವಿಷಯಗಳಲ್ಲಿ ಆಶೆ ಇಟ್ಟವನು ಭಕ್ತಿಮಾರ್ಗ ಕಾಣದಲೆ ನಾನಾ ಕ್ಲೇಶಗಳನ್ನು ಅನುಭೋಗಿಸುತ್ತ ಬಳಲುವನೆಂದು ಉಪದೇಶಿಸುತ್ತಾರೆ.

ಮೂಲ :

**ವಾಸುದೇವನ ಗುಣಸಮುದ್ರ ದೊ ।**
**ಳೀಸಬಲ್ಲವ ಭವಸಮುದ್ರಾ (ದ್ರವ) ।**
**ಯಾಸವಿಲ್ಲದೆ ದಾಟುವನು ಜಗದೊಳಗೆ ಶೀಘ್ರದಲಿ ॥**
**ಬೇಸರದೆ ದುರ್ವಿಷಯಗಳ ಅಭಿ ।**
**ಲಾಷೆಯಲಿ ಬಳಲುವವ ನಾನಾ ।**
**ಕ್ಲೇಶಗಳನನುಭವಿಪ ಭಕ್ತಿ ಸುಮಾರ್ಗ ಕಾಣದಲೆ ॥ ೫ ॥**

**ಪದ್ಯಾರ್ಥ :** ವಾಸುದೇವನ = ಮುಕ್ತಿಪ್ರದನೂ ಸಮಸ್ತ ಜಗತ್ತಿನಲ್ಲಿ ವಾಸಿಸುವನೂ ಆದ ಶ್ರೀ ವಾಸುದೇವನ, ಹರಿಯ, ಗುಣಸಮುದ್ರದೊಳೀಸಬಲ್ಲವ = ಭಗವಂತನ ಅನಂತ ಕಲ್ಯಾಣಗುಣ ಅನಂತನಾಮ, ಅನಂತರೂಪ, ಅನಂತ ಕ್ರಿಯೆಗಳನ್ನರಿತು, ಇಂತಹ ಹರಿಯ ಅಗಾಧವಾದ ಗುಣೋತ್ಕರ್ಷವಾದ ಸಮುದ್ರದಲ್ಲಿ ಆನಂದದಿಂದ, ಈಸಬಲ್ಲವ = ನೀರಿನಲ್ಲಿ ಈಸುವ, ಭವಸಮುದ್ರ, ಭವ = ಸಂಸಾರವೆಂಬ ಸಮುದ್ರವನ್ನು ಆಯಾಸವಿಲ್ಲದೆ ಶೀಘ್ರದಲ್ಲಿ ದಾಟುವನು = ಅನಾಯಾಸವಾಗಿ ಶ್ರಮವಿಲ್ಲದೇ ಸಂಸಾರ ಸಮುದ್ರವನ್ನು

ಹರಿನಾಮವೆಂಬ ಈಸುಬುರುಡಿಯ ಸಹಾಯದಿಂದ ಈಜಿ ದಾಟಿ ಬೇಗ ಪಾರಾಗುವನು, ಜಗದೊಳಗೆ = ಜಗತ್ತಿನಲ್ಲಿ, ಬೇಸರದೇ = ಬೇಸರಿಕೆ ಇಲ್ಲದೆ ಹಾಳ ಹರಟೆ ಹೊಡೆಯುತ್ತ, ದುರ್ವಿಷಯಗಳ ಅಭಿಲಾಷೆಯಲಿ ಬಳಲುವವ = ಕನಕ, ಕಾಂತಾ ಇತ್ಯಾದಿ ವ್ಯಾಮೋಹ, ಕೆಟ್ಟ ವಿಷಯಗಳ ಲಾಲಸೆಯಲ್ಲಿ ದುರಾಶೆ ಇಟ್ಟು ಬಳಲುವವ = ಶ್ರಮಬಿಡುವವನು, ನಾನಾ ಕ್ಲೇಶಗಳನ್ನು ಅನುಭವಿಪ = ಅನೇಕ ತರಹದ ಕಷ್ಟಗಳನ್ನು ಅನುಭವಿಸುತ್ತ, ಭಕ್ತಿ ಸುಮಾರ್ಗ ಕಾಣದಲೇ = ಒಳ್ಳೇ ಭಕ್ತಿ ಎಂಬ ದಾರಿಯನ್ನು ಕಾಣದೇ, ಜಗತ್ತಿನೊಳಗೆ ಬಳಲುವನು.

**ಭಾವಸೂಚನ :** ಲೋಕೇ ಕ್ರೋಶಾರ್ಧ ಪರಿಮಿತ ಪೂರ್ಣಪ್ರವಾಹೇ ಹಂ ಪಾರಂ ದ್ರಕ್ಷ್ಯಾಮೀತಿ ಕೇನಚಿದಬಲಿನೋಕ್ತೇ ತಂ ಮಾನಯಂತೀ ಏತೇ ಶ್ಲಾಘನೀಯ ಪ್ರಜ್ಞಾಃ ಮಜ್ಜನಾದಿ ಚಾತುರ್ಯಮ್ ಅನ್ಯತ್ರ ಪ್ರದರ್ಶನೀಯಂ ಅತ್ರತೇ ಮಹದ್ದುಃಖಂ ಜಾಯತೇ ಆತ್ಮಪ್ರಿಯಹಾನಾಯ ಕೋಯತೇತ ಚ ಬುದ್ಧಿಮಾನ್ ಇತಿ ವಚನಾತ್ ತ್ವಂಕಥಂ ಬುದ್ಧಿವಾಂಛಯ ಇತ್ಯಾಶಯೇನ ಸುಖಪ್ರದಮಜ್ಜನ ಭೂಮಿಮತ್ ಸ್ಥಳಂ ದರ್ಶಯತಿ ॥ ವಾಸುದೇವೇತಿ ॥೫॥

**ಇದರ ಸಾರಾಂಶವೇನೆಂದರೆ—** ಲೋಕದಲ್ಲಿ ಒಂದೂವರೆ ಹರದಾರಿ ಪ್ರಮಾಣ, ಪೂರ್ಣ ಪ್ರವಾಹದಲ್ಲಿ ಎದುರು ಈಸಿ ಆ ಕಡೆಯ ದಂಡೆಯನ್ನು ಮುಟ್ಟುವೆನೆಂದು, ಯಾವನೊಬ್ಬ ಬಲರಹಿತನಾದ ಪುರುಷನು ಹೇಳಿದ ಮಾತನ್ನು ಕೇಳಿ ಯಾರು ಶ್ಲಾಘನಮಾಡುವರೋ ಅವರು ಹುಚ್ಚರೆಂದು ತಿಳಿಯಬೇಕು. ನೀರಿನಲ್ಲಿ ಮುಳುಗುವದೇ ಚಾತುರ್ಯವೆ? ಅದರಲ್ಲಿ ಪೂರ್ಣ ಪ್ರವಾಹದಲ್ಲಿ ಮುಳುಗುವದು ಮಹಾ ದುಃಖವಾಗುತ್ತದೆಂದು ತಿಳಿದು, ಸಾಮಾನ್ಯ ಉದಕದಲ್ಲಿ ತನ್ನ ಚತುರತೆ ತೋರಿಸಬೇಕಲ್ಲದೆ, ತನ್ನ ಸುಖದ ಹಾನಿಗೋಸುಗ, ಯಾವ ಬುದ್ಧಿವಂತನು ಯತ್ನಮಾಡುವನು? ಕಾರಣ, ಸುಖದಾಯಕ ಸ್ನಾನ ಭೂಮಿಯಾದ ಸ್ಥಳವನ್ನು ದಾಸಾರ್ಯರು ತೋರಿಸುತ್ತಾರೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವಾಸುದೇವ" ಇತಿ ॥ ಭಕ್ತ್ಯಾ (ಸೌಷ್ಟವಂ) ಪ್ರಷ್ಟವ್ಯಂ ಸಿವ್ಯಾರ್ಜತ್ವೇ ಸತಿ ಶಿಷ್ಟಲತ್ವೇ ಸತಿ ಸದ್ಗುಣಭರಿತತ್ವೇ ಸತಿ ಶ ಕ್ಷತತ್ವಮ್ ॥೫॥

**ಕನ್ನಡಾರ್ಥ**

"ಸದ್ಭಕ್ತಿಯಿಂದ ಹರಿಗುಣನಾಮರೂಪ ಸ್ಮರಣಗಳಲ್ಲಿ ಮಗ್ನನಾದವನು ಸಂಸಾರ ಸಮುದ್ರವನ್ನು ನಿರಾಯಾಸದಿಂದ ದಾಟುತ್ತಾನೆ. ಹರಿಯಲ್ಲಿ ಸದ್ಭಕ್ತಿ ವಿಹೀನನು ಮಾತ್ರ ಹೇಯ ವಿಷಯಗಳಲ್ಲಿಯೇ ಮಗ್ನನಾಗಿ ಸನ್ಮಾರ್ಗವನ್ನು ಕಾಣದೆ ಕ್ಲೇಶವನ್ನನುಭವಿಸುತ್ತ ಬಳಲುವನು" ಎಂದು "ವಾಸುದೇವನ" ಎಂಬ ಈ ಪದ್ಯದಿಂದ ಹೇಳುತ್ತಾರೆ.

ವಾಸುದೇವನಲ್ಲಿ ಸುಭಕ್ತಿಯಿರಬೇಕು. ಯಾವದಾದರೊಂದು ನಿಮಿತ್ತ ಕಾರ್ಯ ವ್ಯಾಜವುಳ್ಳದಾಗಿರಬಾರದು. ಅಂದರೆ ದ್ರವ್ಯ – ಪುತ್ರ ಮುಂತಾದ ಫಲಗಳನ್ನು ಅವಲಂಬಿಸಿರಕೂಡದು. ಸಂದೇಹಾಕಾರ ಜ್ಞಾನದಿಂದ ಚಲಿತ ವಾಗಬಾರದು. ಅನೇಕ ಗುಣಗಳಿಂದ ಯುಕ್ತವಾಗಿರಬೇಕು. ಇಂಥ ಭಾವವು ಶಾಶ್ವತ – "ಸದಾ ಇರುವಂತಹದು," ಆಗಿರಬೇಕು. ಇದೇ ಸುಭಕ್ತಿ ಯೆನಿಸುತ್ತದೆ. ॥೫॥

**ಅವತರಣಿಕಾ :** ಯಾವ ಮಾನವನು ಜ್ಞಾನೇಂದ್ರಿಯ ಕರ್ಮೇಂದ್ರಿಯಾದಿ ಗಳಿಂದ ಏನೇನು ಮಾಡುವ ಎಲ್ಲ ಕೆಲಸಗಳು ಶ್ರೀನಿವಾಸನ ಪೂಜೆಯೆಂದು ಅರಿಯದೆ ಹರಿಗೆ ಅರ್ಪಿಸುವದಿಲ್ಲವೋ ಅವನು ಸ್ನಾನ, ಜಪ ಮುಂತಾದ ಸತ್ಕರ್ಮಾನುಷ್ಠಾನ ಏನು ಮಾಡಿದರೂ ಫಲವಿಲ್ಲವೆಂದು ಸಜ್ಜನರನ್ನು ಬೋಧಿಸುತ್ತಾರೆ.

**ಮೂಲ :**

**ಸ್ನಾನ ಜಪ ದೇವಾರ್ಚನೆಯು ವ್ಯಾ ।**
**ಖ್ಯಾನ ಭಾರತ ಮುಖ ಮಹೋಪ ಪು ।**
**ರಾಣ ಕಥೆಗಳ ಪೇಳಿ ಕೇಳಿದರೇನು ದಿನದಿನದಿ ॥**
**ಜ್ಞಾನ ಕರ್ಮೇಂದ್ರಿಯಗಳಿಂದೇ ।**
**ನೇನು ಮಾಡುವ ಕರ್ಮಗಳು ಲ ।**
**ಕ್ಷ್ಮೀನಿವಾಸನ ಪೂಜೆಯೆಂದರ್ಪಿಸದ ಮಾನವನು ॥೬॥**

ಪದ್ಯಾರ್ಥ : ಮಾನವನು = ಯಾವ ಮನುಷ್ಯನು ತಾನು ತನ್ನ ಜ್ಞಾನ ಕರ್ಮೇಂದ್ರಿಯಗಳಿಂದೇನೇನು ಮಾಡುವ ಕರ್ಮಗಳು – ಶ್ರವಣದಿಂದ ಕೇಳು ವದು, ಕಣ್ಣಿನಿಂದ ನೋಡುವದು, ರಸನ(ನಾಲಿಗೆ)ಯಿಂದ ರಸ ಸ್ವೀಕರಿಸುವದು, ತ್ವಗಿಂದ್ರಿಯದಿಂದ ಸುಖಸ್ಪರ್ಶಾದಿಗಳು, ಘ್ರಾಣದಿಂದ ಮೂಸಿನೋಡುವದು,

ಜ್ಞಾನೇಂದ್ರಿಯ ಕಾರ್ಯಗಳು, ವಾಕ್, ಪಾಣಿ, ಪಾದ, ವಾಯು, ಉಪಸ್ಥ ಈ ಐದು ಕರ್ಮೇಂದ್ರಿಯಗಳಿಂದ ಮಾಡುವ ಎಲ್ಲ ಕಾರ್ಯಗಳನ್ನೂ ತತ್ವೇಶರಿಗೆ ಪ್ರೇರಿಸಿ ಬಿಂಬನಾದ ಹರಿ ಮಾಡಿಸಿದನೆಂಬುದನ್ನು ಮರೆತು, ಲಕ್ಷ್ಮೀನಿವಾಸನ = ಶ್ರೀ ಲಕ್ಷ್ಮೀದೇವಿಯರಿಗೆ ವಕ್ಷಸ್ಥಳದಲ್ಲಿ ಆಶ್ರಯಕೊಟ್ಟ ಅಥವಾ ಶ್ರೀ ಲಕ್ಷ್ಮೀಯಲ್ಲಿಯೇ ತಾನು ಶ್ರೀ ರೂಪದಿಂದ ನಿವಾಸಿಯಾದ ಶ್ರೀಹರಿಯ ಪೂಜೆ ಎಂದು ತಿಳಿಯದೇ ಭಗವದತ್ತ ಧರ್ಮ ಕರ್ಮಗಳನ್ನು ಶ್ರೀ ಪೂಜಾ ಇವು ಎಂದು ಅರ್ಪಿಸುವದಿಲ್ಲವೋ ಇಂಥ ಮರ್ತ್ಯಲೋಕದ ಮನುಜ ಸ್ವಭಾವವುಳ್ಳವನು, ಜ್ಞಾನವಿಲ್ಲದೇ ಅನೇಕ ತೀರ್ಥಗಳಲ್ಲಿ ಸ್ನಾನಮಾಡಿದರೂ ಫಲವಿಲ್ಲ. ಜಪಮಣಿಗಳನ್ನು ಹಿಡಿದು ಡಂಭಾಚಾರದಿಂದ ಮಂತ್ರೋಚ್ಚಾರಣಮಾಡುತ್ತ ಮಂತ್ರಗಳನ್ನು ಜಪಿಸಿದರೂ ಏನು ಫಲ ಬಾರದು. ಅನೇಕ ಕಂಚು ಹಿತ್ತಾಳೆ ಸಾಮಾನುಗಳನ್ನು ಹರಹಿಕೊಂಡು ದೇವತಾರ್ಚನೆ ಮಾಡಿದರೂ ಫಲವಿಲ್ಲ. ವ್ಯಾಖ್ಯಾನ = ಗ್ರಂಥಗಳಿಗೆ ಟೀಕಾ ಬರೆದರೂ ಏನು, ಮಹಾಭಾರತವೇ ಮೊದಲಾಗಿ ಅಷ್ಟಾದಶ ಪುರಾಣ ಉಪಪುರಾಣ ಕಥೆಗಳನ್ನು ಹೇಳಿದರೂ ಏನೂ ಫಲ ಕೊಡುವದಿಲ್ಲ. ಮುಖ್ಯ ಹರಿಸ್ಮರಣೆ ಪೂರ್ವಕ ಸಕಲ ಕ್ರಿಯಾಗಳನ್ನು ಮಾಡಿ ಹರಿಗೆ ದಾಸ್ಯಭಾವದಿಂದ ಅರ್ಪಿಸಬೇಕೆಂದು ಫಲಿತಾರ್ಥ.

**ಭಾವಸೂಚನ:** ಸ್ನಾನೇತಿ ॥೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ನಾನ" ಇತಿ ॥ ದಶಮಪೂರ್ವಾರ್ಧೇ ಚ ಗರ್ಭಸ್ತುತೌ ಕ್ರಿಯಾಕರಣ ಪ್ರಕಾರಃ ಉಕ್ತಃ ॥ "ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್ ನಾಮಾನಿರೂಪಾಣಿ ಚ ಮಂಗಳಾನಿ ತೇ ॥ ಕ್ರಿಯಾಸುಯಃ ತ್ವಚ್ಚರಣಾರವಿಂದಯೋಃ ಆವಿಷ್ಟಚಿತ್ತಃ ನಭವಾಯ ಕಲ್ಪತೇ ॥" ಇತಿ ॥ "ಸರ್ವಕ್ರಿಯಾಸು ಕರ್ತೃತ್ವ-ಪೂಜ್ಯತ್ವೇನ ಜನಾರ್ದನಮ್ ॥ ಯಃ ವೇತ್ತಿ ನೈತಿ ಸಂಸಾರಂ ತತ್ಪ್ರಸಾದಾತ್ ನ ಸಂಶಯಃ ॥" ಇತಿ ತತ್ತಾತ್ಪರ್ಯೇ ಚ ॥ ಪಂಚದಶಾಧ್ಯಾಯೇ ವಿಷ್ಣುರಹಸ್ಯೇ ಚ ಉಕ್ತಮ್ ॥ ನ ಚ ಅರ್ಪಿತಂ ಕರ್ಮ ಇತ್ಯರ್ಥ ಏವ ದೃಢೀಕೃತಃ । ಅನ್ಯಥಾ ಬಾಧಕೋಕ್ತ್ಯಾ "ಶ್ರುತಿಸ್ಮೃತೀ ತು ತಸ್ಯಾಜ್ಞೇ" ತತ್ರೋಕ್ತಂ ಪುಣ್ಯಂ ಆಚರೇತ್ ॥ ಅರ್ಪಯೇತ್ ತದ್ ಹರೌ ಭಕ್ತ್ಯಾ ಸಂತುಷ್ಟಃ ಫಲದಃ ಭವೇತ್ ॥ ಅನರ್ಪಿತಂ ವೃಥಾಯಾತಿ ಯಥೋಕ್ತಂ ಬೀಜವಾಊಷರೇ ॥ ಇತಿ ॥೬॥

## ಕನ್ನಡಾರ್ಥ

"ಕರ್ಮ ಜ್ಞಾನೇಂದ್ರಿಯಗಳಿಂದ ಮಾಡಲಾಗುವ ಸಕಲ ವ್ಯಾಪಾರಗಳನ್ನೂ ಶ್ರೀಹರಿಯ ಪೂಜೆಯೆಂದು ಸಮರ್ಪಿಸಿದರೆ ಮಾತ್ರ ಆ ಆ ಸತ್ಕರ್ಮಗಳು ಸಫಲವಾಗುತ್ತವೆ; ಇಲ್ಲದಿದ್ದರೆ ವಿಷ್ಣ್ವನರ್ಪಿತವಾದ ಆ ಕರ್ಮಗಳಿಂದ ಯಾವ ಫಲವೂ (ಶ್ರೀವಿಷ್ಣುಪ್ರೀತಿಯು) ದೊರೆಯುವದಿಲ್ಲ" ಎಂಬುದು ಈ ಪದ್ಯದ ಭಾವ.

ಭಾಗವತ ದಶಮಸ್ಕಂಧ ಪೂರ್ವಾರ್ಧ ಗರ್ಭಸ್ತುತಿಯಲ್ಲಿ ಕ್ರಿಯಾಗಳನ್ನು ಮಾಡುವ ಈ ರೀತಿಯನ್ನು ನಿರೂಪಿಸಿರುತ್ತಾರೆ. "ಪರಮಾತ್ಮನೇ! ನಿನ್ನ ಮಂಗಲಮಯ ಗುಣರೂಪ ನಾಮಗಳನ್ನು ಶ್ರವಣಮಾಡುತ್ತ, ಸಂಸ್ಮರಿಸುತ್ತ, ಅಖಂಡವಾಗಿ ಧ್ಯಾನಿಸುತ್ತ ತಾನು ಸಕಲ ಸತ್ಕರ್ಮಗಳನ್ನು ಆಚರಿಸುವಾಗ ನಿನ್ನ ಚರಣ ಸರೋಜಗಳಲ್ಲಿ ಚಿತ್ತವನ್ನು ಸೇರಿಸಿದವನು. ಅಂದರೆ ತದೇಕ ಮಗ್ನವಾದ ಮನಸ್ಸುಳ್ಳವನು ಸಂಸಾರದಲ್ಲಿ ಶಿಲುಕುವದಿಲ್ಲ" ಎಂಬುದಾಗಿ ನಿರೂಪಿಸಲ್ಪಟ್ಟಿರುತ್ತದೆ.

ಶ್ರೀ ವಿಷ್ಣುರಹಸ್ಯದ ಹದಿನೈದನೆಯ ಅಧ್ಯಾಯದಲ್ಲಿಯೂ ಈ ವಿಷಯವು ಹೇಳಲ್ಪಟ್ಟಿರುತ್ತದೆ. "ಭಗವಂತನಲ್ಲಿ ಸಮರ್ಪಿಸಲ್ಪಡದ ಕರ್ಮವು ಶ್ರೀವಿಷ್ಣು ಪ್ರೀತಿಗೆ ಕಾರಣವಾಗುವದಿಲ್ಲ" ಎಂಬ ವಿಷಯವನ್ನೇ ದೃಢಪಡಿಸಿರುತ್ತಾರೆ. ವಿಷ್ಣ್ವನರ್ಪಿತವಾದ ಕರ್ಮವು ತ್ಯಾಜ್ಯವೆಂದು ನಿಷಿದ್ಧವಾಗಿರುತ್ತದೆ. "ಶ್ರುತಿ ಸ್ಮೃತಿಗಳು ಶ್ರೀಹರಿಯ ಆಜ್ಞೆಗಳು; ಅಲ್ಲಿ ವಿಧಿಸಲ್ಪಟ್ಟ ಕರ್ಮಗಳನ್ನು ಸತ್ಕರ್ಮಗಳನ್ನು ಆಚರಿಸತಕ್ಕದ್ದು; ಅದನ್ನು ಶ್ರೀಹರಿಯಲ್ಲಿ ಭಕ್ತಿಯಿಂದ ಸಮರ್ಪಿಸಬೇಕು; ಅದರಿಂದ ಶ್ರೀಹರಿಯು ಪ್ರಸನ್ನನಾಗಿ ಫಲವನ್ನು ದಯ ಪಾಲಿಸುವನು. ಮರು (ಸವಳು) ಭೂಮಿಯಲ್ಲಿ ಬಿತ್ತಲ್ಪಟ್ಟ ಬೀಜದಂತೆ. ವಿಷ್ಣ್ವನರ್ಪಿತವಾದ ಕರ್ಮವು ವಿಫಲವಾಗುವದು" ಎಂದು ಶ್ರೀವಿಷ್ಣುರಹಸ್ಯ ವಚನಗಳ ಸಾರಾರ್ಥ. ॥ ೬ ॥

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ಸಕಲ ಕ್ರಿಯೆಗಳನ್ನು ಪರಮಾತ್ಮನಿಗೆ ಅರ್ಪಿಸಬೇಕೆಂಬ ಬುದ್ಧಿಯಿಂದ ಮಾಡಬೇಕು ಎಂದು ಹೇಳಿದರು, ಆದರೆ ಆ ಸಕಲ ಕ್ರಿಯಾಗಳು ಜೀವನು ನಾನೇ ಮಾಡಿದವನಲ್ಲ, ಪರಾಪರೇಶನಾದ ಹರಿ ಮಾಡಿ ಮಾಡಿಸಿದಂತೆ ಮಾಡುವೆ, ನಾನು ಸರ್ವಥಾ ಕರ್ತೃವಲ್ಲ. ಇಂಥ ಜ್ಞಾನದಿಂದ ಕರ್ಮವಾಚರಿಸಿದರೆ ಯಾವ ಫಲವೂ ಪಾಪಲೇಪವೂ ಇಲ್ಲೆಂದು ಉಪದೇಶಿಸುತ್ತಾರೆ.




ಮೂಲ :

**ದೇವಗಂಗೆಯೊಳುಳ್ಳವಗೆ ದುರಿ ।**
**ತಾವಳಿಗಳುಂಟೇ ವಿಚಾರಿಸೆ ।**
**ಪಾವುಗಳ ಭಯವುಂಟೆ ವಿಹಗಾಧಿಪನ ಮಂದಿರದಿ ॥**
**ಜೀವಕರ್ತೃತ್ವವನು ಮರೆದು ಪ ।**
**ರಾವರೇಶನೆ ಕರ್ತೃಯೆಂದರಿ ।**
**ದಾವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು ॥ ೭ ॥**

**ಪದ್ಯಾರ್ಥ :** ದೇವಗಂಗೆಯೊಳುಳ್ಳವಗೆ = ನಿತ್ಯ ಸುಜ್ಞಾನದಿಂದ ಆಕಾಶಗಂಗಾ ದೇವನದಿಯಲ್ಲಿ ಸ್ನಾನವನ್ನು ಮಾಡುವಗೆ, ದುರಿತಾವಳಿಗಳು = ಪಾಪಗಳ ರಾಶಿ, ಉಂಟೇನೊ ? ಉಂಟೋ ಹೇಗೋ, ವಿಚಾರಿಸೆ = ವಿಚಾರಿಸಿ ನೋಡಿದರೆ =ಶಾಸ್ತ್ರಾರ್ಥ ವಿಚಾರಪೂರ್ವಕ ತಿಳಿದರೆ; ಪಾಪರಾಶಿಗಳ ಲೇಪವಿಲ್ಲ, ಪಾವುಗಳ = ಹಾವುಗಳ ಭಯವುಂಟೆ = ಅಂಜಿಕೆ ಉಂಟೆ? ಇಲ್ಲ. ಎಲ್ಲಿ ಹಾವುಗಳ ಅಂಜಿಕೆ ಇಲ್ಲ. ವಿಹಗಾಧಿಪನ ಮಂದಿರದಿ = ವಿಹಗ, ಪಕ್ಷಿಗಳಿಗೆ ಶ್ರೇಷ್ಠನಾದ ಗರುಡದೇವರ ಮನೆಯಲ್ಲಿ ಹಾವುಗಳ ಅಂಜಿಕೆ ಇದೆಯೋ ? ಇಲ್ಲ. ಅದರಂತೆಯೇ, ಜೀವಕರ್ತೃತ್ವವನು ಮರೆದು = ನಾನು ಜೀವ, ನಾನೇ ಸಕಲ ಕರ್ಮಗಳನ್ನೂ ಮಾಡುವೆನೆಂಬುದನ್ನು ಮರೆತುಬಿಟ್ಟು, ನಾನು ಕರ್ತೃವಲ್ಲ ಎಂಬುದನ್ನು ಸ್ವಲ್ಪಾದರೂ ಮನದಲ್ಲಿ ತಾರದೇ, ಪರಾವರೇಶನೆ ಕರ್ತೃವೆಂದು ರಿದು = ಪರ = ಉತ್ತಮಳಾದ ಲಕ್ಷ್ಮೀದೇವಿ, ಅವರ = ಲಕ್ಷ್ಮಿಗಿಂತಲೂ ಕನಿಷ್ಠರಾದ ಬ್ರಹ್ಮಾದಿ ದೇವತೆಗಳಿಗೆ ಈಶನಾದ ಹರಿಯೇ, ಕರ್ತಾ ಕಾರಯಿತಾ ಸ್ವತಂತ್ರದಿಂದ ಸಕಲ ಕರ್ಮವನ್ನೂ ಮಾಡಿ ಮಾಡಿಸುತ್ತಾನೆಂದು ತಿಳಿದು, ಆವ ಕರ್ಮವ ಮಾಡಿದರೂ = ಹರಿಸ್ಮರಣೆಪೂರ್ವಕ ಯಾವ ಪುಣ್ಯ - ಪಾಪಕರ್ಮಗಳನ್ನೂ ಮಾಡಿದರೂ, ಕರ್ಮಗಳು ಲೇಪಿಸುವದಿಲ್ಲ. ಕರ್ಮಬದ್ಧತೆ ನಿರ್ಗುಣ ಸಾತ್ವಿಕನಾದ ಜೀವನಿಗಿಲ್ಲ. ಸಾತ್ವಿಕ ಜೀವರು ಪಾಪಕೃತ್ಯಗಳನ್ನೇ ಮಾಡುವದಿಲ್ಲ. ಕದಾಚಿತು ಮಾಡಿದರೂ, ಹರಿಸ್ಮರಣೆ ಪೂರ್ವಕ ಮಾಡಿದ ಕಾರಣ ಕರ್ಮ ಲೇಪವಿಲ್ಲ.

**ಭಾವಸೂಚನ :** ದೇವಗಂಗೇತಿ ॥ ಜೀವಕರ್ತೃತ್ವೇತಿ ॥ ಮುಖ್ಯ ಕರ್ತೃತ್ವಮಿತ್ಯರ್ಥಃ ॥ ೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೇವ" ಇತಿ ॥ "ಆವಳಿ" – ಪಂಕ್ತಿ ॥ "ಪಾವು" = ಸರ್ಪ । "ಅಧಿಪ" = ಗರುಡ ॥ ೭ ॥

## ಕನ್ನಡಾರ್ಥ

ಸರ್ವಕರ್ಮಗಳನ್ನೂ ಸಮರ್ಪಿಸುವ ನರನಿಗೆ ಕರ್ಮಲೇಪವಿಲ್ಲವೆಂಬುದಾಗಿ ನಿದರ್ಶನಗಳಿಂದ ತಿಳಿಸುತ್ತಾರೆ. "ದೇವಗಂಗೆಯೊಳುಳ್ಳವಗೆ" ಎಂಬ ಪದ್ಯದಿಂದ.

"ದುರಿತಾವಳಿ"–ಪಾಪಗಳ ಸಮೂಹ. "ಪಾವು" – ಸರ್ಪ – ಹಾವು. "ವಿಹಗಾಧಿಪ"–ಪಕ್ಷಿರಾಜನಾದ ಗರುಡ. ॥ ೭ ॥

**ಅವತರಣಿಕಾ:** ಜೀವನ ತ್ರೈವಿಧ್ಯ-ನಿತ್ಯವಾದುದು, ಅವರಮತಿ ನಿತ್ಯವಾದುದು ತ್ರಿವಿಧರು ಕರ್ಮಮಾಡುತ್ತಾರೆ. ಆದರೆ ತಮೋ, ರಜ, ಸತ್ವ ಸ್ವಭಾವವುಳ್ಳವರು ಯಾವ ತಿಳುವಳಿಕೆಯಿಂದ ಸಕಲ ಕರ್ಮಗಳನ್ನೂ ಮಾಡುತ್ತಾರೆಂಬುದನ್ನು ಉಪದೇಶಿಸುತ್ತಾರೆ.

ಮೂಲ:

**ನೀನುಮಾಡುವ ಪಾಪ ಪುಣ್ಯಗ ।**
**ಳಾನೆ ಮಾಡುವೆನೆಂಬುವಾಧಮ ।**
**ಹೀನ ಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ ॥**
**ಮಾನವನು ಮಧ್ಯಮನು ದ್ವಂದ್ವಕೆ ।**
**ಶ್ರೀನಿವಾಸನೆ ಕರ್ತೃವೆಂದು ಸ ।**
**ದಾನುರಾಗದಿ ನೆನೆದು ಸುಖಿಸುವರೇ ಸತೋತ್ತಮರು ॥ ೮ ॥**

**ಪದ್ಯಾರ್ಥ:** (೧) ನೀನುಮಾಡುವ ಪಾಪಪುಣ್ಯಗಳಾನೆ ಮಾಡುವೆನೆಂಬನಧಮನು = ಎಷ್ಟೆಷ್ಟು ಪಾಪಕರ್ಮಗಳೇ ಮಾಡಲಿ, ಪುಣ್ಯಕರ್ಮಗಳೇ ಮಾಡಲಿ, ನಾನೇ ಮಾಡುತ್ತೇನೆ ನನ್ನಗೇನೇ ಸ್ವಾತಂತ್ರ್ಯ ಉಂಟು, "ಈಶ್ವರೋಹಂ ಅಹಂ ಭೋಗಿ" ನಾನೇ ಈಶ್ವರನೆಂಬ ಮಿಥ್ಯಾಜ್ಞಾನದಿಂದ ಎಲ್ಲ ಕ್ರಿಯೆಗಳನ್ನು ನಾನೇ ಮಾಡುವೆನೆಂಬ ತಿಳುವಳಿಕೆಯುಳ್ಳವನು, ಅಧಮನೀಚ ತಾಮಸಸ್ವಭಾವವುಳ್ಳವನು (ಕಲ್ಯಾದಿ ದೈತ್ಯ-ದಾನವ-ರಾಕ್ಷಸ-ಮತ್ಯಾಧಮರು).

(೨) ಹೀನ ಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬಾ ಮಾನವನು.

ಮಧ್ಯಮನು = ಹೀನ ಕರ್ಮಕ್ಕೆ, ಪಾಪ ಕರ್ಮವನ್ನು ಮಾಡಲಿಕ್ಕೆ ಮಾತ್ರ ನಾನು ಸ್ವತಂತ್ರನು, ಪುಣ್ಯ ಕೆಲಸಮಾಡಿಸುವನು ಹರಿ ಎಂಬುವನು; ಅಂದರೆ ಸಮ್ಮಿಶ್ರಕರ್ತರು ಜೀವ ಪರಮಾತ್ಮರು ಎಂದು ತಿಳಿಯುವವರು, ರಜೋಗುಣದ ಸ್ವಭಾವವುಳ್ಳವರು,-ನಿತ್ಯ ಸಂಸಾರಿಗಳು, ಮಧ್ಯಮರು = ತಾಮಸ-ಸತ್ವರ ನಡುವೆ ಇರುವವನು ಮಧ್ಯಮನೆಂದು ತಿಳಿಯುವದು.

(೩) ದ್ವಂದ್ವಕೆ ಶ್ರೀನಿವಾಸನೆ ಕರ್ತೃವೆಂದು ಸದಾನುರಾಗದಿ ನೆನೆದು, ಸುಖಿಸುವರೇ ನರೋತ್ತಮರು = ದ್ವಂದ್ವಕೆ, ಪಾಪ - ಪುಣ್ಯ ಕರ್ಮಗಳಿಗೆಲ್ಲ "ಕರ್ತಾಕಾರಯಿತಾ ಪ್ರಭು" ಮಾಡಿ ಮಾಡಿಸುವನು ಮಮಸ್ವಾಮಿಬಿಂಬನೇ ಶ್ರೀನಿವಾಸನೇ, ಮುಖ್ಯ ಸ್ವತಂತ್ರ ಕರ್ತಾ ನನ್ನಲ್ಲಿ ಲೇಶವಾದರೂ ಕರ್ತೃತ್ವ ಶಕ್ತಿ ಇಲ್ಲವೆಂದು, ಸದ್ಭಕ್ತಿಯಿಂದ ಚಿಂತಿಸುತ್ತ, ಶ್ರೀಹರಿಯೇ ಸರ್ವಕರ್ತಾ ಎಂದು ತಿಳಿದು ಆನಂದಪಡುವರೇ ಮನುಷ್ಯೋತ್ತಮರು ಎಂದು ಹೇಳಿದ್ದಾರೆ. ಮನುಷ್ಯೋತ್ತಮರಲ್ಲಿ ಸಾತ್ವಿಕ ಜೀವಿಗಳು ತೃಣಾದಿ ಜೀವರ ಪರ್ಯಂತವು ಬಂದಿತೆಂದು ಸಪ್ರಮಾಣಗಳಿವೆ.

**ವಿಶೇಷಸೂಚನೆ**—ತ್ರಿವಿಧ ಜೀವಕರ್ತೃತ್ವ ವಿಷಯದಲ್ಲಿ ಬಹು ಶಾಸ್ತ್ರಾರ್ಥ ಉಂಟು. ಅನೇಕ ಜ್ಞಾನಿಗಳು ಸೂಕ್ಷ್ಮವಾಗಿ ಈ ವಿಷಯ ಬರೆದಿರುವರು. ಶ್ರೀ ವಿಜಯದಾಸರು ಗೋಪಾಲದಾಸಾದಿ ಪ್ರಭೃತಿಗಳು ಶಾಸ್ತ್ರ ನಿಯಮ ಮೀರದಂತೆ ಅನೇಕ ಸುಳಾದಿಗಳನ್ನು ರಚಿಸಿದ್ದಾರೆ. ಈ ಮಹತ್ವವಾದ ಶಾಸ್ತ್ರಾರ್ಥ ವಿಚಾರವನ್ನು ದತ್ತ ಸ್ವಾತಂತ್ರ್ಯ ಸಂಧಿಯಲ್ಲಿ ವಿವರಿಸಲಾಗುವುದು.

**ದ್ರೌಪದೀಶಪತಿ ವಿಠಲರು:** ಏನು ಮಾಡುವ (೧) ಸರ್ವಕರ್ಮ ಕರ್ತ, ನಾನೇ ಎಂಬುವ ತಮೋಯೋಗ್ಯ ಇದೇ ಅನ್ಯಥಾಜ್ಞಾನ, ಲಕ್ಷಣವೇನಂದರೆ ನಾನೇ ಪರಮಾತ್ಮ, ಪರಮಾತ್ಮನೇ ನಾನು ಯೆಂಬೋದು ಇದೇ ಇಚ್ಛವಾಗಿರುತ್ತದೆ.

(೨) ಅರ್ಧಕೆ ಕರ್ತೃ ನಾನು ಅರ್ಧಕೆ ಕರ್ತೃ ಪರಮಾತ್ಮ ಎಂಬುವ ನಿತ್ಯ ಸಂಸಾರಿ, ಇದೇ ಸಂಶಯಜ್ಞಾನ. ಲಕ್ಷಣವೇನಂದರೆ, ಜೀವರು ಸಾಪ್ರ ಸಮಾನದಿಂದ ಪ್ರಯತ್ನಮಾಡಬೇಕು. ಅವನು ಸಹಾಯಮಾಡದ ಹೊರ್ತು, ಸರ್ವಕರ್ತೃ ಪರಮಾತ್ಮನೆಂಬ ಜ್ಞಾನವಿಲ್ಲದೇ ಇರೋಣ.

(೩) ದ್ವಂದ್ವಕೆ ಶ್ರೀನಿವಾಸ ಕರ್ತೃವೆಂದರೆ ಪಾಪಪುಣ್ಯ ಎರಡೂ ಹರಿಯಾಧೀನ, ಜೀವನಯೋಗ್ಯತಾ ಕಾಲ ಕರ್ಮ ಸುಖ ದುಃಖ ಒಬ್ಬ ಪರಮಾತ್ಮನೇ ಮಾಡಿಸುತ್ತಾನಾದ್ದರಿಂದ ಇಂಥಾ ಜ್ಞಾನ ದೃಢವಾಗೋಣವೇ, ಸಮೀಚೀನಜ್ಞಾನ ಇದೆ.

**ಭಾವಸೂಚನ:** ಉತ್ತಮಾಧಮ ಮಧ್ಯಮ ಲಕ್ಷಣಮಾಹ, ಏನೇತಿ. ॥ ೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಕ್ರಿಯಾದ್ವೈತಂ ಸ್ಮಾರಯತಿ—"ಯೇನ" ಇತಿ ॥ ೮ ॥

## ಕನ್ನಡಾರ್ಥ

"ಕ್ರಿಯಾದ್ವೈತ"ವೆಂಬುದನ್ನು ನೆನಪಿಸುತ್ತಾರೆ—"ಏನು" ಎಂಬ ಪದ್ಯದಿಂದ.

"ಶ್ರೀಹರಿಯೇ ಸಕಲ ಕರ್ಮಗಳಿಗೆ ಸ್ವತಂತ್ರಕರ್ತೃ ಅವನ ಪ್ರೇರಣೆ ಯಿಲ್ಲದೇ ಒಂದು ತೃಣವೂ ಚಲಿಸದು. ಅವನ ಪ್ರೇರಣೆಯಿಂದಲೇ ಅವನು ಮಾಡಿ ಮಾಡಿಸಿದಂತೆ ಮಾಡುವೆನು. ಸ್ವಲ್ಪವೂ ನಾನು ಸ್ವತಂತ್ರನಲ್ಲ" ಎಂದು ತಿಳಿದು ಶ್ರೀಹರಿಯಲ್ಲಿ ಭಕ್ತಿಯಿಂದ ಕರ್ಮಗಳನ್ನರ್ಪಿಸುವವನು ಉತ್ತಮನೆಂದು ಈ ಪದ್ಯದ ಭಾವ ॥ ೮ ॥

**ಅವತರಣಿಕಾ:** ದ್ವಂದ್ವ ಕ್ರಿಯಾಸಮರ್ಪಣೋಪಾಸನೆಗೈವರು ದೇವತೆಗಳೇ ದೇವಸ್ವಭಾವವುಳ್ಳ ಸತ್ವಗುಣದವರಾದ ಮನುಷ್ಯ ನರನಲ್ಲ. ಇವರ ಪರಮಾನುಗ್ರಹವೇ ಮುಕ್ತಿಯೋಗ್ಯರಿಗೆ ಕಾರಣವಾದುದು.

ಮೂಲ:

**ಈ ಉಪಾಸನೆ ಗೈವರಿಳಿಯೊಳು ।**<br>
**ದೇವತೆಗಳಲ್ಲವಲೆ ನರರ ।**<br>
**ಲ್ಲಾವ ಬಗೆಯಿಂದಾದರರ್ಪರ್ಚನೆಯು ಹರಿಪೂಜೆ ॥**<br>
**ಕೇವಲ ಪ್ರತಿಮೆಗಳೆನಿಪರು ರ ।**<br>
**ಮಾವಿನೋದಿಗೆ ಇವರನುಗ್ರಹ ।**<br>
**ವೇಪರಾನುಗ್ರಹವೆನಿಸುವುದು ಮುಕ್ತಿಯೋಗ್ಯರಿಗೆ ॥ ೯ ॥**

**ಪದ್ಯಾರ್ಥ :** ಈ ಉಪಾಸನೆ ಗೈವರಿಯೊಳು = ಸದಾ ಕಾಲ ದ್ವಂದ್ವ ಕರ್ಮಗಳಿಗೆ ಕೃರ್ತಾ ಶ್ರೀಹರಿಯೇ ಎಂದು, ಉಪಾಸನೆ = ಸೇವೆಪೂಜೆ ಆರಾಧನಾ ಮಾಡುವರು, ಇಳೆಯೊಳು =ಭೂಮಿಯೊಳಗೆ, ದೇವತೆಗಳಲ್ಲದಲೆ ನರರಲ್ಲ, ದೇವಸ್ವಭಾವವುಳ್ಳ ದೇವತಾಭೃತ್ಯರು ಸತ್ವಗುಣಶೀಲರು ಮಾನುಷೋತ್ತಮರು ಹೊರ್ತಾಗಿ, ನರರಲ್ಲ = ನರ ಮರ್ತ್ಯಲೋಕದ ವಿಷಯಲಾಲಸ ಮನುಜರಂತೆ ನರಮಾನುಷರಲ್ಲ. ಆವ ಬಗೆಯಿಂದಾದರವರರ್ಚನೆಯು ಹರಿಪೂಜೆ = ಇಂಥ ಪರಿಶುದ್ಧ ಜ್ಞಾನವುಳ್ಳವರು ಸದಾ ಹರಿಸ್ಮರಣೆಪೂರ್ವಕ ಶ್ರೀಹರಿಯೇ ಸರ್ವಕರ್ತಾ ಕಾರಯಿತಾನೆಂಬುದನ್ನು ಪ್ರತಿಕ್ರಿಯಾದಲ್ಲಿ ಮರೆಯದೆ ಮಾಡುವ ಸುಜ್ಞಾನಿಗಳು ಪೂಜಾಮಾಡುವದು, ಹರಿಪೂಜೆ = ಇವರಂತರ್ಗತ ಶ್ರೀಹರಿಯು ಪೂಜೆ ಎಂದು ನಿಜವಾಗಿ ತಿಳಿಯಬೇಕು. ಇವರು ಕೇವಲ ಪ್ರತಿಮೆಗಳೆನಿಪರು = ಇವರೆ ಮುಖ್ಯವಾಗಿ ರಮಾವಿನೋದಿಯಾದ ಶ್ರೀಹರಿಗೆ ಚಲಪ್ರತಿಮೆಗಳು ಎನಿಸುವರು = ಎನಿಸಿಕೊಂಬುವರು, ಇವರನುಗ್ರಹವೇ ವರಾನುಗ್ರಹವೆನಿಸುವದು = ಇಂಥ ಸುಜ್ಞಾನಿಗಳ ಅನುಗ್ರಹ = ಉಪದೇಶ ದಯವೇ ಶ್ರೇಷ್ಠ ಉತ್ತಮವಾದ ಉಪದೇಶ ಆಶೀರ್ವಾದವೆನಿಸುತ್ತದೆ; ಇದು ಯಾರಿಗೆಂದರೆ, ಮುಕ್ತಿಯೋಗ್ಯರಿಗೆ = ಹರಿಸರ್ವೋತ್ತಮ ವಾಯು ಜೀವೋತ್ತಮ ತಾರತಮ್ಯ ಪಂಚಬೇಧ ಜ್ಞಾನವುಳ್ಳ ಮುಕ್ತಿಯೋಗ್ಯರಿಗೆ ಶ್ರೇಷ್ಠ ಅನುಗ್ರಹವೆನಿಸುತ್ತದೆ. ಈ ವಿಷಯದಲ್ಲಿ ವಿಜಯದಾಸರ ಸುಳಾದಿಯನ್ನೂ ಇದೆ ಹಿಂದೆ ಕೊಟ್ಟಿದೆ.

**ದ್ರೌಪದೀಶಪತಿ ವಿಠಲರು :** ಈ ಉಪಾಸನ || ಇವರೇ ದೇವತೆಗಳು ನರರಲ್ಲಯೆಂದರೆ ಮನುಷ್ಯೋತ್ತಮರು ಮುಕ್ತಿಯೋಗ್ಯರು ದೇವತೆಗಳ ಭೃತ್ಯರಾದುದರಿಂದ ದೇವತೆಗಳಂತ ನಾಮ – ಆದಕಾರಣ ನರರಲ್ಲ.

**ಭಾವಸೂಚನ:** ಈ ಉಪಾಸನೇತಿ ||೯||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಈ ಉಪಾಸನೆಯ" ಇತಿ || ವಕ್ಷ್ಯತೇ ಚ ಏತತ್ ಸ್ವಾತಂತ್ರ್ಯಸಂಧೌ || "ಕೇವಲ"–ಜಡಾದಪಿ ಉತ್ತಮ ||೯||

**ಕನ್ನಡಾರ್ಥ**

"ಈ ಉಪಾಸನೆಯನ್ನು–ಕ್ರಿಯಾದ್ವೈತವನ್ನು ಅನುಷ್ಠಾನಮಾಡುವವರು ದೇವತೆಗಳು. ಈ ಮುಂತಾದ ವಿಷಯಗಳನ್ನು ಸ್ವಾತಂತ್ರ್ಯ ಸಂಧಿಯಲ್ಲಿ

ವೆಂದೆ ಹೇಳಲಾಗುತ್ತದೆ. "ಕೇವಲ ಪ್ರತಿಮೆ" ಎಂದರೆ ಜಡ ಹಾಗೂ ಅಜ್ಞರುಗಳಿಗಿಂತಲೂ ಉತ್ತಮರೂ ಮುಖ್ಯರೂ ಆದ ಪ್ರತಿಮೆಗಳು ಎಂದು ಅರ್ಥ ಮಾಡಬೇಕು ॥೯॥

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ಹೇಳಿದಂತೆ ಸುಜ್ಞಾನಿಗಳಂತರ್ಯಾಮಿ ಹರಿಯ ಪೂಜಾ ಬಿಟ್ಟು ಅಜ್ಞಾನದಿಂದ ದೇಹವೇ ನಾನು ಜಡಪ್ರತಿಮಾಗಳೇ ದೇವರು ನದ್ಯಾದಿ ಉದಕಗಳೇ ತೀರ್ಥಗಳು ಜ್ಞಾನಿಗಳಾದ ಸಜ್ಜನರು ನರರು ಎಂಬುವನು, ಅಜ್ಞಾನಿಯು; ಪ್ರಾಣಿಗಳೊಳಗೆ ಬಹು ನೀಚತಮವಾದ ಪ್ರಾಣಿ ಎಂದು ಹೇಳುತ್ತಾರೆ.

ಮೂಲ:

**ತನುವೆ ನಾನೆಂಬುವನು ಸತಿಸುತ ।**
**ಮನೆಧನಾದಿಗಳೆನ್ನದೆಂಬುವ ।**
**ದ್ಯುನದಿ ಮೊದಲಾದುದಕಗಳೆ ಸತ್ತೀರ್ಥವೆಂಬುವನು ॥**
**ಅನಳ ಲೋಹಾದಿ ಪ್ರತೀಕಾ ।**
**ರ್ಚನವೆ ದೇವರ ಪೂಜೆ ಸುಜನರ ।**
**ಮನುಜರಹುದೆಂಬುವನು ಗೋಖರನೆನಿಪ ಬುಧರಿಂದ ॥೧೦॥**

**ಪದ್ಯಾರ್ಥ:** ತನುವೆ ನಾನೆಂಬುವನು = ಈ ಜಡ ಶರೀರವೇ ನಾನೇ ಜೀವನೆಂಬುವನು = ಜಡಜೀವ ಭೇದಜ್ಞಾನವಿಲ್ಲದೆ ಈ ಸ್ಥೂಲ ಶರೀರಿಯೇ ನಾನು ಸತಿಸುತ ಮನೆ ಧನಾದಿಗಳೆನ್ನದೆಂಬುವ = ಹೆಂಡರು, ಮಕ್ಕಳು ಬೇರೆ ಜೀವರು ಇರಲಾಗಿ, ಜೀವ ಜೀವರ ಭೇದ ತಿಳಿಯದೇ ಋಣಾನುಬಂಧದಿಂದ ಹರಿಕೊಟ್ಟ ದಾರಾ ಪುತ್ರರೆಂದು ತಿಳಿಯದೇ, ವ್ಯಾಮೋಹದಿಂದ ನನ್ನ ಹೆಂಡರು ಮಕ್ಕಳೆಂದು ಕಾಲಕಾಲಕ್ಕೆ ವಿಷಯಲಾಲಸೆಯಿಂದ ಇವರೆಲ್ಲರೂ ನನ್ನವರೇ ಎಂಬುವನು. ಮತ್ತು ಮನೆ ಧನಾದಿಗಳು = ಮನೆ ಜಡ, ದ್ರವ್ಯವು ಜಡ, ವಸ್ತುಗಳು ತನ್ನಿಂದ ಬೇರೆಯೆಂದು ತಿಳಿಯದೇ ಈ ವಸ್ತುಗಳೆಲ್ಲ ನನ್ನದೇ ಎಂಬುವನು, ಹುಟ್ಟಿದ ಕಾಲ ಸಂಗಡ ಬಂದಿಲ್ಲ, ಸಾಯುವಾಗ್ಗೆ ಸಂಗಡ ಈ ಜಡದೇಹ ದಾರಾಪುತ್ರರು ಮನೆ ಧನಗಳನ್ನು ಸ್ವೈಯ್ಯವಂತಿಲ್ಲವಾದರೂ, ಅಜ್ಞಾನದಿಂದ ಇಂಥ ವ್ಯಾಮೋಹ. ಮತ್ತು ದ್ಯುನದಿ = ಆಕಾಶನದಿ ಗಂಗೆಯೇ ಮೊದಲಾದ ನದಿಗಳ ಉದಕಗಳೇ ಸತ್ತೀರ್ಥವೆಂಬುವನು = ನದಿಗಳ ಜಡವಾದ ನೀರೆ ಸತ್ತೀರ್ಥ ಉತ್ತಮವಾದ ತೀರ್ಥಗಳೆಂದರಿವನು ಅಲ್ಲಿ ಉದಕಗಳಿಗೆ ಅಭಿಮಾನಿಯಾದ

ದ್ರವರೂಪಾಭಿಮಾನಿ ದೇವತೆ ಸತ್ತ್ವತೀರ್ಥಾಭಿಮಾನಿ, ತದಂತಸ್ಥ ಹರಿರೂಪ ತಿಳಿಯದವ, ಅನಳ ಲೋಹಾದಿ ಪ್ರತೀಕಾರ್ಚನವೆ ದೇವರ ಪೂಜೆ = ಅನಳ = ಕಣ್ಣಿಗೆ ಕಾಣುವ ಸ್ಥೂಲ ಕೆಂಡವೇ, ಈ ಕೆಂಡದಲ್ಲಿ ತೇಜೋರೂಪದಿಂದ ಅಗ್ನಿ ದೇವತೆಯಲ್ಲಿ ಪರಶುರಾಮನಿರುವನೆಂದು ತಿಳಿಯದೇ, ಲೋಹಾದಿ ಪ್ರತೀಕಾ = ಪಂಚಲೋಹಾದಿ ತಾಮ್ರ, ಹಿತ್ತಾಳೆ, ಬೆಳ್ಳಿ, ಬಂಗಾರಗಳ "ಶಿಲಾದಿ ವಿಗ್ರಹ ಥಳಾಸೆ, ಹರಿ ಎಂಬೆಲಾ ಕೇವಲ ಸುಳ್ಳೊ" (ಶ್ರೀಪ್ರಾಣೇಶ ವಿಠ್ಠಲರು) ಕೇವಲ ಜಡಪ್ರತಿಮೆಗಳೇ ದೇವರು, ಪ್ರತಿಮಾಂತಸ್ಥ ಗೋಳಕ ಚಿಂತನ ತದಂತಸ್ಥ ವಾಯು ರಮಾಹರಿಯ ವ್ಯಾಪ್ತತೆಯನ್ನು ತಿಳಿಯದೇ ಕೇವಲ ಜಡಪ್ರತಿಮಾಗಳ ಪೂಜೆಯೇ ದೇವರ ಪೂಜಾ ಎಂದು ತಿಳಿಯುವನು, ಸುಜನರೆ = ಹಿಂದಿನ ಪದ್ಯದಲ್ಲಿ ಹೇಳಿದಂತೆ ಸುಜ್ಞಾನಿಗಳಿಗೆ, ಮನುಜರಹುದೆಂಬುವನು = ಅಜ್ಞಾನಿಗಳಾದ ಮಾನವರೆಂದು ತಿಳಿಯುವವನು, ಬುಧರಿಂದ ಗೋಖರನೆನಿಪನು = ಜ್ಞಾನಿಗಳಿಂದ ಇವನು ನೀಚಪ್ರಾಣಿಯು, ಪ್ರಾಣಿಗಳಲ್ಲಿ ಗೋಖರ = ಕತ್ತೆಗೊರಕ (ಕತ್ತೆಕಿರಬ) ಎಂಬುದು ಒಂದು ಬಿಳಿ ಕಪ್ಪುವರ್ಣದಿಂದ ಕೂಡಿದ, ಚತುಷ್ಪಾದ ಪಶು, ಹಿಂಸಾತ್ಮಕ ಮೃಗ, ಯಾವಾಗಲೂ ಮನುಷ್ಯರ ಎಲುಬು ಅಸ್ಥಿಗಳನ್ನು ತಿಂದು ಉಪಜೀವಿಸುವದು. ಗೋಖರ = ಕತ್ತೆಗೊರಕ (ಕತ್ತೆಕಿರಬ) ನೀಚ ಪ್ರಾಣಿಯೆಂದು ನಿಂದ್ಯನು ಎಂದು ಜ್ಞಾನಿಗಳು ಅನ್ನುತ್ತಾರೆ. ಇದು ಮಿಥ್ಯಾಜ್ಞಾನಿಯ ನಿಂದ್ಯ ಅವಸ್ಥೆಯನ್ನೇ ಮಾಡುವದು.

**ದ್ರೌಪದೀಶಪತಿ ವಿಠಲರು :** ತನುವೆ ನಾನೆಂಬುವ = ಪ್ರತಿಮಾರ್ಚನೆ ದೇವರ ಪೂಜೆ ಅಲ್ಲವೆಂದರೆ, ಪರಮಾತ್ಮನಿಗೆ ಜಡಾಧಿಷ್ಠಾನ ಒಂದು, ಚೇತನಾಧಿಷ್ಠಾನ ಒಂದು, ಸ್ವಬಿಂಬ ಒಂದು ಸ್ತೋತ್ರಮಬಿಂಬ ಒಂದು. ಸ್ವಬಿಂಬದ ಕಿಂತಲೂ ಸ್ತೋತ್ರಮಬಿಂಬ ಅಧಿಕ. ಮನುಜರಲ್ಲಾ. ಇದರ ವಿಸ್ತಾರ ಅಧ್ಯಾತ್ಮ ಮಾಲಾವಚನವಿದೆ.

**ಭಾವಸೂಚನ :** ತನುಮೇತಿ ॥ ಯಸ್ಯಾತ್ಮಬುದ್ಧಿ ಕುಣಪೇತಿ ಭಾಗವತೇ ॥ ೧೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಯಸ್ಯ ಆತ್ಮಬುದ್ಧಿಃ" ಇತಿ ॥ ಪದ್ಯಾರ್ಥಮಾಹ – "ತನು" ಇತಿ ॥

ಅಜ್ಞಾನಿತ್ವೇ "ಗೌಃ" | ಏತದನಿಷ್ಟಾ(ಚಾ)ಯ್ಯ ವೃಕ್ತ್ರತ್ವೇ "ಖರಃ" ಇತ್ಯುಕ್ತಂ ಪ್ರಕಾಶಿಕಾಯಾಮ್ ॥೧೦॥

## ಕನ್ನಡಾರ್ಥ

"ಯಸ್ಯಾತ್ಮ ಬುದ್ಧಿಃ" ಎಂಬ ಭಾಗವತ ಶ್ಲೋಕದ ಅರ್ಥವನ್ನು ತಿಳಿಪಡಿಸುತ್ತಾರೆ. "ತನು" ಎಂಬ ಪದ್ಯದಿಂದ "ದೇಹವೇ ನಾನು ಜೀವ! ದೈಹಿಕ ವಿಷಯಗಳೇ, ಧರ್ಮಗಳೇ, ಜೀವಧರ್ಮಗಳು. ನದಿಗಳ ನೀರೇ ತೀರ್ಥ. ಕಲ್ಲುಮಣ್ಣಿನ ಬೊಂಬೆಗಳೇ ದೇವರು. ಈ ಬೊಂಬೆಗಳ ಪೂಜೆಯೇ ದೇವರ ಪೂಜೆ. ಹೀಗೆ ಭಾವಿಸಿ ದೇಹಾತಿರಿಕ್ತ ಜೀವ. ಅವನ ಧರ್ಮಗಳನ್ನು ನದಿ ಪ್ರತಿಮೆ ಮುಂತಾದವುಗಳಲ್ಲಿರುವ ಭಗವಂತನ ಸನ್ನಿಧಾನ ವಿಶೇಷವನ್ನೂ ತಿಳಿಯದವನು, "ಗೌ" ಎಂದೂ ಇದನ್ನು ಸರಿಯಾಗಿ ತಿಳಿಯದೇ ದುಷ್ಟ ಶಾಸ್ತ್ರಗಳನ್ನು ಬೋಧಿಸುವನು. "ಖರ"–ಕತ್ತೆಯೆಂದೂ ಹೇಳಿಸಿಕೊಳ್ಳುತ್ತಾನೆ" ಎಂದು "ಪ್ರಕಾಶಿಕೆ"ಯಲ್ಲಿ ಹೇಳಲಾಗಿರುತ್ತದೆ ॥೧೦॥

**ಅವತರಣಿಕಾ :** ಇಂದ್ರಿಯಗಳಿಗೆ ಅಭಿಮಾನಿಗಳಾದ ಸಕಲ ತತ್ವೇಶರ ಪೂಜಾ ಮಾಡಿದರೂ ದೇವತೆಗಳು ಸಂತುಷ್ಟರಾಗುವದಿಲ್ಲ. ಹೀಗೆ ಹೇಳಿದಂತೆ ಕ್ರಿಯಾದ್ವೈತ ಸಮರ್ಪಿಸುವ ಜ್ಞಾನಿಗಳ ಪೂಜಾಮಾಡಿ ಭಜಿಸದವರನ್ನು ಪವಿತ್ರರನ್ನು ಮಾಡುವದಿಲ್ಲವೆಂದು ಹೇಳುತ್ತಾರೆ.

ಮೂಲ :

**ಅನಳ ಸೋಮಾರ್ಕೇಂದು ತಾರಾ ।**
**ವನಿಸುರಾಪಗ ಮುಖ್ಯ ತೀರ್ಥಗ ।**
**ಳನಿಲ ಗಗನ ಮನಾದಿ ಇಂದ್ರಿಯಗಳಿಗೆ ಅಭಿಮಾನಿ ॥**
**ಎನಿಪ ಸುರರು ವಿಪಶ್ಚಿತರ ಸ ।**
**ನ್ಮನದಿ ಭಜಿಸದೆ ಯಿಪ್ಪರನ ಪಾ ।**
**ವನವ ಮಾಡರು ತಮ್ಮ ಪೂಜೆಯ ಮಾಡಿದರು ಸರಿಯೆ ॥೧೧॥**

**ಪದ್ಯಾರ್ಥ :** ಅನಳ = ತೇಜೋಽಭಿಮಾನಿ ಅಗ್ನಿ, ಸೋಮ = ಉಮಾಸಹಿತನಾದ ಸೋಮ, ರುದ್ರ ಅಹಂಕಾರ ತತ್ವಾಭಿಮಾನಿ, ಅರ್ಕ = ಚಕ್ಷುರಾಭಿಮಾನಿ ಸೂರ್ಯ, ಇಂದು = ಶ್ರೋತ್ರಾಭಿಮಾನಿ ಚಂದ್ರ, ತಾರಾ = ನಕ್ಷತ್ರಾಭಿಮಾನಿ ೨೭ ಜನ ದೇವತೆಗಳು, ಅವನಿ = ಧರಣಿ ಶನೇಶ್ವರರು, ಸೌಮ್ಯ =

ಬುಧಾದಿ ನವಗ್ರಹ ದೇವತೆಗಳು, ಸುರಾಪಗ = ಸುರದೇವತೆಗಳು, ಆಪಗ = ನದಿ ತೀರ್ಥ ದೇವಗಂಗಾದಿ ವರುಣಾಭಿಮಾನಿಗಳು, ಮನಾದಿ ಮನಸ್ಸೇ ಮೊದಲಾದ ತತ್ವಗಳಿಗೆ ನಿಯಾಮಕರಾದ ಇಂದ್ರಕಾಮಾದ್ಯಾರು ಇವರೆಲ್ಲ ಇಂದ್ರಿಯಗಳಿಗೆ ಅಭಿಮಾನಿಗಳೆನಿಪ, ಸುರರು = ದೇವತೆಗಳೆನಿಸುತ್ತಾರೆ. ಈ ಎಲ್ಲ ದೇವತೆಗಳೂ ತಮ್ಮ ಪೂಜಾ ಮಾಡಿದರೂ ಪೂಜಾ ಮಾಡುವವರನ್ನು, ಪಾವನರ ಮಾಡರು = ಪವಿತ್ರರರನ್ನಾಗಿ ಮಾಡುವದಿಲ್ಲ. ಏಕೆಂದರೆ, ವಿಪಶ್ಚಿತರ ಸನ್ಮನದಿ ಭಜಿಸದೇ ಇಪ್ಪರನು = ಸಮಸ್ತ ಕ್ರಿಯಾದ್ವೈತ ಸಮರ್ಪಿಸುವ ಸುಜ್ಞಾನಿಗಳ ಪೂಜಾ ಮಾಡದಿದ್ದವರನ್ನು ಪವಿತ್ರರನ್ನಾಗಿ ಮಾಡುವದಿಲ್ಲ. ಏಕೆಂದರೆ ತನ್ನಕಿಂತ ಉತ್ತಮರಾದ ಜ್ಞಾನಿಗಳ ಪರಂಪರಾ ಪೂಜಾ ಮಾಡಿದರೆ ತತ್ವೇಶರು ತುಷ್ಟರಾಗುತ್ತಾರೆ. "ತನ್ನಿಂದೊಂದೆರಡು ಜ್ಞಾನಗುಣಧಿಕರಾದ" ಗುರುದ್ವಾರವೇ ಮುಖ್ಯವೆಂದು ಶ್ರೀ ವಿಜಯರ ವಚನ.

**ದ್ರೌಪದೀಶಪತಿ ವಿಠಲರು :** ಅನಿಲ ಸೋಮಾರ್ಕೇಂದು—

೧ ತೇಜೋಮಯ ತತ್ವ— ಇದರೊಳಗೆ ಅಗ್ನಿ, ಸೌಮ್ಯ, ಬುಧ, ಸೂರ್ಯ, ಚಂದ್ರ, ನಕ್ಷತ್ರ ಇವರೇ ಮೊದಲಾದವರು ಅಭಿಮಾನಿ.

೨ ಅವನಿ, ಪೃಥ್ವಿ, ತತ್ವ, ಧರಣಿ, ಶನೇಶ್ಚರ ಮೊದಲಾದವರು.

೩ ಅಪ್ಪುತತ್ವ ಸುರಾಪಗ—ಭಾಗೀರಥೀ ವರುಣಾದಿಗಳು ಇವರ ಮುಖ್ಯ ತೀರ್ಥ.

೪ ಅನಿಲ ವಾಯುತತ್ವ—ಕೋಣ ವಾಯುವೆ ಮೊದಲಾದವರು.

೫ ಗಗನ = ಆಕಾಶತತ್ವ— ಗಣಪತಿ ಮೊದಲಾದವರು ಉಳಿದ ೧೯ ತತ್ವ ಮನಾದಿ ಇಂದ್ರಿಯಗಳ ತತ್ವಾಭಿಮಾನಿಗಳು—ವಿಪಶ್ಚಿತರುಗಳ ಭಜಿಸದೇ ತಮ್ಮ ಪೂಜೆ ಮಾಡಿದರೆ ಪಾವನಮಾಡರು. ಅಧಮರಿಗೆ ಅವರವರ ಸ್ವೋತ್ತಮರ ದ್ವಾರವೇ ಅನುಗ್ರಹ. ಅರ್ಜುನಗೆ ಶ್ರೀಕೃಷ್ಣ ಇದ್ದರೂ ರುದ್ರದ್ವಾರವೇ ಉಪದೇಶ ಮಾಡಿಸಿದ.

**ಭಾವಸೂಚನ :** ಅನಳೇತಿ ॥೧೧॥

**ಶ್ರೀ ವ್ಯಾಸದಾಸ ಸ್ಧಿದಾಂತ ಕೌಮುದೀ**

"ನಾಗ್ನಿರ್ನಸೂರ್ಯಃ" ಇತಿ ಶ್ಲೋಕಮರ್ಥತಃ ಗೃಣ್ಣಾತಿ - "ಅನಲ" ಇತಿ ॥ ಭೇದಕೃತೋ ಹರಂತ್ಯಘ ಮಿತ್ಯುಕ್ತೇಃ ॥೧೧॥

## ಕನ್ನಡಾರ್ಥ

"ಭೂತಾಗ್ನಿ ಸೂರ್ಯಗೋಲಕಗಳು ಮುಖ್ಯವಾಗಿ ಅಗ್ನಿ ಸೂರ್ಯರೆಂಬುದಾಗಿ ಜ್ಞಾನಿಗಳಿಂದ ಕರೆಯಲ್ಪಡುವದಿಲ್ಲ" ಎಂದು ಹೇಳುವ ಶ್ಲೋಕಾರ್ಥವನ್ನು ಆರ್ಥಿಕವಾಗಿ ಸಂಗ್ರಹಿಸುತ್ತಾರೆ—"ಅನಲ" ಎಂಬ ಪದ್ಯದಿಂದ.

ಅಗ್ನಿ ಸೂರ್ಯಾದಿಗಳಲ್ಲಿ ನಿಯಾಮಕನಾಗಿರುವ ಶ್ರೀಹರಿಯನ್ನು ಬೇರೆಯೆಂದು ಭಾವಿಸಿ ಆ ಹರಿಯನ್ನು ಅಗ್ನಿ ಸೂರ್ಯರುಗಳಲ್ಲಿ ಪೂಜಿಸಬೇಕು. ತೀರ್ಥಗಳಲ್ಲಿ ಸನ್ನಿಧಾನ ವಿಶೇಷವನ್ನಿಟ್ಟಿರುವ ಶ್ರೀಹರಿಯನ್ನು ವಿವೇಕಿಸಿ ಧ್ಯಾನಿಸುವವರ ಪಾಪಗಳನ್ನು ತೀರ್ಥಾಭಿಮಾನಿ ದೇವತೆಗಳು ಕಳೆಯುತ್ತಾರೆ" ಎಂದು ಹೇಳಲಾಗಿರುತ್ತದೆ ॥೧೧॥

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ವಿಪಶ್ಚಿತರು ಜ್ಞಾನಿಗಳ ಪೂಜಾಮಾಡಬೇಕೆಂದು ಹೇಳಿದಂತಾಯಿತು. ಆ ವಿಪಶ್ಚಿತರು ತೇಜೋಮೂರ್ತಿಗಳಾಗಿ ಹೇಗಿರುವರು? ಅಗ್ನಿ ಸದೃಶರಾಗಿರುವರೆಂದು ಕೆಂಡದ ದೃಷ್ಟಾಂತದಿಂದ ಹೇಳುತ್ತಾರೆ. ಆತಏವ ಭಗವದ್ಭಕ್ತರು ಪುನೀತರನ್ನು ಮಾಡುತ್ತಾರೆ.

ಮೂಲ :

**ಕೆಂಡಕಾಣದೆ ಮುಟ್ಟಿದರು ಸರಿ ।**
**ಕಂಡು ಮುಟ್ಟಲು ದಹಿಸದಿಪ್ಪುದೆ ।**
**ಪುಂಡರೀಕದಳಾಯತಾಕ್ಷನ ವಿಮಲಪದಪದ್ಮ ॥**
**ಬಂಡುಣಿಗಳೆಂದೆನಿಪ ಭಕ್ತರ ।**
**ಹಿಂಡುನೋಡಿದ ಮಾತ್ರದಲಿ ತನು ।**
**ದಿಂಡುಗೆಡಹಿದ ನರನ ಪಾವನಪಾಳ್ಪರಾಕ್ಷಣದಿ ॥೧೨॥**

**ಪದ್ಯಾರ್ಥ :** ಹೇಗೆ ಕೆಂಡವು = ಅಗ್ನಿಯನ್ನು ಕಾಣದೆ ನೋಡದೆ ಅಕಸ್ಮಾತ್ತಾಗಿ ಕೆಳಗೆ ಬಿದ್ದ ಕೆಂಡವನ್ನು ಕೈ ತಗಲಿದರೆ, ಕಾಲಿಗೆ ಹತ್ತಿದರೆ ಅದು, ಆ ಕೆಂಡವು ಸುಡದೇ ಬಿಡುವದೇ ಮತ್ತು ಕಂಡು ಮುಟ್ಟಿದರೂ ಕೆಂಡವು ದಹಿಸುತಿಪ್ಪುದು. ಶ್ರೀಹರಿಗೆ ಧೂಪಾರತಿ ಮಾಡುವ ಕಾಲಕ್ಕೆ ಕೆಂಡ ಕಾಣಿಸಿದ್ದು ಮುಟ್ಟಿದರೂ, ಸುಡುವದು ನಿಜ ಹೇಗೋ ಹಾಗೆ, ಅಗ್ನಿಸದೃಶರಾದ ಪವಿತ್ರರಾದ ಪುಂಡರೀಕದಳಾಯತಾಕ್ಷನ = ಕಮಲದಂತೆ ನೇತ್ರವುಳ್ಳ ಶ್ರೀಹರಿಯ, ವಿಮಲ ಪದ ಪದ್ಮ ಬಂಡುಣಿಗಳೆಂದೆನಿಪ ಭಕ್ತರ = ಪರಮಾತ್ಮನ ಪಾದಕಮಲ ಸುಗಂಧ

ವನ್ನು ಮಕರಂದವನ್ನು ಆಸ್ವಾದನಮಾಡುವ ಬಂಡುಣಿ = ಷಟ್ಪದ ಭ್ರಮರ ಗಳೆಂಬ ಭಕ್ತರ, ಹಿಂಡು ನೋಡಿದ ಮಾತ್ರದಲಿ = ಸಮೂಹವನ್ನು ನೋಡಿದ ತಕ್ಷಣವೇ ಮತ್ತು ತನುದಿಂಡುಗೆಡಹಿದ ನರನ = ದೇಹದಿಂದ ಸಾಷ್ಟಾಂಗ ನಮಸ್ಕಾರಮಾಡಿದ, ನರರನ್ನು = ಮನುಜರಾದ ಮುಕ್ತಿಯೋಗ್ಯ ಜೀವರನ್ನು ಪಾವನ = ಪವಿತ್ರಮಾಡುವರು. "ತೇಪುನಂತಿ ಉರುಕಾಲೇನ ದರ್ಶನಾದೇವ ಸಾಧವಾಃ ||" ಎಂಬುವಂತೇ ಕೆಂಡದೃಶರಾದ ತೇಜೋಮೂರ್ತಿಗಳ ದರ್ಶನ ದಿಂದಲೇ ಪಾಪಗಳು ಭಸ್ಮವಾಗುತ್ತವೆ. ಆ ಜ್ಞಾನಿಗಳಲ್ಲಿ ನಮಸ್ಕರಿಸಿ ಉಪದೇಶ ಕೊಂಡರಂತೂ, ಪಾಪ ಭಸ್ಮವಾಗುವದಲ್ಲದೆ ಜ್ಞಾನವೂ ಪುಟ್ಟುತ್ತದೆ. ಆತ ಏವ ಜ್ಞಾನಿಗಳ ಸಂಗ ಅತ್ಯಾವಶ್ಯ.

**ದ್ರೌಪದೀಶಪತಿ ವಿಠಲರು :** ಕೆಂಡ ಕಾಣದೆ || ಪರಮಾತ್ಮನ ಪಾದ ಕಮಲಗಂಧವನ್ನು ಭೋಜನಮಾಡುವಂಥಾ ಬಂಡುಣಿ = ಭ್ರಮರ ಸದೃಶ ರಾದ ಭಕ್ತರೆಂಬ ಕೆಂಡ, ಅಜ್ಞಾನದಿಂದ ಅವರ ಸ್ವಭಾವ ತಿಳಿಯದಿದ್ದಾಗ್ಯೂ ಜ್ಞಾನೋಪದೇಶಮಾಡಿ ಪಾಪಾಖ್ಯ ತೃಣ ದಹಿಸುತ್ತದೆ. ಜ್ಞಾನದಿಂದ ಹೇಳ ತಕ್ಕದ್ದು ಏನು ? || ೧೨ ||

**ಭಾವಸೂಚನ :** ಕೆಂಡಕಾಣೇತಿ || ಬಂಡುಣಿಗ ಭ್ರಮರ ಇತ್ಯರ್ಥಃ ದಿಂಡುಗೆಡಹಿದ = ಕಾಷ್ಟವತ್‌ಪತಿತ || ೧೨ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದರ್ಶನಾದೇವ" "ಮುಹೂರ್ತಸೇವಯಾ" ಇತಿ ವಿರುದ್ಧವಾಙ್ನ ರ್ಣಯೋ ಗಂಗಾದಿಷು ಭಜಮಾನಾಃ ಅಪಿ ಪವಿತ್ರಾನ್ ಅವಿಧಾಯ, ಅತ್ಯಂತ ವಿಪಶ್ಚಿದ್ಗತಾ ಏವ ಕಿಂಚಿತ್‌ಕಾಲ ಏವ ಉಪದೇಶಾತ್ ಪುನಂತಿ ಇತಿ ತಾತ್ಪರ್ಯ ಟೀಕಾರ್ಥಂ ವಿಧಾಯ ಅರ್ಥವಾದ ಮಾಹ – "ಕೆಂಡ" ಇತಿ || "ಅನಿಚ್ಛಯಾಽಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ" ಇತ್ಯುಕ್ತೋ ಯಮ್ || "ದಿಂಡುಗೆಡಹಿದ"–ಸಾಷ್ಟಾಂಗ ಮಾಡಿದ. || ೧೨ ||

## ಕನ್ನಡಾರ್ಥ

ದರ್ಶನದಿಂದಲೇ ಶಾಸ್ತ್ರವನ್ನು ಉಪದೇಶಿಸಿ ಅದರ ಮುಖಾಂತರವಾಗಿ ಸಜ್ಜನರು ಸಾಧುಗಳು ಪವಿತ್ರೀಕರಿಸುತ್ತಾರೆ. (ಕೇವಲ ತೀರ್ಥಗಳು–ಸಜ್ಜನರ ಸಹವಾಸದ ನಂತರ ಇವರ ಮುಖಾಂತರ ಪವಿತ್ರಿಸುತ್ತವೆ.) "ಮುಹೂರ್ತ

ಸೇವಾ ಮಾತ್ರದಿಂದ ಪವಿತ್ರಗೊಳಿಸುತ್ತದೆ" ಎಂಬ ವಿರುದ್ಧಾರ್ಥಗಳ ವಾಕ್ಯಗಳ ಅರ್ಥವನ್ನು ನಿರ್ಣಯಿಸುವಾಗ ಜ್ಞಾನಿಗಳಾದ ಸಾಧುಗಳು ಗಂಗಾ ಮುಂತಾದವುಗಳಲ್ಲಿ ಭಜಿಸುವವರನ್ನು ಸಹ ಪುನೀತರನ್ನು ಮಾಡದೇ ಶ್ರೇಷ್ಠ ಜ್ಞಾನಿಗಳ ಸಹವಾಸದಲ್ಲಿರುವವರನ್ನು ಸ್ವಲ್ಪೇ ಅವಧಿಯಲ್ಲಿ ಶಾಸ್ತ್ರೋಪದೇಶದಿಂದ ಪವಿತ್ರೀಕರಿಸುತ್ತಾರೆ ಎಂದು ಅರ್ಥವನ್ನು ಹೇಳಿ ಅರ್ಥವಾದವನ್ನು ಹೇಳುತ್ತಾರೆ. "ಕಂಡ" ಎಂಬ ಪದ್ಯದಿಂದ. ಅಂದರೆ ಶಾಸ್ತ್ರೋಪದೇಶದಿಂದಲೇ ಸಾಧುಗಳು ಪವಿತ್ರಿಸುತ್ತಾರೆ. ಕಂಡ ಮಾತ್ರದಿಂದಲೇ ಪವಿತ್ರಗೊಳಿಸುವರೆಂಬುದು ಅರ್ಥವಾದವೆಂದು ಭಾವ. "ಇಚ್ಛೆಯಿಲ್ಲದೆ ಮುಟ್ಟಿದರೂ ಸಹ ಅಗ್ನಿಯು ಸುಡುತ್ತದೆ" ಎಂಬ ಭಾವದ ಶ್ಲೋಕಾನುವಾದವಿದು. "ದಿಂಡುಗೆಡುಹಿದ" "ಸಾಷ್ಟಾಂಗ ಪ್ರಣಾಮಮಾಡಿದ." ॥ ೧೨ ॥

**ಅವತರಣಿಕಾ:** ಈ ಪದ್ಯದಿಂದ ಸುಜ್ಞಾನಿಗಳ ಸಹವಾಸಮಾಡಬೇಕೆಂದು ಶಿಕ್ಷಿಸುತ್ತಾರೆ. "ಸತಾಂ ಪ್ರಸಾಗಾತ್ ಮಮವೀರ್ಯಸಂಪದೋ ಭವಂತಿ ಹೃತ್ಕರ್ಣರಸಾಯನಾಕಥಾ" ಎಂಬ ಭಾಗವತೋಕ್ತಿಯಂತೆ ಈ ಪದ್ಯ ನಿರೂಪಿಸುತ್ತಾರೆ.

ಮೂಲ :

**ಈ ನಿಮಿತ್ತ ಪುನಃ ಪುನಃ ಸು ।**
**ಜ್ಞಾನಿಗಳ ಸಹವಾಸಮಾಡು ಕು ।**
**ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ ॥**
**ವೈನತೇಯಾಂಸಗನ ಸರ್ವ ।**
**ಸ್ಥಾನದಲಿ ತನ್ನಾಮ ರೂಪವ ।**
**ಧೇನಿಸುತ ಸಂಚರಿಸು ಇತರಾಲೋಚನೆಯ ಬಿಟ್ಟು ॥ ೧೩ ॥**

**ಪದ್ಯಾರ್ಥ :** ಈ ನಿಮಿತ್ತ = ಹಿಂದಿನ ಪದ್ಯದಲ್ಲಿ ಹೇಳಿದ ಕಾರಣಗಳಿಂದ ಜ್ಞಾನಿಗಳು ತೇಜೋಮಯರು, ಜ್ಞಾನೋಪದೇಶಮಾಡಿ, ತೃಣಾಖ್ಯ ಪಾಪದಹಿಸಿ, ಹರಿಸರ್ವೋತ್ತಮನೆಂಬ ದಾರಢ್ಯಜ್ಞಾನ ಪುಟ್ಟಿಸುತ್ತಾರೆ ಕಾರಣ, ಪುನಃ ಪುನಃ = ಮತ್ತೂ ಮತ್ತೂ ಸುಜ್ಞಾನಿಗಳ ಸಹವಾಸಮಾಡು = ಸವಿಾಚೀನವಾದ ಅಪರೋಕ್ಷ ಜ್ಞಾನಿಗಳ ಸಹವಾಸಮಾಡು. ಅವರ ಸೇವಾಮಾಡು. ಸಜ್ಜನರಾದ ಜ್ಞಾನಿಗಳು ದೊರಕುವದು ಹೇಗೆಂಬ ಶಂಕೆ ಬೇಡ. ಶ್ರೀಹರಿಯು ನಿನ್ನ ಸಾಧನ ಕಾಲಾನುಗುಣವಾಗಿ ಅಂತಹ ಜ್ಞಾನಿಗಳ ಸಂಗ ಅನಾಯಾಸ

ದೊರಕಿಸುವನು. ಇಂತಹ ಸುಜ್ಞಾನಿಗಳ ಪದಕೆರಗು. ಲೌಕಿಕಕೆ ಮರುಳಾಗಿ ಕುಮಾನವರ ಕೂಡಾಡದಿರು = ಲೋಕದಲ್ಲಿ ಅನೇಕರು ನಾವು ಅಪರೋಕ್ಷ ಜ್ಞಾನ ಕೊಡುತ್ತೇವೆಂದು ತಾವು ಕುಕರ್ಮದಲ್ಲಿ ನಿರತರಾಗಿದ್ದಾಗ್ಯೂ ಜ್ಞಾನಿಗಳ ವೇಷಹಾಕಿದ ಅಜ್ಞಾನಿಗಳೇ, ಕುಮಾನವರು = ದುಷ್ಟ ಕೆಟ್ಟ ಮನುಜರು, ಲೋಕದಲ್ಲಿ ಇಂತಹ ಡಂಭಾಚಾರಿಗಳಿಗೆ ಮರುಳಾಗದೇ = ಮನಸೋಲಬೇಡ-ಇದರಿಂದ ಅನರ್ಥ. ಈ ಸುಜ್ಞಾನಿಗಳ ಸಹವಾಸದಿಂದ ವೈನತೇಯಾಂಸಗನ = ವಿನುತಾದೇವಿಯ ಪುತ್ರ ಗರುಡದೇವರ ಅಂಸದಲ್ಲಿ ಹೆಗಲಲ್ಲಿ ವಿರಾಜಿಪ, ಶ್ರೀಹರಿಯ ಶ್ರೀಕೃಷ್ಣನ, ಸರ್ವಸ್ಥಾನದಲಿ = ಸಕಲ ಜೀವ ಜಡರಲ್ಲಿ, ಸರ್ವತ್ರ ಬ್ರಹ್ಮಾಂಡ-ಬ್ರಹ್ಮಾಂಡಬಹಿಯಲ್ಲಿ ತನ್ನಾಮರೂಪವ = ಆಯಾ ನಾಮರೂಪಗಳನ್ನು, ಧೇನಿಸುತ = ಧ್ಯಾನಮಾಡುತ್ತ ಚಿಂತಿಸುತ್ತಾ, ಇತರಾಲೋಚನೆಯ ಬಿಟ್ಟು, ಸಂಚರಿಸು. ಶ್ರೀಹರಿಯ ತನ್ನಾಮರೂಪ, ಗುಣ ಪೊಗಳಿ ಹಿಗ್ಗುತ್ತಾ ಇತರ ವಿಷಯುಗಳನ್ನು ಮನಸ್ಸಿಗೆ ತಾರದೇ, ಸಂಚರಿಸು = ಸಕಲ ವ್ಯಾಪಾರ ಮಾಡು. ಹೀಗೆ ಸುಜ್ಞಾನಿಗಳ ಸಹವಾಸ ಮಾಡಿದರೆ, ಭಗವಂತನ ನೆನಹು ಕಾಲಕಾಲದಲ್ಲಿ ಬರುತ್ತದೆ. ತತ್ತನ್ನಾಮ ಸ್ಮರಿಸಲು ಯೋಗ್ಯ ಅಧಿಕಾರಿಯಾಗುವನೆಂದು ಹೇಳಿದಂತಾಯಿತು.

**ದ್ರಾಪದೀಶಪತಿ ವಿಠಲರು:** ಈ ನಿಮಿತ್ಯ || ವೈನತೇಯಾಂಸಗನ = ತನ್ನಾಮ ಶಬ್ದನಿರ್ವಚನ ಸಮನ್ವಯ, ಗುಣರೂಪ ಆಕಾರ ಇದೇ ಧ್ಯಾನ ಮಾಡಬೇಕು.

**ಭಾವಸೂಚನ:** ಈ ನಿಮಿತ್ತೇತಿ || ಮಹಚ್ಛೇವಾ ದ್ವಾರಾ ಮಾಹುರ್ವಿ ಮುಕ್ತೇರಿತಿ ಭಾಗವತೇ || ವೈನತೇಯ = ಗರುಡ || ೧೩ ||

"ಏವಂ ಗುಣೋಪದೇಶೇನ ಮಹೋಪಕಾರ ಕತ್ವಾತ್ "ಸತಾಂ ಪ್ರಸಂಗಾತ್ ಮಮವೀರ್ಯ ಸಂಪದಃ ಭವಂತಿ ಸತ್ಕರ್ಣ ರಸಾಯನಾಃ ಕಥಾಃ || ತಜ್ಜೋಷಣಾತ್ ಆಶ್ವಪವರ್ಗವರ್ತ್ಮನಿ ಶ್ರದ್ಧಾವತೀ ಭಕ್ತಿಃ ಅನುಕ್ರಮಿಷ್ಯತಿ" || "ಸಂಸಾರಚಕ್ರೇ ಭ್ರಮತಾಂ ನರಾಣಾಂ ಇಹಾಪ್ಯ ಮುತ್ರಾಪಿ ಮಹಾಫಲಪ್ರದಃ || ಸತ್ಸಂಗ ಏಕೋಸ್ತಿ ನಹೀತರಃ ಸ್ಯಾತ್ ಯತ್ರಾಚ್ಯುತೋದಾರ ಕಥಾ ಪ್ರಸಂಗಃ" || "ಯದ್ವೈವ ಸ್ಯಾತ್ ಸತಾಂ ಸಂಗ್ರಃ ತದೈವಾತ್ಮಾ ಪ್ರಸೀದತಿ" || "ಸ ಏವ ದೇಶೋತಿ = ಪವಿತ್ರ ಈರಿತಃ ಯಃ ಲೋಕಟಾಪ್ಯೋತಿ ವಿಗರ್ಹಿತೋಪಿ||

ಸ ಏವ ಕಾಲೋಽತಿ ಪವಿತ್ರ ಉಚ್ಯತೇ ಯತ್ರೈವ ಸದ್ಭಿಃ ಸಹ ಸಂಗತಿಃ ಸ್ಯಾತ್" || ಇತಿ ನವಮ ಕಾಪಿಲೇಯ ವಿಷ್ಣುರಹಸ್ಯೋಕ್ತ ಪರಮಸಾಧನ ಮಾಹ - "**ಈ ನಿಮಿತ್ತ**" ಇತಿ ||೧೩||

**ಕನ್ನಡಾರ್ಥ**

ಹಿಂದಿನ ಪದ್ಯದಲ್ಲಿ ಹೇಳಿದಂತೆ ಸತ್ಸಂಗವು ಇಂಥ ಉಪದೇಶಗಳಿಂದ ಮಹೋಪಕಾರಕವಾಗಿರುವದು. "ಸಜ್ಜನರ ಸಂಗವಾಗಲು ಅವರಲ್ಲಿ ನಡೆಯು ತ್ತಿರುವ ಪ್ರವಚನ ಮುಂತಾದವುಗಳಿಂದ ಸಜ್ಜನರ ಕರ್ಣಗಳಿಗೆ ರಸಾಯನ -ತೃಪ್ತಿಕೊಡುವ ಅಮೃತ ಸದೃಶ ರಸಭರಿತವಾದ ಪರಮಾತ್ಮನ ಮಹಿಮೆಗಳ ವೀರ್ಯಾಪಾರ್ಯನಾಪ್ಪುತ ಶಕ್ತಿಗಳ ವರ್ಣನಾತ್ಮಕವಾದ ಕಥೆಯು ಸಿಗುತ್ತದೆ. ಅದನ್ನು ಸೇವಿಸುವದರಿಂದ ಮೋಕ್ಷಮಾರ್ಗದಲ್ಲಿ ಪರಮಾತ್ಮನ ವಿಷಯದಲ್ಲಿ ಶ್ರದ್ಧಾಭರಿತವಾದ ಭಕ್ತಿಯು ಕ್ರಮದಿಂದ ಬೆಳೆಯತೊಡಗುತ್ತದೆ." "ಸಂಸಾರ ಚಕ್ರದಲ್ಲಿ ತಿರುಗುತ್ತಿರುವ ಜನರಿಗೆ ಸತ್ಸಂಗ ಒಂದೇ ಐಹಿಕಾಮುಷ್ಮಿಕ ಉಭಯ ಫಲದಾಯಕವಾಗಿರುತ್ತದೆ. ಬೇರೆ ಮತ್ತಾವದೂ ಇರುವದಿಲ್ಲ. ಸಜ್ಜನ ರಲ್ಲಿಯೇ ಅಚ್ಯುತನ ಮಹಾಮಹಿಮೋಪೇತವಾದ ಕಥಾವ್ಯಾಪಾರಗಳು ನಡೆ ಯುವವು." "ಸಜ್ಜನರ ಸಂಗವು ಆದಾಗ ಪರಮಾತ್ಮನು ಪ್ರಸನ್ನನಾಗುತ್ತಾನೆ" ಅತಿ ನಿಂದಿತವಾದ ಕೀಟಕ ಮುಂತಾದ ದೇಶಗಳೂ ಸಹ ಸತ್ಸಂಗತಿಯಾಗು ತ್ತಿದ್ದರೆ ಅವು ಅತ್ಯಂತ ಪವಿತ್ರಗಳೆನಿಸುವವು. ಯಾವಾಗ ಸಜ್ಜನರ ಸಹವಾಸ ವಾಗುವದೋ ಅದೇ ಕಾಲವೇ ಪವಿತ್ರತಮವೆನಿಸುತ್ತದೆ" ಎಂದು ನವಮಸ್ಕಂಧ ಕಪಿಲಗೀತಾ ವಿಷ್ಣುರಹಸ್ಯಗಳಲ್ಲಿ ಹೇಳಲಾಗಿರುವ ಸತ್ಸಂಗರೂಪ ಪರಮಸಾಧನ ವನ್ನು ಹೇಳುತ್ತಾರೆ. "ಈ ನಿಮಿತ್ತ" ಎಂಬ ಪದ್ಯದಿಂದ ||೧೩||

**ಅವತರಣಿಕಾ :** ಸುಜ್ಞಾನಿಗಳ ಸಹವಾಸ, ಅವರ ಉಪದೇಶದಿಂದ ಶ್ರೀಹರಿ ಸರ್ವಕರ್ತಾ ಎಂಬ ಯಾಥಾರ್ಥ್ಯಪುಟ್ಟಿ ಮುಕ್ತಿಗೆ ದಾರಿ. ಕುಮಾನವರ ಸಂಗದಿಂದ ಅಹಂಕರ್ತಾ ಎಂಬ ಅಜ್ಞಾನದಿಂದ ಕುಚ್ಛಿತಯೋನಿ ಪ್ರಾಪ್ತಿ ಎಂದು ಶಿಷ್ಟರನ್ನು ಶಿಕ್ಷಿಸುತ್ತಾರೆ.

**ಮೂಲ :**

**ಈ ನಳಿನಜಾಂಡದೊಳು ಸರ್ವ |**
**ಪ್ರಾಣಿಗಳೊಳಗಿದ್ದನವರತ ವಿ |**
**ಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ ||**

**ಏನು ಕಾಣದೆ ಸಕಲ ಕರ್ಮಗ ।**
**ಳಾನೆ ಮಾಡುವೆನೆಂಬ ನರನು ಕು ।**
**ಯೋನಿಯೈದುವ ಕರ್ತೃಹರಿಯೆಂದವನೆ ಮುಕ್ತನಹ ॥೧೪॥**

**ಪದ್ಯಾರ್ಥ :** ಈ ನಳಿನ ಜಾಂಡದೊಳು = ಈಗ ದೃಶ್ಯಮಾನ ನಳಿನಜ = ಕಮಲದಿಂದ ಪುಟ್ಟಿದ ಬ್ರಹ್ಮನ - ಅಂಡ ಬ್ರಹ್ಮಾಂಡದಲ್ಲಿರುವ, ಸರ್ವಪ್ರಾಣಿಗಳೊಳಗಿದ್ದನವರತ = ಸಕಲ ಚೇತನರಾದ ಜೀವರಾಶಿಗಳಲ್ಲಿ ಇದ್ದು ಸದಾಕಾಲದಲ್ಲಿ, ವಿಜ್ಞಾನಮಯ = ಶ್ರೀಹರಿಗೆ ಜ್ಞಾನ ವಿಜ್ಞಾನ ಪ್ರಜ್ಞಾನನೆಂತ ಉಪನಿಷದ್ವಾಕ್ಯ, ಇಂತಹ ಜ್ಞಾನ, ವಿಶೇಷಜ್ಞಾನ ಪ್ರಕರ್ಷೇಣಜ್ಞಾನವನೆಂತಲೂ ಅಥವಾ ಶ್ರೀಹರಿಯ ಆನಂದಮಯ ವಿಜ್ಞಾನಮಯ, ಪುಂಸ್ತ್ರೀರೂಪವು, ವಿಜ್ಞಾನಮಯ ಶ್ರೀರೂಪವೇ ಜ್ಞಾನಪ್ರಾಚುರ್ಯವಾದುದರಿಂದ ವಿಶೇಷ ಜ್ಞಾನವನ್ನು ಕೊಡುವನು. ವಿಜ್ಞಾನಪ್ರಾಚುರ್ಯನಾಗಿ, ಸಕಲ ವ್ಯಾಪಾರ ತ್ರಿವಿಧ ಜೀವರಲ್ಲಿ ಮಾಡುತ್ತಾ, ಅಜ್ಞರಿಗೆ ತಿಳಿಸದಲೇ ಇರುತ್ತಾನೆ. ಏನು ಕಾಣದೇ = ಇಂತಹ ವಿಜ್ಞಾನಮಯ ಹರಿಯ ವ್ಯಾಪಾರಗಳನ್ನು ತಿಳಿಯದೇ ಸಕಲ ಕರ್ಮಗಳಾನೆ ಮಾಡುವನೆಂಬ ನರನು = ಭಗವಂತನ ವ್ಯಾಪಾರಗಳನ್ನು ತಿಳಿಯದೇ, ಎಲ್ಲ ಕರ್ಮ ಕೆಲಸ ವ್ಯಾಪಾರ ಕ್ರಿಯೆಗಳನ್ನೂ ನಾನೇ ಮಾಡುವೆನೆಂಬ ನರನು = ಮಾನವ ಸ್ವಭಾವವುಳ್ಳ ಅಜ್ಞಾನಿ ಮನುಜನು ಕುಯೋನಿ ಐದುವ, ಈಗಲೂ ಭ್ರಮೆ ಮಿಥ್ಯಾಜ್ಞಾನ, ಮುಂದಾದರೂ ಇಂಥ ಮಿಥ್ಯಾಜ್ಞಾನದಿಂದ ಕೆಟ್ಟ ಯೋನಿ ಯಾವದು ಎಂದರೆ, (ಖರಾದಿ ಉಗ್ರ ಜಂತುಗಳ ಯೋನಿ ಕೆಟ್ಟವಲ್ಲ.) ಕುಚ್ಛಿತವಾದ ಅಜ್ಞಾನ ಮಿಥ್ಯಾಜ್ಞಾನವುಳ್ಳ ತಮೋಯೋನಿಗಳೇ ಕೆಟ್ಟವು, ಇಂತಹ ಕುಯೋನಿಗಳಲ್ಲಿ ಜನ್ಮಪಡೆಯುತ್ತಾನೆ. ಕರ್ತೃಹರಿಯೆಂದವನೆ ಮುಕ್ತನಹ = ಸರ್ವಕರ್ತಾ ಕಾರಯಿತಾ-ಸಕಲಕ್ರಿಯಾಮಾಡಿ ಮಾಡಿಸುವನು ಶ್ರೀಹರಿಯೆಂದು ತಿಳಿದವನು, ಸಂಸಾರ ಬಂಧನದಿಂದ ಮುಕ್ತನಾಗುವ.

**ದ್ರೌಪದೀಶಪತಿ ವಿಠಲರು:** ಈ ನಳಿನ ಜಾಂಡ ॥ ಸ್ವತಂತ್ರತನ ಗುಂಟೆಂಬುವ ಕುಯೋನಿ ಐದುವ ॥ ಪರಮಾತ್ಮನಿಂದ ಆಗತವೆಂಬುವ ಮುಕ್ತ ॥೧೪॥

**ಭಾವಸೂಚನ:** ಈ ನಳಿನೇತಿ ॥ ಅಹ = ಆಗುವ ॥೧೪॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ ನಳಿನ" ಇತಿ || ಓಂ* ನೋ ಗಿರಃ ಆ ತ್ವಾ ವಿಶಂತ್ವಿಂದವಃ(ಯಃ) ಸಮುದ್ರಮಿವ ಸಿಂಧವಃ || ನತ್ವಾಮಿಂದ್ರಾತಿರಿಚ್ಯತೇ ವಿವ್ಯಕ್ಥ ಮಹಿನಾ ವೃಷನ್ ಭಕ್ಷವಮ್ || * ಓಂ || ಸ್ವತಂತ್ರತ್ವಾತ್ ಕರ್ತಾ || ನಳಿನಜ(ಜ) ಬ್ರಹ್ಮಾ || "ದುರ್ಬುದ್ಧಿಃ" ಇದಂ ಮಯಾ ನ ಕ್ರಿಯತೇ ಇದಂ ಮಯಾ ವಿಪರೀತಂ ಕ್ರಿಯತೇ ಇತಿ ಬುದ್ಧಿಭೇದಃ || "ಸತ್ವರಜಸ್ತಮೋಗುಣನಿಮಿತ್ತೋ ಭ್ರಮಃ ಇತ್ಯೇಕಾದಶ ತಾತ್ಪರ್ಯೇ ||೧೪||

### ಕನ್ನಡಾರ್ಥ

"ಕರ್ತಾ" ಇದು ಶ್ರೀ(ವಿಷ್ಣು) ಸಹಸ್ರ ನಾಮಾಂತರ್ಗತವಾಗಿದೆ. ಬ್ರಹತೀ ಮಂತ್ರವು ಇದನ್ನು ವಿವರಿಸಿರುತ್ತದೆ. ಯಾವನು ಸ್ವತಂತ್ರನೋ ಅವನಿಗೆ "ಕರ್ತೃನ" ಎಂದು ಕರೆಯುವರು. ನಳಿನಜಾ ಬ್ರಹ್ಮಾ "ತಾನೆ ಮಾಡುವ ನೆಂಬ ನರನು" ದುರ್ಬುದ್ಧಿಯು ಅಂದರೆ "ನಾನು ಇದನ್ನು ಮಾಡುವದಿಲ್ಲ. ನಾನು ಇದನ್ನು ಕೆಡಿಸುವೆನು-ವಿಪರೀತವಾಗಿ ಮಾಡುವೆನು" ಎಂಬುದಾಗಿ ಬುದ್ಧಿಭೇದವುಳ್ಳವನು. ಹೀಗೆ ತನ್ನಲ್ಲಿರದ ಸ್ವಾತಂತ್ರ್ಯವನ್ನು "ತನ್ನಲ್ಲಿ ಇರುತ್ತದೆ" ಎಂದು ಅನುಸಂಧಾನಿಸುವದು ಭ್ರಮವೆನಿಸುತ್ತದೆ. "ಸತ್ವರಜ ತಮೋಗುಣ ನಿಮಿತ್ತವಾಗಿ ಭ್ರಮಗಳು ಹುಟ್ಟುವವು" ಎಂದು ಭಾಗವತದ ೧೧ನೆಯ ಸ್ಕಂಧದ ತಾತ್ಪರ್ಯದಲ್ಲಿ ಹೇಳಲಾಗಿದೆ. ||೧೪||

**ಅವತರಣಿಕಾ :** ಭಾಗೀರಥೀ ಮುಂತಾದ ತೀರ್ಥಗಳಲ್ಲಿ ನದಿಗಳಲ್ಲಿ ಚರಿಸುವ, ಮೀನು, ಮೊಸಳೆ, ಕಪ್ಪೆ ಮೊದಲಾದ ಜಲಚರ ಪ್ರಾಣಿಗಳು, ತೀರ್ಥ ಮಹಿಮೆಯನ್ನು ತಿಳಿಯದಂತೆ, ಅಪಾರ ಅನಂತ ಗುಣಮಹಿಮೆಯುಳ್ಳ ಗಂಗಾಜನಕನ ಅನಂತಗುಣ ಗಳನ್ನು, ಪೂರ್ಣವಾಗಿ ಬ್ರಹ್ಮಾದಿ ದೇವತೆಗಳೂ ಅರಿಯರೆಂದು ಹೇಳುತ್ತಾರೆ.

ಮೂಲ :

**ಕಲಿಮಲಾಪಹಳೆನಿಸುತಿಹ ಬಾಂ ।**
**ಬೊಳೆಯೊಳಗೆ ಸಂಚರಿಸಿ ಬದುಕುವ ।**
**ಜಲಚರ ಪ್ರಾಣಿಗಳು ಬಲ್ಲವೆ ತೀರ್ಥಮಹಿಮೆಯನು ॥**
**ಹಲವು ಬಗೆಯಲಿ ಹರಿಯ ಕರುಣಾ ।**
**ಬಲದಿ ಬಲ್ಲಿದರಾದ ಬ್ರಹ್ಮಾ ।**
**ನಿಲ ವಿಪೇಶಾದ್ಯಮರರರಿಯರನಂತ ನಮಲಗುಣ ॥ ೧೫ ॥**

**ಪದ್ಯಾರ್ಥ :** ಕಲಿಮಲಾಪಹಳೆನಿಸುತಿಹ =ಕಲಿ ತಮೋಗುಣ ಸಮಂಧ ವಾದ ಪಾಪರಾಶಿಗಳನ್ನು ಹರಿಸುವಲ್ಲಿ ಸಮರ್ಥಳಾದ - ಬಾಂಬೊಳೆಯೊಳಗೆ ಸಂಚರಿಸಿ ಬದುಕುವ = ಆಕಾಶ ಹೊಳೆ, ಗಂಗಾನದಿಯಲ್ಲಿ ಸಂಚಾರಮಾಡುತ್ತ, ತಿರುಗುತ್ತ ಜೀವಿಸುವ, ಜಲಚರ ಪ್ರಾಣಿಗಳು = ಜಲದಲ್ಲಿಯೆ ಇರುವ ಮೀನು -ಮೊಸಳೆ-ಕಪ್ಪೆ ಮುಂತಾದ ಪ್ರಾಣಿಗಳು, ತೀರ್ಥಮಹಿಮೆಯನ್ನು ಬಲ್ಲವೆ = ಆ ಗಂಗಾದಿ ತೀರ್ಥದಲ್ಲಿರುವ ಅಭಿಮಾನಿದೇವತೆ ತನ್ನಿಯಾಮಕ ಹರಿರೂಪ ಗಳನ್ನು ತಿಳಿಯುವವೇ? ಇಲ್ಲ, ತಿಳಿಯುವದಿಲ್ಲ. ಗಂಗೆಯಲ್ಲಿಪ್ಪ ಅಗಾಧ ಮಹಿಮೆ ಹೇಗೋ ಹಾಗೆಯೇ, ಅನಂತನ ಅಮಲಗುಣ = ಅನಂತ = "ಏತನ್ನೋಪಲಭ್ಯತೇ ತೀರ್ಯಗೂರ್ಧ್ವ ಮಧ್ಯಮಧಸ್ತಾತ್ತಸ್ಮಾದುಚ್ಯತೇ ನಂತೇ ಇತಿ ಶ್ರುತೇಃ ॥" ಅನಂತ ॥ (ವಿಷ್ಣುಸಾಸಿರನಾಮ ವಿದ್ಯಾಧಿರಾಜೀಯ) ಇಂತಹ ಅನಂತರೂಪಿ ಹರಿಯ ಅಮಲ ನಿರ್ದುಷ್ಟವಾದ ಅನಂತ ಗುಣಗಳನ್ನು ಹಲವು ಬಗೆಯಲಿ ಹರಿಯ ಕರುಣಾಬಲದಿ ಬಲ್ಲಿದರಾದ = ಅನೇಕ ವಿಧವಾಗಿ ಶ್ರುತಿಸ್ಮೃತಿಗಳಲ್ಲಿ ಪೇಳಿಪ್ಪ ಹೆಚ್ಚಿನ ಗುಣಗಳನ್ನು ಹರಿಯ ಕರುಣಾಬಲದಿಂದ ತಿಳಿದವರಾದಾಗ್ಯೂ, ಬ್ರಹ್ಮ = ಚತುರ್ಮುಖ ಬ್ರಹ್ಮದೇವರು, ಅನಿಳ = ವಾಯುದೇವರು, ವಿಪೇಶ = ಗರುಡದೇವರೇ ಮೊದಲಾದ ದೇವತೆಗಳು ತಮ್ಮ ಯೋಗ್ಯತಾನುಗುಣವಾಗಿ ತಿಳಿಯುವರಲ್ಲದೆ ಹರಿಯ ಅನಂತ ಗುಣಗಳನ್ನು ಪೂರ್ಣವಾಗಿ ತಿಳಿಯರೆಂದಮೇಲೆ ಮನುಜರ ಪಾಡೇನು ?

**ದ್ರೌಪದೀಶಪತಿ ವಿಠಲರು :** ಕಲಿಮಲಾಪಹ ॥ ಪರಮಾತ್ಮನಮಹಿಮೆ ತೀರ್ಥದಲಿ ಬ್ರಹ್ಮಾದಿಗಳು ಯಥಾಯೋಗ್ಯ ಬಲ್ಲರು. ॥ ೧೫ ॥

**ಭಾವಸೂಚನ :** ತೀರ್ಥಸ್ನಾನಾತ್ ಪಾಪನಾಶೋ(ಯದಿಸ್ಯಾತ್ ಭೇಕಾ ದೀನಾಂ ಅಪರಾಧವದಸ್ವೇತಿ ವಚನಾನುಸಾರೇಣ ॥ ಕಲೇತಿ ॥ ೧೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕಲಿ" ಇತಿ ॥ "ವಿಪಃ" - ಗರುಡಃ ॥ ೧೫ ॥

**ಕನ್ನಡಾರ್ಥ**

ಭಾಗೀರಥಿ ಮುಂತಾದ ತೀರ್ಥಗಳ ಮಹಿಮೆಯನ್ನು ಮೀನು ಮುಂತಾದ ಜಲಚರ ಪ್ರಾಣಿಗಳು ತಿಳಿಯದಿರುವಂತೆ ಬ್ರಹ್ಮಾದಿ ಸುರರು ಹರಿಯನ್ನು ಪೂರ್ಣ ತಿಳಿಯುವದಿಲ್ಲವೆಂದಮೇಲೆ ಸಾಮಾನ್ಯ ನರರ ಪಾಡೇನು? ಎಂದು

ತಿಳಿಸುತ್ತಾರೆ. "ವಿಪ" ಅಂದರೆ ಪಕ್ಷಿಶ್ರೇಷ್ಠನಾದ ಗರುಡ. ॥ ೧೫ ॥

**ಅವತರಣಿಕಾ :** ಹೃದಯಪದುಮದಲ್ಲಿಪ್ಪ ಬಿಂಬನೇ ಸಕಲ ಕರ್ಮಮಾಡಿಸಿ ಅಖಿಳ ಚೇತನರನ್ನು ಮೋಹಿಸುತ್ತಾ ತ್ರಿಗುಣದಿಂದ ಬದ್ಧರನ್ನು ಮಾಡುವನು. "ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ" ಎಂಬ ತಾತ್ಪರ್ಯವನ್ನು ಉಪದೇಶಿಸುತ್ತಾರೆ.

ಮೂಲ :

**ಶ್ರೀ ಲಕುಮಿವಲ್ಲಭನು ಹೃತ್ಕೀ ।**
**ಲಾಲಜದೊಳಿದ್ದಖಿಳ ಚೇತನ ।**
**ಜಾಲವನು ಮೋಹಿಸುವ ತ್ರಿಗುಣದಿ ಬದ್ಧರನು ಮಾಡಿ ॥**
**ಸ್ಥೂಲಕರ್ಮದಿ ರತರಮಾಡಿ ಸ್ವ(ಸ) ।**
**ಲೀಲೆಗಳ ತಿಳಿಸದಲೆ ಭವದಿ ಕು ।**
**ಲಾಲಚಕ್ರದ ತೆರದಿ ತಿರುಗಿಸುತಿಹನು ಮಾನವರ ॥ ೧೬ ॥**

**ಪದ್ಯಾರ್ಥ :** ಶ್ರೀ = ಸಂಪತ್ಕರಳಾದ ಲಕ್ಷ್ಮೀದೇವಿಯ, ವಲ್ಲಭ = ಪತಿಯು, ಹೃತ್ = ಹೃದಯ, ಕೀಲಾಲಜದೊಳಿದ್ದು = ಕಮಲದೊಳಿದ್ದು, ಅಖಿಳ ಚೇತನ ಜಾಲವನು = ಸಮಸ್ತ ಜೀವರಾಶಿಗಳ ಸಮೂಹವನ್ನು, ಅಖಿಳ-ಜಾಲ ಎರಡು ಶಬ್ದಪ್ರಯೋಗದಿಂದ, ಅಖಿಳ = ಎಲ್ಲ ಇರುವೆ ಮೊದಲಾಗಿ ಅಳ ಲಕ್ಷ ಜೀವರ ಜಾಲ ಸಮೂಹವನ್ನು, ಮೋಹಿಸುವ = ತನ್ನ ಇಚ್ಛೆಯೆಂಬ ಮಾಯೆಯಿಂದ ಸ್ವಯಿಚ್ಛಾದಿಂದ ಲಿಂಗದೇಹ ತ್ರಿಗುಣದಿ ಬದ್ಧರನುಮಾಡಿ, ಮೋಹಿಸುವ = ಭ್ರಮೆಗೊಳಿಸುವ, ಅಜ್ಞಾನಾದಿಗಳನ್ನು ತಂದೀವನು; ಸತ್ವ ರಜ ತಮೋಗುಣಗಳಿಂದ ಬದ್ಧರನ್ನು ಮಾಡುವ, ಹೀಗೆ ಮೋಹಿಸಿ, ಬದ್ಧರಾದ ಜೀವಿಗಳನ್ನು ಸ್ಥೂಲಕರ್ಮದಿ ರತರಮಾಡಿ = ಜ್ಞಾನ ವಿಲ್ಲದೇ ಅರ್ಥ ವಿಚಾರಮಾಡದೆ ಕೇವಲ ಜಡಕರ್ಮಗಳಲ್ಲಿಯೇ ಆಸಕ್ತಿಯುಳ್ಳವರನ್ನಾಗಿ ಮಾಡುವನು, ಹೃದಯಸ್ಥನಾದ ಹರಿಯು, ಸ್ವ = ತನ್ನ, ಲೀಲೆ = ವ್ಯಾಪಾರಗಳನ್ನು, ತಿಳಿಸದಲೆ = ತಿಳಿಯಗೊಡದೆ, ಜ್ಞಾನಮಾರ್ಗ ದಾರಿ ತೋರದೇ, ಭವದಿ = ಈ ಸಂಸಾರದಲ್ಲಿ, ಕುಲಾಲಚಕ್ರದ ತೆರದಿ = ಕುಂಬಾರನ ತಿಗರಿ ಗಾಲಿಯಂತೆ, ಮಾನವರನ್ನು ತಿರುಗಿಸುತಿಹನು = ಮಾನವ ಸ್ವಭಾವದ ಅಜ್ಞಾನಿ ಜನರನ್ನು ಸಂಸಾರ ಚಕ್ರದಲ್ಲಿ ಪುನಃ ಪುನಃ ತಿರುಗಿಸುತ್ತಿರುವನು.

ಎಂಥ ಪರಮಾತ್ಮ ಮಾಯಾಜಾಲ "ಕವಯೋಪ್ಯತ್ರ ಮೋಹಿತಾಃ" ||

**ದ್ರೌಪದೀಶಪತಿ ವಿಠಲರು :** ಶ್ರೀ ಲಕುಮಿಯೊಲ್ಲಭ.

**ಭಾವಸೂಚನ :** ಶ್ರೀ ಲಕುಮೇತಿ || ೧೬ ||

ಸೂಚನೆ: ಅಖಿಳ ಚೇತನರಲ್ಲಿ ಸಾತ್ವಿಕರೂ ಇದ್ದೇ ಇರುವರು. ಬ್ರಹ್ಮ-ವಾಯು, ವಾಣಿ-ಭಾರತಿ ಸಮಸ್ತ ಋಜುಗಳನ್ನು ತ್ರಿಗುಣದಿ ಬದ್ಧರನ್ನು ಮಾಡುವನು ಹೇಗೆ? ಈ ಋಜುಗಳಿಲ್ಲ ತ್ರಿಗುಣವಾದ ಲಿಂಗಬದ್ಧರಲ್ಲವಾದರೂ ಭಗವಂತನ ಅನಂತ ಗುಣಜ್ಞಾನಪೂರ್ಣವಾಗಿ ತಿಳಿಯದಿರುವರು. ಇದೇ ಮೋಹ. ಪರಮಾತ್ಮನ ಇಚ್ಛಾ ಎಂಥಪೆಂದರೆ "ಕಟ್ಟಿಮಾಡಿ ಅಧಿಕ ಆನಂದಕೊಡದಿಚ್ಛಾವರ್ಕ ಮಾಡಿಪ್ಪದೇ ಬಂಧ ಕಾಣೋ" (ಗೋಪಾಲದಾಸರು) ಪರಮಾತ್ಮ ಇಚ್ಛಾ= ಮೋಹ ಮಾಯಾದಿಂದ ನಿವಾರಲು ವಶವಲ್ಲ. ಋಜ್ವಾದಿಗಳಿಗೆ ಸಹ ಇಂಥ ಬದ್ಧತ್ವ ಉಂಟೆಂದು ಶಾಸ್ತ್ರಸಮ್ಮತವೂ ದಾಸರ ವಚನವೂ ಇವೆ. ಇವಕ್ಕೆ ಜ್ಞಾನಿಗಳಾದ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಒಂದು ವಿಶೇಷ ಶ್ರುತಿ ಆಧಾರ ಮೇಲಿಂದ ರಹಸ್ಯಾರ್ಥವನ್ನು ಬರೆದಿರುವರು. ಅದು ಸಮಂಜಸವೆಂದು ಕಾಣುತ್ತದೆ. ಚನ್ನಾಗಿ ವಿಚಾರಮಾಡಿ ತಿಳಿಯಬೇಕು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ" ಇತಿ || "ಕೀಲಾಲ" – ಉದಕಮ್ || "ಚಕ್ರದತೆರದಿ" – "ಚಕ್ರಂ ನ ವೃತ್ತಮ್" ಇತಿ ಶ್ರುತೇಃ || ೧೬ ||

## ಕನ್ನಡಾರ್ಥ

ಶ್ರೀ ಹರಿಯು ಜೀವರನ್ನು ಸಂಸಾರ ಚಕ್ರದಲ್ಲಿ ತಿರುಗಿಸುವನೆಂದು ಹೇಳುತ್ತಾರೆ — "ಶ್ರೀ ಲಕುಮಿ" ಎಂಬ ಪದ್ಯದಿಂದ. "ಕೀಲಾಲ" – ನೀರು. ಅಲ್ಲಿ ಹುಟ್ಟಿದ ಕಮಲವು "ಕೀಲಾಲಜ". "ಹೃತ್ಕೀಲಾಲಜ"–ಹೃದಯಕಮಲ. "ಕುಲಾಲಚಕ್ರದ ತೆರದಿ" ಎಂಬುದು. "ಚತುಭಿಃ ಸಾಕಂ ನವತಿಂ ಚ ನಾಮಭಿಃ ಚಕ್ರಂ ನ ವೃತ್ತಂ ವ್ಯತೀರವೀವಿಪತ್" ಎಂಬ ಶ್ರುತ್ಯರ್ಥಾನುವಾದ ರೂಪವಾದುದು. "ತನ್ನ ಸ್ವರೂಪಭೇದ ರಹಿತವಾದ ನಾಲ್ಕು ರೂಪಗಳಿಂದ (ವಾಸುದೇವ ಮುಂತಾದವುಗಳಿಂದ) ಆ ಪೂರ್ಣನಾದ ಹರಿಯು ಅಧಿಕರಾದ ದೇವತೆಗಳನ್ನು ೧೧ ಆದಿತ್ಯರು, ೧೧ ರುದ್ರರು, ೮ ವಸುಗಳು, ೧೦ ಪ್ರಜಾಪತಿಗಳು, ೫೦ ಮರುದ್ಗಣಗಳು ಈ ೯೦ ದೇವತೆಗಳನ್ನು ಚಕ್ರದಂತೆ ತಿರುಗಿಸುವ" ಎಂದು ಅರ್ಥ || ೧೬ ||

**ಅವತರಣಿಕಾ :** ತ್ರಿವಿಧರಾದ ಜೀವರಿಗೆ ಸ್ವಭಾವಾನುಸಾರ ತ್ರಿವಿಧಗತಿ ತತ್ಫಲಗಳನ್ನು ಕೊಡುವನೆಂದು, ಶ್ರೀಹರಿಯ ಮಹಿಮಾ ವರ್ಣಿಸುತ್ತಾರೆ.

ಮೂಲ :

**ವೇದಶಾಸ್ತ್ರ ವಿಚಾರಗೈದು ನಿ ।**
**ಷೇಧಕರ್ಮವ ತೊರೆದು ನಿತ್ಯದಿ ।**
**ಸಾಧುಕರ್ಮವ ಮಾಳ್ಪರಿಗೆ ಸ್ವರ್ಗಾದಿ ಸುಖವೀವ ॥**
**ಐದಿಸುವ ಪಾಪಿಗಳ ನಿರಯುವ ।**
**ಖೇದ ಮೋದ ಮನುಷ್ಯರಿಗೆ ದು ।**
**ರ್ವಾದಿಗಳಿಗಂಧಂತಮದಿ ಮಹದುಃಖಗಳನುಣಿಪ ॥ ೧೭ ॥**

**ಪದ್ಯಾರ್ಥ :** ಯಾವನು, ವೇದಶಾಸ್ತ್ರ ವಿಚಾರಗೈದು – ವೇದಗಳಲ್ಲಿ – ಶಾಸ್ತ್ರದಲ್ಲಿ ಹೇಳಿದ ವಿಷಯವನ್ನು ಚೆನ್ನಾಗಿ ಗುರುಗಳಿಂದ ತಿಳಿದು, ನಿಷೇಧ ಕರ್ಮವು ತೊರೆದು = ನಿಷಿದ್ಧವಾದ ವೇದ ವಿರುದ್ಧವಾದ ಸಕಲಕ್ರಿಯಾಗಳನ್ನು ಬಿಟ್ಟು, ಸಾಧುಕರ್ಮವ = ಒಳ್ಳೇ ಕರ್ಮವನ್ನು ಅಂದರೆ, ನಿವೃತ್ತಿ ಧರ್ಮವನ್ನು ಬಿಟ್ಟು, ಪ್ರವೃತ್ತಿ ಧರ್ಮಲಕ್ಷಣವಾದ ಕಾಮ್ಯ ಕರ್ಮಗಳನ್ನು ಮಾಡುವರಿಗೆ ಅಂದರೆ " ಜ್ಯೋತಿಷ್ಟೋಮೇನ ಸ್ವರ್ಗಾ ಕಾಮೋಯಜೇತ " ಇತ್ಯಾದಿ ವೇದ ಅಮುಖ್ಯಾರ್ಥ ತಿಳಿದು, ಯಜ್ಞ ಯಾಗಾದಿ ಕಾಮ್ಯ ಕರ್ಮಗಳನ್ನು ಮಾಳ್ಪರಿಗೆ, ಸ್ವರ್ಗಾದಿ ಸುಖವೀವ = ಸ್ವರ್ಗವೇ ಮೊದಲಾಗಿ ಅಂದರೆ, ಪ್ರವೃತ್ತಿ ಧರ್ಮರತರಿಗೆ, ಅಂತರಿಕ್ಷದಲ್ಲಿರುವ ಭೂಮಿಯಿಂದ ಊರ್ಧ್ವ ಲೋಕಾದಿಗಳು, ನಕ್ಷತ್ರಾದಿ ಲೋಕಗಳಲ್ಲಿ (ಲೋಕವಿವರ ಸೃಷ್ಟಿ ಪ್ರಕರಣ ಸುಳಾದಿಲಿ ಹೇಳಿದೆ) ಇಂಥ ಲೋಕಗಳಲ್ಲಿಟ್ಟು, ಸುಖವೀವ = ಬಹಿರ್‌ಭೋಗದಿಂದ ಸುಖವನ್ನು ಕೊಡುತ್ತಾನೆ. ಪಾಪಿಗಳ ನಿರಯುವ ಐದಿಸುವ = ಅನೇಕ ದುಷ್ಕರ್ಮ ನಾನಾ ವಿಧ ಪಾಪಕರ್ಮಗಳನ್ನು ಮಾಡಿದವರನ್ನು ೨೮ ಘೋರ ನರಕಗಳನ್ನು ಹೊಂದಿಸುತ್ತಾನೆ. ಖೇದ = ಮೋದ ಮನುಷ್ಯರಿಗೆ ಕೊಡುವ = ದುಃಖ ಸುಖ ಸಮ್ಮಿಶ್ರವಾದ ಅನುಭವವನ್ನು ಮರ್ತ್ಯರಾದ ನಿತ್ಯ ಸಂಸಾರಿಗಳಿಗೆ ಕೊಡುವನು, ದುರ್ವಾದಿಗಳಿಗಂಧಂತಮದಿ ಮಹದುಃಖಗಳನುಣಿಪ = ಮಿಥ್ಯಾಮಾಯಾವಾದಿ ಮುಂತಾದವರು ದೇವರೂ ನಾನೂ ಒಂದೇ ಎಂಬುವರಿಗೆ, ಅಂಧಂತಮಸ್ಸು ಎಂಬುವ ಘೋರವಾದ ನಿತ್ಯ ನರಕದಲ್ಲಿ, ಮಹಾದುಃಖಗಳನ್ನು ಉಣಿಸುತ್ತಾನೆ.

**ದ್ರೌಪದೀಶಪತಿ ವಿಠಲರು :** ಗುಣಭಕ್ತ ಸತ್ಕರ್ಮಮಾಡಿದರೆ ಸ್ವರ್ಗ ||
**ಭಾವಸೂಚನ :** ವೇದೇತಿ ||೧೭||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವೇದ" ಇತಿ ||

**ಕನ್ನಡಾರ್ಥ**

ತ್ರಿವಿಧ ಜೀವರಿಗೆ ತ್ರಿವಿಧಗತಿ ಫಲಗಳನ್ನೀಯುವವೆಂದು ಶ್ರೀಹರಿಯ ಮಹಿಮೆಯನ್ನು ನಿರೂಪಿಸುವರು. "ವೇದ" ಎಂಬ ಪದ್ಯದಿಂದ. ||೧೭||

**ಅವತರಣಿಕಾ :** ಇನ್ನು ನಿವೃತ್ತಿ ಕರ್ಮರತರಾಗಿ ಫಲಾಪೇಕ್ಷೆಯಿಲ್ಲದೇ ಸಕಲ-ಕ್ರೀಯಾ ಶ್ರೀಹರಿಯೇ ಮಾಡಿ ಮಾಡಿಸುವನೆಂಬ ದೃಢ ನಿಶ್ಚಯವುಳ್ಳ ಭಕ್ತ ನಿರ್ಗುಣೋಪಾಸಕನು. ಇಂಥವರಿಗೆ ಅಪವರ್ಗಮುಕ್ತಿ ಸುಖ, ತ್ರೈವಿಧ್ಯರಿಗೆ ಭೂ - ನಿರಯ - ಸ್ವರ್ಗದಲ್ಲಿ ಸಂಚಾರಮಾಡಿಸುವನೆಂದು ಹೇಳುತ್ತಾರೆ.

ಮೂಲ :

**ನಿರ್ಗುಣೋಪಾಸಕಗೆ ಗುಣಸಂ |**
**ಸರ್ಗ ದೋಷಗಳೀಯದಲೆ ಅಪ |**
**ವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರಾ ||**
**ದುರ್ಗಮನುಯೆಂದೆನಿಪ ತ್ರೈವಿ |**
**ಧ್ಯರ್ಗೆ ತ್ರಿಗುಣಾತೀತ ಸಂತತ |**
**ಸ್ವರ್ಗ ಭೂನರಕಾದಿ (ನರಕದಲಿ) ಸಂಚಾರವನೆ ಮಾಡಿಸುವ ||೧೮||**

**ಪದ್ಯಾರ್ಥ :** ನಿರ್ಗುಣೋಪಾಸಕ = ಯಾರೆಂಬುದು ಶ್ರೀ **ವಿಜಯ ದಾಸರೇ** ಸುಳಾದಿಲಿ ಹೇಳಿದ್ದಾರೆ. "ನಾನ್ಯಾತಕೆ ಸಲ್ಲ, ಹರಿ ಎನ್ನಿಂದಲ್ಲೇ ನಾನಾತ್ಮಗಳಿಂದ ಬಗೆಬಗೆ ವೈಷಕ್ಯಾ | ಏನೇನು ಮಾಡಿಸುವ ಮಾಡುವೆ ನದರಂತೆ | ಹೀನಲೇಸುಗಳಲ್ಲಿ ಹಿತಾಹಿತದಲ್ಲಿ | ಮಾಣದೆ ಮರಿಯದಲೇ ಯೆಂದವ ನಿರ್ಗುಣನು ||" ಎಂದು ಅಪ್ಪಣೆಕೊಡಿಸಿದಂತೆ ಸಮಸ್ತಕ್ರಿಯಾ ಸಕಲರಲ್ಲಿ ಸರ್ವಕಾಲ ಶ್ರೀಹರಿಯೇ ಮಾಡಿ ಮಾಡಿಸುತ್ತಾನೆಂದು ತಿಳಿದು, ಶ್ರೀಹರಿಗೆ ಸಮರ್ಪಿಸುವನು ನಿರ್ಗುಣನು ಇವನಿಗೆ, ಗುಣಸಂಸರ್ಗ ದೋಷ ಗಳೀಯದಲೇ = ತ್ರಿಗುಣ ಸಂಬಂಧವಾದ ದೋಷಗಳನ್ನು ಕೊಡದೇ ಗುಣ ಬದ್ಧತೆಯಿಂದ ಮೋಚನಮಾಡಿ, ಅಪವರ್ಗದಲ್ಲಿ = ಮುಕ್ತಿಯಲ್ಲಿ ಸುಖವಿತ್ತು,

ಅನೇಕ ನಿಜಾನಂದಗಳನ್ನಿತ್ತು, ಕೃಪಾಸಾಂದ್ರನು = ದಯಾಪೂರ್ಣನು ಪಾಲಿಸುವನು. ತ್ರೈವಿಧ್ಯರು "ನಿರಯಭೂಗೋಚರಾನ್" ನರಕ, ಭೂಮಿ-ಸ್ವರ್ಗದಲ್ಲಿ ಸಂಚರಿಸುವ, ನಿರಯಪ್ರಚುರರು, ಭೂಪ್ರಚುರರು, ಸ್ವರ್ಗಪ್ರಚುರರೆಂಬ ಮೂರುವಿಧ ನಿತ್ಯ ಸಂಸಾರಿಗಳಿಗೆ, ದುರ್ಗಮನು, ಎಂದೆನಿಪ = ಹೊಂದುವದಕ್ಕೆ ಅಸಾಧ್ಯವಾದವನು, ದುರ್ಗಮ = ದುಃಖೇನಾಗಮ್ಯತೇ ಜ್ಞಾಯತೇ ಇತಿ ದುರ್ಗಮಃ || (ವಿ. ಸ. ನಾ. ವಿದ್ಯಾಧಿರಾಜೀಯ) ತ್ರೈವಿಧ್ಯರಿಗೆ ಸಂತತ ಸ್ವರ್ಗ ಭೂನರಕದಿ ಸಂಚಾರವನೆ ಮಾಡಿಸುವನು = ಈ ನಿತ್ಯ ಸಂಸಾರಿಗಳಿಗೆ, ನಿರಂತರ ಸ್ವರ್ಗ-ಭೂಮಿ ನರಕಾದಿಗಳಲ್ಲಿ ಸಂಚಾರಮಾಡಿಸುತ್ತ ಮಿಶ್ರವಾದ ಸುಖದುಃಖವನ್ನು ಕೊಡುವನು. ಶ್ರೀಹರಿಯು ತಾನು ತ್ರಿಗುಣಾತೀತನು = ಸತ್ವಾದಿ ಗುಣಗಳಿಂದ ಬದ್ಧನಲ್ಲ, ನರಕದಲ್ಲಿ ಇಂತಹ ಜೀವಿಗಳನ್ನು ವಾಸ ಮಾಡಿಸುವಲ್ಲಿ ತಾನಿದ್ದರೂ, ಆ ದುಃಖದಿಂದ ದೂರನು, ಹೇಗಂದರೆ ಬಂದಿಖಾನೆಯ ದುಃಖ ಜೈಲ ಅಧಿಕಾರಿಯು ಅಲ್ಲಿದ್ದರೂ ಅನುಭವಿಸುವದಿಲ್ಲ. ಅದರಂತೆ !

**ದ್ರೌಪದೀಶಪತಿ ವಿಠಲರು :** ನಿರ್ಗುಣೋಪಾಸಕಗೆ, ಅಪವರ್ಗ.

**ಭಾವಸೂಚನ :** ನಿರ್ಗುಣೋಪಾಸಕೇತಿ || ನಿರ್ಗುಣೋಪಾಸನಕ್ರಮುಶ್ಚಾ || ಸ್ವಗತ ಸ್ವಾತಂತ್ರ ಸಂಧೌ ಅವನಿಯೊಳಿತಿ ಪದ್ಯ ವ್ಯಾಖ್ಯಾನಾವಸರೆ ಸಮ್ಯಕ್ ಸ್ಫುಟೀಕ್ರಿಯತೇ || ಗುಣಸಂಸರ್ಗಃ || ಸತ್ವಾದಿ ಗುಣಸಂಬಂಧಃ || ದುರ್ಲಭೋ ದುರ್ಗಮ ಇತ್ಯುಕ್ತೇಃ.

"ನಿರ್ಗುಣ" ಇತಿ || ಸರ್ವ ಸಮರ್ಪಣ ಸುಖಾದ್ಯರ್ಥಾನುವಾದೋಯಂ ನಿರ್ಗುಣೋಪಾಸನಾ ಕರ್ತುಃ || ಏಕಾದಶ ತಾತ್ಪರ್ಯೇ ಚ "ನೈರ್ಗುಣ್ಯ ಸಾಧನಂ ಯತ್ತತ್ ನಿರ್ಗುಣಂ ಪರಿಕೀರ್ತಿತಮ್ || ಮೋಕ್ಷಸಾಧನೋಪಾಸ್ತಿಃ ಏವ ಸಾ || ತತ್ಕರ್ತಾ ನಿರ್ಗುಣಃ ಭಾಗವತಃ || "ಅಶ್ರುತ್ವಾಪಿ ಪ್ರಮಾಣಂ ಯಃ ವಾಸುದೇವೈಕ ಸಂಶ್ರಯಃ || ಸ ನಿರ್ಗುಣೋ ಭಾಗವತಃ ಸಮುದ್ದಿಷ್ಟೋ ಮನೀಷಿಭಿಃ" || ಇತಿ ||

"ವಿಷ್ಣುಃ ವಾಯುಂ ಪುರಸ್ಕೃತ್ಯ ಸರ್ವೇಷ್ವೇತೇಷು ಸಂಚರನ್ || ಕರೋತಿ ಚಾರಯೇತ್ಯದ್ಧಾ" ಇತಿ ಶಾಂಡಿಲ್ಯೋಕ್ತ ಜ್ಞಾನಂ-ನಿರ್ಗುಣಮ್ || ·

"ಅನೇನ ಅನುಸಂಧಾನೇನ ತ್ವರಯಾ ಬಿಂಬದರ್ಶನಮ್" ಇತ್ಯತ್ರ

"ಸತ್ವಾತ್ ಗುಣಾತ್ ಜಾತಮಪಿ ವ್ಯವಧಾನಂ ವಿನೈವ ತು ॥ ನಿರ್ಗುಣಂ ನಿರ್ಗುಣಂ ಪ್ರೋಕ್ತಂ ವ್ಯವಧಾನೇನ ಸಾತ್ವಿಕಮ್" ॥ ಇತಿ ಬ್ರಾಹ್ಮೇ ॥

"ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ॥ ಇತಿ ಗೀತಾಯಾಮ್ ॥ ತತ್ತಾತ್ಪರ್ಯೇ ಚ — "ಪ್ರಕೃತ್ಯಾ ಸ್ವಯಮೇವ ಆರಭ್ಯ ವಿಷ್ಣುನಾ ಕ್ರಿಯಮಾಣಾನಿ" ॥ "ನರ್ತೇತ್ವದಿತಿ" ಶ್ರುತೇಃ ಚ ॥ ಸರ್ವಂ ಕರೋತಿ ಪರಮಾತ್ಮಾ ತಥಾಪಿ ನ ಲಿಪ್ಯತೇ ॥ ಜನ್ಮಮೃತ್ಯಾದಿರಹಿತಃ ಸತ್ವಾದಿ ಗುಣ ವರ್ಜಿತಃ ॥ "ವಿಷ್ಣುಃ ತದ್ವಿಪರೀತಃ" ಇತಿ ॥ "ಕಾರ್ಯತೇ ಹ್ಯವಶಃ ಕರ್ಮ" ಇತಿ ಗೀತಾಯಾಮ್ ॥ ಸ್ವಾಭಾವಿಕ ಗುಣಾನೇತಾನ್ ಹೇತುಂ ಕೃತ್ವೈವ ವಿಷ್ಣುನಾ ॥ ಕರ್ಮಸು ಕ್ರಿಯಮಾಣೇಷು ಕರ್ತಾಹ ಮಿತಿ ಮೂಢಧೀಃ ॥ ಮನ್ಯತೇ ತತ್ವವಿತ್ ವಿಷ್ಣೋಃ ಗುಣಾಃ ಇಚ್ಛಾದಯಶ್ಚಯೇ ॥ ಸ್ವಾಭಾವಿಕೇಷು ಜೀವಸ್ಯ ಕಾಮಾದ್ಯೇಷು ಸದೈವತು ॥ ಪ್ರೇರಕತ್ವೇನ ವರ್ತಂತೇ ಸ್ವಾತಂತ್ರ್ಯಂ ಮಮ ನ ಕ್ವಚಿತ್ ॥ ಇತಿ ಮತ್ವಾ ನ ಸಕ್ತಃ ಸ್ಯಾತ್ ಪ್ರೀತೋಸ್ಯ ಭವತಿ ಪ್ರಭುಃ ॥ ಗೀತಾಯಾಂ ಚತುರ್ದಶಾಧ್ಯಾಯೇ ಚ—"ನಾನ್ಯಂ ಗುಣೇಭ್ಯಃ ಕರ್ತಾರಂ", "ಗುಣೇಭ್ಯಶ್ಚ ಪರಂ ವೇತ್ತಿ" ಇತಿ ಚೋಕ್ತಮ್ ॥ ಗುಣ ಸಂಸರ್ಗ ದೋಷೇತ್ಯಸ್ಯ ಮಾನಂ ತತ್ರೈವೋಕ್ತಂ — "ಗುಣಾನೇ ತಾನತೀತ್ಯ ತ್ರೀನ್ ದೇಹೀ ದೇಹ ಸಮುದ್ಭವಾನ್ ॥ ಜನ್ಮಮೃತ್ಯು ಜರಾದುಃಖೈಃ ವಿಮುಕ್ತಃ ಅಮೃತಮಶ್ನುತೇ" ॥ ಇತಿ ॥ ತತ್ತಾತ್ಪರ್ಯೇ ಚ "ಏತೇಭ್ಯಃ ಸತ್ವಾದಿ = ಗುಣೇಭ್ಯಃ ಅನ್ಯಂ ಕರ್ತಾರಂ ಈಶಂ ಯದಾಪಶ್ಯತಿ ತದೈವ ಅಯಂ ನಾಃ ಪುರುಷಃ ॥ ಅನ್ಯಥಾ ಪಶುಸಮಃ ॥ ನ ಕೇವಲಂ ಅನ್ಯತ್ವೇನ ಪಶ್ಯನ್ನಾತಂ ಕರ್ತಾರಂ ತಂ ವಿಷ್ಣುಮ್ ॥ ಕಿಂತು ಗುಣೇಭ್ಯಃ ಉತ್ತಮತ್ವೆ ನ ಚ ॥ ಪ್ರಕೃತಿಃ ನಾಮ ಸಾ ಜ್ಞೇಯಾ ಪ್ರಕರ್ಷೇಣ ಕರೋತಿ ಯಾ ॥ ತಸ್ಯಾಸ್ತು ತ್ರೀಣಿ ರೂಪಾಣಿ ಸತ್ವಂ ನಾಮರಜಸ್ತಮಃ ॥ ಸೃಷ್ಟಿಕಾಲೇ ವಿಭಜ್ಯಂತೇ ಸತ್ವಂ ಶ್ರೀಃ ಸದ್ಗುಣಪ್ರಭಾ ॥ ರಜೋ ರಂಜನಕರ್ತೃತ್ವಾತ್ ಭೂಃಸಾ ಸೃಷ್ಟಿಕರೀಯತಃ ॥ ಜೀವಾನಾಂ ಗ್ಲಪನಾತ್ ದುರ್ಗಾ ತಮ ತತ್ರೈವ ಕೀರ್ತಿತಾ ॥ ಏತಾಭಿಃ ತ್ರಿಸೃಭಿಃ ಜೀವಾಃ ಬದ್ಧಾಃ ಸರ್ವೇ ಅಮುಕ್ತಿಗಾಃ ॥ ಸರ್ವಾನ್ ಬಧ್ನಂತಿ ಸರ್ವಾಶ್ಚ ತಥಾಪಿತು ವಿಶೇಷತಃ ॥ ಶ್ರೀರ್ದೇವ ಬಂಧಿಕಾ ನೃಣಾಂಭೂಃ ದೈತ್ಯಾನಾಮಥಾಪರಾ ॥ ಏತಾಭ್ಯೋನ್ಯಂ ಪರಂ ಚೈವ ವಿಷ್ಣುಂಜ್ಞಾತ್ವಾ ವಿಮುಚ್ಯತೇ ॥

ಸಾಮರ್ಥ್ಯಾತಿಶಯಾತ್ ಆ ಸಾಂ ನ್ಯೈತಾಭ್ಯಃ ವಿದ್ಯತೇ ಪರೈಃ ॥ ಇತಿ ಯಾವತ್ ವಿಜಾನಾತಿ ತಾವತ್ತ್ರಂ ನೃಪಶುಂವಿದುಃ ॥ ತಸ್ಮಾದ್ದಾಭ್ಯೋಽಧಿಕ ಗುಣೋ ವಿಷ್ಣುಃಜ್ಞೇಯಃ ಸದೈವ ಚ ॥ ಇತಿ ಮಹಾವಿಷ್ಣುಪುರಾಣೇ ॥ "ಲಕ್ಷ್ಮ್ಯಾದಿಭಿಃ ಕೃತಃ ಬಂಧಃ ಯೋಽನಾದಿಃ ಪುರುಷಸ್ಯತು ॥ ತಮತ್ಯೇತೀಹ ಯೋ ವಿದ್ವಾನ್ಸ ವಿಜ್ಞೇಯೋ ಗುಣಾತ್ಯಯೀ ॥" ಇತಿ ಪ್ರವೃತ್ತೇ ॥ ತತ್ಕೃತ ಬಂಧಾತ್ಯಯಾತ್ ತದಧಿಕವಿಷ್ಣುಪ್ರಾಪ್ತೇಃಚ ತದತ್ಯಯಿ ಇತ್ಯುಚ್ಯತೇ ॥ ಯಥಾ ದ್ವಾರಪಾಲಮತೀತ್ಯ ರಾಜಾನಂ ಗಚ್ಛತಿ ಇತಿ ॥ "ಪ್ರಕೃತೇಃ ಕ್ರಿಯಮಾಣಾನಿ ಗುಣೈಃ" ಇತಿ ಗೀತಾ ॥ ತದ್ಭಾಷ್ಯೇ ಚ "ವಿದ್ವದವಿದುಷೋಃ ಕರ್ಮಭೇದಮಾಹ–"ಪ್ರಕೃತೇಃ" ಇತಿ ॥ ಪ್ರಕೃತೇಃ ಗುಣೈಃ ಇಂದ್ರಿಯಾಧಿಭಿಃ ನಹಿ ಪ್ರತಿಬಿಂಬಸ್ಯ ಕ್ರಿಯಾ ॥ "ಮಯಿ ಕರ್ಮಾಣಿ ಸನ್ಯಸ್ಯ" ಇತ್ಯತ್ರ ಸನ್ಯಾಸಃ ॥ ಅತಃ ಸರ್ವಾಣಿ ಕರ್ಮಾಣಿ ಮಯ್ಯೇವ ಸನ್ಯಸ್ಯ ಭ್ರಾಂತ್ಯಾ ಜೀವೇ ಅಧ್ಯಾರೋಪಿ ತಾನಿ ಮಯ್ಯೇವ ವಿಸೃಜ್ಯ ಭಗವಾನೇವ ಸರ್ವಾಣಿ ಕರ್ಮಾಣಿ ಕರೋತಿ ॥ ಮತ್ಪೂಜೇತಿ ಚ ॥ ಆತ್ಮಾನಂ ಅಧಿಕೃತ್ಯ ಯತ್ ಚೇತಃ ತದಧ್ಯಾತ್ಮಚೇತಃ ॥ ಸನ್ಯಾಸಸ್ತು "ಭಗವಾನ್ ಕರೋತಿ" ಇತಿ ನಿರ್ಮಮತ್ವಮ್ ॥ ನಾಹಂ ಕರೋಮಿ ಇತಿ । ನಾನ್ಯ ಮಿತ್ಯೇತತ್ಪರಿಣಾಮಿ ಕರ್ತಾರಂ ಗುಣೇಭ್ಯೋಽನ್ಯ ನ್ನೈವ ಪಶ್ಯತಿ ಇತಿ ॥ ಅನ್ಯಥಾ ಕರ್ತಾರಮಿತಿ ಶ್ರುತಿ ವಿರೋಧಃ ॥ ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ ॥" ಇತಿ ॥ ರಸರಂಜನ್ಯಾಂ ಮನೋದೋಷನಿರಸನ ಪ್ರಕರಣೇ ಚ "ಭಾರತೇ ಭುವಿ ವಿಪ್ರಜನ್ಮ ಸುದುರ್ಲಭಂ ಯದಿ ಮನ್ಯಸೇ ಸಾಧನಂ ಕುರು ದೇವ ಪೂರ್ವಮಹಂತು ತೇನ ಕರೋಮ್ಯಲಮ್ ॥" ಇತಿ ॥ "ನಿರ್ಗುಣೋ ಪಾಸ್ತಿಸಂದರ್ಭೇ ಯಥಾಮತಿ ಮಯೋದಿತೇ ॥ ಸಾರಗ್ರಾಹೀ ದೂಷಯೇತ್ ಚೇತ್ ಭೂಷಣಂ ನಾಗ್ರಹೋ ಮಮ ॥"

"ಈಯದಲೆ" = ಕೊಡದಲೇ ॥ **"ದುರ್ಗಮಃ"** * ಓಂ ವಿದ್ಯಾಮ ಶೂರ ನವ್ಯಸಃ ವಸೋಃ ಸ್ಪಾರ್ಹಸ್ಯ ಪುರುಹೂತ ರಾಧಸಃ ॥ ಇಂದ್ರ ಯಥಾ ಹ್ಯಸ್ತಿ ತೇಽಪರೀತಂ ನೃತೋಶ(ಶಿ)ವಃ * ಓಂ ॥ ದುಃಖಸಂಪಾದ್ಯಂ ವಸುಗಮಯತಿ ಪ್ರಾಪಯತಿ ಇತಿ ತಥೋಕ್ತಃ ॥

"ತ್ರೈವಿದ್ಯಸ್ತ್ವಪರೋ ಧರ್ಮಃ ನಾನಾ ದೈವತ ಪೂಜನಮ್ ॥

ತತ್ರಾಪಿ ವಿಷ್ಣುಃ ಜ್ಞಾತವ್ಯಃ ಸರ್ವೇಭ್ಯೋಽಭ್ಯಧಿಕಃ ॥ ಗುಣೈಃ ॥ ತ್ರೈವಿದ್ಯ ಧರ್ಮಾ ಪುರುಷಃ ಸ್ವರ್ಗಂ ಭುಕ್ತ್ವಾ ನಿವರ್ತತೇ ॥ ಪುನಃ ಕುರ್ಯಾತ್ ಪುನಃ ಸ್ವರ್ಗಂ ಯಾತಿ ಯಾವತ್ ಹರೇರ್ವಶೇ ॥ ಸರ್ವಾನ್ ದೇವಾನ್ ಪ್ರವಿಜ್ಞಾಯ ತತ್ಕರ್ಮೈವ ಸದಾ ಭವೇತ್ ॥ ಸಮ್ಯತ್ ತತ್ವಾಪರಿಜ್ಞಾನಾತ್ ಅನ್ಯ ಧರ್ಮಕೃತೇರಪಿ ॥ ಸ್ವರ್ಗಾದಿ ಪ್ರಾರ್ಥನಾಚ್ಚೈವ ರಾಗಾದೇಶ್ಚಾಪರಿಕ್ಷಯಾತ್ ॥ ಸದಾ ವಿಷ್ಣೋರಸ್ಮರಣಾತ್ ತ್ರೈವಿದ್ಯಃ ನಾಪ್ನುಯಾತ್ ಪರಮ್ ॥ ಇತಿ ಗೀತಾತಾತ್ಪರ್ಯೇ ॥ ಅತೋಽವಾ ದುರ್ಗಮಃ ॥ ೧೮ ॥

## ಕನ್ನಡಾರ್ಥ

"ನಿರ್ಗುಣೋಪಾಸಕಗೆ" ಎಂಬ ಪದ್ಯದಲ್ಲಿ ನಿರ್ಗುಣೋಪಾಸನೆಯನ್ನು ಮಾಡಿದವನಿಗೆ "ಗುಣಸಂಸರ್ಗ ದೋಷಗಳೀಯದಲೆ ಅಪವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರ" ಎಂಬುದಾಗಿ ಮಹಾ ಫಲವನ್ನು ಹೇಳಿರುವರು. ಹೀಗೆ ಫಲವನ್ನು ಹೇಳಿರುವ ಈ ಪದ್ಯವು ಶ್ರೀ ವಿಜಯದಾಸರ ಸರ್ವಸಮರ್ಪಣ ಸುಳಾದಿಯ ಅರ್ಥಾನುವಾದ ರೂಪವಾಗಿರುತ್ತದೆ. ಶ್ರೀಮದ್ಭಾಗವತ ಏಕಾದಶ ತಾತ್ಪರ್ಯದಲ್ಲಿ—

"ಕೈವಲ್ಯಂ ಸಾತ್ವಿಕಂ ಜ್ಞಾನಂ ಕರ್ಮನಿಷ್ಠಂತು ರಾಜಸಮ್ ಪ್ರಾಕೃತಂ ತಾಮಸಂ ಜ್ಞಾನಂ ಮನ್ನಿಷ್ಟಂ ನಿರ್ಗುಣಂ ಸ್ಮೃತಮ್" ಎಂಬ ಭಾಗವತ ಶ್ಲೋಕವನ್ನು ವ್ಯಾಖ್ಯಾನಿಸುವಾಗ ಶ್ರೀಮದಾಚಾರ್ಯರು "ನಿರ್ಗುಣ" ಶಬ್ದಕ್ಕೆ ಅರ್ಥವನ್ನು ನಿರೂಪಿಸಿರುತ್ತಾರೆ. ಅದೇ ಅರ್ಥವನ್ನೇ ಇಲ್ಲಿ ಹೇಳಬೇಕು. ಬೇರೆ ವಿಪರೀತವಾದ ಅರ್ಥವನ್ನು ಹೇಳಬಾರದು. "ಜೀವನು ಯಾವದರಿಂದ ಮೋಕ್ಷವನ್ನು (ನೈರ್ಗುಣ್ಯ) ಹೊಂದುವನೋ, ಆ ಜ್ಞಾನವು "ನಿರ್ಗುಣ"ವೆಂದು ಹೇಳಿಸಿಕೊಳ್ಳುತ್ತದೆ. ಋಗ್ವೇದ ಮುಂತಾದ ಶಾಸ್ತ್ರಗಳಲ್ಲಿ ನಿರೂಪಿಸಲಾಗಿರುವ ವಿಜ್ಞಾನವು "ಕೇವಲ ಜ್ಞಾನ"ವೆಂದು ಕರೆಯಲ್ಪಡುತ್ತದೆ. ನಿರ್ಗುಣ ಜ್ಞಾನದಲ್ಲಿ ಕೇವಲ ಜ್ಞಾನಕ್ಕಿಂತಲೂ ವೈಶಿಷ್ಟ್ಯವಿರುತ್ತದೆ. ಅದೃಷ್ಟವಾದ ಭಗವದ್ಗುಣಗಳನ್ನು ತಾನು ಅವಲೋಕಿಸಿದ (ಓದಿದ) ಋಗಾದಿಶಾಸ್ತ್ರಗಳಿಗನುಸಾರವಾಗಿ ಶ್ರೀಹರಿಯಲ್ಲಿ ಇರುವವೆಂದು ನಿಶ್ಚಯಿಸಬೇಕು. ಹೀಗೆ ಶಾಸ್ತ್ರಾನುಗುಣವಾಗಿ ಅದೃಷ್ಟ ಗುಣಗಳ ಅನುಚಿಂತನ ರೂಪವಾದ ಶ್ರೀಹರಿಯ ವಿಷಯಕವಾದ ಭಕ್ತಿಯುಕ್ತವಾದ ಜ್ಞಾನವು "ನಿರ್ಗುಣಜ್ಞಾನ"ವೆನಿಸಿಕೊಳ್ಳುತ್ತದೆ.

ಶಾಸ್ತ್ರದಲ್ಲಿ ಹೇಳಿದುದನ್ನು ತಿಳಿಯುವದು. ಅಂದರೆ ಶಾಸ್ತ್ರಾಧ್ಯಯನದಿಂದ ಬರುವ ಜ್ಞಾನವು ಸಾತ್ವಿಕ ಜ್ಞಾನವೆಂದೂ ಅಧೀತ ಶಾಸ್ತ್ರಗಳಿಗನುಸಾರವಾಗಿ ತಾನು ಕಾಣದ ಗುಣಗಳನ್ನೂ ಸಹ ಶ್ರೀಹರಿಯಲ್ಲಿ ಚಿಂತಿಸುತ್ತ ಭಕ್ತಿಯಿಂದ ಶಾಸ್ತ್ರಾರ್ಥಾನುಸಂಧಾನರೂಪವಾದ ಜ್ಞಾನವು ನಿರ್ಗುಣ ಜ್ಞಾನವೆಂದೂ ಕರೆಯಲ್ಪಡುತ್ತದೆ. ಈ ನಿರ್ಗುಣೋಪಾಸನೆಯನ್ನು ಕೈಕೊಳ್ಳುವ ಅಧಿಕಾರಿಯು ಭಾಗವತನು ವೈದಿಕಶಾಸ್ತ್ರಗಳನ್ನು ಶ್ರವಣಮಾಡದಿದ್ದರೂ ಸಹ ಯಾರು ಸ್ವರೂಪ ಜ್ಞಾನದಿಂದಲೇ ಸ್ವಾಭಾವಿಕ ಜ್ಞಾನದಿಂದಲೇ ವಾಸುದೇವನಲ್ಲಿಯೇ ನಿರತ ರಾಗುತ್ತಾರೋ ಅವರು "ನಿರ್ಗುಣರು ಭಾಗವತರು" ಎಂದು ಜ್ಞಾನಿಗಳಿಂದ ಹೇಳಿಸಿಕೊಳ್ಳುತ್ತಾರೆ.

"ವಿಷ್ಣುವು ವಾಯುದೇವನನ್ನು (ಮುಖ್ಯ ಪ್ರಾಣನನ್ನು) ಮುಂದೆ ಮಾಡಿ (ಅವನ ದ್ವಾರದಿಂದ) ಅವನಲ್ಲಿ ತಾನು ನಿಂತುಕೊಂಡು ಸಕಲ ದೇವತೆ ಗಳಲ್ಲಿ ಚರಾಚರ ಪ್ರಾಣಿ–ಜಡಗಳಲ್ಲಿ–ಅಂತರ್ಯಾಮಿಯಾಗಿ ಸಂಚರಿಸುತ್ತಾನೆ" ಎಂಬುದಾಗಿ ದೃಢನಿಶ್ಚಯರೂಪವಾದ ಜ್ಞಾನವು "ನಿರ್ಗುಣ ಜ್ಞಾನ"ವೆಂದು ಶಾಂಡಿಲ್ಯದಲ್ಲಿ ಹೇಳಲಾಗಿರುತ್ತದೆ.

ಹೀಗೆ ನಿರ್ಗುಣೋಪಾಸನಾ ರೂಪವಾದ ಅನುಸಂಧಾನದಿಂದ ತೀವ್ರವಾಗಿ ಬಿಂಬದರ್ಶನವಾಗುತ್ತದೆ. ಪರೋಕ್ಷ ಅಪರೋಕ್ಷ ಜ್ಞಾನಗಳಾಗಲೀ ಸಾತ್ವಿಕ ಹಾಗೂ ನಿರ್ಗುಣ ಜ್ಞಾನಿಗಳಾಗಲೀ ಒಂದೇ ಸತ್ವಗುಣದಿಂದ ಜನಿಸುವವು. ಅಥವಾ ಅಭಿವ್ಯಕ್ತವಾಗುವವಾದರೂ ಮಧ್ಯದಲ್ಲಿ ಕಾಲಾಂತರಗಳಿಲ್ಲದೇ ನಿರ್ಗುಣ ಹಾಗೂ ಅಪರೋಕ್ಷ ಜ್ಞಾನಗಳು ಮೋಕ್ಷವನ್ನೀಯುವವು. ಪರೋಕ್ಷ ಹಾಗೂ ಸಾತ್ವಿಕ (ಕೇವಲ) ಜ್ಞಾನಗಳು ವ್ಯವಧಾನದಿಂದ ಮಧ್ಯದಲ್ಲಿ ದ್ವಾರಗಳ ಮುಖಾಂತರ ಕಾಲಾಂತರದಿಂದ ಮೋಕ್ಷಸಾಧಕಗಳಾಗಿರುತ್ತವೆ. ಹೀಗೆ ಎರಡ ರಲ್ಲಿಯೂ ಅಂತರವನ್ನು ತಿಳಿಯಬೇಕು.

ಶ್ರೀ ಭಗವದ್ಗೀತೆಯ ೧೩ನೆಯ ಅಧ್ಯಾಯದಲ್ಲಿ "ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ" ಎಂಬ ಶ್ಲೋಕದಿಂದ ಪರಮಾತ್ಮನೇ ಕರ್ತೃ ಎಂದು ನಿರೂಪಿತವಾಗಿರುತ್ತದೆ. ಈ ಗೀತಾಶ್ಲೋಕದ ತಾತ್ಪರ್ಯದಲ್ಲಿ ಶ್ರೀಮದಾನಂದತೀರ್ಥರು ಹೀಗೆ ನಿರೂಪಿಸಿರುತ್ತಾರೆ. ಪೂರ್ವಕರ್ಮ ಮುಂತಾ ದವುಗಳನ್ನು ತಾವು ಸ್ವತಃ ಉದ್ಬೋಧಗೊಳಿಸಿ, ಶ್ರೀ ವಿಷ್ಣುವೇ ಸ್ವತಂತ್ರವಾಗಿ

ಮುಖ್ಯವಾಗಿ ಮಾಡುತ್ತಾನೆ. ಅಂದರೆ ಜೀವರ ಸಕಲ ಪೂರ್ವಕರ್ಮ ಮುಂತಾದವುಗಳನ್ನು ಉದ್ಬೋಧಿಸಿ ಅದರಂತೆ ಅವರವರಿಗೆ ಆಯಾ ಫಲಗಳಿಗೆ ಶ್ರೀ ವಿಷ್ಣುವೇ ಕಾರಣನಾಗಿರುತ್ತಾನೆ. ಆದುದರಿಂದ ಸಕಲ ಕರ್ಮ-ವ್ಯಾಪಾರಗಳಿಗೆ ಪರಮಾತ್ಮನೇ ಮುಖ್ಯ ಕಾರಣಕರ್ತನೆಂದೂ ಆ ಪರಮಾತ್ಮನು ಮಾತ್ರ ಇನ್ನೊಬ್ಬನ (ಸ್ವತಂತ್ರನ) ಅಧೀನನಲ್ಲವೆಂದೂ ತಿಳಿದವನೇ ಜ್ಞಾನಿಯು" ಎಂದು ನಿರೂಪಿಸಿರುತ್ತಾರೆ. ಪರಮಾತ್ಮನು ಸರ್ವವನ್ನೂ ಮಾಡಿದರೂ ಮಾಡಿಸಿದರೂ ಸಹ ಪುಣ್ಯಪಾಪಗಳಿಂದ ಲಿಪ್ತವಾಗುವದಿಲ್ಲ. ಜನನ ಮರಣ ಮುಂತಾದ ದೋಷರಹಿತನೂ ಸತ್ವ ಮುಂತಾದ ಪ್ರಾಕೃತ ಗುಣಸಂಬಂಧವಿಲ್ಲದವನೂ ಶ್ರೀ ವಿಷ್ಣುವು ಆಗಿರುತ್ತಾನೆ. ಕರ್ಮಬದ್ಧನಾದ ಜೀವನು ಹರಿಯಿಂದ ಅತ್ಯಂತ ಭಿನ್ನನಾಗಿರುತ್ತಾನೆ.

ಗೀತೆಯಲ್ಲಿ ೧೩ನೆಯ ಅಧ್ಯಾಯದಲ್ಲಿ "ಕಾರ್ಯತೇಹ್ಯವಶಃ ಕರ್ಮ" ಎಂಬ ಶ್ಲೋಕದಲ್ಲಿಯೂ "ಪ್ರಕೃತೇಃ ಕ್ರಿಯಮಾಣಾನಿ" ಎಂಬ ಶ್ಲೋಕದಲ್ಲಿಯೂ ಇವೇ ಸಂಗತಿಯು ನಿರೂಪಿತವಾಗಿರುತ್ತದೆ. "ಎರಡು ತರಹದ ಕರ್ತೃತ್ವವಿರುತ್ತದೆ. ಒಂದು ವಿಕಾರರೂಪವಾದ ಕರ್ತೃತ್ವ; ಇನ್ನೊಂದು ಸ್ವತಂತ್ರತ್ವ ರೂಪವಾದ ಕರ್ತೃತ್ವ. ವಿಕಾರರೂಪ ಕರ್ತೃತ್ವವು ಪ್ರಕೃತಿಗೇ ಇರುತ್ತದೆ. ಆದರೂ ವಿಕಾರ ಹೊಂದಿಸುವನು ಪರಮಾತ್ಮ; ವಿಕಾರಹೊಂದುವ ಸ್ವಭಾವ ಜಡಪ್ರಕೃತಿಯದಾದರೂ ಹರಿಯ ಅಧೀನವಾಗಿರುತ್ತದೆ. "ಸ್ವತಂತ್ರತ್ವ" ರೂಪವಾದ ಕರ್ತೃತ್ವವು ಶ್ರೀ ವಿಷ್ಣುವಿಗೇ ಇರುತ್ತದೆ. ಹೀಗೆ ಪೈಂಗಿ ಶ್ರುತಿಯಲ್ಲಿ ಹೇಳಲಾಗಿರುತ್ತದೆ. "ಅವಶಃ" "ಅ" ಶಬ್ದಕ್ಕೆ ನಾರಾಯಣನೆಂದು ಅರ್ಥವಾಗುವದರಿಂದ ನಾರಾಯಣನ = ಪರಮಾತ್ಮನ ಅಧೀನದಲ್ಲಿರುವವನಾಗಿಯೇ ಅಂದರೆ ಪರಮಾತ್ಮನ ಪ್ರೇರಣೆಯಿಂದಲೇ ಕರ್ಮವನ್ನು ಮಾಡುತ್ತಾನೆ ಎಂದು ಹೇಳಿರುತ್ತಾರೆ. ಪ್ರಕೃತಿ ಶಬ್ದಕ್ಕೆ ಕೆಲವೆಡೆಗಳಲ್ಲಿ ತ್ರಿಗುಣಾತ್ಮಕವಾದ ಜಡಪ್ರಕೃತಿಯೆಂದೂ ಕೆಲವೆಡೆಗಳಲ್ಲಿ ಪ್ರಕೃಷ್ಟ ಕರ್ತನಾದ ಪರಮಾತ್ಮನೆಂದೂ ಅರ್ಥವಾಗುತ್ತದೆ. ಕೆಲವು ಕಡೆಗಳಲ್ಲಿ ಸ್ವಭಾವವೆಂದೂ ಸಹ ಅರ್ಥವಾಗುತ್ತದೆ. ತ್ರಿವಿಧ ಜೀವರಿಗೆ ತ್ರಿವಿಧ ಸ್ವಭಾವ ಗುಣಗಳಿರುತ್ತವೆ. ತತ್ವಜ್ಞಾನ ವಿಷ್ಣುಭಕ್ತಿ ಮುಂತಾದವುಗಳು ದೇವತೆಗಳಲ್ಲಿರುವ ಸ್ವಭಾವ ಗುಣಗಳು. ದೇವತೆಗಳು ಉತ್ತಮರು. ಮನುಷ್ಯರಲ್ಲಿ ಮಧ್ಯಮರು ಮಧ್ಯಮರೆನಿಸಿ

ಕೊಳ್ಳುವರು. ಮನುಷ್ಯಾಧಮರು ಅಧಮರೆನಿಸಿಕೊಳ್ಳುತ್ತಾರೆ. ಹೀಗೆ ಅವರವರ ಸ್ವಾಭಾವಿಕ ಗುಣಗಳನ್ನು ಕೇವಲ ನಿಮಿತ್ತಮಾಡಿ, ಪ್ರಕೃಷ್ಟಕರ್ತನಾದ ಶ್ರೀ ಹರಿಯು ತನ್ನ ಇಚ್ಛಾ ಮುಂತಾದ ಗುಣಗಳಿಂದ ಮಾಡಿ ಮಾಡಿಸಿರುವ ಕರ್ಮ ಗಳನ್ನೆಲ್ಲ "ನಾನೇ ಸ್ವತಂತ್ರವಾಗಿ ಮಾಡಿರುತ್ತೇನೆ" ಎಂದು ಅಜ್ಞನು ತಿಳಿಯು ತ್ತಾನೆ. ತತ್ವಜ್ಞನು ಮಾತ್ರ ಹೀಗೆ ತಿಳಿಯುವದಿಲ್ಲ. ಶ್ರೀಹರಿಯ ಇಚ್ಛಾ ಮುಂತಾದ ಗುಣಗಳು ಜೀವರ ಕಾಮ ಮುಂತಾದ ಸ್ವಾಭಾವಿಕ ಗುಣಗಳಲ್ಲಿ ಪ್ರೇರಕ ರೂಪದಿಂದ ಯಾವಾಗಲೂ ಇರುತ್ತವೆ. ಸ್ವಾತಂತ್ರ್ಯವು ತನಗೆ ತುಸು ವಾದರೂ ಇಲ್ಲ. ಹೀಗೆ ತಿಳಿದು ಕರ್ಮಗಳ ಫಲ ಹಾಗೂ ಕರ್ತೃತ್ವದಲ್ಲಿ ಅಸಂಗ ವಾಗಿರುತ್ತಾನೆ. ಇಂಥ ತತ್ವಜ್ಞನ ಅಸಂಗ ಕರ್ಮಗಳಿಗೆ ಪ್ರಭುವಾದ ನಾರಾ ಯಣನು ಪ್ರೀತನಾಗುತ್ತಾನೆ" ಎಂದು ಗೀತಾ ತಾತ್ಪರ್ಯದಲ್ಲಿ ಹೇಳಲಾ ಗಿರುತ್ತದೆ.

ಗೀತೆಯ ೧೪ನೆಯ ಅಧ್ಯಾಯದಲ್ಲಿ "ನಾನ್ಯಂ ಗುಣೇಭ್ಯಃ ಕರ್ತಾರಂ" ಎಂದು ಮುಂತಾದ ಮೂರು ಶ್ಲೋಕಗಳಲ್ಲಿ "ಈ ಸತ್ವ ಮುಂತಾದ ಗುಣ ಗಳಿಂದ ಬೇರೆಯಾಗಿರುವ ಕರ್ತೃವಾದ ಈಶ್ವರನೆನಿಸಿದ ಶ್ರೀ ನಾರಾಯಣನನ್ನು ಯಾವಾಗ ತಿಳಿಯುತ್ತಾನೋ-ಕಾಣುತ್ತಾನೋ, ಆವಾಗ ಮಾತ್ರವೇ ಅವನು ಮನುಷ್ಯನೆನಿಸಿಕೊಳ್ಳುತ್ತಾನೆ. ಇಲ್ಲದಿದ್ದರೆ **ನಾರಾಯಣನ ಕರ್ತೃತ್ವವನ್ನು ತಿಳಿಯದಿದ್ದರೆ ಅವನು ಪಶುಸಮಾನನಾಗುತ್ತಾನೆ.** ಪ್ರಕೃತಿ ಗುಣ ಗಳಿಂದ ಭಿನ್ನನೆಂದು ತಿಳಿದ ಮಾತ್ರಕ್ಕಷ್ಟೇ ಅವನು ಪುರುಷನಾಗುವದಿಲ್ಲ. ಈಶ ನಾದವನು ಶ್ರೀವಿಷ್ಣು, ಅವನೇ ಕರ್ತೃ, ಅವನು ಗುಣಗಳಿಂದ ಅತ್ಯಂತ ಉತ್ತಮನು" ಎಂದು ಆ ಪರಮಾತ್ಮನನ್ನು ಅರಿತವನು ಮಾತ್ರ ಮನುಷ್ಯ ನೆನಿಸುತ್ತಾನೆ. ಯಾಕಂದರೆ ಹೀಗೆ ತಿಳಿದವನೇ ಭಗವತ್ಪ್ರಾಪ್ತಿ ರೂಪವಾದ ಮೋಕ್ಷವನ್ನು ಹೊಂದುತ್ತಾನೆ. ಭಗವತ್ಪ್ರಾಪ್ತಿಯೋಗ್ಯನೇ ಮನುಷ್ಯನು. ಯಾವದು ಅತಿಶಯವಾಗಿ ಬಹುವಾಗಿ ಮಾಡುತ್ತದೆಯೋ ಅದಕ್ಕೆ ಪ್ರಕೃತಿ ಯೆನ್ನುತ್ತಾರೆ. ಪ್ರಕೃತಿಯೆಂದು ಹೇಳಿಸಿಕೊಳ್ಳುವ ಶ್ರೀಮಹಾಲಕ್ಷ್ಮಿಗೆ ಸೃಷ್ಟಿ ಕಾಲದಲ್ಲಿ ಮೂರು ರೂಪಗಳಿರುತ್ತವೆ. ಸದ್ಗುಣ ಪ್ರಭಾಗಳಿಂದ ಕೂಡಿರುವದ ರಿಂದ ಶ್ರೀರೂಪವು "ಸತ್ವ"ವೆನಿಸುತ್ತದೆ. ಭೂರೂಪವು ಮೊದಲು ಅವ್ಯಕ್ತ ವಾದುದನ್ನು ವ್ಯಕ್ತಗೊಳಿಸುವ ಸೃಷ್ಟಿಯಿಂದ ರಂಜನಮಾಡುವದರಿಂದ "ರಜ"

ಎಂದು ಹೇಳಲ್ಪಡುತ್ತದೆ. ಪಂಚಭೂತಾವರವಾದ ಪೃಥ್ವಿಯಲ್ಲಿರುವ ಪೃಥ್ವಿಯೆಂಬ ದೇವತೆಯಲ್ಲಿ ಈ ಭೂನಾಮಕ ಲಕ್ಷ್ಮೀರೂಪದ ಆವೇಶವಿರುವದರಿಂದ "ಭೂಮಿ" ಎಂದು ಕರೆಯುತ್ತಾರೆ. ಸಂಸಾರದಲ್ಲಿಟ್ಟು ಗ್ಲಾನಿಪಡಿಸುವದರಿಂದ "ತಮ" ಎಂದು, ಶ್ರೀಮಹಾಲಕ್ಷ್ಮಿಯ "ದುರ್ಗಾ" ರೂಪಕ್ಕೆ ಹೆಸರು ಬಂದಿದೆ. ಈ ಮೂರು ರೂಪಗಳಿಂದ ಅಮುಕ್ತಿಗರು = ಮುಕ್ತರಾಗದವರೆಲ್ಲರೂ ಬಂಧಿಸಲ್ಪಟ್ಟವರೇ ಆಗಿರುತ್ತಾರೆ. ಈ ಮೂರು ರೂಪಗಳು ಎಲ್ಲರನ್ನೂ ಸಾಮಾನ್ಯವಾಗಿ ಬಂಧಿಸುತ್ತಿದ್ದರೂ ಸಹ ಶ್ರೀರೂಪವು ವಿಶೇಷವಾಗಿ ದೇವತೆಗಳಿಗೆ ಬಂಧಕವಾಗಿರುತ್ತದೆ. ಭೂರೂಪವು ಮನುಷ್ಯರಿಗೆ ಬಂಧಕವಾಗಿರುತ್ತದೆ. ದುರ್ಗಾರೂಪವು ದೈತ್ಯರಿಗೆ ಬಂಧಕವಾಗಿರುತ್ತದೆ. ಹೀಗೆ ಶ್ರೀ ಭೂ ದುರ್ಗಾ ದೇವತೆಗಳಾಗಿ ಸರ್ವರನ್ನೂ ಬಂಧಿಸಲು ಸಮರ್ಥರಾದುದರಿಂದ "ಇವುಗಳೇ ಸರ್ವ ಕರ್ತೃಗಳು, ಇವುಗಳ ಹೊರತಾಗಿ ಬೇರೆ ಯಾರೂ ಕರ್ತರಲ್ಲ" ಎಂಬುದಾಗಿ ಜ್ಞಾನವಿರುವವರೆಗೂ ಅವನು ನರಪಶುವೆನಿಸುತ್ತಾನೆ. ಆದುದರಿಂದ ಇವುಗಳಿಗಿಂತಲೂ ಎಂದರೆ ಶ್ರೀಮಹಾಲಕ್ಷ್ಮಿಯಕಿಂತಲೂ ಅತ್ಯಂತ ಅಧಿಕವಾದ ಗುಣವುಳ್ಳವನೂ, ಸರ್ವೋತ್ತಮನೂ, ಭಿನ್ನನೂ ಎಂದು ಪರಮಾತ್ಮನನ್ನು ಯಾವಾಗಲೂ ತಿಳಿಯಬೇಕು" ಎಂದು ಮಹಾವಿಷ್ಣು ಪುರಾಣದಲ್ಲಿ ನಿರೂಪಿತವಾಗಿರುತ್ತದೆ." "ಶ್ರೀ-ಭೂ-ದುರ್ಗಾ" ಎಂಬ ಮಹಾಲಕ್ಷ್ಮಿಯ ರೂಪಗಳಿಂದ ಹಾಕಲ್ಪಟ್ಟ ಸಂಸಾರರೂಪ ಬಂಧವನ್ನು ತಪ್ಪಿಸಿಕೊಂಡವನು "ಗುಣಾತ್ಯಯೀ" ಎಂದು ಹೇಳಿಸಿಕೊಳ್ಳುತ್ತಾನೆ. ಹೀಗೆ ಮಹಾಲಕ್ಷ್ಮೀಕೃತವಾದ ಬಂಧವನ್ನು ತಪ್ಪಿಸಿಕೊಂಡು ದಾಟಿ ಆ ಮಹಾಲಕ್ಷ್ಮಿಗಿಂತಲೂ ಅಧಿಕತಮನಾದ ಭಗವಂತನನ್ನು ಪಡೆದಿರುವದರಿಂದ ಆ ಜ್ಞಾನಿಯು "ಗುಣಾತ್ಯಯೀ" "ಲಕ್ಷ್ಮೀ-ತದ್ಗುಣಾತ್ಯಯೀ" ಎಂದು ಹೇಳಿಸಿಕೊಳ್ಳುತ್ತಾನೆ. "ದ್ವಾರಪಾಲಕನಿಂದ ಮಾಡಲ್ಪಟ್ಟ ಬಂಧವನ್ನು ಅತಿಕ್ರಮಿಸಿ ಮುಂದೆಹೋಗುವವನೇ ದ್ವಾರಪಾಲಕನನ್ನು ಅತಿಕ್ರಮಿಸಿ ರಾಜನ ಹತ್ತಿರ ಹೋಗುತ್ತಾನೆ, ರಾಜನ ಬಳಿಗೆ ಹೋಗುವವನು ದ್ವಾರಪಾಲಕರನ್ನು ಅತಿಕ್ರಮಿಸಿ ಹೋಗುವನು" ಎಂದು ಹೇಗೆ ಹೇಳುತ್ತಾರೋ ಹಾಗೆ ಲಕ್ಷ್ಮೀಕೃತ ಬಂಧನವನ್ನು ದಾಟಿ ಪರಮಾತ್ಮನನ್ನು ಹೊಂದಿದವನು ಲಕ್ಷ್ಮಿಯನ್ನು ಅತಿಕ್ರಮಿಸಿದವನೆಂದು ಹೇಳಿಸಿಕೊಳ್ಳುತ್ತಾನೆ. ಅಂದರೆ ಮಹಾಲಕ್ಷ್ಮಿಯನ್ನು ಹೊಂದಿ ಆಕೆಯ ಅನುಗ್ರಹವನ್ನು ಪಡೆದು ಅದರ ದ್ವಾರದಿಂದ

ಶ್ರೀಹರಿ ಪ್ರಾಪ್ತಿಯನ್ನು ಹೊಂದುತ್ತಾನೆ ಎಂದು ವಿಶಿಷ್ಟ ಭಾವವಿರುತ್ತದೆ. ಲಕ್ಷ್ಮಿ ಪರಮಾತ್ಮರಿಗೆ ನಿತ್ಯಾವಿಯೋಗವಿರುವದರಿಂದ ಲಕ್ಷ್ಮಿಯ ಹತ್ತಿರ ಬಂದು ಆಕೆಯ ಅನುಗ್ರಹದಿಂದ ಭಗವತ್ಪ್ರಾಪ್ತಿಯಾಗುತ್ತದೆ ಎಂದು ಭಗವತ್ಪ್ರಾಪ್ತಿಯ ಕ್ರಮವನ್ನು ತಿಳಿಯಬೇಕು.

"ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ" ಎಂಬ ಗೀತಾ ಶ್ಲೋಕದ ಭಾಷ್ಯದಲ್ಲಿ "ಪ್ರಕೃತೇಃ" ಎಂಬ ಶ್ಲೋಕದಿಂದ ಜ್ಞಾನಿಯ ಹಾಗೂ ಅಜ್ಞಾನಿಯ ಕರ್ಮಗಳಲ್ಲಿರುವ ಭೇದವನ್ನು ತಿಳಿಸುತ್ತಾರೆ. "ಪ್ರಕೃತೇಃ ಗುಣೈಃ" ಎಂಬ ಪದಗಳಿಗೆ "ಪ್ರಕೃತಿಯಗಿಂತಲೂ ಅಮುಖ್ಯಗಳಾದ ಮತ್ತು ಪ್ರಕೃತಿಕಾರ್ಯಗಳಾದ ದೇಹ ಇಂದ್ರಿಯ ಮನೋಬುದ್ಧಿಗಳಿಂದ" ಎಂದು ಅರ್ಥವನ್ನು ನಿರೂಪಿಸಿರುತ್ತಾರೆ. ದೇಹೇಂದ್ರಿಯ ಮನೋಬುದ್ಧಿಗಳಿಂದ ಮಾಡಲ್ಪಡುವ ಕರ್ಮಗಳಿಗೆ ಜೀವನೂ ಕರ್ತನಾಗಿರುವದರಿಂದ "ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ" "ಅಹಂಕಾರದಿಂದ ನಾನೇ ಮಾಡುತ್ತೇನೆ" ಎಂದು ತಿಳಿಯುತ್ತಾನೆ" ಎಂದು ಕರ್ತೃತ್ವ ಜ್ಞಾನಿಯಾದವನನ್ನು ಅಜ್ಞನೆಂದು ಕರೆಯುವದು ಹೇಗೆ ಯುಕ್ತವಾದೀತು? ಎಂಬ ಸಂದೇಹಕ್ಕೆ-"ನಹಿ ಪ್ರತಿಬಿಂಬಸ್ಯ ಕ್ರಿಯಾ" ಎಂಬ ವಾಕ್ಯದಿಂದ ಶ್ರೀಮದಾಚಾರ್ಯರು ಉತ್ತರಿಸಿದ್ದಾರೆ. ಪ್ರತಿಬಿಂಬನೆನಿಸಿದ - ಪರಮಾತ್ಮನ ಅಧೀನವಾದ ಜೀವನು ಯಾವುದಕ್ಕೂ ಸ್ವತಂತ್ರ ಕರ್ತನಾಗುವದಿಲ್ಲ" ಎಂದು ಅಭಿಪ್ರಾಯವನ್ನು ತಿಳಿಸಿ-"ದೇಹೇಂದ್ರಿಯ ಮನಸ್ಸುಗಳಿಂದ ಭಗವದಿಚ್ಛೆಯಿಂದ ಆಗುವ ಕರ್ಮಗಳಿಗೆಲ್ಲ ನಾನು ಸ್ವತಂತ್ರ ಕರ್ತನು" ಎಂದು ಅಜ್ಞಾನಿಯು ತಿಳಿಯುತ್ತಾನೆ. ಜ್ಞಾನಿಯು ಮಾತ್ರ ಹೀಗೆ ತಿಳಿಯದೇ-"ಈಶ್ವರನ ಇಚ್ಛಾ ಮುಂತಾದ ಗುಣಗಳನ್ನು ತನ್ನ ದೇಹೇಂದ್ರಿಯ ಸ್ವಭಾವ ಮನಸ್ಸುಗಳಲ್ಲಿ ಪ್ರೇರಕ ರೂಪದಿಂದ ಇರುವನೆಂದು ತಿಳಿದು ಕರ್ಮಗಳನ್ನು ಆಚರಿಸಿ ಅವುಗಳಿಂದ ಬದ್ಧನಾಗುವದಿಲ್ಲ. ಇದೇ ಜ್ಞಾನಿ - ಅಜ್ಞಾನಿಕೃತ ಕರ್ಮಗಳಲ್ಲಿರುವ ಮಹದಂತರ.

"ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮಚೇತಸಾ" ಎಂಬ ಗೀತಾ ಶ್ಲೋಕದ ಭಾಷ್ಯದಲ್ಲಿಯೂ "ವಿದ್ವದನುಷ್ಠಿತವಾದ ಕರ್ಮವು ಹೀಗೆ (ಹಿಂದೆ ಹೇಳಿದಂತೆ) ಇರುವದರಿಂದ, ಅರ್ಜುನನೇ! "ನಾನೇ ಮಾಡುವವ" ನೆಂದು ಭ್ರಾಂತಿಯಿಂದ ತನ್ನಲ್ಲಿ ಆರೋಪಿಸಿಕೊಳ್ಳುವ ಸಕಲ ಕರ್ಮಗಳನ್ನೂ

"ಪರಮಾತ್ಮನೇ ನನ್ನಲ್ಲಿ ನಿಂತು ಕರ್ಮಗಳನ್ನು ಸ್ವತಂತ್ರವಾಗಿ ಮಾಡುತ್ತಾನೆ" ಎಂದು ಶ್ರೀಕೃಷ್ಣನಲ್ಲಿ (ನನ್ನಲ್ಲಿ) ಸಮರ್ಪಿಸಬೇಕು. ಇದೇ ಕರ್ಮಸನ್ಯಾಸ. ಪರಮಾತ್ಮನಾದ ಶ್ರೀಕೃಷ್ಣನಲ್ಲಿ ಭಕ್ತಿಯಿಂದ ಚೇತಸ್ಸಿಗೆ "ಅಧ್ಯಾತ್ಮಚೇತಸ್ಸ" ಎಂದು ಅರ್ಥ. ಈ ಕರ್ಮಗಳನ್ನು ಭಗವತ್ಪೂಜಾರೂಪಗಳೆಂದು ಹರಿಯಲ್ಲಿ ಸಮರ್ಪಿಸಬೇಕು. **"ನಾನು ಮಾಡುವವನಲ್ಲ" ಎಂದು ಮಮಕಾರವನ್ನು ಬಿಡುವದೇ ನಿರ್ಮಮತ್ವವು. "ಭಗವಂತನು ಮಾಡುತ್ತಾನೆ" ಎಂದು ಭಗವಂತನಲ್ಲಿ ಕರ್ಮಕರ್ತೃತ್ವವನ್ನು ತಿಳಿಯುವದು"** ಕರ್ಮ ಸನ್ಯಾಸ ವೆನಿಸಿಕೊಳ್ಳುತ್ತದೆ ಎಂದು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ.

"ನಾನ್ಯಂ ಗುಣೇಭ್ಯಃ ಕರ್ತಾರಂ" ಎಂಬಲ್ಲಿ ಭಾಷ್ಯದಲ್ಲಿ "ವಿಕಾರ ರೂಪವಾದ ಕರ್ತೃತ್ವ ಪರಾಧೀನವಾದ ಪ್ರಕೃತಿಯ ಗುಣಗಳಿಗೇ ಹೊರತು ಉಳಿದವರಿಗಲ್ಲ." ಸ್ವತಂತ್ರತ್ವರೂಪ ಕರ್ತೃವು ಶ್ರೀಹರಿಗೇ ಎಂದು ಅರ್ಥ ಹೇಳಿರುತ್ತಾರೆ. "ಗುಣಗಳೇ ಸ್ವತಂತ್ರ ಕರ್ತೃಗಳು, ಉಳಿದವುಗಳಲ್ಲ" ಎಂದು ಅರ್ಥ ಹೇಳಿದರೆ "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್?" ಎಂಬ ಶ್ರುತಿಯಲ್ಲಿ ಪ್ರಕೃತಿಯಗುಣ ಭಿನ್ನನಾದ ಈಶನು ಕರ್ತನೆಂದು ಹೇಳುವದರಿಂದ ಶ್ರುತಿವಿರೋಧ ಬರುತ್ತದೆ. ಹಾಗೂ ಮೋಕ್ಷಧರ್ಮದಲ್ಲಿ "ನಾನು (ಜೀವನು) ಸ್ವತಂತ್ರಕರ್ತನಲ್ಲ, ನೀನೂ (ಇನ್ನೊಬ್ಬ ಜೀವನು) ಕರ್ತನಲ್ಲ; ಸರ್ವ ಸ್ವತಂತ್ರನು ನಿಯಾಮಕ ಪ್ರಭುವೇ ಸದಾ ಸರ್ವಕರ್ತನು. ಮಿಕ್ಕವರು ಸ್ವತಂತ್ರರಲ್ಲ" ಎಂದು ಹೇಳಿದುದರಿಂದ ಅದರ ವಿರೋಧವೂ ಬರುತ್ತದೆ" ಎಂದು ಶ್ರೀಭಗವತ್ಪಾದರು ನಿರೂಪಿಸಿರುತ್ತಾರೆ.

ಹೀಗೆ ಪ್ರಕೃತವಾದ ಜೀವನ ಮೋಕ್ಷಸಾಧನವಾದ ನಿರ್ಗುಣೋಪಾಸ್ತಿಯನ್ನು (ಶಾಸ್ತ್ರಾನುಗುಣವಾಗಿ ಅದೃಷ್ಟ ಗುಣಗಳನ್ನು ಭಗವಂತನಲ್ಲಿ ಅನುಚಿಂತಿಸುತ್ತ ಅವನ ಕರ್ತೃತ್ವವನ್ನು ಸರ್ವತ್ರದಲ್ಲಿ ತಿಳಿಯುತ್ತ ಸರ್ವ ಸಮರ್ಪಣರೂಪ ಉಪಾಸನೆಯನ್ನು ಮಾಡುವದು) ಅಭಿಪ್ರಾಯದಲ್ಲಿ ತಂದು ಶ್ರೀವಿಷ್ಣುತೀರ್ಥರು ತಮ್ಮ ಅಧ್ಯಾತ್ಮ ರಸರಂಜನಿಯಲ್ಲಿ – "ಭಾರತ ಭೂಮಿಯಲ್ಲಿ ವಿಪ್ರಜನ್ಮವು ದುರ್ಲಭವೆಂದು ನೀನು ಬಗೆದರೆ ದೇವ ಪೂಜಾತ್ಮಕ ಕರ್ಮಗಳನ್ನು ಆಚರಿಸಿ ಅವುಗಳನ್ನು "ಪರಮಾತ್ಮನೇ ಸ್ವತಂತ್ರವಾಗಿ ಮಾಡಿದ್ದಾನೆ. ನಾನು ಅವನ

ಅಧೀನವಾಗಿ ಅವನಿಂದ ಮಾಡಿಸಿದಂತೆ ಮಾಡಿರುತ್ತೇನೆ" ಎಂದು ಭಗವಂತನಲ್ಲಿ ಸಮರ್ಪಿಸು" ಎಂಬುದಾಗಿ ನಿರೂಪಿಸಿರುತ್ತಾರೆ.

ನಿರ್ಗುಣೋಪಾಸನೆಯ ವಿಷಯವನ್ನು ಹೀಗೆ ಸಂಗ್ರಹಿಸಿ ನಿರೂಪಿಸಿದ್ದೇವೆ. ಸಾರಗ್ರಾಹಿಗಳಾದ ಬುಧರು ದೂಷಿಸಿದರೆ ಅದು ದೂಷಣವೆನಿಸದು ಭೂಷಣವೆನಿಸುತ್ತದೆ, ನನಗೆ ಆಗ್ರಹವಿಲ್ಲ."

"ದುರ್ಗಮಃ"–"ದುಃಖಸಾಧ್ಯವಾದ ದ್ರವ್ಯ ಸಂಪತ್ತುಗಳನ್ನು ಒದಗಿಸಿ ಕೊಡುವವನು" ಎಂದು ಬೃಹತೀ ಮಂತ್ರಾನುಗುಣವಾದ ಅರ್ಥ. ಅಥವಾ ಗೀತಾ ತಾತ್ಪರ್ಯದಲ್ಲಿ – "ಋಗ್ಯಜುಃ ಸಾಮಗಳೆಂಬ ಮೂರು ವೇದಗಳಲ್ಲಿ ಹೇಳಲ್ಪಟ್ಟ ನಾನಾ ದೇವತಾ ಪೂಜನ ರೂಪವಾದ ಇನ್ನೊಂದು (ಅಮುಖ್ಯವಾದ) ಧರ್ಮವಿರುತ್ತದೆ. ಇದರಲ್ಲಿಯೂ ಸಹ "ತನ್ನ ಗುಣಪೂರ್ಣತೆಯಿಂದ ಜೀವ ಜಡಾತ್ಮಕ ಸಕಲ ಪ್ರಪಂಚದಿಂದ ಅತ್ಯಂತ ಉತ್ಕೃಷ್ಟನು" ಎಂದು ನಾರಾಯಣನನ್ನು ತಿಳಿಯಬೇಕು. ವೇದಗಳಲ್ಲಿ ಆಪಾತತಃ (ಮೇಲೆ ಮೇಲೆ) ತೋರುವ ಸ್ವರ್ಗಾದಿಗಳನ್ನುದ್ದೇಶಿಸಿ ಅನ್ಯದೇವತೆಗಳನ್ನು ಭಜಿಸಬೇಕೆಂದು ತಿಳಿದು ಅದರಂತೆಯೇ ಆ ಕರ್ಮಗಳನ್ನಾಚರಿಸಿ ಕೊನೆಯಲ್ಲಿ ನಾರಾಯಣನಲ್ಲಿ ಸಮರ್ಪಿಸುವವನು ತ್ರೈವಿದ್ಯನೆನಿಸಿಕೊಳ್ಳುತ್ತಾನೆ. ಈ ತ್ರೈವಿದ್ಯನು ಹೀಗೆ ಕರ್ಮಾನುಷ್ಠಾನಮಾಡಿ ಅದರಿಂದ ಸ್ವರ್ಗವನ್ನು ಕುರಿತು ಹೋಗುತ್ತಾರೆ(ನೆ) ಪುಣ್ಯಕ್ಷಯವಾದ ನಂತರ ಪುನಃ ಭೂಮಿಗೆ ಇಳಿದು ಪುನಃ ವೇದಗಳಲ್ಲಿ ಆಪಾತತಃ ತೋರುವ ಸಕಾಮ ಕರ್ಮಗಳನ್ನು ಹಿಂದೆ ಹೇಳಿದಂತೆ ಆಚರಿಸಿ ಪುನಃ ಸ್ವರ್ಗವನ್ನು ಸೇರುತ್ತಾನೆ. ಹರಿಯ ವಶದಲ್ಲಿ ಸರ್ವ ದೇವತೆಗಳಿರುವರೆಂದು ತಿಳಿದು ವಿಷ್ಣೂದ್ದೇಶಕವಾದ ಕರ್ಮಗಳನ್ನು ನಿಷ್ಕಾಮವಾಗಿ ಮಾಡುವವರೆಗೂ ಈ ಪುನರಾವೃತ್ತಿಯನ್ನು ಹೊಂದುತ್ತಲೇ ಇರುತ್ತಾನೆ. ಭಗವಂತನ ಸ್ವರೂಪವನ್ನು ಯಥಾರ್ಥವಾಗಿ ತಿಳಿಯದಿರುವದರಿಂದಲೂ, ಅನ್ಯ ಧರ್ಮಗಳನ್ನು ಆಚರಿಸುವದರಿಂದಲೂ ಸ್ವರ್ಗ ಮುಂತಾದವುಗಳನ್ನು ಬೇಡುವದರಿಂದಲೂ ರಾಗದ್ವೇಷಗಳ ನಿಶ್ಶೇಷ ನಾಶವಾಗದ್ದರಿಂದಲೂ ಸರ್ವಕಾರ್ಯಗಳಲ್ಲಿ ಸದಾ ವಿಷ್ಣುವಿನ ಸ್ಮರಣೆಯಾಗದಿರುವದರಿಂದಲೂ (ಮರವು ಆಗುವದರಿಂದ) ತ್ರೈವಿದ್ಯನು ಭಗವಂತನನ್ನು ಹೊಂದುವದಿಲ್ಲ" ಎಂದು ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ. ಆದುದರಿಂದ ತ್ರೈವಿದ್ಯರಿಗೆ ದುರ್ಗಮ (ಹೊಂದಲಶಕ್ಯ

ವಾಗಿರುವದರಿಂದ) ನಾದುದರಿಂದ "ದುರ್ಗಮ" ಎಂದು ಕರೆಯುತ್ತಾರೆ ||೧೮||

**ಅವತರಣಿಕಾ:** ಶ್ರೀಹರಿಯು ತ್ರಿವಿಧರಲ್ಲಿದ್ದು ಕಾರ್ಯಮಾಡಿದರೂ, ಸುಖ ದುಃಖಗಳು ಸಂಬಂಧವಾಗುವದಿಲ್ಲ. ಪರಮ ಪಾವನನೆಂದು ಅನೇಕ ಗುಣೋತ್ಕರ್ಷ ದಿಂದ ಸ್ತೋತ್ರಮಾಡುತ್ತಾರೆ.

**ಮೂಲ:**

**ಮೂವರೊಳಗಿದ್ದರು ಸರಿಯೆ ಸುಖ |**
**ನೋವುಗಳು ಸಂಬಂಧವಾಗವು |**
**ಪಾವನಕೆ ಪಾವನ ಪರಾತ್ಪರಪೂರ್ಣ ಸುಖವನಧಿ ||**
**ಈವನರುಹ ಭವಾಂಡದೊಳು ಸ್ವಕ |**
**ಳೇವರ ತದಾಕಾರಮಾಡಿ ಪ |**
**ರಾವರೇಶ ಚರಾಚರಾತ್ಮಕ ಲೋಕಗಳ ಪೊರೆವ || ೧೯ ||**

**ಪದ್ಯಾರ್ಥ:** ಮೂವರೊಳಗಿದ್ದರು ಸರಿಯೆ = ಶ್ರೀಹರಿಯು ತ್ರಿವಿಧ ರಾದ ಸತ್ವ, ರಾಜಸ, ತಾಮಸ ಗುಣದಲ್ಲಿದ್ದು ಕ್ರಿಯೆ ಅವರ ಸ್ವರೂಪ ಯೋಗ್ಯತೆಯಂತೆ ಮಾಡಿದರೂ, ಸುಖ = ಸಂತೋಷ, ನೋವು = ಕ್ಲೇಶ ದುಃಖಾದಿಗಳ, ಸಂಬಂಧ = ಲೇಪ ಶ್ರೀಹರಿಗೆ ಆಗವು = ಆಗುವದಿಲ್ಲ, ಶ್ರೀ ಹರಿಯು ಎಂಥವನೆಂದರೆ ಪಾವನಕೆ ಪಾವನ–ಪುನಾತೀತಿಪಾವನಃ = ಪವಿತ್ರತೆ ಯಲ್ಲಿ ಅತಿಪವಿತ್ರ, ದೋಷಲೇಶವೂ ಇಲ್ಲ. ಪವಿತ್ರಳಾದ ಗಂಗೆಯನ್ನು ಸಹ ಪವಿತ್ರಮಾಡುವವನು, ಪರಾತ್ಪರ = ಪರ ಉತ್ತಮಳಾದ ಶ್ರೀ ಲಕ್ಷ್ಮೀದೇವಿಯು ರಿಂದಲೂ, ಪರ ಉತ್ತಮನಾದವ, ಪೂರ್ಣ ಸುಖವನಧಿ = ಸಂಪೂರ್ಣ ಸುಖಾದಿ ಅಷ್ಟೈಶ್ವರ್ಯ ಸಮುದ್ರನಾದವ, ಈ ವನರುಹ ಭವಾಂಡದೊಳು = ವನ–ಉದಕದಲ್ಲಿ ಹುಟ್ಟಿದ ಕಮಲ, ಪದ್ಮ, ಭವ = ಬ್ರಹ್ಮ, ಈ ಬ್ರಹ್ಮಾಂಡ ದೊಳಗೆ ಸ್ವಕಳೇವರ ತದಾಕಾರಮಾಡಿ, ತಾನು ಜ್ಞಾನಾನಂದ ಪರಿಪೂರ್ಣ ಸಚ್ಚಿನ್ಮಯಗಾತ್ರನಾದರೂ, ತನ್ಮಯ ಚಿನ್ಮಯ ರೂಪದಿಂದಲೇ, ಬ್ರಹ್ಮಾಂಡದ ಆಕಾರ, ಬ್ರಹ್ಮಾಂಡದಲ್ಲಿರತಕ್ಕ ವಸ್ತುಗಳ ಆಕೃತಿಯಂತೆ ತದ್ರೂಪನಾಗಿ, ಪರಾವರೇಶ = ಪರ ಶ್ರೀ ರಮಾದೇವಿಯರಿಗೂ, ತದವರರಾದ ಬ್ರಹ್ಮಾದಿ ಸಕಲ ಜಗತ್ತಿಗೂ ಈಶಸ್ವಾಮಿಯು, ಚರಾಚರಾತ್ಮಕ = ಜಂಗಮಪ್ರಾಣಿಗಳು ಸ್ಥಾವರ ಪ್ರಾಣಿಗಳ ಕಿಂಬಹುನಾ, ಅಚರ ಜಡವಾದ ಜಗತ್ತು ಲೋಕಗಳು =

ಹದಿನಾಲ್ಕು ಲೋಕಗಳಿಗೆ ಯಾವಾಗಲೂ ಸ್ಥಿತಿ ಇರುವಿಕೆಗೆ ತಾನೇ ಆಶ್ರಯ ನಾಗಿ, ಪೊರೆವನು = ಸಂರಕ್ಷಿಸುವನು.

**ದ್ರೌಪದೀಶಪತಿ ವಿಠಲರು:** ಮೂವರೊಳಿದ್ದರು.

**ಭಾವಸೂಚನ:** ಮೂವರೇತಿ ॥ ಸಂಭೋಗಪ್ರಾಪ್ತಿರಿತಿಚೇನ್ನವೈಶೇಷ್ಯಾದಿ ಇತ್ತ್ಯುಕ್ತೇಃ ॥ ವನಂ ಉದಕಂ ॥೧೯॥

ಈ ಸೂತ್ರ ಸಾರಾಂಶಾರ್ಥವೇನಂದರೇ, ಜೀವಪರೆಯೋಃ ಏಕಶರೀರ ಸ್ಥಿತ್ವೇ ಸದಾನುಭೋಗ ಪ್ರಾಪ್ತಿಃ ನಃ ॥ ಜೀವ ಪರಮಾತ್ಮರು ಒಂದೇ ಶರೀರ ದಲ್ಲಿದ್ದರೂ, ಜೀವನಂತೆ ಪರಮಾತ್ಮನಿಗೆ ಸುಖ ದುಃಖಾದಿ ಭೋಗಗಳು ಇವೆ ಯೆಂತ ಶಂಕಾ ಬಂದರೆ, ಈ ಶಂಕೆಯು, ಸರ್ವಥಾ ಕೂಡುವದಿಲ್ಲ. ಏಕೆಂದರೆ, ಅಲ್ಪಜ್ಞತ್ವ, ಅಸ್ವತಂತ್ರತ್ವ, ಅಲ್ಪ ಶಕ್ತಿತ್ವವು ಜೀವನಲ್ಲಿರುವದು, ಪರಮಾತ್ಮ ನಲ್ಲಿ ಸರ್ವಜ್ಞತ್ವ, ಸರ್ವಶಕ್ತಿತ್ವ, ಸ್ವತಂತ್ರ ಇವೆ ಮೊದಲಾಗಿ ಜೀವನ ಭಿನ್ನ ವಾದ ವಿರುದ್ಧ ಧರ್ಮಗಳು ಇರುವದರಿಂದ ಶ್ರೀಹರಿಯು ವಿಶಿಷ್ಟ ಸಾಮರ್ಥ್ಯ ವಾನನಾದುದರಿಂದ, ಜೀವನಂತೆ ಸುಖ ದುಃಖಾದಿ ಭೋಗಗಳು ಪರಮಾತ್ಮನಿಗೆ ಕೂಡದು-ಕೂಡುವದಿಲ್ಲವೆಂದು ಶ್ರೀ ಸರ್ವಜ್ಞರ ಭಾಷ್ಯ ॥೧೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೂವರೊಳು" ಇತಿ ॥ ಸಾತ್ವಿಕಾದಿಷು ತ್ರಿಷು ॥ "ವನಧಿ" = ಸಮುದ್ರ. "ಚರಾಚರ" = "ಚೇತನಾಚೇತನ." ॥೧೯॥

## ಕನ್ನಡಾರ್ಥ

ಸಾತ್ವಿಕ ಮುಂತಾದ ಮೂರುವಿಧ ಜೀವರಲ್ಲಿ ಇದ್ದರೂ ಸಹ ಪವಿತ್ರ ವಸ್ತುಗಳಿಗೆ ಪವಿತ್ರತೆಯನ್ನು ತಂದುಕೊಡುವ ಪರಮಪವಿತ್ರ ಹಾಗೂ ಸರ್ವೋತ್ತಮನಾದ ಶ್ರೀಹರಿಯು ಪೂರ್ಣ ಸುಖಸಮುದ್ರನಾದುದರಿಂದ ಅವರಲ್ಲಿರುವ ಯಾವ ದೋಷಗಳ ಹಾಗೂ ಪ್ರಾಕೃತಗುಣ ಸಂಬಂಧವನ್ನು ಲೇಪವನ್ನು ಹೊಂದುವದಿಲ್ಲ. ಅವನು ಈ ಬ್ರಹ್ಮಾಂಡದಲ್ಲಿ ಬ್ರಹ್ಮಾಂಡಾಕಾರದ ವಿರಾಡ್ರೂಪವನ್ನು ತಾಳಿ ಜ್ಞಾನಾನಂದಮಯವಾದ ರೂಪಗಳಿಂದ ಚೇತನಾಚೇತನ ಪ್ರಪಂಚವನ್ನು ಪೊರೆಯುವನು.

"ಮೂವರೊಳು = ಮೂರು ವಿಧ ಜೀವರು. "ಸಾತ್ವಿಕ - ರಾಜಸ-

ತಾಮಸರು" "ಇವರಲ್ಲಿ" ಎಂದು ಅರ್ಥ, "ಸುಖವನಧಿ = ಸುಖ ಸಮುದ್ರ. "ಚರಾಚರ" – ಚೇತನಾಚೇತನ. ‖ ೧೯ ‖

**ಅವತರಣಿಕಾ :** ಶ್ರೀಹರಿ ಸರ್ವಾಂತರಾತ್ಮ ಸರ್ವಕರ್ತಾ ಸರ್ವಗುಣಪೂರ್ಣ ನಿರ್ಲೇಪ ಪರಾವರೇಶ, ಸರ್ವಜಗದಂತರ್ನಿಯಾಮಕ ವ್ಯಾಪ್ತ ಈ ಕಾರಣದಿಂದ ಶ್ರೀಹರಿಯೇ ಸ್ವತಂತ್ರ ಕರ್ತನೆಂದು ಚಿಂತಿಸುತ್ತಾ ಜೀವನಿಗೆ ಯಾವ ಸ್ವಾಧೀನ ಕರ್ತೃತ್ವ ಇಲ್ಲನೆಂದು ತಿಳಿದರೆ ಪರಿಪೊಲಿಪ ಒಂದು ಕ್ಷಣವಾದರೂ ಬಿಟ್ಟಗಲನು ಎಂದು ಉಪದೇಶಿಸುತ್ತಾರೆ.

ಮೂಲ :

**ಈ ನಿಮಿತ್ತ ನಿರಂತರ ಸ್ವಾ ।**
**ಧೀನ ಕರ್ತೃತ್ವವನು ಮರೆದೇ ।**
**ನೇನು ಮಾಡುವದೆಲ್ಲ ಹರಿವೊಳಹೊರಗೆ ನೆಲಸಿದ್ದು ‖**
**ತಾನೆ ಮಾಡುವನೆಂದರಿದು ಮ ।**
**ದ್ದಾನೆಯಂದದಿ ಸಂಚರಿಸು ಪವ ।**
**ಮಾನವಂದಿತ ವೊಂದರಕ್ಷಣ ಬಿಟ್ಟಗಲ ನಿನ್ನ ‖ ೨೦ ‖**

**ಪದ್ಯಾರ್ಥ :** ಈ ನಿಮಿತ್ತ = ಹಿಂದೆ ಹೇಳಿದ ಎಲ್ಲ ಕಾರಣಗಳಿಂದ ಹರಿಯೇ ಸರ್ವಕರ್ತಾ, ಸ್ವತಂತ್ರ ಗುಣಪೂರ್ಣ, ನಿರ್ಲೇಪ, ಸರ್ವೋತ್ತಮನೆಂದು ಚೆನ್ನಾಗಿ, ಶ್ರೀಹರಿಯೇ ಸರ್ವಕರ್ತೃನೆಂದು ತಿಳಿದು, ಸ್ವಾಧೀನ ಕರ್ತೃತ್ವವನು ಮರೆದು = ಸ್ವ-ನಿನ್ನ ಆಧೀನ ಕರ್ತೃತ್ವ ಸಹ ಮರೆದು ಅಂದರೆ, ಯಾವ ಕೆಲಸ ಮಾಡಲಿಕ್ಕು ನಾನು ಸ್ವತಂತ್ರನಲ್ಲನೆಂದು ತಿಳಿದು, ಏನೇನು ಮಾಡುವದೆಲ್ಲ ಹರಿವೊಳ ಹೊರಗೆ ನೆಲಸಿದ್ದು = ಎಷ್ಟೆಷ್ಟು ಯಾವ ಯಾವ ಕ್ರಿಯೆಗಳು ನನ್ನಿಂದ ಮಾಡಿಸುತ್ತಾನೋ, ಶ್ರೀಬಿಂಬರೂಪಿ ಹರಿಯು ವೊಳಗೆ = ಅಂತರಂಗದಲ್ಲಿ, ಹೊರಗೆ = ಬಹಿರಂಗದಲ್ಲಿ, ಪವನಾಂತರ್ಯಾಮಿಯಾಗಿ ನೆಲಸಿದ್ದು ಎಲ್ಲ ವಸ್ತುಗಳಲ್ಲಿ-ಎಲ್ಲ ಕ್ರಿಯೆಗಳ ಅಸ್ತಿತ್ವಕ್ಕೆ ಸ್ಥಿರತೆಯಾಗಿ ಇದ್ದು, ತಾನೇ ಮಾಡುವನೆಂದರಿದು =ಶ್ರೀಹರಿಯು ಪರಾಪೇಕ್ಷ =ಪರಪ್ರೇರಣೆ ಇಲ್ಲದೇ ಸ್ವತಂತ್ರನಾಗಿ ತಾನೆ ನಿಂತು ಸಕಲಕ್ರಿಯಾಮಾಡಿ ಮಾಡಿಸುವನೆಂದರಿದು, ಮದ್ದಾನೆಯಂದದಿ ಸಂಚರಿಸು =ನಿರ್ಭಯನಾದ ಹರಿಸ್ಮರಣೆ ಹರಿ ಸರ್ವಕರ್ತಾ ಎಂಬ ಮದ =ಹರ್ಷದಿಂದ ಸೊಕ್ಕಿದ ಆನೆಯಂತೆ ನಿರ್ಭಯನಾಗಿ ಸಂಚರಿಸು, ನಿನಗೆ ಏನು ಅಂಜಿಕೆ

ಇಲ್ಲ. ಪವಮಾನವಂದಿತ = ಸ್ವರೂಪ ದೇಹದಲ್ಲಿಪ್ಪ ಪವಮಾನ ನಾಮಕ ವಾಯುದೇವರಿಂದ ನಮಸ್ಕರಿಸಿಕೊಳ್ಳುವ, ಬಿಂಬನಾದ ಹರಿಯು, ವೊಂದರಕ್ಷಣ ನಿನ್ನ ಬಿಟ್ಟಗಲನು = ಒಂದು ಪರಮ ಸೂಕ್ಷ್ಮಕಾಲಕ್ಕೆ ಕ್ಷಣವೆಂದು ಹೆಸರು, ಅರ್ಧ ಕ್ಷಣವಾದರೂ ನಿನ್ನನ್ನು ಹರಿಯು ಬಿಟ್ಟರನು. ಸದಾಬಿಂಬನಾಗಿ ಸಕಲ ಕ್ರಿಯಾ ಮಾಡುವ ಜ್ಞಾನಮಾತ್ರ ವಾಯ್ವಂತರ್ಗತ ಹರಿ ಕೊಡಬೇಕು.

**ದ್ರೌಪದೀಶಪತಿ ವಿಠಲರು :** ಈ ನಿಮಿತ್ಯ || ಸ್ವಾಧೀನ ಕರ್ತೃತ್ವ ಮರೆದು ಪರಮಾತ್ಮನೇ ಮಾಡಿ ಅಂದರೆ ಈಶ ಕರ್ತೃತ್ವ, ಮಾಡಿಸಿದ ಹಾಗೆ ಮಾಡೋಣ ಜೀವನಿಷ್ಟ ಧರ್ಮ ಪ್ರಚೋದಕ ಪರಮಾತ್ಮ.

**ಭಾವಸೂಚನ :** ಆನಿಮಿತ್ತೇತಿ || ೨೦ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ (ಆ) ನಿಮಿತ್ತ ಇತಿ" || ೨೦ ||

## ಕನ್ನಡಾರ್ಥ

"ಸರ್ವತಂತ್ರ ಸ್ವತಂತ್ರನಾದ ಶ್ರೀಹರಿಯ ಸ್ವತಂತ್ರ ಕರ್ತೃತ್ವಕಾರ ಯಿತ್ರತ್ವವನ್ನು ತಿಳಿದು ತಾನು ಮಾಡುವ ಕರ್ಮಗಳನ್ನೆಲ್ಲ ಅವನ ಅಧೀನವಾಗಿ ಮಾಡಿದ್ದೇನೆಂದು ದೃಢವಾಗಿ ನಿಶ್ಚಯಿಸಿ ಸರ್ವತ್ರ ಹಾಗೆ ಅಚಲ ಭಕ್ತಿಯಿಂದ ಧ್ಯಾನಿಸುತ್ತ ಕರ್ಮಾಚರಣೆಯಲ್ಲಿ ಮಗ್ನನಾದವನನ್ನು ಶ್ರೀಹರಿಯು ಅರಕ್ಷಣ ಬಿಡದೇ ಸಂರಕ್ಷಿಸುವನು. || ೨೦ ||

**ಅವತರಣಿಕಾ :** ಹರಿವಿಸ್ಮರಣೆಯಿಂದ ಬಹಿರ್‌ಕರ್ಮವನ್ನು ಮಾಡಿ ದೇಹ ಬಳಲಿಸ ಬೇಡ, "ಹೃದಯಸ್ಥ ಹರೇಃ ಮೂರ್ತೇಃ ಜೀವೋಯತ್ರಾತಿಬಿಂಬಃ" ಎನ್ನುವಂತೆ ಹೃದ ಯಸ್ಥ ಹರಿಮೂರ್ತಿಯನ್ನು ಭಜಿಸು. ಅನುಸಂಧಾನವಿಲ್ಲದೇ ಹರಿಸ್ಮರಣೆ ಇಲ್ಲದೇ ಪೂಜಾಪ್ರಕರಣ ತಿಳಿಯದೇ ಅಗ್ನ್ಯೋದಕ ಅಭಿಷೇಕ ಶ್ರೀ ತುಲಸಿ-ಪುಷ್ಪ ಫಲಾದಿ ಸಮರ್ಪಿಸಲು ಹರಿವೊಪ್ಪನೆಂದು ಹೇಳುತ್ತಾರೆ.

ಮೂಲ :

**ಹಲವು ಕರ್ಮವ ಮಾಡಿ ದೇಹವ |**
**ಬಳಲಿಸದೆ ದಿನದಿನದಿ ಹೃದಯ ಕ |**
**ಮಲ ಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು ||**

**ತಿಳಿಯದೀ ಪೂಜಾ ಪ್ರಕರಣವ ।**
**ಫಲಸುಪುಷ್ಪಾಗ್ರೋದಕ ಶ್ರೀ ।**
**ತುಳಸಿಗಳನರ್ಪಿಸಲು ವೊಪ್ಪನು ವಾಸುದೇವ ಸದಾ ॥ ೨೧ ॥**

**ಪದ್ಯಾರ್ಥ :** ಹಲವು ಕರ್ಮವಮಾಡಿ ದೇಹವ ಬಳಲಿಸದೆ = "ಬಹಿರ ದಂಗಡಿ ಬಿಡು" ಎಂಬ ಶ್ರೀ ವಿಜಯರಾಯರ ಸುಳಾದಿಯಂತೆ ಹರಿವಿಸ್ಮರಣೆ ರೂಪವಾದ ಅನೇಕ ಕರ್ಮ, ಪೂಜಾದಿಗಳನ್ನು ಮಾಡಿ ದೇಹವನ್ನು ಕಷ್ಟಪಡಿಸ ಬೇಡಪ್ಪಾ, ದಿನದಿನದಿ = ನಿರಂತರದಲ್ಲಿ ಪ್ರತಿಕ್ಷಣಕ್ಕೆ, ಹೃದಯಕಮಲ ಸದನದಿ ವಿರಾಜಿಪ ಹರಿಮೂರ್ತಿಯನೆ ಭಜಿಸು = ಹೃದಯಾಷ್ಟದಳ ಕಮಲದಲ್ಲಿ ಜೀವಾಂತರ್ಯಾಮಿ ಬಿಂಬನಾಗಿರುವ, ಪವನಾಂತರ್ಯಾಮಿ ಬಿಂಬನಾದ ಹರಿ ಮೂರ್ತಿಯನ್ನು ಮಾನಸಪೂಜಾದಿಂದ (ಶ್ರೀ ವಿಜಯದಾಸಾರ್ಯರು ಉಪಾ ಸನಾ ಸುಳಾದಿಲಿ ಪೇಳಿದಂತೆ ಗುರುಗಳಿಂದ ಚೆನ್ನಾಗಿ ತಿಳಿದು) ಬಿಂಬೋ ಪಾಸನೆಮಾಡು. ತಿಳಿಯದೀ ಪೂಜಾಪ್ರಕರಣ = ಹೃತ್ಕಮಲಸ್ಥಬಿಂಬನಾದ ಹರಿಯ ಪೂಜಾ ಮಾಡುವ ಬಗೆ ತಿಳಿಯದೇ ಮತ್ತು ಬಹಿರಂಗದಲ್ಲಿ ಆಹಿತಾದಿ ಪ್ರತಿಮಾರ್ಚನೆ ತತ್ವತ್ ಪದಾರ್ಥಗತ ಹರಿಮೂರ್ತಿಗಳನ್ನು ತಿಳಿಯದೇ, "ಡೊಂಬನಂದದಿ ಡಾಂಭೀಕ ಕರ್ಮದ ಆಡಂಬರ ತೋರುತ್ತ ಬೊಂಬೆಗಳಾ ಅಂಬರ ಹಾಸಿಟ್ಟು, ಕುಂಭದಿ ನೀರೆರದು, ಪೊಂಬಣ್ಣದೊಡವೆಯ ರಂಭಫಲಾ। ಜಾಂಬೂನದಾಂಬರವೆಂಬೋ ಮಂತ್ರದ ಕ। ದಂಬ ನುಡಿದು ನೀ ನಂಬುಗಳಾ॥ ತುಂಬಿಸಿ ಶಂಖದಿ ಸಂಭ್ರಮದಲಿ ಉಗ್ಗಿ । ಬಿಂಬನುಂಡನುತೆಗಿಯೆಂಬುವಿ ಯಲ್ಲೊ ॥೨॥ ವಾಸುದೇವನ ಗುಣೋಪಾಸನೆತಾರಕ, ಹೇಸಿ ಸಂಸಾರವೇ ಮಾರಕವು, ಎಂಬೋ ಪದ (ಶ್ರೀಗುರು ಜಗನ್ನಾಥವಿಠ್ಠಲರು) ಹೀಗೆ ಬಹಿರಂಗ ಪೂಜಾದಲ್ಲಿಯೂ ಪೂಜಾ ಪ್ರಕರಣ ತಿಳಿಯದೇ, ಫಲ - ಸಮೀಚೀನವಾದ ಹೂವು ಅಗ್ರೋದಕದಿ ಅಭಿಷೇಕ, ಶ್ರೀ ತುಲಸೀದಳಗಳನ್ನು ಅರ್ಪಿಸಲು, ಸದಾ ನಿತ್ಯ ವಾಸುದೇವನು, ಒಪ್ಪ = ಒಪ್ಪುವುದಿಲ್ಲ ಸ್ವೀಕರಿಸುವದಿಲ್ಲ.

**ದ್ರೌಪದೀಶಪತಿ ವಿಠಲರು :** ಹೃದಯಾಂತರ್ಗತ ಪರಮಾತ್ಮನ್ನ ಧ್ಯಾನಮಾಡದೇ ಬಹಿಃ ಪೂಜಾಮಾಡಿದರೆವೊಪ್ಪಾ ॥

**ಭಾವಸೂಚನ :** ಹಲವೇತಿ ॥ ವೊಪ್ಪನು = ಅಸಮ್ಮತಿಪಡುವನು. ॥ ೨೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹಲವು" ಇತಿ ॥ "ಬಳಲು" – ಕಷ್ಟ । "ಈ ಪೂಜಾ" – ಅತ್ರ ಸಂಪ್ರದಾಯಕಾರಾಃ ತು ಮನ್ಯಂತೇ ॥ ಏಕಪಾತ್ರೇ ಸಾಲಿಗ್ರಾಮಪುರತಃ ಪ್ರಾಣಂ ಸಂಸ್ಥಾಪ್ಯ ಅಂತರ್ಯಾಮಿಬುದ್ಧ್ಯಾ ಹರಿಮಾರಾಧ್ಯ ಪುನಃ ತನ್ನಿರ್ಮಾಲ್ಯ ಶೇಷೇಣ ಪ್ರಾಣಂ ಪೂಜಯೇತ್ ॥ ಯಥಾಹ ಭಗವಾನ್ ಗಾರುಡೇ – "ಪೂಜಾಕಾಲೇ ದೇವದೇವಸ್ಯ ವಿಷ್ಣೋಃ ವಾಯೋಃ ಪ್ರತೀಕಂ ತ್ವಗ್ರಭಾಗೇ ನಿಧಾಯ ॥ ಅಂತರ್ಗತಂ ತಸ್ಯ ವಾಯೋಃ ಹರಿಂ ಚ ಲಕ್ಷ್ಮೀಪತಿಂ ಪೂಜಯಿತ್ವಾ ಸುಸಮ್ಯಕ್ ॥ ನಿರ್ಮಾಲ್ಯಶೇಷೇಣ ಹರೇಃ ಸಮರ್ಪಯೇತ್ (ಸಮರ್ಚಯೇತ್) ॥ ಪೃಥಕ್ ಸ್ರಗ್‌ಧೂಪವಿಲೇಪನಾದಿ ಪೂಜಾಂ ಪ್ರಕುರ್ವಂತಿ ಚ ಯೇ ವಿಮೂಢಾಃ ॥ ತೇಷಾಂ ದುಃಖಂ ಇಹಲೋಕೇ ಪರತ್ರ" ॥ ಇತಿ ॥ ಅತ್ರ ಕೇಚಿತ್ । ಹರಿಪಾದೋದಕಂ ಪಾದಯೋಃ ಪತತಿ ಇತಿ ಭ್ರಾಂತ್ಯಾ ವೃಂದಾವನಾದೀನಾಂ ಕೇಶರಾದ್ಯ ಮಿಶ್ರಿತಮೇವ ಅಭಿಷೇಚಯಂತಿ ॥ ತತ್ ತುಚ್ಛಮ್ ॥ ಉಕ್ತಮಾನ ಕೋಪಾತ್ ॥ ೨೧ ॥

223

## ಕನ್ನಡಾರ್ಥ

"ಈ ಪೂಜಾ ಪ್ರಕರಣವ" ಎಂದು ದಾಸರಾಯರು ನಿರೂಪಿಸಿರುತ್ತಾರೆ. ಈ ಪೂಜೆಯ ವಿಷಯದಲ್ಲಿ ಸಂಪ್ರದಾಯಕಾರರು ಹೀಗೆ ತಿಳಿಯುತ್ತಾರೆ. ಒಂದು ಪಾತ್ರೆಯಲ್ಲಿ ಸಾಲಿಗ್ರಾಮಗಳ ಮುಂಭಾಗದಲ್ಲಿ ಇನ್ನೊಂದು ಪಾತ್ರೆಯಲ್ಲಿ ಪ್ರಾಣದೇವರನ್ನು ಸ್ಥಾಪಿಸಿ (ಇಟ್ಟು) ಅದರಲ್ಲಿ ಅಂತರ್ಯಾಮಿಯಾಗಿರುವನೆಂಬ ಬುದ್ಧಿಯಿಂದ ಶ್ರೀ ಹರಿಯನ್ನು ಆರಾಧಿಸಿ ಮತ್ತೆ ಸಾಲಗ್ರಾಮಾದಿ ಆ ವಿಷ್ಣುವಿನ ನಿರ್ಮಾಲ್ಯಶೇಷದಿಂದ ಮುಖ್ಯ ಪ್ರಾಣದೇವರನ್ನು ಪೂಜಿಸಬೇಕು. ಗರುಡಪುರಾಣದಲ್ಲಿ ಭಗವಂತನ ವಚನವಿಂತಿರುತ್ತದೆ. "ಪೂಜೆಯ ಕಾಲದಲ್ಲಿ —ದೇವದೇವನಾದ ಶ್ರೀ ವಿಷ್ಣುವಿನ ಮುಂಭಾಗದಲ್ಲಿ ವಾಯುದೇವರ ಪ್ರತಿಮೆಯನ್ನು ಇಟ್ಟು ತದಂತರ್ಗತನಾದ ಶ್ರೀ ಮಹಾಲಕ್ಷ್ಮೀಪತಿ ಹರಿಯನ್ನು ಸರಿಯಾಗಿ ಪೂಜಿಸಿ, ನಂತರ ಹರಿಯ ನಿರ್ಮಾಲ್ಯಶೇಷದಿಂದ ವಾಯುದೇವರನ್ನು ಪೂಜಿಸಬೇಕು. ಹರಿನಿರ್ಮಾಲ್ಯಶೇಷವನ್ನು ವಾಯುದೇವರಿಗೆ ಸಮರ್ಪಿಸಬೇಕು. ಪ್ರತ್ಯೇಕವಾಗಿ ಹರಿಗೆ ಸಮರ್ಪಿತವಾಗದಿರುವ ಬೇರೆ ಪುಷ್ಪ, ಗಂಧ, ಧೂಪ ಮೊದಲಾದವುಗಳಿಂದ ವಾಯುದೇವರನ್ನು ಅರ್ಚಿಸಿದವರು ಅತ್ಯಂತ

ಮೂಢರು. ಅವರಿಗೆ ಇಹಪರಗಳೆರಡರಲ್ಲಿಯೂ ದುಃಖವಾಗುತ್ತದೆ."

ಈ ಪೂಜಾಸಂದರ್ಭದಲ್ಲಿ ಕೆಲವರು ಶ್ರೀ ಹರಿಯ ಪಾದೋದಕವು ಪಾದಗಳಲ್ಲಿ ಬೀಳುವದೆಂಬ ಭ್ರಮದಿಂದ ವೃಂದಾವನ ಮುಂತಾದವುಗಳಿಗೆ ಕೇಶರ ಮುಂತಾದವುಗಳಿಂದ ಸಂಮಿಶ್ರವಾಗದ ನೀರಿನಿಂದಲೇ ಅಭಿಷೇಚನ ಮಾಡುತ್ತಾರೆ. ಆದರೆ ಅದು ಸರಿಯಲ್ಲ. ಯಾಕೆಂದರೆ ಹರಿನಿರ್ಮಾಲ್ಯಶೇಷದಿಂದಲೇ ಪೂಜಿಸಬೇಕು" ಎಂಬ ಪ್ರಮಾಣ ವಿರೋಧ ಬರುತ್ತದೆ ॥ ೨೧॥

**ಅವತರಣಿಕಾ :** ಪಂಚಭೂತಾದಿಗಳಲ್ಲಿ ನಾರಾಯಣಾದಿ ಪಂಚ ಮೂಲರೂಪದಿಂದ ಇದ್ದು ಕಾರ್ಯಮಾಡುವ ರೂಪಗಳನ್ನು ಸ್ಮರಿಸಬೇಕೆಂದು ನಾಮಸ್ಮರಣೆ ಹೇಳುತ್ತಾರೆ.



ಮೂಲ :

**ಧರಣಿ ನಾರಾಯಣನು ಉದಕದಿ ।**
**ತುರಿಯ ನಾಮಕ ಅಗ್ನಿಯೊಳು ಸಂ ।**
**ಕರುಷಣಾಹ್ವಯ ವಾಯುಗನು ಪ್ರದ್ಯುಮ್ನ ಅನಿರುದ್ಧ ॥**
**ಇರುತಿಹನು ಆಕಾಶದೊಳು ಮೂ ।**
**ರೆರಡು ರೂಪವ ಧರಿಸಿ ಭೂತಗ ।**
**ಕರೆಸುವನು ತನ್ನಾಮರೂಪದಿ ಪ್ರಜರ ಸಂತೈಪ ॥ ೨೨ ॥**

**ಪದ್ಯಾರ್ಥ :** ಧರಣಿ = ಪೃಥ್ವಿಯಲ್ಲಿ = ನಾರಾಯಣ, ಉದಕದಿ = ಅಪ್ಪು-ನೀರಿನಲ್ಲಿ, ತುರಿಯ ನಾಮಕ = ವಾಸುದೇವನೆಂಬೋ ನಾಮದಿಂದ, ಅಗ್ನಿಯೊಳು = ತೇಜಸ್ ತತ್ವದಲ್ಲಿ, ಸಂಕರುಷಣಾಹ್ವಯ = ಸಂಕರ್ಷಣನೆಂಬ ಹೆಸರುಳ್ಳ ಹರಿ, ವಾಯುಗನು = ವಾಯುವಿನಲ್ಲಿ = ಪ್ರದ್ಯುಮ್ನರೂಪದಿಂದ ಆಕಾಶದೊಳು = ಅನಿರುದ್ಧನಾಮಕನು ಇರುತಿಹನು, ಈ ಪ್ರಕಾರ, ಮೂರೆರಡು = ೩+೨=೫ ಐದು ರೂಪಗಳನ್ನು ಧರಿಸಿ, ಭೂತಗ = ಪೃಥಿವಿ, ಅಪ್ಪು, ತೇಜ ವಾಯು ಆಕಾಶ ಈ ಪಂಚಭೂತಗಳಲ್ಲಿ ಐದು ರೂಪದಿಂದಿದ್ದು, ತನ್ನಾಮರೂಪದಿ ಕರೆಸುವನು, ಆಯಾ ಪಂಚಭೂತಗಳ ನಾಮ, ತತ್ತದ್ರೂಪ ಆಯಾ ರೂಪನಾಗಿ ಕರೆಸುತ್ತಾ, ಪ್ರಜರ ಸಂತೈಪ = ಸಕಲ ಜೀವಿಗಳ ಸ್ಥೂಲ ದೇಹಗತ ಪಂಚಭೂತಗಳಲ್ಲಿದ್ದು, ತಾನು ರಾಜನಾಗಿ ಬಿಂಬನಾಗಿದ್ದು, ತನ್ನ ಪ್ರಜಾಜನರಾದ ಸಕಲರನ್ನೂ ರಕ್ಷಿಸುವನು,

**ದ್ರೌಪದೀಶಪತಿ ವಿಠಲರು:** ಧರಣಿನಾರಾಯಣ — ೧) ಪೃಥ್ವೀ ನಾರಾಯಣ, ೨) ಉದಕ = ತುರಿಯಾ ಅಂದರೆ ವಾಸುದೇವ, ೩) ತೇಜಾ = ಸಂಕರ್ಷಣ, ೪) ವಾಯು = ಪ್ರದ್ಯುಮ್ನ, ೫) ಆಕಾಶ = ಅನಿರುದ್ಧ, ಇವರು ಮೂಲರೂಪಗಳು ತನ್ನಾಮರೂಪದಿಂದ ಕರೆಸುತ್ತಾರೆ.

**ಭಾವಸೂಚನ:** ಧರಣೀತಿ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಧರಣಿ" ಇತಿ ॥ "ನಾರಾಯಣಂ ವಾಸುದೇವಂ ಧರಾಯಾಂ ಉದಕೇ ಕ್ರಮಾತ್ ॥ ವಾಯ್ವಾಕಾಶಗತೌ ಪ್ರದ್ಯುಮ್ನಾನಿರುದ್ಧೌ ಸ್ಮರ ಪ್ರಭೂ ॥" ಇತಿ ಕರ್ಮದರ್ಪಣೇ ॥ ೨೨ ॥

## ಕನ್ನಡಾರ್ಥ

ಭೂಮಿ ಮುಂತಾದ ಐದು ಭೂತಗಳಲ್ಲಿರುವ ಭಗವನ್ಮೂರ್ತಿಗಳ ಸ್ಮರಣೋಪಾಸನವನ್ನು ತಿಳಿಸುತ್ತಾರೆ "ಧರಣಿ" ಎಂಬ ಪದ್ಯದಿಂದ. "ಭೂಮಿಯಲ್ಲಿ ನಾರಾಯಣ, ಜಲದಲ್ಲಿ ವಾಸುದೇವ, ವಾಯುವಿನಲ್ಲಿ ಪ್ರದ್ಯುಮ್ನ, ಆಕಾಶದಲ್ಲಿ ಅನಿರುದ್ಧ, ಅಗ್ನಿಯಲ್ಲಿ ಸಂಕರ್ಷಣ ಹೀಗೆ ಭಗವದ್ರೂಪಗಳನ್ನು ಸ್ಮರಿಸಬೇಕು" ಎಂದು ಕರ್ಮದರ್ಪಣವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ ॥ ೨೨ ॥

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ಪ್ರಜರ ಸಂತೃಪನು ಪಂಚರೂಪಾತ್ಮಕನೇ ಎಂದು ಹೇಳಿದರು. ಪ್ರಜಾರಕ್ಷಣೆಗೆ ಮೂಲವಾದದ್ದು ವೃಷ್ಟಿ, ವೃಷ್ಟಿಯಿಂದ ಅನ್ನ, ಆ ವೃಷ್ಟಿಯಲ್ಲಿಯೂ ನಾರಾಯಣಾದಿ ೫ ರೂಪದಿಂದ ಇದ್ದು, ಅದೇ ನಾಮದಿಂದ ಕರೆಸುತ್ತಾನೆ. ಅದೇ ನಾಮಸ್ಮರಣೆಮಾಡಲು ಬೇಕೆಂದು ಉಪದೇಶಿಸುತ್ತಾರೆ.

ಮೂಲ :

**ಘನಗತನು ತಾನಾಗಿ ನಾರಾ ।**
**ಯಣನು ತನ್ನಾಮದಲಿ ಕರೆಸುವ(ತ) ।**
**ವನದಗರ್ಭೋದಕದಿ ನೆಲಸಿಹ ವಾಸುದೇವಾಖ್ಯ ॥**
**ಧ್ವನಿಸಿಡಿಲು ಸಂಕರ್ಷಣನು ಮಿಂ ।**
**ಚಿನೊಳು ಶ್ರೀಪ್ರದ್ಯುಮ್ನ ವೃಷ್ಟಿಯ ।**
**ಹನಿಗಳೊಳಗನಿರುದ್ಧನಿಪ್ಪನು ವರುಷನೆಂದೆನಿಸಿ ॥ ೨೩ ॥**

**ಪದ್ಯಾರ್ಥ :** ೧ ಘನಗತನು ತಾನಾಗಿ = ೧ ವೃಷ್ಟಿ-ಮಳೆ ಬರಬೇಕಾದರೆ, ವಾಯುದ್ವಾರಾ ಮೇಘ ಮೋಡದಲ್ಲಿ = ನಾರಾಯಣರೂಪಿ ಹರಿಯು ತಾನೆ ಇರುವನು. ತನ್ನಾಮದಲಿ ಘನ ಎಂಬೋ ನಾಮದಿಂದ, ಕರೆಸಿಕೊಳ್ಳುತ್ತಾನೆ. ೨. ವನದ ಗರ್ಭೋದಕದಿ ನೆಲಸಿಹ ವಾಸುದೇವಾಖ್ಯ = ಪೃಥ್ವಿ ಆಧಾರವಾಗಿರುವ, ನೀರು ಮೇಘದಲ್ಲಿರುವದು, ಈ ನೀರಿನಲ್ಲಿ = ವಾಸುದೇವನು ವನದ ಗರ್ಭೋದಕ ನಾಮದಿಂದ ಇರುವನು. ೩. ಧ್ವನಿಶಿಡಿಲು ಸಂಕರ್ಷಣನು = ವಾಯುತಾಡನೆಯಿಂದ ಪುಟ್ಟುವ, ಅದ್ಭುತ ಮೇಘಧ್ವನಿಯಿಂ ಶಿಡಿಲು ಹುಟ್ಟುತ್ತದೆ, ಇವುಗಳೊಳಗೆ ಸಂಕರ್ಷಣರೂಪಿ ಹರಿಯು ಆಯಾ ನಾಮರೂಪದಿಂದ ಇರುತ್ತಾನೆ. ೪. ಮಿಂಚಿನೊಳು ಪ್ರದ್ಯುಮ್ನ = ಮಿಂಚು ಅಗ್ನಿತತ್ವ ತೇಜಸ್ಸಿನಿಂದ ಪುಟ್ಟುತ್ತದೆ. ಇಲ್ಲಿ ಪ್ರದ್ಯುಮ್ನನಾಮಕನು, ಮಿಂಚು ಎಂಬ ಹೆಸರಿನಿಂದ, ಮಿಂಚು ಥಳಕ್ಕನೆ ಹೊಳೆಯುವ ರೂಪವು ಪ್ರದ್ಯುಮ್ನನಾಮಕ ಹರಿಯದು. ವೃಷ್ಟಿಯ ಹನಿಗಳೊಳು = ಮಳೆಯ ಹನಿಗಳು ಅಪ್ಪುತತ್ವದಿಂದ ಉತ್ಪತ್ತಿಗೆ ಕಾರಣ-ಅನಿರುದ್ಧನು. ಮಳೆಹನಿಗಳಲ್ಲಿ ತದಾಕಾರರೂಪ, ಅದೇ ನಾಮದಿಂದ, ವರುಷನೆಂದೆನಿಸಿ = ಈ ಐದೂ ರೂಪಗಳಿಂದ ಐದು ಕಾರ್ಯ ಮಾಡಿ ಮಾಡಿಸುತ್ತ, ವರ್ಷ = ವರ್ಷೋ(ತ್ರಾಸ್ತೀತಿ ವರ್ಷ = ನೀರಿನ ಸಿಂಚನೆ ಮಳೆಹನಿಯೇ ವರ್ಷನೆಂದೆನಿಸುತ್ತದೆ.

**ದ್ರೌಪದೀಶಪತಿ ವಿಠಲರು :** ಘನಗತನು.

೧. ಮೇಘಾಕಾಶದಲ್ಲಿ, ಅಲ್ಲಿ ನಾರಾಯಣ.

೨. ಗರ್ಭೋದಕ ಪೃಥಿವೀ ಆಧಾರದಲ್ಲಿರುತ್ತದೆ, ಅಲ್ಲಿ ವಾಸುದೇವ.

೩. ಧ್ವನಿ ಶಿಡಲು ವಾಯು ಪಾಶ ತಾಡನದಿಂದ ಹುಟ್ಟುತ್ತದೆ, ಅಲ್ಲಿ ಸಂಕರ್ಷಣ.

೪. ಮಿಂಚು ಅಗ್ನಿಯಿಂದ ಹುಟ್ಟುತ್ತದೆ, ಅಲ್ಲಿ ಪ್ರದ್ಯುಮ್ನ.

೫. ಹನಿಗಳು ಅಪ್ಪು ತತ್ವ, ಅಲ್ಲಿ ಅನಿರುದ್ಧ. ಈ ಐದು ರೂಪ ವ್ಯುತ್ಕ್ರಮದಿಂದ ಇರುತ್ತಾನೆ. ಹೀಗ್ಯಾಕೆಂದರೆ ಪಂಚರೂಪಾತ್ಮಕ ಎಂದರೆ, ವ್ಯುತ್ಕ್ರಮ.

**ನಾರಾಯಣಶಿರ**—ವಾಸುದೇವ ಮಧ್ಯಾಂಗ — ಸಂಕರ್ಷಣ ಪಾದ - ಅನಿರುದ್ಧ ಎಡಭಾಗ-ಬಲಭಾಗ ಪ್ರದ್ಯುಮ್ನ ಒಂದೊಂದು ತತ್ವದಲ್ಲಿ ಅದರದರ

ಗುಣ ಅನುಸರಿಸಿ, ಪುಚ್ಛ ಶಿರಸ್ಸು, ಶಿರಸ್ಸು = ಪುಚ್ಛ, ಲೋಕ ವಿಲಕ್ಷಣ ಪುರುಷ ಕ್ರೀಡಾಮಾಡುತ್ತಾನೆ.

**ಭಾವಸೂಚನ:** ಘನೇತಿ ॥ ವನಜಗರ್ಭ, ಪದ್ಮಗರ್ಭೋಽರವಿಂದಾಕ್ಷ ಇತ್ಯುಕ್ತೇಃ ॥ ೨೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಘನ" ಇತಿ ॥ "ವನದ" – ಉದಕಪ್ರದ । "ವೃಷ್ಟೌ ಪಂಚವಿಧಂ ಸಾಮ ಉಪಾಸೀತ । ಪುರೋವಾತೋ ಹಿಂಕಾರಃ । ಮೇಘಃ ಜಾಯತೇ ಸ ಪ್ರಸ್ತಾವಃ । ಯಃ ವರ್ಷತಿ ಸ ಉದ್ಗೀಥಃ । ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ । ಉದ್ಗೃಣ್ಹಾತಿ ತನ್ನಿಧನಮ್ । ವರ್ಷತಿ ಹಾಸ್ಮೈ ವರ್ಷಯತಿ ಯ ಏತದೇವಂ ವಿದ್ವಾನ್ ವೃಷ್ಟೌ ಪಂಚವಿಧಂ ಸಾಮ ಉಪಾಸ್ತೇ ॥" ಪಂಚರೂಪಂ ತಂ ಯೋ ವಿಷ್ಣುಂ ಪುರೋವಾತಾದಿಷು ಸ್ಥಿತಮ್ ॥ ಉಪಾಸ್ತೇ ವೃಷ್ಟಿರಸ್ಮೈ ಸ್ಯಾತ್ ವರ್ಷಯತಿ ಅಸ್ಯ ಮುಕ್ತಿಗಾನ್ ॥ ಸರ್ವ ಭೋಗಾಶ್ಚ ಭಗವಾನ್ ಪಂಚರೂಪೀ ಜನಾರ್ದನಃ ॥" ಇತಿ ಛಾಂದೋಗ್ಯೇ ॥ ೨೩ ॥

## ಕನ್ನಡಾರ್ಥ

"ಘನಗತನು" ಎಂಬ ಪದ್ಯದಿಂದ ವೃಷ್ಟಿಯಲ್ಲಿ —ವೃಷ್ಟಿಶಬ್ದವಾಚ್ಯನಾಗಿ ಇರುವ ಭಗವಂತನ ಐದು ರೂಪಗಳನ್ನು ನಿರೂಪಿಸುತ್ತಾರೆ. ಛಾಂದೋಗ್ಯೋಪನಿಷತ್ತಿನ ೨ನೆಯ ಅಧ್ಯಾಯದ ಏಳನೆಯ ಮಂತ್ರವೃಷ್ಟಿಯಲ್ಲಿ ಉಪಾಸಿಸಬೇಕಾದ ಪಂಚಭಕ್ತಿಕ ಸಾಮ ಪ್ರತಿಪಾದ್ಯ ಪಂಚರೂಪಗಳನ್ನು ನಿರೂಪಿಸಿರುತ್ತಾರೆ.

"ಪುರೋವಾತದಲ್ಲಿ ಮೇಘ ಬರುವ ಪೂರ್ವದ ವಾಯುವಿನಲ್ಲಿ ಹಿಂಕಾರನಾಮಕ ಪ್ರದ್ಯುಮ್ನನು; ಮಿಲಿತವಾದ ಮೇಘದಲ್ಲಿ ಪ್ರಸ್ತಾವನಾಮಕ ವಾಸುದೇವನು; ವೃಷ್ಟಿ ಎಂಬ ಮಳೆಯ ಧಾರಾಪತನದಲ್ಲಿ ಉದ್ಗೀಥನಾಮಕ ನಾರಾಯಣನು; ವಿದ್ಯುತ್ತು ಗರ್ಜನಗಳಲ್ಲಿ ಪ್ರತಿಹಾರನಾಮಕ ಅನಿರುದ್ಧನು; ವೃಷ್ಟಿಯ ಉಪಸಂಹಾರದಲ್ಲಿ ನಿಧನನಾಮಕ ಸಂಕರ್ಷಣನು; ಹೀಗೆ ಪಂಚಸಾಮವೇದ್ಯವಾದ ಐದು ಭಗವದ್ರೂಪಗಳನ್ನು ತಿಳಿದು ಉಪಾಸಿರುವವನಿಗೆ ಅವನಿಗೆ ವೃಷ್ಟಿಯಲ್ಲಿ ವೃಷ್ಟಿಶಬ್ದವಾಚ್ಯನಾಗಿರುವ ಹರಿಯು ಸಕಲ ಅಭೀಷ್ಟಗಳನ್ನು ಸುರಿಸುವನು" ಎಂದು ಛಾಂದೋಗ್ಯ ಭಾಷ್ಯದಲ್ಲಿ "ಪುರೋವಾತ"

ಮುಂತಾದವುಗಳಲ್ಲಿರುವ ಶ್ರೀ ಹರಿಯ ಪಂಚರೂಪಗಳನ್ನು ಉಪಾಸಿಸುವವನಿಗೆ ಪಂಚರೂಪೀ ಹರಿಯು ಸಕಲಾಭೀಷ್ಟಗಳನ್ನೂ ಇಹದಲ್ಲಿಯೂ ಮೋಕ್ಷದಲ್ಲಿಯೂ ಸಹ ಕೊಡುತ್ತಾನೆ" ಎಂದು ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ ||೨೩||*

**ಅವತರಣಿಕಾ:** ಭಗವನ್ ಮಾಹಾತ್ಮೆ ಇಂತಿರಲಾಗಿ, ಪದೆ ಪದೇ ಉಪದೇಶ ಮಾಡಿದರೂ ತಿಳಿಯದೆ ಸಾಧನ ಬಗೆಗಳನ್ನರಿಯದ ಗೃಹಮೇಧಿಗಳಾದ ಐಶ್ವರ್ಯವಂತರನ್ನು ಮೊದಲುಮಾಡಿ ಸಕಲ ಸಜ್ಜನ ಸರ್ವಪ್ರಾಣಿಗಳನ್ನು ಶಿಕ್ಷಿಸಿ ಎಚ್ಚರಿಸಿ ಭವದಲ್ಲಿ ಬಳಲಬೇಡಿರೆಂದು ಪುನಃ ಪುನಃ ಉಪದೇಶಿಸುತ್ತಾರೆ.

**ಮೂಲ :**

**ಗೃಹಕುಟುಂಬ ಧನಾದಿಗಳ ಸ |**
**ನ್ನಹಗಳುಳ್ಳವರಾಗಿ ವಿಹಿತಾ |**
**ವಿಹಿತ ಧರ್ಮ ಸುಕರ್ಮಗಳ ತಿಳಿಯದಲೆ ನಿತ್ಯದಲಿ ||**
**ಅಹರ ಮೈಥುನ ನಿದ್ರೆಗೊಳಗಾ |**
**ಗಿಹರು ಸರ್ವ ಪ್ರಾಣಿಗಳು ಹೃ |**
**ದ್ಗುಹನಿವಾಸಿಯನರಿಯದಲೆ ಭವದೊಳಗೆ ಬಳಲುವರು**
**||೨೪||**

**ಪದ್ಯಾರ್ಥ :** ಗೃಹ = ಮನೆ ಉತ್ತಮವಾದ ಮೇಲುಪ್ಪರಿಗೆ, ಮನೆ, ಗೃಹಸ್ಥಾಶ್ರಮಿಗೆ ಸುಂದರ ನವಯುವತಿ ಪತ್ನಿ, ಪುತ್ರರು ಆಪ್ತ ಬಾಂಧವರಿಂದ ಕೂಡಿ ದೊಡ್ಡ ಕುಟುಂಬ, ಅದರಲ್ಲಿ ಧನಾದಿಗಳ ಸನ್ನಹಗಳುಳ್ಳವರಾಗಿ = ಧನ = ದ್ರವ್ಯ ಬೆಳ್ಳಿ ಬಂಗಾರ, ಗೋ ಧನ, ಧಾನ್ಯ ಧನ ಮುಂತಾದ ಅನೇಕ ಸಿದ್ಧತೆಗಳಿಂದ ಐಶ್ವರ್ಯವಂತರಾಗಿ ಆ ಐಶ್ವರ್ಯ ಮದದಿಂದ, ವಿಹಿತ = ಇದು ಯೋಗ್ಯ, ತಕ್ಕದ್ದು, ಒಳ್ಳೇದು, ಅವಿಹಿತ = ಇದು ಅಯೋಗ್ಯ, ಕೆಟ್ಟದು, ಧರ್ಮ = ನ್ಯಾಯ, ನೀತಿ, ಸುಕರ್ಮಗಳು = ಇವು ಒಳ್ಳೇ ಕೆಲಸಗಳು ಇವು ಕೆಟ್ಟ ಕೆಲಸಗಳು ಎಂದು ತಿಳಿಯದೇ, ನಿತ್ಯದಲಿ = ಪ್ರತಿದಿನದಲ್ಲಿ, ಸರ್ವ ಪ್ರಾಣಿಗಳು = ಸಕಲ ಪ್ರಾಣಿಗಳೂ, ಇದರಲ್ಲಿ ಪಶ್ವಾದಿಗಳು ಸೇರಿದವು, ಹೀಗೆ ದ್ವಿಪಾದ ಪಶುಗಳಂತೆ, ಆಹಾರ = ನಿಷಿದ್ಧಾ ನಿಷಿದ್ಧ ಪದಾರ್ಥಗಳ ಭಕ್ಷಣ ಪೇಯಾಪೇಯ

* ಈ ವೃಷ್ಟಿಗತ ರೂಪೋಪಾಸನವು ಛಾಂದೋಗ್ಯದಲ್ಲಿ ಇನ್ನೂ ಕೆಲವೆಡೆಗಳಲ್ಲಿ ತುಸು ಬೇರೆ ಬೇರೆಯಾಗಿ ನಿರೂಪಿತವಾಗಿದೆ. ಅವಾಂತರ ಪ್ರಭೇದವನ್ನು ಅವುಗಳನ್ನು **ನೋಡಿ ತಿಳಿಯಬೇಕು.**

ಕುಡಿಯುವದು ಇದು ಇವರ ಆಹಾರ, ಪಶು ವೃತ್ತಿಯಂತೆ ಕಾಲ ದೇಶ ವರಿಯದೇ ನಾಚಿಕೆ ತೊರೆದು, ಮೈಥುನ = ಸ್ವಪರ ಸ್ತ್ರೀಸಂಗದಲ್ಲಿ ನಿರತರು, ಲೋಲುಪರಾಗಿರುವರಲ್ಲದೇ ಪಶುಗಳಿಗೆ ನಿದ್ರೆ ಕಡಿಮೆ ಆದರೂ ಈ ಚತುಷ್ಪಾದ ಪಶುಗಳಿಗಿಂತ ಹೆಚ್ಚಿಗಾಗಿ, ನಿದ್ರೆ = ನಿದ್ದೆ ಸಂತತ ಆಲಸಿಗಳಾಗಿ ಮಲಗಿರುವದೆ ಈ ಮೂರೇ ಇವರಿಗೆ ಪ್ರಾಧಾನ್ಯ. ಇಂಥವರಿಗೆ ಸಜ್ಜನ ಸಹವಾಸವೆಲ್ಲಿ? ಶ್ರವಣಮನನಾದಿಗಳೆಲ್ಲಿ? ಸಾಧನ ಅಪೂರ್ಣರಾದ ಕೆಲ ಪ್ರಾಣಿಗಳು ಶ್ರವಣ ಮನನಾದಿಗಳಾಗಿದ್ದರೂ ಹೃದ್ಗುಹ ನಿವಾಸಿಯನರಿಯದಲೇ = ಹೃದಯಸ್ಥ ಬಿಂಬನಾದ ಹರಿಯನ್ನು ತಿಳಿಯದಲೇ, ಭವದೊಳಗೆ ಬಳಲುವರು = ಸಂಸಾರ ದಲ್ಲಿ ಕ್ಲೇಶಪಡುವರು, ಕಾರಣ ನೀವು ಚೇತರಿಸಿರಿ = ಸಾಧನಮಾಡಿರೆಂದು ಸಜ್ಜನರನ್ನು ಶಿಕ್ಷಿಸಿ ಪುನಃ ಪುನಃ ಉಪದೇಶಮಾಡುವ, ಕರುಣಾಳುಗಳಾದ ದಾಸರ ಅಡಿಗಳಿಗೆ ನಮೋನಮಃ - ಈ ವಿಷಯ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ವಿಶದ ಸಮಂಜಸ ಬರೆದಿದ್ದಾರೆ.

**ದ್ರೌಪದೀಶಪತಿ ವಿಠಲರು :** ಗೃಹ ಕುಟುಂಬ. ಗ್ರಹ ಕುಟುಂಬ ಧನಾದಿಗಳಲ್ಲಿ ಪಂಚಾತ್ಮಕ ಪರಮಾತ್ಮನೇ ಇರುವದರಿಂದ, ಆ ತನ್ನ ತಿಳಿಯದೇ ಭವದೊಳಗೆ ಬಳಲುವರು.

**ಭಾವಸೂಚನ :** ಗೃಹೇತಿ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಗೃಹ" ಇತಿ ॥ "ಸನ್ನುಹ"-ಸಾಮುಗ್ರೀ ॥ ನನು ವೇದವಿಹಿತ ತದ್ವಿರುದ್ಧ ಯೋಃ ಸರ್ವ ವಿದಿತತ್ವಾತ್ ಕಥಂ ವಿಹಿತಾದ್ಯ ಜ್ಞಾನಂ ಸರ್ವೇಷಾಮ್ ॥ ಇತಿಚೇತ್ ನ ॥ ಭಗವತ್ಪ್ರಿಯಂ ವಿಹಿತಮ್ ; ತದಪ್ರಿಯಂ ವಿಹಿತೇತರತ್ ॥ "ಅಂಕಯ ಪ್ರ ವೀತ್ಯ"ಭಿಧಾನಾತ್ "ವಿಃ" - ಹರಿಃ "ತದ್ಧಿತಂ" ಇತಿ ನಿರುಕ್ತಿಃ ಅಸೂಚಿ ॥ ಏಕಾದಶ ತಾತ್ಪರ್ಯೇ ವಿಂಶಾಧ್ಯಾಯೇ—"ಸ್ವತಃ ಸರ್ವಗುಣಾತ್ಮಾ ತು ವಿಷ್ಣುರೇಕಃ ಸನಾತನಃ ॥ ಅನ್ಯತ್ ಸರ್ವಂ ತತ್ಪ್ರಿಯತ್ವಾತ್ ಗುಣಃ ದೋಷಃ ತಥಾಽ ಪ್ರಿಯಮ್ ॥ ಸರ್ವಜ್ಞಾನವತಾಂ ದೃಷ್ಟಿಃ (ಅಜ್ಞಃ ಸನ್ ನಾವಗಚ್ಛತಿ) ಕಾಲ ದೇಶ ವಿಶೇಷೇಷು ಪ್ರೀತಿಭೇದಂ ಅಪೇಕ್ಷ್ಯ ತು ॥ ಅವಿ ಜ್ಞಾತವತಃ ತಸ್ಯ ಮರ್ಯಾದಾ ವೇದತಃ ಕೃತಾ ॥ ಗುಣದೋಷಭಿದಾ ನಾಸ್ತಿ ಭಗವತ್ಪ್ರಿಯಮಂತರಾ ॥ ಗುಣದೋಷದೃಶೇಃ ದೋಷಃ ಹ್ಯನ್ಯತ್ರ ಭಗವತ್ಪ್ರಿ

ಯಾತ್ ॥ ಗುಣಾಯದ್ ದೋಷತಾಂ ಈಯುಃ ದೋಷಾಶ್ಚ ಗುಣತಾಂ ಕ್ವಚಿತ್ ॥ ಅತೋ ನ ದೋಷಃ ದೋಷಃ ಸ್ಯಾತ್ ನ ಗುಣೋಪಿ ಗುಣಃ ಭವೇತ್ ॥ ಭಗವತ್ಪ್ರೀತಿ ವಿಜ್ಞಾನಾತ್ ಗುಣದೋಷಭಿದಾಂ ಯದಿ ॥ ಪಶ್ಯೇತ್ ತತ್ತು ಗುಣಾಯ್ಯೈವ ವಿಪರ್ಯಾಸಂ ನ ಕಾರಯೇತ್ ॥ ಗುಣ–ದೋಷ –ಭಿದಾಂ ಕ್ವಾಪಿ ಸ್ವಾತಂತ್ರ್ಯೇಣ ನಹಿ ಕ್ವಚಿತ್ " ॥ ಇತಿ ಬ್ರಹ್ಮನಯೇ ॥ ೨೪ ॥

## ಕನ್ನಡಾರ್ಥ

"ಸಕಲ ಸಾಮಗ್ರಿಗಳಿಂದ ಸಂಪನ್ನರಾದರೂ ಸಹ ಆಹಾರ ವಿಹಾರಗಳ ಲಾಲಸೆಯಲ್ಲಿಯೇ ಮುಳುಗಿ ವಿಹಿತಾವಿಹಿತಗಳ ವಿವೇಕದಿಂದ ಉರುಳಿ ಸರ್ವ ಪ್ರಾಣಿಗಳು ಪರಮಾತ್ಮ ವಿಷಯಕ ಅಜ್ಞಾನದಿಂದ ಸಂಸಾರದಲ್ಲಿ ಕ್ಲೇಶಪಡುತ್ತಾರೆ" ಎಂದು ದಾಸರಾಯರು ನಿರೂಪಿಸಿರುತ್ತಾರೆ. "ಸರ್ವ ಪ್ರಾಣಿಗಳಿಗೆ ವಿಹಿತಾ ವಿಹಿತ ಪರಿಜ್ಞಾನವು ಇಲ್ಲ" ವೆಂಬ ಮಾತು ಸರಿಯೆನಿಸದು; ಯಾಕೆಂದರೆ ವೇದ ವಿಹಿತವಾದ–ವೇದದಲ್ಲಿ ನಿಷೇಧಿಸಲ್ಪಟ್ಟ ವಿಹಿತಾ ವಿಹಿತಗಳ ಪರಿವೆಯು ಎಲ್ಲರಿಗೂ ಸಾಮಾನ್ಯವಾಗಿ ಇದ್ದೇ ಇರುತ್ತದೆ" ಎಂದು ಚಿಕ್ಕ ಸಂದೇಹವು ಕೆಲವರಿಗೆ ಉದಯಿಸಬಹುದು. ಆದರೆ ಈ ಸಂದೇಹಕ್ಕೆ ಹೀಗೆ ಉತ್ತರಿಸುತ್ತೇವೆ. ಸಾಮಾನ್ಯವಾಗಿ ಎಲ್ಲರಿಗೂ ತಿಳಿದುಬಂದಿರುವ ವಿಹಿತ ಅವಿಹಿತಗಳು ಇಲ್ಲಿ ದಾಸರಾಯರಿಗೆ ಸಂಮತಗಳಲ್ಲ. ದಾಸರಾಯರ ದೃಷ್ಟಿಯಲ್ಲಿರುವ ವಿಹಿತಾ ವಿಹಿತಗಳೇ ಬೇರೆ. ಅವುಗಳನ್ನು ಸಾಮಾನ್ಯವಾಗಿ ಸರ್ವರೂ ತಿಳಿದಿರುವದಿಲ್ಲ. ದಾಸರಾಯರ ಪರಿಭಾಷೆಯಲ್ಲಿರುವ "ವಿಹಿತ" – "ಅವಿಹಿತ" ಶಬ್ದಗಳ ಅರ್ಥವನ್ನು "ವೇದದಲ್ಲಿ ವಿಹಿತ – ಅವಿಹಿತ" ಎಂದು ಮಾಡದೇ ಬೇರೆ ರೀತಿಯಲ್ಲಿ ಹೇಳಬೇಕು.

"ಭಾಗವತ ಏಕಾದಶ ತಾತ್ಪರ್ಯದಲ್ಲಿ ಸ್ಕಂ. ೧೧. ಅ. ೨೦ರಲ್ಲಿ ವಿಹಿತಾ ವಿಹಿತಗಳನ್ನು ಶ್ರೀಮದಾಚಾರ್ಯರು ಬೋಧಿಸಿರುತ್ತಾರೆ. ಅದರ ಸಂದರ್ಭವನ್ನು ಇಲ್ಲಿ ವಿವರಿಸುತ್ತೇವೆ. "ಕಿಂ ವರ್ಣಿತೇನ ಬಹುನಾ ಲಕ್ಷಣಂ ಗುಣ ದೋಷಯೋಃ ॥ ಗುಣದೋಷದೃಶಿಃ ದೋಷಃ ಗುಣಸ್ತೂಭಯ ವರ್ಜನಮ್ ॥" ಎಂಬ ಶ್ಲೋಕದಿಂದ ಹಿಂದಿನ ಅಧ್ಯಾಯದ ಕೊನೆಯಲ್ಲಿ "ಇದು ಗುಣ; ಇದು ದೋಷ" ಎಂದು ಕಾಣುವದು (ಎಣಿಸುವದು) ದೋಷವೆಂದೂ ಹೀಗೆ ಗುಣದೋಷಗಳನ್ನು ಎಣಿಸದಿರುವದು ನೋಡದಿರುವದು ಗುಣವೆಂದೂ

ಹೇಳಲಾಗಿರುತ್ತದೆ. ಈ ಅಧ್ಯಾಯದಲ್ಲಿ ಉದ್ಧವನು ವಿಧಿ ಯಾವುದು ? ನಿಷೇಧ ವಾವುದು ? ಎಂದು ಶಂಕಿಸಿ "ಗುಣದೋಷಗಳ ದರ್ಶನವು ದೋಷವೆನಿಸು ತ್ತಿದ್ದರೆ ವಿಧಿ ನಿಷೇಧರೂಪ ನಿಗಮ (ಶಾಸ್ತ್ರ)ಗಳು ಯಾಕೆ ಹೊರಡಬೇಕು ? ಈ ಶಾಸ್ತ್ರವೇ ಅನಾವಶ್ಯಕ !" ಎಂಬುದಾಗಿ ಆಕ್ಷೇಪಿಸುತ್ತಾನೆ. ಅದಕ್ಕೆ ಶ್ರೀಕೃಷ್ಣನು ಪರಿಹಾರವನ್ನು "ಯೋಗಾಃ ತ್ರಯೋ ಮಯಾಪ್ರೋಕ್ತಾಃ" ಎಂಬುದಾಗಿ ಹೇಳಿರುತ್ತಾನೆ. ಶ್ರೀಕೃಷ್ಣಪರಮಾತ್ಮನ ಅಭಿಪ್ರಾಯವನ್ನು ಶ್ರೀಮದಾ ಚಾರ್ಯರು ವಿಶದಪಡಿಸಿ ಪ್ರಮಾಣಗಳಿಂದ ಸಮರ್ಥಿಸಿರುತ್ತಾರೆ. (ತಾತ್ಪರ್ಯ ದಲ್ಲಿ) "ಸಕಲ ಗುಣಸಂಪೂರ್ಣನು ಸರ್ವ ಸ್ವತಂತ್ರನು ಸನಾತನನು. ಶ್ರೀಹರಿ ಯೊಬ್ಬನೇ ! ಮತ್ತಾರೂ ಅಲ್ಲ. "ವಿಷ್ಣುವಿನಿಂದ ಭಿನ್ನವಾದುದೆಲ್ಲವೂ (ದೇಶ ಕಾಲ ಮುಂತಾದವುಗಳು) ವಿಷ್ಣುವಿಗೆ ಪ್ರಿಯವಾದುದರಿಂದ "ಗುಣ" ವೆನಿಸುತ್ತದೆ. ವಿಷ್ಣುವಿಗೆ ಅಪ್ರಿಯವಾದುದು "ದೋಷ" ವೆನಿಸುತ್ತದೆ. ಹೀಗೆ ಜ್ಞಾನಿಗಳ ದೃಷ್ಟಿ ಇರುತ್ತದೆ. ಅಂದರೆ ಜ್ಞಾನಿಗಳು ಹೀಗೆ ಗುಣಗಳನ್ನು ತಿಳಿಯುತ್ತಾರೆ ಎಂದು ತಾತ್ಪರ್ಯ, ಆದರೆ ಅಜ್ಞಾನಾದ ಮನುಷ್ಯನು ಹೀಗೆ ತಿಳಿಯುವದಿಲ್ಲ. ಅಜ್ಞಾನಿಗಳಿಗೋಸ್ಕರ ವಿಶಿಷ್ಟ (ಅಮುಕ) ಕಾಲ ದೇಶಗಳಲ್ಲಿ ಇರುವ ವಿಷ್ಣುವಿನ ಪ್ರೀತಿ ಅಪ್ರೀತಿಗಳನ್ನು ಕಂಡು ವೇದವಿಹಿತವಾದುದು ಗುಣ, ವೇದ ನಿಷಿದ್ಧವಾದುದು ದೋಷ" ಎಂದು (ವೇದಗಳಿಂದ) ವ್ಯವಸ್ಥೆಯು-ನಿಯಮವು ಮಾಡಲ್ಪಟ್ಟಿರುತ್ತದೆ. ಅಜ್ಞಾನಿಯು ಜ್ಞಾನಿಯಂತೆ ಹರಿಪ್ರಿಯತ್ವ ಅಪ್ರಿಯತ್ವಗಳನ್ನು ತಿಳಿಯಲು ಅಶಕ್ತನಾದುದರಿಂದ ಶಾಸ್ತ್ರಗಳಿಂದಲೇ ಅವನು "ಶಾಸ್ತ್ರವಿಹಿತವಾದುದು ಗುಣ, ನಿಷಿದ್ಧವಾದುದು ದೋಷ" ಎಂದು ಸಾಮಾನ್ಯ ವಾಗಿ ತಿಳಿಯಬೇಕಾಗುತ್ತದೆ. ಆದರೆ ಹರಿಪ್ರೀತಿಯೇ ಗುಣ, ಅಪ್ರೀತಿಯೇ ದೋಷ, ಹರಿಯ ಪ್ರೀತಿ ಅಪ್ರೀತಿಗಳನ್ನು ಬಿಟ್ಟು ಗುಣದೋಷಗಳ ಸ್ವರೂಪ ಗಳಿರುವದಿಲ್ಲ, ಜ್ಞಾನಿಗಳು ಹಾಗೆ ತಿಳಿಯುವದಿಲ್ಲ. ಹರಿಪ್ರೀತಿಯಾಗುವದು ಆಗದಿರುವದು ಇವುಗಳನ್ನು ಗುಣ ಹಾಗೂ ದೋಷಗಳೆಂದು ಕ್ರಮವಾಗಿ ತಿಳಿಯದೇ-"ವೇದವಿಹಿತವು ಗುಣ-ನಿಷಿದ್ಧವಾದುದು ದೋಷ ಎಂದು ತಿಳಿಯು ವದು ದೋಷವೆನಿಸುತ್ತದೆ. ಯಾಕೆಂದರೆ ಸತ್ಯ ವಚನ ಮುಂತಾದವುಗಳು ವೇದ ವಿಹಿತಗಳಾಗಿದ್ದರೂ "ಗುಣಗಳೆನಿಸಿದ್ದರೂ ಸಹ" ಒಮ್ಮೊಮ್ಮೆ ದೋಷ ಗಳಾಗುತ್ತವೆ. (ಭಗವತ್ಪ್ರಿಯತ್ವವಿರದಾಗ) ವೇದ ನಿಷಿದ್ಧಗಳಾದ ದೋಷಗಳು

(ವೃತ್ರಹನನ ಮುಂತಾದವುಗಳು) ಒಮ್ಮೊಮ್ಮೆ ಗುಣಗಳಾಗುತ್ತವೆ. (ಹರಿಪ್ರಿಯತ್ವವಿರುವಾಗ) ಆದುದರಿಂದ ವೇದನಿಷಿದ್ಧರೂಪವಾದ ದೋಷವು ನಿಜವಾದ ದೋಷಸ್ವರೂಪವೆನಿಸುವದಿಲ್ಲ. ವೇದ ವಿಹಿತವಾದುದು ನಿಜವಾದ ಗುಣಸ್ವರೂಪವೆನಿಸುವದಿಲ್ಲ. ಹರಿಪ್ರೀತಿ ಹರಿಯ ಅಪ್ರೀತಿಗಳನ್ನು ಅನುಸರಿಸಿ ಗುಣದೋಷಗಳನ್ನು ವಿವೇಚಿಸಿ ವಿಂಗಡವಾಗಿ ತಿಳಿಯುವದು ಶುಭಕರವಾಗಿರುತ್ತದೆ. ಭಗವಂತನಿಗೆ ಪ್ರಿಯವಾಗದಿರುವುದನ್ನು ಗುಣವೆಂದೂ ಹರಿಗೆ ಪ್ರಿಯವಾದುದನ್ನು ದೋಷವೆಂದೂ ವಿಪರೀತವಾಗಿ ವ್ಯತ್ಯಾಸಮಾಡಬಾರದು – ತಿಳಿಯಕೂಡದು. ಯಾಕೆಂದರೆ ಹರಿಪ್ರಿಯವಾಗುವದು ಪ್ರಿಯವಾಗದಿರುವದನ್ನು ಬಿಟ್ಟು, ಬೇರೆ ರೀತಿಯಲ್ಲಿ "ವೇದವಿಹಿತವೇ ಗುಣ, ನಿಷಿದ್ಧವು ದೋಷ" ಎಂದು ಮುಂತಾಗಿ ಹೇಳಿದ ರೀತಿಯಲ್ಲಿ ಗುಣ ದೋಷಗಳ ಪ್ರಭೇದವಿರುವದಿಲ್ಲ" ಎಂದು ಬ್ರಹ್ಮನಯವೆಂಬ ಪ್ರಮಾಣ ಗ್ರಂಥದಲ್ಲಿ ಹೇಳಲಾಗಿರುತ್ತದೆ."

ಹೀಗೆ ಹರಿಪ್ರಿಯತೆ ಅಪ್ರಿಯತೆಗಳು–ಗುಣದೋಷಗಳು ಇವುಗಳ ವಿವೇಕವನ್ನು ಮಾಡುವದು ಶುಭಕರ. ಇದರಲ್ಲಿ ಅಧಿಕಾರವು ಉತ್ತಮಜ್ಞಾನಿಗೆ ಇರುವದರಿಂದ "ವೇದೋಕ್ತವೇ ಗುಣ, ನಿಷಿದ್ಧವೇ ದೋಷ" ಎಂಬುದಾದ ರೀತಿಯಲ್ಲಿ ಗುಣದೋಷಗಳನ್ನು ಉತ್ತಮಜ್ಞಾನಿಯು ಪರಿಗಣಿಸಕೂಡದು. ಅಜ್ಞರಿಗೆ ಹೀಗೆ ನಿಶ್ಚಯಿಸಲು ಶಕ್ತಿ ಇರದಿದ್ದರಿಂದ ಅವರು ವೇದದಲ್ಲಿ ಹೇಳಿದ ವ್ಯವಸ್ಥೆಯಂತೆ ಗುಣದೋಷಗಳನ್ನು ವಿವೇಚಿಸಬೇಕು. ಶ್ರೀಕೃಷ್ಣನು ನಿಷೇಧಿಸಿದ ಗುಣದೋಷ ವರ್ಜನವು ಅಧಿಕಾರಿ ಪ್ರಭೇದಗಳಿಂದ ಅನ್ವಯಿಸುವದರಿಂದ "ಉತ್ತಮಜ್ಞಾನಿಗೆ ಹೇಳಿದುದನ್ನು ನೀನು ತಿಳಿಯದೇ ಸಂದೇಹದಿಂದ ಆಕ್ಷೇಪಿಸಿರುತ್ತೀ! ಅದಕ್ಕೆ ಇದು ಉತ್ತರ" ಎಂದು ವಿಶದ ಅಭಿಪ್ರಾಯದಿಂದ ಶ್ರೀಕೃಷ್ಣನು "ಯೋಗಾಃ ತ್ರಯಃ ಮಯಾ ಪ್ರೋಕ್ತಾಃ" ಎಂಬುದಾಗಿ ಉದ್ಧವನಿಗೆ ಉಪದೇಶಿಸಿರುತ್ತಾನೆ.

ಪ್ರಕೃತ ಸರ್ವರಿಗೂ ಇಂಥ ಹರಿಪ್ರಿಯರೂಪವಾದ ವಿಹಿತಗಳು. ಹರಿಗೆ ಅಪ್ರಿಯವಾದ ನಿಷೇಧಗಳು, ಪ್ರಾಯಃ ತಿಳಿದುಬರುವದಿಲ್ಲವಾದುದರಿಂದ ಶ್ರೀದಾಸರಾಯರು ಶ್ರೀಕೃಷ್ಣೋಕ್ತವಾದ ವಿಹಿತಾವಿಹಿತಗಳನ್ನು ಅನುವದಿಸುತ್ತ "ವಿಹಿತ ಧರ್ಮ ಸುಕರ್ಮ" ನಿತ್ಯದಲ್ಲಿ ಎಂದು ಹೇಳಿದ್ದು ಅತ್ಯಂತ ಸಂಗತವೆಂದು ತಿಳಿಯಬೇಕು. ॥ ೨೪ ॥

**ಅವತರಣಿಕಾ :** ಹಂಸಾದಿ ೧೮ರೂಪಗಳಲ್ಲಿ ವಾಯ್ವಂತರ್ಗತ ಗೋಜ, ಅದ್ರಿಜ ವೆಂಬ ನಾಮಕ ಹರಿಯು ಎಲ್ಲಿರುವನು, ಆತನ ನಾಮಸ್ಮರಣೆ ಹೇಗೆ ಮಾಡುವದೆಂಬು ದನ್ನು ವಿಸ್ತರಿಸುತ್ತಾರೆ.

**ಮೂಲ :**

**ಜಡಜ ಸಂಭವ ಖಗಫಣಿಪ ಕೆಂ ।**
**ಜೆಡೆಯರಿಂದೊಡಗೂಡಿ ರಾಜಿಸು ।**
**ತಡವಿಯೊಳಗಿಪ್ಪನು ಸದಾ ಗೋಜಾದ್ರಿಜನುಯೆನಿಸಿ ॥**
**ಉಡುಪನಿಂದಭಿವೃದ್ಧಿಗಳ ತಾ ।**
**ಕೊಡುತ ಪಕ್ಷಿ ಮೃಗಾಹಿಗಳ ಕಾ ।**
**ರೊಡಲ ಕಾವನು ತತ್ತದಾಹ್ವಯನಾಗಿ ಜೀವರನಾ ॥ ೨೫ ॥**

**ಪದ್ಯಾರ್ಥ :** ಜಡಜ = ಉದಕದಲ್ಲಿ ಪುಟ್ಟಿದ ಕಮಲ, ಕಮಲಸಂಭವ = ಬ್ರಹ್ಮ, ಖಗಪ = ಪಕ್ಷಿಗಳಿಗೆ ಶ್ರೇಷ್ಠ ಗರುಡ, ಫಣಿಪ = ನಾಗಶ್ರೇಷ್ಠನಾದ ಶೇಷ, ಕೆಂಜೆಡೆ =ರುದ್ರನೇ ಮೊದಲಾದವರಿಂದ, ರಾಜಿಸುತ =ಶೋಭಿಸುತ್ತಾ, ಸದಾ = ನಿತ್ಯದಲ್ಲಿ, ಅಡವಿಯಲ್ಲಿಪ್ಪನು = ಅರಣ್ಯದಲ್ಲಿ ಇರುವನು, ಯಾವ ನಾಮದಿಂದ ಎಂದರೆ, ಗೋಜ = ಪೃಥ್ವಿಯಲ್ಲಿ ಪುಟ್ಟಿದ ಪ್ರಾಣಿಗಳ ರಕ್ಷಣ ಕರ್ತಾ, ಅದ್ರಿಜ = ಪರ್ವತಗಳಲ್ಲಿ ಹುಟ್ಟಿದ ಪ್ರಾಣಿಗಳ ರಕ್ಷಣಕರ್ತಾ ತಾನು ಈ ಎರಡು ರೂಪನಾಮದಿಂದ ಇದ್ದು, ಉಡುಪ =ನಕ್ಷತ್ರಗಳಿಗೆ ಪತಿ =ಚಂದ್ರನ ಕಿರಣದಲ್ಲಿ ತಾನಿಂತು, ಗೋಕಿರಣಗಳಲ್ಲಿರುವ ರೂಪಕ್ಕೆ ಗೋಜನೆಂತಲೂ, ಚಂದ್ರಕಿರಣ ದ್ವಾರಾ ಪ್ರಾಣಿಗಳಿಗೆ ಅಭಿವೃದ್ಧಿ ಕೊಡುವ = ಹೆಚ್ಚಿಗೆ ಕೊಡುತ್ತ ಬೆಳಸುತ್ತ, ಪಕ್ಷಿ= ಹಕ್ಕಿಗಳು, ಮೃಗ = ಸಿಂಹ, ಹುಲಿ, ಕರಡಿ ಮೃಗಗಳು, ಅಹಿಗಳ = ಸರ್ಪಗಳನ್ನು, ಕಾರೊಡಲ = ಕಾರ + ಒಡಲ ಕಪ್ಪುಬಣ್ಣದ ಶ್ರೀ ಕೃಷ್ಣನು, ತತ್ತದಾಹ್ವಯನಾಗಿ ಜೀವರನಾ = ತತ್ತನ್ನಾಮಗಳನ್ನು ಧರಿಸಿ ಜೀವರನ್ನು, ಕಾವನು = ರಕ್ಷಿಸುವನು, ಅಡವಿಯಲ್ಲಿ = ಗೋಜ ಪರ್ವತದಿ ಅದ್ರಿಜ ಎಂಬ ನಾಮದ ಹರಿಯನ್ನು ಸ್ಮರಿಸಬೇಕೆಂಬ ಭಾವ.

**ದ್ರೌಪದೀಶಪತಿ ವಿಠಲರು :** ಜಡಜ ಸಂಭವ ॥ ಅಡವಿಯೊಳಗೆ ಗೋಜರೂಪ—ಪರ್ವತದಲ್ಲಿ ಅದ್ರಿಜರೂಪ.

**ಭಾವಸೂಚನ :** ಜಲಜೇತಿ ॥ ಕೆಂಜೆಡೆಯ = ಕೆಂಪು ಜಡೆಯ ಶಿವ, ಕಾರಜಗತ್ ॥ ೨೫ ॥

"ಜಡಜ" ಇತಿ ॥ "ಜಡಂ" – ಉದಕಮ್ ॥ "ಖಗಪಃ" – ಗರುಡಃ ॥ "ಕೆಂಜೆಡೆಯು" – ರುದ್ರಃ ॥ "ಗೋಜಃ" – ಗೌಃ ಪೃಥ್ವೀ । ಜನಿತೋತಃ । ಪದ ವರ್ಣಕಾವಸರೇ ವೃತ್ತಂ ದರ್ಶಯಿಷ್ಯಾಮಃ ॥ "ಉಡುಪಃ" ಚಂದ್ರಃ ॥ **"ಕಾರೊಡಲ"** – ಕೃಷ್ಣಃ ॥ ೨೫ ॥

"ಹಂಸಃ ಶುಚಿಷತ್" ಎಂಬ ಮಂತ್ರದಲ್ಲಿ ಹೇಳಿದ "ಅಬ್ಜಾ–ಗೋಜಾ–ಅದ್ರಿಜ" ಎಂಬ ರೂಪಗಳಿಂದ ಶ್ರೀ ಕೃಷ್ಣನು ಸಂರಕ್ಷಿಸುವನೆಂಬುದಾಗಿ ನಿರೂಪಿಸುತ್ತಾರೆ—"ಜಡಜ ಸಂಭವ" ಎಂಬ ಪದ್ಯದಿಂದ. "ಜಡ" ವೆಂದರೆ ನೀರು. "ಖಗಪ"–ಪಕ್ಷಿರಾಜನಾದ ಗರುಡ. "ಕೆಂಜಡೆಯು"–ರುದ್ರ.* "ಗೋಜ" * ಗೋ ಎಂದರೆ ಭೂಮಿ, ಅಲ್ಲಿ ಅವತರಿಸಿದವನು ಎಂದು ಅರ್ಥ. "ಉಡುಪ" – ಚಂದ್ರ. "ಕಾರೊಡಲ"–ಕೃಷ್ಣ ॥ ೨೫ ॥

**ಅವತರಣಿಕಾ :** ಜಲೇ ರಕ್ಷತು ವಾರಾಹಃ ಸ್ಥಳೇ ರಕ್ಷತು ಮಾಮನ ಅಟವ್ಯಾಂ ನಾರಸಿಂಹಂಚ ಸರ್ವತಃ ಪಾತು ಕೇಶವಃ ॥ ಎಂಬ ವಚನಾನುಸಾರವಾಗಿ ಅಲ್ಲಲ್ಲಿರುವ ಹರಿಯ ನಾಮಗಳನ್ನು ಸ್ಮರಣೆಮಾಡಲು ಭಯದಿಂದ ರಕ್ಷಣ ಮಾಡುತ್ತಾನೆಂದು ಹೇಳುತ್ತಾರೆ.

**ಮೂಲ :**

**ಅಪರಿಮಿತ ಸನ್ಮಹಿಮ ನರಹರಿ ।**
**ವಿಪಿನದೊಳು ಸಂತೈಸುವನು ಕಾ ।**
**ಸ್ಯಪಿಯನಾಳ್ದವ (ನಳಿದವ) ಸ್ಥಳಗಳಲಿ ಸರ್ವತ್ರ ಕೇಶವನು ॥**

---

* "ಗೋಜ - ಅದ್ರಿಜ" ಎಂಬ ಪದಗಳಿಗೆ "ಹಂಸಃ ಶುಚಿ" ಎಂಬ ಮಂತ್ರವನ್ನು ವಿವರಿಸುವಾಗ ಶ್ರೀ ಧೀರೇಂದ್ರತೀರ್ಥ ಶ್ರೀಪಾದಂಗಳವರು "ಗೋಷು ಜಾತೇಷು ಕ್ಷೀರಾದಿಷು ಆಸ್ತೇ ಇತಿ ಗೋಜಾಃ ॥ ಅದ್ರಿ ಜಾತೇಷು ಆಸ್ತೇ ಇತಿ ಅದ್ರಿಜಾಃ" ಎಂದು ಅರ್ಥ ಬರೆದಿರುತ್ತಾರೆ. ಗೋವುಗಳಲ್ಲಿ ಹುಟ್ಟಿದ ಹಾಲು ಮುಂತಾದವುಗಳಲ್ಲಿ ಇರುವದರಿಂದ "ಗೋಜಾ" ಎನ್ನುತ್ತಾರೆ. ಅದ್ರಿ (ಪರ್ವತ)ಗಳಲ್ಲಿ ಹುಟ್ಟಿದ ವಸ್ತುಗಳಲ್ಲಿ ಇರುವದರಿಂದ "ಅದ್ರಿಜಾ" ಎನ್ನುತ್ತಾರೆ ಎಂದು ಭಾವ. "ಗೋಜ - ಅಬ್ಜ" ಶಬ್ದೋಪಪದಾತ್ ಆಸ್ತೇಃ ಕ್ವಿಪ್ ಪ್ರತ್ಯಯೇ ಸಕಾರಸ್ಯ ರುತ್ವೇ ವಿಸರ್ಗೇ ಚ ಸವರ್ಣದೀರ್ಘೇ ಚ "ಗೋಜಾಃ ಅದ್ರಿಜಾಃ" ಇತಿ ಭವತಿ ॥

(ನಾರಾಯಣೋಪನಿಷತ್ ಅನುವಾಕ ೧೨, ಮು. ೬)

**ಖಪತಿ ಗಗನದಿ ಜಲಗಳಲಿ ಮಹ ।**
**ಶಫರ ನಾಮಕ ಭಕ್ತರನು ನಿ ।**
**ಷ್ಕಪಟದಿಂದಲಿ ಸಲಹುವನು ಕರುಣಾಳು ದಿನದಿನದಿ ॥ ೨೬ ॥**

**ಪದ್ಯಾರ್ಥ :** ಅಪರಿಮಿತ ಸನ್ಮಹಿಮ = ಪರಿಮಿತ ಇಲ್ಲದ ಬಹಳ ಅನಂತ ಮಹಿಮೆಯುಳ್ಳ ನರಹರಿಯು = ನರಸಿಂಹನಾಮಕ ಪರಮಾತ್ಮ, ವಿಪಿನದಲ್ಲಿ = ಅಡವಿ ಅರಣ್ಯದಲ್ಲಿ, ಸಂತೈಸುವ = ರಕ್ಷಿಸುವನು. ಕಾಶ್ಯಪಿಯ ನಳೆದವ = ಭೂಮಿಯನ್ನು ಪಾದದಿಂದ ಅಳತೆ ಮಾಡಿ, ಎರಡೇ ಪಾದದಿಂದ ಎಲ್ಲ ಭೂಮಿ ಯನ್ನು ವ್ಯಾಪಿಸಿದ, ಚಿಕ್ಕ ವಟು ವಾಮನನು, ಸ್ಥಳಗಳಲ್ಲಿ = ಸ್ಥಾನದಲ್ಲಿ ರಕ್ಷಿಸುವ. ಸರ್ವತ್ರ ಕೇಶವನು = ಸಕಲ ದೇಶ ವ್ಯಾಪ್ತನಾಗಿ ಕೇಶವನು ಕಾಯುವನು. ಖಪತಿ = ಖಂ = ಆಕಾಶಪತಿ, ಖಂ = ಇಂದ್ರಿಯಪತಿ, ಖಂ = ದೇವಲೋಕಪತಿ, ಇಷ್ಟು ಅರ್ಥ ಅಜಾದಿ ರೂಪಗಳಲ್ಲಿಪ್ಪ, ಖಂಖಪತಯೇ ನಮಃ; ಆಕಾಶಪತಿ; ಗಗನದಿ = ಆಕಾಶದಲ್ಲಿ, ಜಲಗಳಲಿ = ಮಹಶಫರ ನಾಮಕ, ಮಹಾ ಮತ್ಸ್ಯರೂಪಿ ಹರಿಯು ಜಲದಲ್ಲಿ ಈ ರೂಪನಾಮಗಳನ್ನು ಮೇಲೆ ಹೇಳಿದಂತೆ, ನಿಷ್ಕಪಟದಿಂದ = ಕಾಪಟ್ಯರಹಿತರಾಗಿ ಯಾರು ಸ್ಮರಿಸು ವರೋ ಅವರನ್ನು ಸಹ ಹರಿಯು ನಿಷ್ಕಪಟ, ವಂಚನೆ ಇಲ್ಲದೆ ದಿನದಿನದಿ ಸಲಹುವನು = ಪ್ರತಿನಿತ್ಯ ಸಲಹುವನು, ಕರುಣಾಳು = ದಯಾವಾನ್ ಆದು ದರಿಂದ ಭಕ್ತರನ್ನು ರಕ್ಷಿಸುತ್ತಾನೆ.

**ದ್ರೌಪದೀಶಪತಿ ವಿಠಲರು :** ಅಪರಿಮಿತ ಸನ್ಮಹಿಮ — ೧. ಅಡವಿ ಯೊಳಗೆ = ನೃಸಿಂಹ, ೨. ಭೂಮಿಯೊಳಗೆ, ೩. ಆಕಾಶದಲ್ಲಿ = ಖಪತಿ, ೪. ಜಲಗಳಲಿ = ಶಫರ, ೫. ಸರ್ವತ್ರ = ಕೇಶವ.

**ಭಾವಸೂಚನ :** ಅಪರಿಮಿತೇತಿ ॥ ಕಾಶ್ಯಪಿ = ಪೃಥ್ವಿವಾಮನ, ಸ್ಥಳೀ ರಕ್ಷತು ವಾಮನ ಇತ್ಯುಕ್ತೇಃ ॥ ಖಂ = ಆಕಾಶಂ, ಮಹಾಶಫರ = ಮತ್ಸ್ಯ ಮೂರ್ತಿ ॥ ೨೬ ॥

**ವಿಜಯದಾಸರ ಸುಳಾದಿ —** ೪೩ ಉಪಾಸನಾ ಭಾಗ ಪುಟ ೧೩೪ **ಮಟ್ಟತಾಳ**, ಸ್ಥಳದಲ್ಲಿ ವಾಮನ ಅಟವ್ಯೆ ನರಸಿಂಹ। ಜಲದಲ್ಲಿ ಮತ್ಸ್ಯ ಗಗನದಿ ತ್ರಿವಿಕ್ರಮಾ। ಕುಲಗಿರಿಯಲ್ಲಿ ಪರಶುರಾಮನು, ಮಾರ್ಗ। ದಲಿ ಭೂವರ ಹಾತ್ಮಾ ಬಲು ಪ್ರವಾಸದಲಿ। ಸಲಕ್ಷಣ ಭರತಾಗ್ರಜ ಜಾನಕೀಪತಿ ರಾಮಾ।

ತಿಳಿವದು ಈ ವಿಧದಿ ರಕ್ಷಕಮೂರ್ತಿಗಳ । ಬಲಿ ಮರ್ದನ ಪಾದ ವಿಜಯ ವಿಠ್ಠಲರೇಯ । ಒಲಿದು ಸಂಗಡಲಿದ್ದು ಸುಖವ ಕೊಡುತಿಪ್ಪ ॥೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಪರಿಮಿತ" ಇತಿ ॥ "ಕಾಶ್ಯಪೀ"–ಪೃಥ್ವೀ ॥ "ಜಲೇ ರಕ್ಷತು ವಾರಾಹಃ ಸ್ಥಲೇ ರಕ್ಷತು ವಾಮನಃ ॥ ಅಟವ್ಯಾಂ ನಾರಸಿಂಹಶ್ಚ ಸರ್ವತಃ ಪಾತು ಕೇಶವಃ" ॥ ಇತ್ಯುಕ್ತೇಃ ॥೨೬॥

## ಕನ್ನಡಾರ್ಥ

ಜಲ – ಸ್ಥಲ – ಅಟವೀ ಸರ್ವತ್ರ ಸ್ಮರಿಸಬೇಕಾದ ರೂಪಗಳನ್ನು ತಿಳಿಸುತ್ತಾರೆ. "ಕಾಶ್ಯಪೀ"–ಭೂಮಿ, ಈ ಪದ್ಯವು "ಜಲೇ ರಕ್ಷತು" ಎಂಬ ಶ್ಲೋಕದ ಅನುವಾದ ರೂಪವಾಗಿದೆ. (ಶ್ಲೋಕಾರ್ಥವು ಸುಗಮವಿರುತ್ತದೆ). ॥೨೬॥

**ಅವತರಣಿಕಾ :** ಶ್ರೀಹರಿಯು ಬ್ರಹ್ಮಾಂಡ ಸೃಷ್ಟಿಮಾಡಲು, ಆಗಾಗ್ಗೆ ೧ ಕಾರಣವಾದ ಮೂಲರೂಪ, ೨ ಅಂತರ್ಯಾಮಿ, ೩ ಸ್ಥೂಲರೂಪ, ೪ ಅವತಾರರೂಪ, ೫ ವ್ಯಾಪ್ತರೂಪ, ೬ ಅಂಶರೂಪ ಇವುಗಳ ರೂಪನಾಮ ಮಹಿಮೆ ತಿಳಿದು, ೬ ರಸಗಳನ್ನು ಅರ್ಪಿಸುವ ಬಗೆಯ ರಹಸ್ಯ ವಿವರಿಸುತ್ತಾರೆ. ಇದೇ ಹರಿಯ ನಾಮರಸಾಸ್ವಾದನ ಚಿಂತನೆ ಸ್ಮರಣೆ ಮುಖ್ಯವಾದುದು.

ಮೂಲ :

**ಕಾರಣಂತರ್ಯಾಮಿ ಸ್ಥೂಲವ ।**
**ತಾರ ವ್ಯಾಪ್ತಾಂಶಾದಿ ರೂಪಕೆ ।**
**ಸಾರ ಶುಭಪ್ರವಿವಿಕ್ತನಂದ ಸ್ಥೂಲನಿಸ್ಸಾರ ॥**
**ಆರುರಸಗಳನರ್ಪಿಸಲ್ಪರಿ ।**
**ಗೀರಹಸ್ಯವ ಪೇಳದೆ ಸದಾ ।**
**ಪಾರಮಹಿಮನ ರೂಪಗುಣಗಳ ನೆನೆದು ಸುಖಿಸುತಿರು ॥೨೭॥**

**ಪದ್ಯಾರ್ಥ :** ಕಾರಣ = ಮೂಲಪ್ರಕೃತಿಯಲ್ಲಿ, ಕಾರಣರೂಪ; ಅಂತರ್ಯಾಮಿ, ಜೀವ ಜಡಾಂತರ್ಯಾಮಿ ಸರ್ವರಲ್ಲಿಪ್ಪ ರೂಪ, ಸ್ಥೂಲ = ವಿರಾಟ ರೂಪ, ಅವತಾರ = ರಾಮಕೃಷ್ಣಾದಿ ಅನಂತ ಪ್ರಾದುರ್ಭಾವರೂಪ, ವ್ಯಾಪ್ತ ರೂಪ, ಸಕಲ ಜಗತ್ತಿನಲ್ಲಿ ತ್ರಿಬಗೆ ವ್ಯಾಪ್ತರೂಪ, ಅಂಶರೂಪ = ಸಕಲರ ಲಿಂಗಾದಿ ದೇಹಗತ ಇಂತು ಆರುರೂಪಕೆ, ಸಾರ – ಶುಭ ಪ್ರವಿವಿಕ್ತ– ನಂದ

(ಆನಂದ) ಸ್ಥೂಲ-ನಿಸ್ಸಾರ, ಈ ಆರು ರಸಗಳನ್ನು ಅರ್ಪಿಸುವ ಬಗೆ ಜ್ಞಾನಿಗಳಿಂದ ತಿಳಿದು ಅರ್ಪಣೆಮಾಡು. ಅಲ್ಪರಿಗೆ ಈ ರಹಸ್ಯವ ಪೇಳದೆ = ಮಂದ ಬುದ್ಧಿಗಳಾದ ಅಜ್ಞಾನಿ ಜನರಿಗೆ ಈ ಗುಟ್ಟನ್ನು ಹೇಳದೇ, ಸದಾ = ನಿರಂತರದಲ್ಲಿ, ಅಪಾರ ಮಹಿಮನ = ಪರಿಮಿತಿ ಇಲ್ಲದ ಅನಂತ ಮಹಿಮೆಯುಳ್ಳ ಶ್ರೀಹರಿಯ, ರೂಪ = ಚಿನ್ಮಯಾಕಾರವೇ ಚಿನ್ಮಯರೂಪ, ಗುಣಗಳ = ಉತ್ಕರ್ಷತ್ವದಿಂದ ಭಗವನ್ ಮಾಹಾತ್ಮ್ಯ, ಆತನ ಗುಣಗಳು ಜ್ಞಾನಾನಂದಾದಿ ಅನಂತ ಗುಣಗಳ ನೆನೆದು, ಸುಖಿಸುತಿರು = ಆನಂದಪಡುತ್ತಿರು.

ಈ ಪದ್ಯಕ್ಕೆ ಸವಿಸ್ತರ—ಶ್ರೀ ದ್ರೌಪದೀಶಪತಿ ವಿಠ್ಠಲರು. ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಬಹು ವಿಸ್ತಾರ ಬರೆದಿರುವರು. ಚೆನ್ನಾಗಿ ಮನನಮಾಡಿ ಆರು ರಸಗಳಾವುವು. ಅರ್ಪಿಸುವ ಬಗೆ ಹೇಗೆ ಮನನಮಾಡಿ ಆನಂದಪಡುವದು.

**ದ್ರೌಪದೀಶಪತಿ ವಿಠಲರು :** ಕಾರಣಂತರ್ಯಾಮಿ.

೧. **ಮೂಲರೂಪ**ವೆಂಬೋದು ವಿಶ್ವರೂಪ-ಬ್ರಹ್ಮಾದಿಗಳು - ಅರ್ಜುನಾದಿಗಳಿಗೆ ತೋರಿಸಿದ್ದು.

೨. **ಅಂತರ್ಯಾಮಿ**—ಜೀವಾಂತರ್ಗತ.

೩. **ಸ್ಥೂಲ**—ವಿರಾಟರೂಪತ್ರಯ.

೪. **ಅವತಾರ**—ರಾಮಕೃಷ್ಣಾದಿ.

೫. **ವ್ಯಾಪ್ತ**—ಜಗತ್ತಿನಲ್ಲಿ ವ್ಯಾಪ್ತಗೋಳದಲ್ಲಿ.

೬. **ಅಂಶ**—ಜಗತ್ತಿನೊಳಗೆ ಸರ್ವ ದೇಹಗಳಲ್ಲಿ ಇರುವ ರೂಪಗಳು ಅಂಶರೂಪ, ಲಕ್ಷಣವೇನಂದರೆ ಲಿಂಗದೇಹ ಸಂಬಂಧ ಕಾಲದಲ್ಲೇ ಪ್ರವೇಶರೂಪ, " ತತ್ಸೃಷ್ಟ್ವಾ ತದೇವಾನುಪ್ರಾವಿಶತ್ " ಎಂಬುವ ಪ್ರಮಾಣ.

**ಆರು ರಸವಿವರ**

೧. **ಸಾರರಸ**—ತ್ರಿವಿಧ ಜೀವರಿಗೆ ಬಿಂಬನಾದ ಪರಮಾತ್ಮನು ತತ್ತದ್ಯೋಗ್ಯ ಗುಣಮಯರಸದಲ್ಲಿ, ತದಂತರ್ಗತನಾದ ಬಿಂಬರೂಪಿ ಪರಮಾತ್ಮ, ತತ್ತದ್ರಸ ತಚ್ಛಬ್ದವಾಚ್ಯನಾಗಿ ಕರಸೋಣವೇ ಸಾರ - ಇದು ರಮಾ ಬ್ರಹ್ಮರಿಗೆ ಇಲ್ಲ.

೨. **ಶುಭರಸ**—ಈಶಕೋಟಿಯೊಳಗೆ ಗಣನೆಯಾದ ರಮಾದೇವಿಗೂ ಜೀವ ಕೋಟಿ ಬ್ರಹ್ಮಾದಿಗಳಿಗೂ ಉಣಿಸುವ ಕ್ರಮ. ಲಕ್ಷ್ಮೀಸ್ವರೂಪರಸ ಲಕ್ಷ್ಮೀದೇವಿಯರಿಗೆ ಶುದ್ಧ ಸತ್ವಗುಣದ ಭೋಗ ಇಲ್ಲದೇ ಇದ್ದಾಗ್ಯೂ ಸಂಪತ್ಕರಯೆನಿಸುತ್ತದೆ. ಇದು ಲೀಲೆ-ತನಗೆ ಲಕ್ಷ್ಮೀಗೆ ಮಹದೈ ಶ್ವರ್ಯಯೆಂದು ವೈಕುಂಠ ವರ್ಣನ.

ಗುಡದ ಹಾಗೆ, ತದ್ಗತ ಮಾಧುರ್ಯದ ಹಾಗೆ ಪರಮಾತ್ಮ ಇದ್ದು ಉಣಿಸುತ್ತಾನೆ. ಬ್ರಹ್ಮಾದಿಗಳಿಗೆ ಶುದ್ಧ ಸತ್ವಭೋಗ, ಭೋಗಿಸಿದ ಮ್ಯಾಲೆ ಯಥಾಪ್ರಕಾರ ತದ್ಗುಣದಲ್ಲೇ ಸಂಯೋಗವಾಗುತ್ತದೆ. "ಶ್ರೀವಾದಿರಾಜ ಶ್ರೀಪಾದಂಗಳವರು, ವೈಕಂಠ ವರ್ಣನೆಯಲ್ಲಿ ಫಲ ಪುಷ್ಪಾದಿಗಳು ಯಥಾಪ್ರಕಾರ ವೃಕ್ಷಾದಿಗಳಲ್ಲಿ ಸೇರುತ್ತದೆಂದು ಉಕ್ತಿ" ಸ್ವರೂಪರಸ ಪರಮಸೂಕ್ಷ್ಮ ಶುದ್ಧ ಸತ್ವಗುಣದ ರಸದಲ್ಲಿ ಅಂಶತಃ ವ್ಯಾಪ್ತಿಃ, ದೇವತತಿಗಳಿಗೆ ಪ್ರಕಾಶತಃ ವ್ಯಾಪ್ತಿ, ನಿರಂಶರಿಗೆ "ಚಿತ್ತಾವಾ ಪ್ರಚಿತ್ತಾವಾ"ಯೆಂತ ಪ್ರಮಾಣ. ಮುಕ್ತಿಯೋಗ್ಯರಿಗೆ ಸುಖಕ್ಕೆ ಕಾರಣ ವಾಗುತ್ತವೆ ಶುಭರಸ.

೩. **ಪ್ರವಿವಿಕ್ತ**—ಒಬ್ಬರ ರಸ ಒಬ್ಬರಿಗೆ ತಿಳಿಯದೇ ಇರೋಣವೇ ಪ್ರವಿವಿಕ್ತಃ.

೪. **ನಂದರಸ**—ಒಂದೇ ಪದಾರ್ಥದಲ್ಲಿ ಉತ್ತಮಾಧಮರಿಗೆ ಯಥಾಯೋಗ್ಯ ಆನಂದ ಪ್ರವೃತ್ತವೇ ನಂದಾ.

೫. **ಸ್ಥೂಲ**—ಗುಣಸಂಯೋಗ ವಿಕಾರವೇ ಸ್ಥೂಲರಸ.

೬. **ನಿಸ್ಸಾರ**—ತಮೋಗುಣಜನ್ಯ ಪಲಾಂಡು, ಲಶುನ, ಸುಗ್ರೀವ ಶಾಖಾದಿ ಗಳು-ತದ್ಗತ ಬಿಂಬಕ್ಕೂ, ತಮೋಜೀವಾಂತರ್ಗತ ಬಿಂಬರೂಪಕ್ಕೂ ಐಕ್ಯವೇ ಶುಭ, ಇದು ಮುಕ್ತಿಯೋಗ್ಯರಿಗೆ (ಶುಭ). ಅಶುಭ ತಮೋ ಯೋಗ್ಯರಿಗೆ. ಸ್ವರಸವಾಗಿ ದುಃಖಪ್ರದ, ಹೇಗೆಂದರೆ ದುರ್ವಾಸನೆಸಾರ ವುಳ್ಳ ಪಲಾಂಡುವೇ ಮೊದಲಾದವು ಭಕ್ಷಣ ಕಾಲದಲ್ಲಿ ಕಣ್ಣೊಳಗೆ ನೀರು ಸುರಿಸಿಕೊಳ್ಳುತ್ತಾ, ಅದರನ್ನೇ ಸಮಾಚೀನಯೆಂದು ತಮೋಯೋಗ್ಯರು ಭಕ್ಷಣಮಾಡುವದೇ ನಿಸ್ಸಾರ. ॥ ೨೭ ॥

**ಭಾವಸೂಚನ:** ಕಾರಣೇತಿ ॥ ೨೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಥ ಉಪಾಸನಾ ವಿಶೇಷಂ ಆಹ "ಕಾರಣ" ಇತಿ॥ ವೃಕ್ಷ- ಪತ್ರ- ಪುಷ್ಪ-ಫಲರಸ ಕಾರಣ ರಸಾದಿ ಮಾನಿಗ, ತದಭಿಮಾನಿ ರಸಾದಿಗ, ರಸಾದಿ ಮದಬಾದಿಗ ಸ್ವಭಾವ ಸತ್ತಾದಿ ನಿಯಾಮಕಸ್ಯ ಸಾರಾಖ್ಯೈಃ ಸಾರರಸಾರ್ಪಣಮ್ ॥ "ತಥಾಖಿಲಜಡಸ್ಥಾಂಶ್ಚ ಸಾರಾನ್ ಅತ್ತಿ ಅಖಿಲೇಶ್ವರಃ ॥ ಸಾರಾಭಿಮಾನಿಭಿಃ ದೇವೈಃ ಅರ್ಪಿತಾನ್ ಇತರೈಃ ತಥಾ॥" ಇತಿ ರತ್ನಮಾಲಾಯಾಮ್ ॥ "ಸ್ವಮಾತ್ರಭೋಗ್ಯ ಸಾರಾಂಶ್ಚ ಕ್ರಮಾತ್ ಲಕ್ಷ್ಮ್ಯಾದಿ ಭೋಗ್ಯಕಾನ್॥" ಇತಿ ಚ॥ **"ಕೇವಲಂ ಭಗವದ್ಭೋಗ್ಯಾಃ ರಮಾಭೋಗ್ಯಾಃ ಬ್ರಹ್ಮಾದಿ ಭೋಗ್ಯಾಃ ಅಪರೋಕ್ಷಿ ಭೋಗ್ಯಾಃ (ಪರೋಕ್ಷಿಭೋಗ್ಯಾಃ) ತದಿತರ ಮಂದಭೋಗ್ಯಾಃ** ಇತಿ ತತ್ರ ತತ್ರ ಕದಲೀ ಫಲಾದೌ ಏಕಸ್ಮಿನ್ನೇವ ಷಡ್ರಸಾಃ ಸಂತಿ" ಇತಿ॥ ಯದ್ಯಪಿ ಹರಿಮಾತ್ರ ಭೋಗ್ಯಾನ್ ಅಪರೋಕ್ಷೀಕುರ್ವಂತಿ ಅಜಾದ್ಯಾಃ। (ತಥಾಪಿ) ಅಯೋಗ್ಯತ್ವಾತ್ ನ ಅನುಭವಂತಿ॥ ತತ್ರ ತಾವತ್ ಭಗವಾನ್ ಸ್ವಮಾತ್ರಭೋಗ್ಯ ರಸಾನ್ ರಮಾ ಬ್ರಹ್ಮಾದ್ಯುತ್ತಮ ಭೋಗ್ಯಾನ್ ಚ ಸಾರಾನ್ ಭುಙ್ಕ್ತೇ॥ ಯದ್ಯಪಿ ತತ್ತತ್ಪದಾರ್ಥಗತ ತತ್ತದಾಕಾರಕ ಸ್ವರೂಪಭೂತ ರಸಾದೇಃ ಏವ ಮುಖ್ಯತಯಾ ಭೋಗಃ॥ ಏವಂ ತತ್ತದ್ಗತ ರಮಾ ಸ್ವರೂಪರಸಾದೇಃ ಅಪಿ ತದನಂತರಂ ಭೋಗಃ॥ ತಥಾಪಿ ಐಶ್ವರ್ಯವಶಾತ್ ಭಕ್ತಜನೇಷು ಅನುಗ್ರಹಾಯ ಜಡಪದಾರ್ಥಭೋಗಃ ಅಪಿ ಯುಜ್ಯತೇ॥ ರಸಾದಿಭೋಕ್ತಾ ಅಪಿ ತೃಷ್ಣಾ ನಿವೃತ್ಯರ್ಥಕಾಬಾದಿಭೋಗಃ ಅಪಿ ಕೃಷ್ಣಃ ಸ್ನಾತಿ ಪಾತಿಚ ಅನ್ಯೈತಾಂಭಃ॥ ವಸ್ತುತಸ್ತು॥ ತದ್ಭೋಗಪ್ರಕಾರಃ ನ ಅಸ್ಮಾಭಿಃ ಮಂದಜನೈಃ ಉತ್ಪ್ರೇಕ್ಷಯಿತುಂ ಶಕ್ಯಃ॥ ಇತಿ ರತ್ನಮಾಲಾ ಟೀಕಾಯಾಮ್ ॥

ಅಂತರ್ಯಾಮಿಣಃ ಶುಭರಸಮ್ । "ಸರ್ವೈಃ ಯದ್ ಭುಜ್ಯತೇ ಚಾನ್ನಂ ತತ್ರತತ್ರ ಸ್ಥಿತಃ ವಿಭುಃ॥" "ತತ್ತದ್ಭುಂಕ್ತೇ" ಇತಿ॥ "ಶುಭಮೇವ ಅತ್ತಿ॥" "ಸುರಾಸುರ ನರ ಪಶು ಪಕ್ಷಿ ಮೃಗಸರೀ ಸೃಪಾದಿಭಿಃ ಯದ್ಯತ್ ಸ್ವಯೋಗ್ಯಂ ಅನ್ನಾದಿಕಂ ಅದನಾಘ್ರಾಣ ದೃಷ್ಟ್ಯಾಖ್ಯಭೋಗತ್ರಯ ವಿಭಾಗಃ॥" ಇತ್ಯುಕ್ತೇಃ॥ ಅದನಾಘ್ರಾಣಾದಿಭಿಃ ಅನುಭೂಯತೇ ತತ್ತದ್ಭೋಗ್ಯಾನ್ನಾದಿಕಂ ತತ್ತತ್ಸುರಾಸುರ ನರಾದಿ ಭೋಕ್ತೃಷು ಸ್ಥಿತ್ವಾ ತತ್ತದಿಂದ್ರಿ

ಯಾನು ಪ್ರವಿಷ್ಟಸ್ಸ್ವೇಂದ್ರಿಯೈಃ ಭುಂಕ್ತೇ ||

ದುರ್ಗಂಧ ಪದಾರ್ಥೇಷು ಕಥಮ್ || ತತ್ರಾಪಿ "ಭುನಕ್ತಿ ಅಯಂ" ಸೂಕರಃ ಭುಙ್ತೇ || ವಾಗ್ಗತಃ ಭಾರ್ಗಃ ಜಿಹ್ವಾಭೋಗ್ಯಸ್ಯ ಅಪಿ ಚಕ್ಷುಷಾ ಭೋಗವಾನ್ ಚಕ್ಷುರ್ಭೋಗ್ಯಸ್ಯ ಪದಾದಿಭಿಃ ಭೋಗಃ ಇವ || ಅಸ್ಮದಾದಿ ವತ್ ನ ದುರ್ಗಂಧಾನುಭವಃ || ನ ಏವಂ ಸುಖಪದಾರ್ಥೇ || ಸುಖಸ್ವರೂಪ ಸ್ಯಾಪಿ ಚರ್ವಣಾದ್ಯಾತ್ಮಾ ಭೋಗಃ ಸುಗಂಧಾನುಭವಶ್ಚ || ಅನುಭೂಯ ಮಾನಾಃ ಅಪಿ ದುರ್ಗಂಧಾದಯಃ ನ ಫಲಹೇತವಃ ಇತ್ಯಭಿಪ್ರಾಯಃ || "ಸುಗಂಧಸ್ತು ಸುಖಹೇತುಃ ಇತಿ ಉಪಪಾದಿತವ್" ಇತಿ ಪ್ರಮೇಯದೀಪಿ ಕಾಯಾಂ ಉಕ್ತಮ್ ||

"ಸ್ಥೂಲ ತದ್ಭೋಕ್ತೃ ವಿಶ್ವಾದಿ || ತಸ್ಯ ಪ್ರವಿವಿಕ್ತಾರ್ಪಣಮ್ || ಅವ ತಾರಾಣಾಂ ಆನಂದಾರ್ಪಣಮ್ || ವ್ಯಾಪ್ತಸ್ಯ ಸ್ಥೂಲಮ್ || ಅಂಶಸ್ಯ ಅನ್ನಾದಿ ಗಸ್ಯ ನಿಸ್ಸಾರಾರ್ಪಣಮ್ || ಅರ್ಪಣಂ ತನ್ನಿಯಾಮಕತ್ವೇನ ಚಿಂತನಮ್ || ಇತಿ || ಷಡ್ರಸಾನಾಂ ಪ್ರತಿಮಾತ್ವಂ ತತ್ಪದವಾಚ್ಯ ತದ್ಗ ಕಾರಣಾಂತರ್ಯಾ ಮ್ಯಾಹ್ವಯ ಹಂರ್ಯಾಶ್ರಿತತ್ವಂ ಚ ಉಪಾಸ್ಯಮ್ || "ರಸೋಹಮಪ್ಸು" ಇತ್ಯುಕ್ತೇಃ ||

"ವಿಶೇಷ ಶಬ್ದೋಪಾದಾನೇ ಪ್ರಯೋಜನಮಾಹ-"ಉಪಾಸನಾರ್ಥಂ ಚೇತಿ ||" ಉಕ್ತಂ ಚ ಗೀತಾಕಲ್ಪೇ || "ರಸಾದೀನಾಂ ರಸಾದಿತ್ವೇ ಸ್ವಭಾ ವತ್ವೇ ತಥೈವಚ || ಸಾರತ್ವೇ ಸರ್ವಧರ್ಮೇಷು ವಿಶೇಷೇಣಾಪಿ ಕಾರಣಮ್ || ಸಾರಭೋಕ್ತಾ ಚ ಸರ್ವತ್ರ ಯತೋಽತಃ ಜಗದೀಶ್ವರಃ || ರಸಾದಿಮಾನಿನಾಂ ದೇಹೇ ಸ ಸರ್ವತ್ರ ವ್ಯವಸ್ಥಿತಃ || ಅಜಾದಯಃ ಪಾರ್ಷದಾಶ್ಚ ಧ್ಯೇಯಃ ಸ ಜ್ಞಾನಿನಾಂ ಹರಿಃ || ರಸಾದಿಸಂಪತ್ಯಾನ್ಯೇಷಾಂ ವಾಸುದೇವಃ ಜಗತ್ಪತಿಃ ||" ಇತಿ ||

ಟೀಕಾ "ರಸಾದಯಃ ಪರಮೇಶ್ವರೋಪಾಸನೇ ಪ್ರತಿಮಾತ್ವೇನ ವಿವಕ್ಷಿ ತಾಃ || ಪ್ರತಿಮಾಯಾಂ ಚ ಅಭೇದೋಕ್ತಿಃ ಪ್ರಸಿದ್ಧಾ || "ಸ್ಥೂಲಾನಶನೋ ಕ್ತೇ" - ಸ್ಥೂಲಸ್ಯ ಜೀವಭೋಗ್ಯಸ್ಯ ಅಭೋಗೋಕ್ತೇಃ || ಆಹ ಚ || "ಸೂಕ್ಷ್ಮಾಶನಂ ಪ್ರವಿವಿಕ್ತಾಹಾರತರ ಇವೈವ ಭವತಿ ಅಸ್ಮಾತ್ ಶಾರೀರಾತ್ ಆತ್ಮನಃ || ಗಂಧಾದಿಷು ಯಃ ಜೀವೇಂದ್ರಿಯಾ ಗೋಚರಃ ಸಾರಭಾಗಃ ||

ತಸ್ಯ ಭೋಗಂ(ಃ) ಪರಮೇಶ್ವರಃ ಅಸ್ಮಾತ್ ಶರೀರಾತ್ ಆತ್ಮನಃ ಜೀವಾತ್ ಅತಿಶಯೇನ ವಿಲಕ್ಷಣಭೋಗಃ ಏವ ಭವತಿ ॥ ಅವತಾರಾದಿಷು ಸ್ಥೂಲಮಪಿ ಭವತಿ ಇತಿ ಇವಶಬ್ದಃ ॥ ಆಹ ಚ "ಪ್ರವಿವಿಕ್ತಭುಕ್ ಯತೋಽಹ್ಯಸ್ಮಾತ್ ಶರೀರಾತ್ ಪುರುಷೋತ್ತಮಃ ॥ ಅತೋಽಭೋಕ್ತಾ ಚ ಭೋಕ್ತಾ ಚ ಸ್ಥೂಲ ಭೋಗಾತ್ ಸ ಏವತು ॥" ಇತಿ ॥ ೨೭ ॥

## ಕನ್ನಡಾರ್ಥ

ಇನ್ನುಮೇಲೆ ವಿಶಿಷ್ಟ ಉಪಾಸನೆಯನ್ನು ನಿರೂಪಿಸುತ್ತಾರೆ —"ಕಾರಣ" ಎಂಬ ಪದ್ಯದಿಂದ.

ಮರ, ಎಲೆ, ಹೂವು, ಹಣ್ಣು, ರಸಗಳಿಗೆ ಕಾರಣಗಳಾದ ರಸಾಭಿಮಾನಿಗಳಲ್ಲಿ ಅವರ ಅಭಿಮಾನಕ್ಕೊಳಪಟ್ಟ ರಸಾದಿಗಳಲ್ಲಿ ರಸಾದಿಗಳುಳ್ಳ ಜಲ ಮುಂತಾದವುಗಳಲ್ಲಿ ಸ್ವಭಾವ ಹಾಗೂ ಸತ್ತಾ(ಸ್ಥಿತಿ)ಗಳನ್ನು ನಿಯಾಮಿಸುವ ಶ್ರೀಹರಿಗೆ ಸಾರಾಭಿಮಾನಿ ದೇವತೆಗಳು ಹಾಗೂ ಇತರರು ಸಾರರಸಗಳನ್ನು ಸಮರ್ಪಿಸುತ್ತಾರೆ. "ಅಖಿಲೇಶ್ವರ ಹರಿಯು ಸಾರಾಭಿಮಾನಿಗಳಿಂದ ಹಾಗೂ ಇತರರಿಂದ ಸಮರ್ಪಿತಗಳಾದ ಅಖಿಲ ಜಡಗಳಲ್ಲಿರುವ ಸಾರಭಾಗಗಳನ್ನು ಭುಂಜಿಸುತ್ತಾನೆ" ಎಂದು ಸತ್ತತ್ವ ರತ್ನಮಾಲೆಯಲ್ಲಿ ನಿರೂಪಿಸಲಾಗಿರುತ್ತದೆ. "ಕೇವಲ ತಾನೇ ಭುಂಜಿಸಲರ್ಹವಾದ ರಸಗಳನ್ನೂ ನಂತರ ಕ್ರಮದಿಂದ ಲಕ್ಷ್ಮೀ ಮುಂತಾದವರು ಭುಂಜಿಸಬೇಕಾದ ವಿವಿಧವಾದ ಬೇರೆಬೇರೆಯಾಗಿರುವ ಸರ್ವ ವಸ್ತುಗಳಲ್ಲಿ ಇರುವ ಸಾರಭಾಗಗಳನ್ನೂ ಭುಂಜಿಸುತ್ತಾನೆ" ಎಂದೂ ಸತ್ತತ್ವ ರತ್ನಮಾಲೆಯಲ್ಲಿ ಹೇಳಲಾಗಿರುತ್ತದೆ. ಅದರ ವ್ಯಾಖ್ಯಾನದಲ್ಲಿ "ಕೇವಲ ಶ್ರೀಹರಿಯೇ ಭುಂಜಿಸುವ ರಸಗಳು; ರಮಾಭೋಗ್ಯ ರಸಗಳು; ಬ್ರಹ್ಮಾದಿಗಳ ಭೋಗ್ಯರಸರಗಳು; ಅಪರೋಕ್ಷ ಜ್ಞಾನಿಗಳ ಭೋಗ್ಯರಸಗಳು; ಪರೋಕ್ಷ ಜ್ಞಾನಿಗಳ ಭೋಗ್ಯರಸಗಳು; ಇತರ ಮಂದಜನ ಭೋಗ್ಯರಸಗಳು; ಹೀಗೆ ಒಂದೇ ಬಾಳೆ ಮುಂತಾದ ಫಲದಲ್ಲಿ ಆರು ರಸಗಳಿರುತ್ತವೆ" ಎಂದು ವಿವರಿಸಿರುತ್ತಾರೆ.

ಕೇವಲ ಹರಿಯೇ ಭುಂಜಿಸುವ ರಸಗಳನ್ನು ಬ್ರಹ್ಮ ಮುಂತಾದವರು ಅಪರೋಕ್ಷೀಕರಿಸುತ್ತಾರೆ. ಪ್ರತ್ಯಕ್ಷದಿಂದ ನೋಡುತ್ತಾರೆ. ಆದರೂ ತಮ್ಮ ಭೋಗಕ್ಕೆ ಅನರ್ಹವಾಗಿರುವದರಿಂದ ಹರಿಭೋಗ್ಯ ರಸಗಳನ್ನು ಬ್ರಹ್ಮಾದಿಗಳು

ಅನುಭವಿಸುವದಿಲ್ಲ. ಪರಮಾತ್ಮನು ಕೇವಲ ತನಗೆ ಭೋಗ್ಯವಾದ ರಸಗಳನ್ನೂ ಬ್ರಹ್ಮಾದಿ ಉತ್ತಮರ ಭೋಗ್ಯರಸಗಳನ್ನೂ (ಸಾರಭಾಗಗಳನ್ನೂ) ಭುಂಜಿಸುತ್ತಾನೆ. ಆ ಆ ಪದಾರ್ಥಗಳಲ್ಲಿರುವ ತತ್ತದಾಕಾರಕವಾದ ಸ್ವರೂಪ ರಸ ಮುಂತಾದವುಗಳನ್ನೇ ಮುಖ್ಯವಾಗಿ ಹರಿಯು ಭುಂಜಿಸುತ್ತಾನೆ. ಇದರಂತೆ ಆಯಾ ವಸ್ತುಗತವಾದ ರಮಾ ಸ್ವರೂಪವಾದ ರಸ ಮುಂತಾದವುಗಳನ್ನೇ ಅನಂತರದಲ್ಲಿ ಸ್ವೀಕರಿಸುತ್ತಾನೆ. ಹೀಗೆ ಸ್ಥಿತಿಯಿರುವದಾದರೂ ಸಹ ತನ್ನ ಅಚಿಂತ್ಯ ಶಕ್ತಿ ಅನಂತ ವೈಭವಮೂಲಕವಾಗಿ ಭಕ್ತಜನರಲ್ಲಿ ಅನುಗ್ರಹ ವನ್ನಿಡಲು ಹರಿಯು ಜಡಪದಾರ್ಥಗಳನ್ನೂ ಸ್ವೀಕರಿಸುತ್ತಾನೆ" ಎಂಬುದು ಯುಕ್ತವಾಗುತ್ತದೆ. ರಸ ಮುಂತಾದವುಗಳನ್ನು ಭುಂಜಿಸುವನಾದರೂ ಶ್ರೀ ಕೃಷ್ಣನು ನೀರಡಿಕೆ ಮುಂತಾದವುಗಳನ್ನು ಕಳೆಯುವ ಜಲ ಮುಂತಾದವು ಗಳನ್ನೂ ಸೇವಿಸುತ್ತಾನೆ. ಅಂತಹ ಜಲಗಳಲ್ಲಿ ಶ್ರೀ ಕೃಷ್ಣನು ಮೀಯುತ್ತಾನೆ. ಅಮೃತರಸಮಯ ಆ ಜಲವನ್ನು ಕುಡಿಯುತ್ತಾನೆ.

ಇನ್ನು ವಾಸ್ತವವಾಗಿ ವಿಮರ್ಶಿಸಿದಲ್ಲಿ ಪರಮಾತ್ಮನ ರಸಭೋಗದ ರೀತಿ ಯನ್ನು ನಮ್ಮಂಥ ಮಂದ ಜನಗಳು ಊಹಿಸುವದು, ಉತ್ಪ್ರೇಕ್ಷಿಸುವದು ಶಕ್ಯವಿಲ್ಲ" ಎಂದು ಸತ್ತತ್ವರತ್ನಮಾಲೆಯ ಟೀಕೆಯಲ್ಲಿ ಬರೆಯಲಾಗಿದೆ.

ಇನ್ನು ಅಂತರ್ಯಾಮಿ ರೂಪಕ್ಕೆ ಶುಭರಸವು ಶ್ರೀಹರಿಯು ಆ ಆ ವಸ್ತು ಗಳಲ್ಲಿ ಸ್ಥಿತನಾಗಿ ತನ್ನ ಇಂದ್ರಿಯಗಳಿಂದ ಸ್ಥೂಲವಾದರೂ ಸಹ ಸರ್ವೋಪ ಭೋಜ್ಯವಾದ ಅನ್ನವನ್ನು ಭುಂಜಿಸುತ್ತಾನೆ. ಅದರಲ್ಲೂ ಶುಭವನ್ನೇ ಸ್ವೀಕರಿ ಸುತ್ತಾನೆ. ಸುರರು, ಅಸುರರು, ನರರು, ಪಶುಗಳು, ಪಕ್ಷಿಗಳು, ಮೃಗಗಳು, ಸರ್ಪಗಳು ಮುಂತಾದವುಗಳು ತಹುತಮಗೆ ಉಚಿತವಾದ ಅನ್ನ ಮುಂತಾದವು ಗಳನ್ನು "ತಿನ್ನುವದು, ಮೂಸಿನೋಡುವದು (ಆಘ್ರಾಣಿಸುವದು) ಕಣ್ಣಿನಿಂದ ನೋಡುವದು" ಹೀಗೆ ಮೂರು ವಿಧ ಭೋಗಗಳನ್ನು ಹೇಳಿರುವದರಿಂದ ಈ ಮೂರು ತರಹಗಳಿಂದ ಅನುಭೋಗಿಸುವಾಗ ಹರಿಯು ಸುರಾಸುರ ಮುಂತಾ ದವರಲ್ಲಿ ನಿಂತು, ಅವರವರ ಇಂದ್ರಿಯ ಮುಂತಾದವುಗಳಲ್ಲಿ ತನ್ನ ಇಂದ್ರಿಯ ಗಳನ್ನು ಸೇರಿಸಿ (ಇಟ್ಟು) ಅವುಗಳಿಂದ ಅನುಭೋಗಿಸುತ್ತಾನೆ.

ಹಾಗಾದರೆ ಜೀವಭೋಗ್ಯವಾದ ವಿಷಯಗಳನ್ನೆಲ್ಲ ಭುಂಜಿಸುವದಾದರೆ ದುರ್ಗಂಧ ಪದಾರ್ಥಗಳ ಭೋಗವು ಪರಮಾತ್ಮನಿಗೆ ಹೇಗೆ ಯುಕ್ತವಾಗುತ್ತದೆ?

ಸಲ್ಲುತ್ತದೆ? ಎಂದು ಗೀತಾಭಾಷ್ಯದಲ್ಲಿ ಶಂಕಿಸಿದುದಕ್ಕೆ ಉತ್ತರಿಸಿರುತ್ತಾರೆ. ದುರ್ಗಂಧಗಳಲ್ಲಿಯೂ ಪರಮಾತ್ಮನಿಗೆ ಭೋಗವಿರುತ್ತದೆ. ನೋಟದಿಂದ (ದೃಷ್ಟಿಯಿಂದ) ಉಪಭೋಗ್ಯವಾದುದನ್ನು ಪಾದ ಮುಂತಾದವುಗಳಿಂದ ಭೋಗಿಸುವಂತೆ ಜಿಹ್ವೇಂದ್ರಿಯದಿಂದ ಉಪಭೋಗಿಸಲ್ಪಡುವದನ್ನು ಕಣ್ಣಿನಿಂದ ಉಪಭೋಗಿಸುತ್ತಾನೆ. ದುರ್ಗಂಧಗಳಿಂದ ನಮಗೆ ಹೇಗೆ ದುಃಖಾನುಭವರೂಪ ಭೋಗವಾಗುತ್ತದೆಯೋ ಹಾಗೆ ಪರಮಾತ್ಮನು ದುರ್ಗಂಧಗಳನ್ನು ತಿಳಿಯುತ್ತಿದ್ದರೂ ಅವನಿಗೆ ಆ ಜ್ಞಾನವು ದುಃಖ ಮುಂತಾದವು ಪರಿಣಾಮವನ್ನು ಹುಟ್ಟಿಸುವದಿಲ್ಲ. ನಮಗೆ ದುರ್ಗಂಧ ಜ್ಞಾನದೊಡನೆಯೇ ಅದರ ಪರಿಣಾಮವು ಅನುಭವಕ್ಕೆ ಬರುತ್ತದೆ. ಹೀಗೆ ನಮಗೆ ಆದಂತೆ ಹರಿಗೆ ದುರ್ಗಂಧಾನುಭಾವವಿರುವದಿಲ್ಲ. ಗೀತಾಭಾಷ್ಯದಲ್ಲಿ "ತಿಳಿದುಬಂದರೂ ಗಂಧ ಮುಂತಾದವುಗಳು ಶ್ರೀಹರಿಯಲ್ಲಿ ಫಲ ಪರಿಣಾಮಕಾರಿಗಳಾಗುವದಿಲ್ಲ" ಎಂದು ಶ್ರೀಮದಾಚಾರ್ಯರು ಉಪದೇಶಿಸಿರುತ್ತಾರೆ.

"ಸುಖಪದಾರ್ಥಗಳಲ್ಲಿ ಮಾತ್ರ ಭೋಗವು ಬೇರೆಯಾಗಿರುತ್ತದೆ. ಅಲ್ಲಿ ಬರೇ ದೃಷ್ಟಿಯಿಂದ ಭೋಗವಿರದೆ, ಚರ್ವಣನುರಿಸುವದು ಮುಂತಾದ ರೂಪವಾದ ಭೋಗವೂ ಇರುತ್ತದೆ. ಸುಗಂಧವು ಸುಖದ ಅಭಿವ್ಯಕ್ತಿಗೆ ಕಾರಣವಾದುದು" ಎಂದು ಉಪಪಾದಿಸಿರುತ್ತೇವೆ ಎಂದು ಗೀತಾಭಾಷ್ಯ ಪ್ರಮೇಯದೀಪಿಕೆಯಲ್ಲಿ ನಿರೂಪಿತವಾಗಿರುತ್ತದೆ.

ಇನ್ನು "ಸ್ಥೂಲ" ರಸವನ್ನು ಭುಂಜಿಸುವವರು ವಿಶ್ವ ಮುಂತಾದ ಭಗವಂತನ ರೂಪಗಳು. ವಿಶ್ವವಿರಾಟ ಮುಂತಾದ ಭಗವದ್ರೂಪಗಳಿಗೆ ಪ್ರವಿವಿಕ್ತ ರಸವನ್ನು ಅರ್ಪಿಸಬೇಕು. ಅವತಾರ ರೂಪಗಳಿಗೆ ಆನಂದವೆಂಬ ರಸವನ್ನು ಅರ್ಪಿಸಬೇಕು. ವ್ಯಾಪ್ತ ರೂಪಗಳಿಗೆ "ಸ್ಥೂಲ"ವೆಂಬ ರಸವನ್ನು ಅರ್ಪಿಸಬೇಕು. ಅಂಶರೂಪಗಳಿಗೆ (ಅನ್ನ ಮುಂತಾದವುಗಳಲ್ಲಿರುವ ರೂಪಕ್ಕೆ) "ನಿಸ್ಸಾರ" ರಸವನ್ನು ಸಮರ್ಪಿಸಬೇಕು. "ಪರಮಾತ್ಮನು ರಸಗಳಿಗೆ ನಿಯಾಮಕನು" ಎಂದು ಧ್ಯಾನಿಸುವದೇ ಸಮರ್ಪಣವು.

"ರಸೋಽಹಂ ಅಪ್ಸು ಕೌಂತೇಯ" ಎಂಬ ಗೀತೆಯ ಭಾಷ್ಯದಲ್ಲಿ "ಈ ಆರು ರಸಗಳು ಪರಮಾತ್ಮನ ಪ್ರತೀಕಗಳು; ಪರಮಾತ್ಮನು ಇವುಗಳಲ್ಲಿ ಆಯಾ ಪದಗಳಿಂದ ವಾಚ್ಯನಾಗಿದ್ದು ಅವುಗಳ ಕಾರಣ ಅಂತರ್ಯಾಮಿಯಾಗಿದ್ದು

ಇವುಗಳಿಗೆ ಆಶ್ರಯನಾಗಿರುತ್ತಾನೆ" ಎಂದು ಉಪಾಸಿಸಬೇಕು. ಹೀಗೆ ನಿರೂಪಿಸಿರುತ್ತಾರೆ.

"ಅಪ್ಸು– ರಸಃ" ಎಂಬುದಾಗಿ ವಿಶೇಷ ಶಬ್ದಗಳನ್ನು ಪ್ರಯೋಗಿಸುವದಕ್ಕೆ ಇರುವ ಪ್ರಯೋಜನವನ್ನು ನಿರೂಪಿಸುತ್ತಾರೆ—"ಉಪಾಸನಾರ್ಥಂಚ" ಎಂಬ ಪದದಿಂದ ಭಾಷ್ಯಕಾರರು ಎಂದು ಟೀಕಾಕಾರರು ಅವತಾರಿಸಿರುತ್ತಾರೆ. ಇದಕ್ಕೆ ಗೀತಾಕಲ್ಪದ ಆಧಾರವಿರುತ್ತದೆ. ಅದರಲ್ಲಿ "ರಸಗಳಿಗೆ ರಸತ್ವಕ್ಕೂ (ರಸಭಾವ) ಅವುಗಳಿಗೆ ಆಯಾ ಸ್ವಭಾವ ಧರ್ಮಕ್ಕೂ, ಸಾರಭಾವಕ್ಕೂ ಎಲ್ಲ ಧರ್ಮಗಳಿಗೂ ವಿಶೇಷವಾಗಿಯೂ ಸಹ ಶ್ರೀ ಹರಿಯು ಕಾರಣನು ; ಸರ್ವತ್ರ ಸಾರಭೋಕ್ತೃನು ಆದುದರಿಂದ ಜಲ ಮುಂತಾದ ಸಕಲ ವಸ್ತುಗಳಲ್ಲಿ ರಸ ಮುಂತಾದ ಶಬ್ದಗಳಿಂದ ಹರಿಯು ಕರೆಯಲ್ಪಡುತ್ತಾನೆ." ರಸಾಭಿಮಾನಿಗಳ ದೇಹದಲ್ಲಿ ಎಲ್ಲೆಡೆ ಯಲ್ಲಿಯೂ ಅವನು ವ್ಯಾಪಿಸಿರುತ್ತಾನೆ (ಇರುತ್ತಾನೆ). ಪಾರ್ಷದರು (ಸನಕಾದಿಗಳು) ಅಪ್ ಮುಂತಾದವುಗಳ ಅಭಿಮಾನಿಗಳು. ಜಗನ್ನಿಯಾಮಕ ವಾಸುದೇವನನ್ನು ರಸ-ತದಭಿಮಾನಿ-ತತ್ತತ್ಪದಾರ್ಥಗಳಲ್ಲಿ ಧ್ಯಾನಿಸಬೇಕು" ಎಂದು ಹೇಳಲಾಗಿರುತ್ತದೆ.

ಈ ಭಾಷ್ಯಟೀಕೆಯಲ್ಲಿ ರಸ ಮೊದಲಾದವುಗಳು ಪರಮೇಶ್ವರ(ಹರಿ)ನ ಪ್ರತಿಮೆಗಳೆಂದು ಅಭಿಪ್ರಾಯವಿದೆ. ಪ್ರತಿಮೆಗಳಲ್ಲಿ ಭೇದವಾಚಕ ಶಬ್ದಪ್ರಯೋಗವು ಪ್ರಸಿದ್ಧವಿದೆ (ಆದುದರಿಂದ "ನಾನು ಜಲದಲ್ಲಿ ರಸನು" ಎಂಬ ಪ್ರಯೋಗವು ಯುಕ್ತವಿದೆ). ಪರಮಾತ್ಮನು ಪದಾರ್ಥಗತ ಸಾರಭೋಕ್ತೃವೆಂದು ಹೇಳಿದರೆ "ಅನಶ್ನನ್ ಅಭಿಚಾಕಶೀತಿ" "ತಿನ್ನದೇ ಅತಿ ಪ್ರಕಾಶಿಸುತ್ತಾನೆ" ಎಂದು ಮುಂತಾಗಿರುವ ಶ್ರುತಿವಿರೋಧ ಬರುವದೆಂದು ಆಕ್ಷೇಪಿಸಬಹುದು. ಆದರೆ ಈ ಶ್ರುತಿಗಳಲ್ಲಿ ಹೇಳಿರುವ "ಅನಶನ" (ತಿನ್ನದಿರುವದು) ಶಬ್ದದ ಅರ್ಥವು ಬೇರೆಯಾಗಿರುತ್ತದೆ. "ಸ್ಥೂಲವಾದ ಭೋಗವಿಲ್ಲದವನು" ಎಂದು ಅರ್ಥ. ಸ್ಥೂಲವೆಂದರೆ "ಜೀವರಿಂದ ಭೋಗ್ಯವಾದುದು" ಎಂದು ಅರ್ಥ. ಸೂಕ್ಷ್ಮ ಭೋಗವು ಇದೆ ಎಂದು ಶ್ರುತಿಗಳೇ ಹೇಳುತ್ತದೆ. ಈ ಜೀವನಿಗಿಂತಲೂ ಅತ್ಯಂತ ವಿಲಕ್ಷಣವಾದ ಭೋಗವುಳ್ಳವನು ಎಂಬಂತೆ ಪರಮೇಶ್ವರನು ಇರುತ್ತಾನೆ. ಅಂದರೆ "ಸೂಕ್ಷ್ಮ ಭೋಗವುಳ್ಳವನು ಎಂದು ತಾತ್ಪರ್ಯ. ಅವತಾರ ರೂಪಗಳಲ್ಲಿ ಸ್ಥೂಲ ಭೋಗವೂ ಇರುವದರಿಂದ "ಇವ" (ಎಂಬಂತೆ) ಶಬ್ದವನ್ನು

ಪ್ರಯೋಗಿಸಿರುತ್ತಾರೆ. "ಪರಮಾತ್ಮನು ಸೂಕ್ಷ್ಮ ಭೋಕ್ತೃವಾಗಿರುವದರಿಂದ ಭೋಕ್ತೃವೂ ಸ್ಥೂಲಭೋಗವಿಲ್ಲದ್ದರಿಂದ ಅಭೋಕ್ತೃವೂ ಎಂದು ಶ್ರುತಿಗಳಲ್ಲಿ ಹೇಳಲ್ಪಡುತ್ತದೆ. ಆದುದರಿಂದ ವಿರೋಧ ಬರುವದಿಲ್ಲ ॥ ೨೭ ॥

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ೬ ರಸಗಳು ವಿವರಿಸಿದಂತೆ ಶ್ರೀಹರಿ, ಲಕ್ಷ್ಮೀ, ಬ್ರಹ್ಮಾದಿ ಯೋಗ್ಯ ರಸಗಳಾವುವು? ರಸವಿಭಾಗವೇನು? ಇದನ್ನರಿಯದೇ ನಾವು ದೊಡ್ಡ ಸತ್ಕುಲಪ್ರಸೂತರು ಎಂದು ಬೊಂಬೆಗಳನ್ನು ಹರಹಿ ಪೂಜಿಸುತ್ತ ಪುರುಷಾರ್ಥಗಳನ್ನು ಬಯಸುವರ ಯತ್ನ ನಿಷ್ಫಲವೆಂದು ದೃಷ್ಟಾಂತಪೂರ್ವಕವಾಗಿ ವರ್ಣಿಸುತ್ತಾರೆ.

ಮೂಲ :

**ಜಲಗತೋಡುಪ ನಮಲ ಬಿಂಬವ ।**
**ಮೆಲುವೆವೆಂಬತಿ ಹರುಷದಿಂದಲಿ ।**
**ಜಲಚರ ಪ್ರಾಣಿಗಳು ನಿತ್ಯದಿ ಯತ್ನಗೈವಂತೆ ॥**
**ಹಲಧರಾನುಜ ಭೋಗ್ಯರಸಗಳ ।**
**ನೆಲೆಯುನರಿಯುದೆ ಪೂಜಿಸುತ ಹಂ ।**
**ಬಲಿಸುವರು ಪುರುಷಾರ್ಥಗಳ ಸತ್ಕುಲಜರಾವೆಂದೂ ॥ ೨೮ ॥**

**ಪದ್ಯಾರ್ಥ :** ಜಲಗತೋಡುಪನ = ಜಲ + ಗತ + ಉಡುಪನ, ಜಲ ನೀರಿನಲ್ಲಿ ಕಾಣತಕ್ಕ ನಕ್ಷತ್ರಪತಿಯಾದ ಚಂದ್ರನ, ಅಮಲಬಿಂಬನ = ನಿರ್ಮಲವಾದ ಚಂದ್ರಮಂಡಲವನ್ನು ನೋಡಿ, ಜಲಚರ ಪ್ರಾಣಿಗಳು = ಆ ನೀರಿನಲ್ಲಿ ಸಂಚರಿಸತಕ್ಕ ಜೀವಿಗಳು ನೀರಿನಲ್ಲಿ ಕಾಣುವ ಚಂದ್ರಮಂಡಲವನ್ನು, ಮೆಲುವವು ಎಂಬ ಅತಿ ಹರುಷದಿಂದ = ಈಗಲೇ ಚಂದ್ರಬಿಂಬವನ್ನು ತಿನ್ನುವೆವು, ನುಂಗುವೆವು ಎಂದು ಸಂತೋಷದಿಂದಲಿ, ನಿತ್ಯ = ಪ್ರತಿದಿನ ಯತ್ನಗೈವಂತೆ ಪ್ರಯತ್ನಮಾಡಿದರೆ ಆ ಪ್ರಯತ್ನವು ಹೇಗೆ ನಿಷ್ಫಲವಾಗುತ್ತದೆಯೋ? ಇಲ್ಲ ಸಾಧ್ಯವಾಗುವದಿಲ್ಲ. ಅದರಂತೆ ಹಲಧರಾನುಜ ಯೋಗ್ಯರಸಗಳ = ನೇಗಿಲನ್ನು ಪಿಡಿದ ಶೇಷಾಂಶ ಬಲರಾಮದೇವರಿಗೆ ತಮ್ಮನೆನಿಸಿ ಅವತರಿಸಿದ ಶ್ರೀಕೃಷ್ಣನ = ಶ್ರೀಹರಿಯ ಭೋಗ್ಯರಸಗಳ, ಶ್ರೀಹರಿಯ ಸಾರಾದಿ ಆರು ರಸಗಳ, ನೆಲೆಯನರಿಯದೇ = ಇಂಗಿತ ಗುಟ್ಟು ರಹಸ್ಯವನ್ನು ತಿಳಿಯದೇ, ಸತ್ಕುಲಜರಾವೆಂದು = ನಾವು ಒಳ್ಳೆ ಸತ್ಕುಲಪ್ರಸೂತರು, ಮನೆತನಸ್ಥ ಆಚಾರ್ಯರು, ದಾಸಸಂಪ್ರಜ್ಞರಲ್ಲಿ ಬಲ್ಲವರು, ಸ್ವಾಮಿಗಳ ವಂಶಸ್ಥರೂ ಎಂದು ಪೂಜಿಸುತ =

ಅನೇಕ ಪ್ರತಿಮಾಗಳನ್ನು ಹರಹಿಕೊಂಡು, ಪೂಜಾ ನೈವೇದ್ಯ ರಸವಿಭಾಗ ತಿಳಿಯದೇ ಪೂಜಾ ಮಾಡುವರು. ಏತಕ್ಕೆ ಈ ಪೂಜಾ ಎಂದರೆ ಈ ಪೂಜಾ ದಿಂದ ಪುರುಷಾರ್ಥಗಳನ್ನು ಹಂಬಲಿಸುವರು, ಧರ್ಮ – ಅರ್ಥ ಕಾಮವನ್ನು ಬಯಸಿದರೆ ಅವರ ಪ್ರಯತ್ನವು ಸಫಲವಾದೀತೆ ? ಆಗದು.

**ದ್ರೌಪದೀಶಪತಿ ವಿಠಲರು :** ಜಲಗ ತೋಡುಪ =ಉದಕದಲ್ಲಿ ಕಾಣು ವಂಥ ಚಂದ್ರಬಿಂಬ.

**ಭಾವಸೂಚನ :** ಜಲೇತಿ ||

" ಜಲಗತ " ಇತಿ || " ಗೈವಂತೇ "–ಮಾಡುವಂತೇ || "ಆವು" – ನಾವು || ೨೮ ||

"ಪರಮಾತ್ಮ ಭೋಗ್ಯರಸಗಳನ್ನು ಸರಿಯಾಗಿ ಅರಿಯದೆ ಕೇವಲ ಸತ್ಕ ಲಾಭಿಮಾನದಿಂದ ತೋರಿ ಮಾಡುವ ಪ್ರತಿಮಾದಿಗಳ ಪೂಜೆಯು ನೀರಿನಲ್ಲಿರುವ ಚಂದ್ರಪ್ರತಿಬಿಂಬವನ್ನು ತಿನ್ನಲು ಮಾಡುವ ಜಲಚರ ಪ್ರಾಣಿಗಳ ಯತ್ನದಂತೆ ವಿಫಲವಾಗುತ್ತದೆ" ಎಂದು ಈ ಪದ್ಯದ ಭಾವ || ೨೮ ||

**ಅವತರಣಿಕಾ :** ಸಕಲ ರಸಗಳ ಯೋಗ್ಯ ವಿಭಾಗಗಳನ್ನರಿತು ಅವರ ವರ ದ್ವಾರಾ ಲಕುಮಿಪತಿಗೆ ಅರ್ಪಿಸಲು ರಮಾವರನು ತನ್ನ ಶುಭರಸ ಸ್ವೀಕರಿಸಿ ಯಾವ ಜೀವಗಣಕೆ ಅವರವರಿಗೆ ಯೋಗ್ಯವಾದ ರಸಗಳನ್ನು ಕೊಡುವನೆಂದು ಉಪದೇಶಿ ಸುತ್ತಾರೆ.

**ಮೂಲ :**

**ದೇವಋಷಿ ಗಂಧರ್ವ ಪಿತೃ ನರ |**
**ದೇವ ಮಾನವ ದನುಜ ಗೋಜ ಖ |**
**ರಾವಿ ಮೊದಲಾದಖಿಳ ಚೇತನ ಭೋಗ್ಯರಸಗಳನು ||**
**ಯಾವದವಯವಗಳೊಳಿದ್ದು ರ |**
**ಮಾವರನು ಸ್ವೀಕರಿಪ ಯಾ |**
**ವಜ್ಜೀವಗಣಕೆ ಸ್ವಯೋಗ್ಯರಸಗಳ ನೀಯುನೆಂದೆಂದು || ೨೯ ||**

**ಪದ್ಯಾರ್ಥ :** ದೇವ = ದೇವತೆಗಳು, ಋಷಿ = ಮುನಿಗಳು, ಗಂಧ ರ್ವರು = ಗಾನವಿದ್ಯಾಕುಶಲರು, ದೇವ ಗಂಧರ್ವರೆಂದು, ನರಗಂಧರ್ವರೆಂದು ಎರಡು ವಿಧ, ಪಿತೃಗಳು = ಪಿತೃಗಣ ಬೇರೆ ಬೇರೆ ಇಪ್ಪವು. (ಇವರ

ತಾರತಮ್ಯದಂತೆ ಅವರವರು ಯಾವ ರಸಭೋಕ್ತರೆಂಬುದನ್ನು ತಿಳಿಯಬೇಕು). ಮಾನವ = ಮನುಷ್ಯರು, ದನುಜರು = ದನುದೇವಿ ಮಕ್ಕಳು, ದಾಸವರು, ಗೋಜ = ಪೃಥ್ವಿಯಲ್ಲಿ ಹುಟ್ಟಿದ ಪ್ರಾಣಿಗಳೆಂತಲೂ ತಜ್ಞರ ಅರ್ಥ, ಕೆಲವರು ಗೋ = ಆಕಳು, ಅಜ ಆಡು ಎಂದು ಈ ಎರಡು ಅರ್ಥಗಳನ್ನು ಹೇಳುವರು, ಖರ = ಕತ್ತೆ, ಅವಿ = ಮೇಕೆ ಕುರಿ, ಮೊದಲಾದ ಅಖಿಳ ಚೇತನ ಭೋಗ್ಯ ರಸಗಳನು = ಎಲ್ಲ ಜೀವರ ಯೋಗ್ಯತೆಯಂತೆ ಅವರವರು ಅನುಭೋಗಿಸುವ ಯೋಗ್ಯವಾದ **ರಸಃ** = ರಸ್ಯತೆ ಇತಿ ರಸಃ ಆಸ್ವಾದನಮಾಡತಕ್ಕ ನಾಲಿಗೆ ಯಿಂದ ಸವಿರುಚಿ ನೋಡುವದು ಯಾವದೋ ಅದು ರಸವೆಂದು ಹೇಳುತ್ತಾರೆ. ಅವರವರಿಗೆ ತಕ್ಕ ರಸಗಳನ್ನು, ಯಾವದವಯುವಗಳೊಳಿದ್ದು = ಆ ಜೀವರ ಎಲ್ಲ ಅಂಗ ಉಪಾಂಗಗಳಲ್ಲಿ ಇದ್ದು, ಯಾವಾವಾವ ಇಂದ್ರಿಯಗಳಿಗೆ ಯಾವ ರಸ ಬೇಕಾಗುತ್ತದೆ. ಆಯಾ ರಸಗಳಲ್ಲಿಯೂ ಇರುವ ತನ್ನ ಶುಭಸಾರ ರಸವನ್ನು ತನ್ನ ಸ್ವಾಖ್ಯರಸವನ್ನು, ರಮಾವರನು ಸ್ವೀಕರಿಪ = ರಮಾಪತಿಯಾದ ಶ್ರೀಹರಿಯು ಸ್ವೀಕರಿಸಿ ಯಾವಜ್ಜೀವಗಣಕೆ, ಸ್ವಯೋಗ್ಯ ರಸಗಳನೀಯನೆಂದೆಂದೂ = ಸಕಲ ಪ್ರಾಣಿಗಳಾದ ಚೇತನ ಸಮೂಹಕ್ಕೆ (ಮೂಲಪ್ರತಿಯಲ್ಲಿ ಸ್ವಯೋಗ್ಯರಸಗಳನೀಯನೆಂದೆಂದು ಇದೆ) ತನ್ನ ಯೋಗ್ಯವಾದ ಶುಭಸಾರ ರಸಗಳನ್ನು ಜೀವಗಣಕೆ ಎಂದೆಂದಿಗೂ ಕೊಡುವದಿಲ್ಲವೆಂಬುದು ಸಮಂಜಸ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೇವ" ಇತಿ ‖ "ಗೋಜ" ಪೃಥ್ವೀ = ಜ ‖ "ಆವಿ"–ಕುರೀ ‖ "ಈಯು" – ಕೊಡ ‖ ೨೯ ‖

## ಕನ್ನಡಾರ್ಥ

"ಸಮಸ್ತ ಜೀವರ ಎಲ್ಲ ಅವಯುವ ಇಂದ್ರಿಯಗಳಲ್ಲಿದ್ದು ಅವರೆಲ್ಲರೂ ಭುಂಜಿಸಬೇಕಾದ ಸಕಲ ರಸಗಳನ್ನೂ ತಾನು ಸ್ವೀಕರಿಸಿ ಯಾವ ಜೀವನಿಗೂ ತನ್ನ ಭೋಗ್ಯರಸವನ್ನು ಎಂದಿಗೂ ಕೊಡದೇ ಅವರವರ ಯೋಗ್ಯ ಭೋಗ್ಯ ರಸಗಳನ್ನಷ್ಟೇ ಅವರಿಗೆ ಕರುಣಿಸುವನು" ಎಂದು ದಾಸರಾಯರ ಭಾವ ‖೨೯‖

## ರಸ ರಸಾಯನ ವಿಭಾಗ ವಿವರ

ವಿಶೇಷಸೂಚನೆ — ಶ್ರೀ ವಿಜಯದಾಸಾರ್ಯರು ಉಪಾಸನಾ ಭಾಗ ಸುಳಾದಿ ೩೦, ಅಟ್ಟತಾಳ ಪುಟ ೧೦೨ ರಲ್ಲಿ ಅಪ್ಪಣೆ ಕೊಡಿಸಿದ್ದಾರೆ ಏನೆಂದರೆ,

**"ರಸರಸಾಯನ ಋಚಿ ಭುಂಜಿಸಬೇಕು,** ವಾ । ನಿಸರೊಳಗಿದ್ದರು ತನ್ನ ಮನಸು ಬೇರೆ । ಹಸನಾಗಿ ಇರಬೇಕು ಹಸುಳೆಯಂದದಲಿ । ಚರಿಸಬೇಕು ಸ್ವಾತಂತ್ರ್ಯ ಅಸ್ವಾತಂತ್ರ್ಯವು । ವಶವಾಗಿ ಎನಗಿಲ್ಲೆಂದು ತಿಳಿದು ರಂ । ಜಿಸಬೇಕು ನಿಜೋಚ್ಚವಸ್ತುವೆ ಸಮನಾಗಿ । ಉಸುರಲೇನಯ್ಯಾ ಸರ್ವೇಂದ್ರಿಯಗಳ। ವ್ಯಾಪಿಸಿದ ವ್ಯಾಪಾರ ಸ್ಥಿತಿಗತಿ ಧರ್ಮವ । ಬಿಸಿಜ ಜಾಂಡಮಧ್ಯ ಯೋಗ್ಯ ಸ । **ರಸ ದ್ರವ್ಯಗಳೆಲ್ಲ ಮೆಲುವ ಬಗೆ ತಿಳಿ। ಅಸಮ ದೈವವಾದ ಹರಿ ಮುಖ್ಯ** ಆತನ ಪೆಸರು ಒಂದನೆ ಕೇಳಿ ಅನಂತ ಅಲ್ಲೆನ್ನು । ಪುಸಿಯದೆ ಅಲ್ಲಿದ್ದ ಅಭಿಮಾನಿ **ದೇವತಿಯ** । ಪೆಸರನೆ ತಿಳಿವುದು ಮತ್ತೆ **ಸರ್ವಸುರ ವಸತಿಯಾಗಿಪ್ಪ**ರು ನಿಬಿಡೀಕೃತಿಯಾಗಿ । ಎಸರು **ಚತುರ್ವಿಂಶತಿ ತತ್ವಾತ್ಮಕ** ರಸ **ಉಂಟಲ್ಲದೆ** ಬರಿದೆ ಇಲ್ಲವೆನ್ನು । **ಅಸುರರು ತಮ್ಮ ತಮ್ಮ ವ್ಯಾಪಾರದಲ್ಲಿ** । **ಮಿಸುಕದೆ ಇಪ್ಪರು ಒಂದೊಂದರಲಿ** । ಪಶುಪಾಲಾ ವಿಜಯವಿಠ್ಠಲರೇಯ ಸರ್ವದಾ । ವಸತಿಯಾಗಿಪ್ಪ ಚೇತನ ಅಚೇತನದಿ ॥ ೪ ॥

ಹೀಗೆ ಒಂದು ವಸ್ತುವಿನಲ್ಲಿ ಹರಿಯ ಶುಭಸಾರ, ಶ್ರೀ ರಮಾರಸ, ಬ್ರಹ್ಮಾದಿ ಸಕಲ ೨೪ ತತ್ವಾಭಿಮಾನಿ ದೇವತೆಗಳ ರಸ ಬೇರೆ ಇಪ್ಪವು. ಇವುಗಳನ್ನು ಸರಿಯಾಗಿ ತಿಳಿದು ಅರ್ಪಿಸಬೇಕು. ಇದಲ್ಲದೇ ಒಂದೊಂದು ಪದಾರ್ಥಗಳಲ್ಲಿ ತಮೋ ಯೋಗ್ಯರಾದ ಅಸುರರ ರಸವು ಬೇರೆ ಇಪ್ಪದು ಅಲ್ಲಿ ವ್ಯಾಪಾರ ಇರುವದು. ಈ ಸರ್ವರಸ ವಿಚಾರ ತಿಳಿದು ಆಯಾ ವಸ್ತುಗತ ರಸಕ್ಕೂ ಸ್ಥೂಲದೇಹದಲ್ಲಿರತಕ್ಕ ೨೪ ತತ್ವಗಳು ತತ್ವಾಭಿಮಾನಿ ರಸಗಳಿಗೂ ಬಿಂಬೈಕ್ಯ ಚಿಂತಿಸುವ ಬಗೆ ಮುಂದೆ—

**ಆದಿ**ತಾಳದಲ್ಲಿ ವಿವರಿಸುತ್ತಾರೆ — " ಹರಿಗೆ ಹರಿಗೆ ಐಕ್ಯ – ಸಿರಿಗೆ ಸಿರಿಗೆ ಐಕ್ಯ । ಸರ್ವ ತಾತ್ವಿಕರಿಗೆ ಅವರವರಿಗೆ ಐಕ್ಯ । ಮಿರುಗುವ ಚತುರವಿಂಶತಿ ಜಡತತ್ವಕೆ ಐಕ್ಯ । ಸರಿಬಂದಂತೆ ತಿಳಿ ಸರಸಿಜಾಂಡವೆ ಐಕ್ಯ । ತರತಮ್ಯ ಗುಣದಿಂದ ಚಿಂತಿಸಬೇಕು । . . . . . ಸರ್ವಸಮರ್ಪಣೆ ವಿಜಯವಿಠಲಗೆಂದು ಕುರುಹು ಕಂಡವ ಸರ್ವ ಉಂಡವ ಬಿಟ್ಟವ ॥ ೫ ॥

ಮುಂದೆ ಧ್ಯಾನಪ್ರಕರಣ ರಸ ಸಮರ್ಪಣೆಯಲ್ಲಿಯೂ ಉಪಾಸನಾ ಸುಳಾದಿ ೪೪, ಪುಟ ೧೪೨–೧೪೩ ರಲ್ಲಿಯೂ ಬಹು ವಿಚಾರ ಹೇಳಿದ್ದಾರೆ.

## ಧ್ರುವತಾಳ ಅರ್ಥಾದಿಂದ

"ಸಮರ್ಪಣೆ ಪ್ರಕಾರ ತಿಳಿವುದು ಚೆನ್ನಾಗಿ। ಸಮಬುದ್ಧಿ ಉಳ್ಳ ಜನರು ಸತತದಲ್ಲಿ। . . . . . . . . .

ಅನುಲವಾದ ಪೂಜೆ ಹದಿನಾರು ದಿಕ್ಕಿನಿಂದ। ಕ್ರಮ ತಿಳಿದು ಆವಾಹನ ಧ್ಯಾನಮಾಡಿ। ಅಮಿತ ಪ್ರತಾಪ ಹರಿ ನಿಸ್ಪೃಹ ನಿತ್ಯತೃಪ್ತ। ಕಮಲಭವಾದಿ ಮನಕೆ ದೂರಕ್ಕೆ ದೂರ। ಅಮಿಸ್ರ ಮಿಕ್ಕಾದ ರಸಭೋಕ್ತಾ ನಾನಾ ರೂಪದಲಿ। ಭ್ರಮೆ ಇಲ್ಲವಗೆ ನಿಜಪೂರ್ಣ ಸುಖನೊ। ಕ್ಷಮ ಮಧ್ಯದಲ್ಲಿ ಸ್ಥೂಲಮಧ್ಯಮ ಸೂಕ್ಷ್ಮವೆಂದೀ। ಕ್ರಮದಿಂದ ಪ್ರಸಿದ್ಧವಾಸನ ಚಿತ್ತು। ಚಮತ್ಕಾರ ಒಂದೊಂದಕೆ ತ್ರಿವಿಧ ಬಗೆವುಂಟು। ಸುಮತಿ ಲೋಕಕೆ ಸುಲಭವಾಗಿಪ್ಪದು। ಸಮನಿಸಿ ತಿಳಿಯಬೇಕು ಚತುರವಿಧ ಅನ್ನ। ರಮೆ ಬೊಮ್ಮ ತಾತ್ವಿಕರು ಸಾಕ್ಷಾತ್ಪರಮಾ। ನಿಮಿಷ ಬಿಡದೆ ಇನಿತು ಕೃಷ್ಣಾದಿ ಇಷ್ಟ ವಾಸ। ನಾಮಯದಿ ಪ್ರಾಜ್ಞಬಿಂಬ ಕೈಕೊಂಬುವರು। ಕಹುತ ಕಪಿಲ ಭೃಗುನರಸಿಂಹ। ರಮಿಪ ಜಿಹ್ವೇಂದ್ರಿಯದಲಿ ಸ್ವೀಕರಿಸಿ। ಕುಮತಿ ಜನಕೆ ತಿಳಿಯಗೊಡನೊ। ತಿಮಿರ ಭಾನುಭವಾರ್ಣವತಾರಕ ಉ। ತ್ತಮವಾದ ಯೋಗ್ಯ ರಸತತ್ತ್ವತ್ಪದಾರ್ಥದಲಿ। ಸಮ ತಿಳಿಸಿಕೊಂಡಕೆ ಯೋಗಮಾಯಾ। ಅಮರರಿಗೆ ಉಣಿಸುವ ತಾನು ಕೈಕೊಂಬುದು। ರ್ಗಮ ಕಾಣೊ ದುಃಖದೂರ ಮಹಾ ಪ್ರಭುವೋ। ಉಮೆಯರಸ ಪರಿಯಂತ ಈ ರಸ ಸಲ್ಲುವದು। ಕಮಲ ಭವಗೆ ಲಕುಮಿಗೆ ಇಲ್ಲವೊ। ಸುಮನಸಗಣಕೆ ಲೇಪನವಿಲ್ಲಾ ಅವರವರ ಆ। ತುಮದೊಳಗಿದ್ದಾ ಖಳರಲಿ ಐಕ್ಯ। ಕ್ರಮಗೆಡುವದುವೊಮ್ಮೆ ಇದರ ಪ್ರಾಚುರ್ಯದಿಂದ। ತಮತಮ ಸ್ವಾಭಾವಿಕ ನಡತೆಯಲಿ। ಅಮಮ ಹರಿ ಪರಮ ಶಕ್ತ ಸೃಷ್ಟ್ಯಾ ಉಪ। ರಮದಲ್ಲಿ ಸರ್ವರನ್ನು ಉದರದೊಳ ಗು। ತ್ತಮ ತರದಿಂದ ಪೊಂದಿಟ್ಟುಕೊಂಡಿಪ್ಪ ಉ। ತ್ತಮ ಶ್ಲೋಕಪೂರ್ಣನ್ನ ಚರಿತೆಯೆಂತೋ। ಮಮತಾರಹಿತ ಪರಾಯು ಆರಂಭಿಸಿ। ಸಮಿಪ ಜನರು ಇತ್ತ ಭೋಗವಸ್ತು। ಕ್ರಮದಲಿ ಅವಾವ ತತ್ವಾತ್ಮಕ ರೂಗಗಳು। ಸಮಸ್ತ ಜೀವಿಗಳಿಗೆ ಏಕಮಾಳ್ಪ। ಕಮಲೇಶ ಶುಭರಸ ಸವಿಮುಂಬೋದು ನಿಶ್ಚಯವು। ಅಮಿತ ವಿಜ್ಞಾನಪೂರ್ಣ ಸ್ವರಮಣನು। ಕ್ರಿಮಿ ಮೊದಲಾದ ಚೇತನಕೆ ಉಪಜೀವ್ಯ ಆ। ಕ್ರಮಕೆ

ಭಗವಂತನಿಗೆ ಆಗುವದೇನೋ । ಭ್ರಮಣವಲ್ಲವೋ ಸ್ವಾಮಿ ಭಿನ್ನಾಂಶಿ ಅಂಶಕೆ ಸಂ । ಗಮ ಮಾಡಿಸುವ ವಂದೇ ಜೀವರನ್ನು । ನಮೋ ನಮೋ ನಮೋ ಯೆಂದು ಆದ್ಯಂತ ತಿಳಿದ ನರಗೆ । ಸಮವೃತ್ತಿ ಭೀತಿ ಇಲ್ಲ ಎಲ್ಲಿದ್ದರು । ಹಿಮಕರಾರ್ಣವ ವಿಜಯ ವಿಠ್ಠಲನನು । ಪಮನೆಂದರ್ಪಿಸೆ ಕೈವಲ್ಯ ಸರ್ವದ ಕೈಕೊಂಬ ॥ ೧ ॥

ಇಂತು ಸವಿಸ್ತರವಾದ ರಸವಿಭಾಗ ಶ್ರೀ ವಿಜಯದಾಸಾರ್ಯರ ಸುಳಾದಿಗೆ ಅನುಸರಿಸಿ – ದಾಸಾರ್ಯರು, ನಾಮಸ್ಮರಣ ಹರಿನಾಮರಸ ಸವಿಯನ್ನು ಈ ಒಂದೇ ಪದ್ಯದಲ್ಲಿ ವಿವರಿಸಿದ್ದಾರೆ. ಇಂತಹ ಜ್ಞಾನಿಗಳ ಸದುಪದೇಶವೇ ತಾರಕವಾದುದು. ಕಾರಣ ಸಮಮನಸ್ಸಿನಿಂದ ವಿಚಾರಿಸಿ ಈ ಎರಡೂ ಸುಳಾದಿಗಳ ಅರ್ಥ – ಇದರ ರಹಸ್ಯ– ರಸವಿಭಾಗ ಪೂರ್ಣ ಸಮಪ್ರಕಾರ ಎಲ್ಲವು ಸುಳಾದಿಲಿ ವಿವರಿಸಿದ್ದಾರೆ. " ವಿಜಯರಾಯರ ಪಾದ ನಿಜವಾಗಿ ನಂಬಲು ಅಜನಪಿತ ತಾನೆ ವೊಲಿವಾ ನಲಿವಾ " ಎಂದು ದಾಸರ ಪಾದಸ್ಮರಣೆಯೇ ಗತಿ. ಹಿಂದಿನ ಪದ್ಯ ೨೭ ರಲ್ಲಿ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಮಹಾಜ್ಞಾನಿಗಳು, ಒಳ್ಳೇ ರಸಭರಿತವಾಗಿ ಉಪದೇಶಿಸಿದ್ದಾರೆ. ಸುಳಾದಿಗಳ ಅರ್ಥವೇ ಕೌಮುದೀಕಾರರ ಅಭಿಪ್ರಾಯ ಒಂದೆಯೇ ಎಂದೂ ಬೇರೆ ಇಲ್ಲ. ಸ್ಥಿರಚಿತ್ತದಿಂದ ಅರಿತರೆ ಹರಿಯು ಒಲಿವನು.

ಅವತರಣಿಕಾ: ಕೆಟ್ಟ ಬುದ್ಧಿಗಳನ್ನು ಬಿಟ್ಟು, ಸರ್ವ ಆಶಾತೊರೆದು, ಹರಿಯೆ ಸಕಲಕ್ರಿಯೆ ಮಾಡುವನೆಂದು ಕಾಲ ಕಾಲಕ್ಕೆ ನೆನೆಸುತ್ತಿರು ಎಂದು ಸದುಪದೇಶ ಗೈಯ್ಯುತ್ತಾರೆ. ಇದೇ ಪರಿಶಾಪೋಚ್ಚಾರಣಿಗೆ ಸತ್ ಸಾಧನ.

ಮೂಲ :

ಒರಟುಬುದ್ಧಿಯು ಬಿಟ್ಟು ಲೌಕಿಕ ।
ಹರಟೆಗಳ ನೀಡಾಡಿ ಕಾಂಚನ ।
ಪರಟೆಲೋಷ್ಟಾದಿಗಳು ಸಮವೆಂದರಿದು ನಿತ್ಯದಲಿ ॥
ಪುರುಟಗರ್ಭಾಂಡೋದರನು ಸ ।
ತ್ಪುರುಷನೆಂದೆನಿಸೆಲ್ಲರೊಳಗಿ ।
ದ್ದುರುಟು(ಟೆ) ಕರ್ಮವ ಮಾಳ್ಪನೆಂದಡಿಗಡಿಗೆ ನೆನವುತಿರು
॥ ೩೦ ॥

**ಪದ್ಯಾರ್ಥ :** ಒರಟು = ಕಠಿಣ, ದುರಾಗ್ರಹ, ಕೆಟ್ಟ, ಬುದ್ಧಿಯನ್ನು ಬಿಟ್ಟು = ತ್ಯಜಿಸಿ, ಅಂದರೆ ಶಾಸ್ತ್ರ ಸಮ್ಮತವಲ್ಲದೆ ಇರುವ ಬುದ್ಧಿ. ಹಿಂದೆ ಹೇಳಿದಂತೆ. "ತನುವೆ ನಾನೆಂಬದು ಇತ್ಯಾದಿ ಪದ್ಯದಲ್ಲಿ ಹೇಳಿದಂತೆ ಇಂತಹ ಕೆಟ್ಟ ಬುದ್ಧಿ ಬಿಡಬೇಕು. ಲೌಕಿಕ ಹರಟೆಗಳ ನೀಡಾಡಿ = ಲೋಕಾವಾರ್ತೆಗಳನ್ನು ಬದಿಗೊತ್ತಿ ಒಗೆದು ದೂರೋಡಿಸಿ, "ತದಲಂ ಬಹುಲೋಕವಿಚಿಂತನಯಾ ಪ್ರವಣಂಕುರು ಮಾನಸ ಮಾಶಪದೇ" ಎಂಬುವ ಶ್ರೀ ಸರ್ವಜ್ಞರ ವಚನಾನುಸಾರ ಲೋಕವಾರ್ತೆ ಕೇಳದೆ, ಕಾಂಚನ = ಬಂಗಾರ, ಪರಟೆ = ಚಿಪ್ಪು, ಲೋಷ್ಟಾದಿಗಳು ಹೆಂಟೆಗಳು ಸಮವೆಂದರಿತು, ನಿತ್ಯದಲಿ = ಅಂದರೆ ಲೋಷ್ಟ ಪರಟೆಗಳಲ್ಲಿ ಎಷ್ಟು ಅನಾಸಕ್ತಿ ಅದರಲ್ಲಿ ಲಾಭವಿಲ್ಲೆನ್ನುವಂತೆ ಬಂಗಾರದಲ್ಲಿಯೂ, ಆಶಾ ತೊರೆದು, ನಿರಿಚ್ಛನಾಗಿರಬೇಕು. ಮುಖ್ಯವಾಗಿ ಎಲ್ಲ ಪದಾರ್ಥಗಳಲ್ಲಿರುವ ಹರಿಯು, ಸಮಶಬ್ದ ವಾಚ್ಯನಾಗಿ ಒಂದೇ ರೀತಿ ಒಬ್ಬನೇ ಸಮನೆಂದು ತಿಳಿಯಬೇಕು. ಇದೇ ಸುಜ್ಞಾನ. ಇದನ್ನೇ ಸರ್ವಕಾಲದಲ್ಲಿ ನೆನೆಯುತ್ತಿರಬೇಕು. ಪುರುಟಗರ್ಭಾಂಡೋದರನು = ಬ್ರಹ್ಮಾಂಡೋದರನು, ಅಥವಾ ಹಿರಣ್ಯಗರ್ಭ = ಹಿತತ್ವಾದ್ರಮಣೀಯತ್ವಾದ್ಧಿರಣ್ಯಾವರ್ಣತೇಪಿಚ || ಜಗತೋಗರಣಾಜ್ಞಾನಾದ್ಗರ್ಭೋ ವಿಷ್ಣುರುದಾಹೃತರಿತಿ, ಹಿರಣ್ಯಗರ್ಭ || (ವಿದ್ಯಾಧಿರಾಜೀಯ) ಸತ್ಪುರುಷವನೆಂದೆನಿಸಿ = ಉತ್ತಮ ಪುರುಷ, ಸರ್ವೋತ್ತಮನೆನಿಸಿ, ಎಲ್ಲರೊಳಗಿದ್ದು, ಉರುಟು ಕರ್ಮವ = ಉರುಟು ಹಳೆಗನ್ನಡ ಶಬ್ದ-ಉರುಟು = ಮೀರಿದ ಅಸಾಧ್ಯವಾದ ಇತರರಾದ ಯಾರಿಂದಲೂ ಮಾಡಲಿಕ್ಕೆ ಅಶಕ್ಯವಾದ, ಅನಾದಿ ಕರ್ಮವನುಸರಿಸಿ, ಶ್ರೀಹರಿಯು, ಸರ್ವಜೀವರೊಳಿದ್ದು ಉತ್ತಮವಾದ ಸರ್ವಕರ್ಮಗಳನ್ನೂ, ಮಾಳ್ಪನೆಂದು ಅಡಿಗಡಿಗೆ ನೆನವುತಿರು. ಹೆಜ್ಜೆ ಹೆಜ್ಜೆಗೆ-ಪದೇ ಪದೇ ನೆನೆಸುತ್ತಿರಬೇಕು.

ದ್ರೌಪದೀಶಪತಿ ವಿಠಲರು. ಒರಟು ಬುದ್ಧಿಯ ||

**ಭಾವಸೂಚನೆ:** ಪರಟೇತಿ || ಪುರುಟ ಸುವರ್ಣ || ಉರುಟ = ಸರ್ವ || ೩೦ ||

"ಒರಟು" ಇತಿ || ಒರಟು = ಕೆಟ್ಟ | "ಪುರುಟ"-ಭಂಗಾರ | "ಉರುಟ" - ಸ್ಥೂಲ || "ಅಡಿಗಡಿಗೆ" - ಹೆಜ್ಜೆಹೆಜ್ಜೆಗೆ || ೩೦ ||

**ಕನ್ನಡಾರ್ಥ**

"ದುರ್ಬುದ್ಧಿಯನ್ನು ಬಿಟ್ಟು ಸದ್ಬುದ್ಧಿಯಿಂದ ಲೋಷ್ಠ ಕಾಂಚನಗಳು ಹೇಯಬುದ್ಧಿಯಿಂದ ಸಮವೆಂದು ತಿಳಿದು-ಶ್ರೀಹರಿಯೇ ಸರ್ವೋತ್ತಮನೆಂಬ ಸುಜ್ಞಾನದಿಂದ ಅವನು ಮಾಡಿಸಿದಂತೆ ಸ್ಥೂಲಕರ್ಮವನ್ನು ನಾನು ಮಾಡುವೆನು" ಎಂದು ಅಡಿಗಡಿಗೆ ನೆನೆಯುವದೇ ಮಹಾ ಕರ್ತವ್ಯವೆಂದು ದಾಸರ ಆಶಯ ॥ ೩೦ ॥

**ಅವತರಣಿಕಾ:** ಆರಾದರೂ ಬೈಯ್ಯಲಿ ಆರಾದರೂ ಹಳಿಯಲಿ ಇದರೊಳಗೆ "ಕವರ್ಣ ಮೊದಲು ಕ್ಷವರ್ಣ ಪರಿಯಂತ ಪರಮಾತ್ಮ ನಾಮಗಳಿವೆಯೆಂದು ಸರ್ವ ನಾಮನು ಶ್ರೀಹರಿಯೇ ಎಂದು ಸ್ತೋತ್ರನಿಂದ್ಯಗಳನ್ನು ಸಮವಾಗಿ ತಿಳಿದು ಎಚ್ಚರಿಕೆಯಿಂದ ಸರ್ವನಾಮವೂ ಪರಮಾತ್ಮನ ಗುಣೋತ್ಕರ್ಷವೆಂದು ಅರ್ಪಿಸುವ ಬಗೆ ದೃಷ್ಟಾಂತದಿಂದ ಹೇಳುತ್ತಾರೆ.

**ಮೂಲ:**

**ಭೂತಳದಿ ಜನರುಗಳು ಮರ್ಮಕ ।**
**ಮಾತುಗಳ ನಾಡಿದರೆ ಸಹಿಸದೆ ।**
**ಘಾತಿಸುವರತಿ ಕೋಪದಿಂದಲಿ ಎಚ್ಚರಿಸತೆರದಿ ॥**
**ಮಾತುಳಾಂತಕ ಜಾರ ಹೇ ನವ ।**
**ನೀತ ಚೋರನೆ ಎನಲು ತನ್ನ ನಿ ।**
**ಕೇತನದೊಳಿಟ್ಟವರ ಸಂತೈಸುವನು ಕರುಣಾಳು ॥ ೩೧ ॥**

**ಪದ್ಯಾರ್ಥ :** ಭೂತಳದಿ =ಈ ಭೂಮಿಯಲ್ಲಿ, ಜನರುಗಳು =ಅಜ್ಞರು, ಮರ್ಮಕ ಮಾತುಗಳನಾಡಿದರೆ ಸಹಿಸದೆ = ಮರ್ಮಕ ಇಂಗಿತಗುಪ್ತ, ಕುತ್ಸಿತ ನಿಂದಾನುಡಿಗಳನ್ನು ಆಡಿದರೆ ತಡೆದುಕೊಳ್ಳಲಾಗದೆ, ಅತಿ ಕೋಪದಿಂದಲಿ ಘಾತಿಸುತ =ಬಹಳ ಸಿಟ್ಟಿನಿಂದ ಇಂಗಿತ ಮಾತಾಡಿದವನನ್ನು ಬೈಯ್ಯುವದು, ಹೊಡೆಯುವದು ಇತ್ಯಾದಿಗಳನ್ನು ಮಾಡಿ, ಎಚ್ಚರಿಸ ತೆರದಿ = ಇನ್ನುಮೇಲೆ ಇಂಥ ಮಾರ್ಮಿಕಗಳಾನ್ನಾಡಬೇಡನೆಂದು ಹೇಗೆ ಎಚ್ಚರಪುಟ್ಟುವಂತೆ ಮಾಡುತ್ತಾರೋ ಆದರಂತೆಯೇ (ಏಕದೇಶ ದೃಷ್ಟಾಂತ) ಶ್ರೀಹರಿಗೆ ಕೆಟ್ಟ ಮಾತುಗಳು ಆಡಿದರೆ ಸಿಟ್ಟು ಬರುವದೋ? ಇಲ್ಲ! ಮಾತುಳಾಂತಕ = ಸೋದರ ಮಾವನ ಕೊಲೆಗಡಕನೇ, ಜಾರಪುರುಷ, ಚೋರ ಇತ್ಯಾದಿ ಕೆಟ್ಟ ಮಾತುಗಳಿಂದ

ಮರ್ಮದ ಚೋದ್ಯಗಳಾದರೂ, ಶ್ರೀಹರಿಗೆ ಇವು ಗುಣೋತ್ಕರ್ಷವು. ಧರೆಗೆ ಭಾರನಾದ ದುಷ್ಟ ಕಂಸನನ್ನು ಕೊಂದು ಭೂಭಾರ ಇಳುಹಿದನು. ಗೋಪೀ ಜಾರ = ಗೋಪಿಯರ ಅಂಗಸಂಗಮಾಡಿ ಅವರ ಲಿಂಗಾಂಗ ಜರಯತೀತಿ ಜಾರ. ಲಿಂಗಭಂಗಕ್ಕೆ ಕಾರಣನಾದ ಕೃಷ್ಣನೇ ನೀನು ಜಾರನು – ಹೇ ನವನೀತ ಚೋರ = ಎಲೋ ನೀನು ಬೆಣ್ಣೆ ಕದ್ದೆಯಲ್ಲೋ ಮಹಾಚೋರ, ನವನೀತ = "**ನವಂಚನೀತಂಚ ತನ್ನವನೀತಂ**"॥ ಹೊಸಹೊಸದಾಗಿ ಪ್ರಾಪ್ತವಾದ ನೂತನ ಹೊಸ ಬೆಣ್ಣೆಗಳ್ಳ = ಕೃಷ್ಣಾ, ನಿಜವಾಗಿಯೂ, ಹೊಸ ಹೊಸದಾಗಿ ಮಾಡಿದ ಪಾಪಗಳನ್ನು ಅನಾಯಾಸವಾಗಿ ಕದಿಯುತ್ತೀಯೋ ಭಕ್ತರ ಪಾಪ ಚೋರನೆಂದು, ಆದಿತ್ಯ ಪುರಾಣ–ಶ್ರೀ ವೆಂಕಟೇಶ ಮಾಹಾತ್ಮೆ ವಚನ ನೆನಸಿಗೆ ತಂದ್ಯಾ ಕೃಷ್ಣಯ್ಯ, ಎನ್ನ ಸರ್ವ ಪಾಪಗಳನ್ನೂ ಕದ್ದು ಶುದ್ಧನನ್ನಾಗಿಮಾಡಲು ಪುಳುಕಾಂಕಿತದಿಂದ ಬೇಡುವೆನಪ್ಪಾ ಕೃಷ್ಣಾ ನೀನೆ ಬೇಡಿಸಿದ್ದಲ್ಲವೆ ಈ ಮಾರ್ಮಿಕ ನಾಮೋಚ್ಚಾರದಿಂದ, ಎನಲು = ಜಾರಚೋರನೆಂದು ನೆನೆಯಲು ತನ್ನ ನಿಕೇತನದೊಳಿಟ್ಟವರ ಸಲಹುವನು = ತನ್ನ ಮನೆ ಶ್ವೇತದ್ವೀಪಾನಂತಾಸನ ವೈಕುಂಠ ಮುಕ್ತಭಾಗಗಳಲ್ಲಿಟ್ಟು ರಕ್ಷಿಸುವನು.

**ದ್ರೌಪದೀಶಪತಿ ವಿಠಲರು:** ಭೂತಳದಿ ಜನರು, ಲೋಕದೊಳಗೆ ಮರ್ಮದ ಮಾತಾಡಿದರೆ ಘಾತಿಸುತ್ತಾರೆ. ಇದೆ ಎಚ್ಚರಿಸೋಣ. ದೇವರಿಗಾಡಿದರೆ ವೈಕುಂಠಲೋಕ ಕೊಡುತ್ತಾನೆ.

**ಭಾವಸೂಚನ:** ಭೂತಳೇತಿ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭೂತಲ" ಇತಿ ॥ ॥೩೧॥

## ಕನ್ನಡಾರ್ಥ

"ಮಾವನ್ನಕೊಂದವ" – "ಗೋಪೀಜಾರ" – "ನವನೀತಚೋರ" ಮುಂತಾದ ನಾಮಗಳಿಂದ (ಅಜ್ಞ) ಲೋಕದೃಷ್ಟಿಯಿಂದ ಮರ್ಮಭೇದಕವೆನಿಸಿದ್ದರೂ ಸಹ ಲೋಕವಿಲಕ್ಷಣ ಹರಿಯ ಮಹಿಮಾದ್ಯೋತಕವಾಗಿರುವದರಿಂದ ಈ ನಾಮಗಳಿಂದ ಹರಿಯನ್ನು ಭಕ್ತಿಪುರಸ್ಸರವಾಗಿ ಸ್ಮರಿಸಬೇಕೆಂದೂ ಆ ಸ್ಮರಣವು ಮಹಾಪುರುಷಾರ್ಥದಾಯಿಯೆಂದೂ ದಾಸರಾಯರ ಅಭಿಪ್ರಾಯ. ॥೩೧॥

**ಅವತರಣಿಕಾ :** ಈ ಪರಮರಹಸ್ಯವಾದ ಹರಿಕಥಾಮೃತಸಾರವನ್ನು ಅಯೋಗ್ಯರಿಗೆ ಸರ್ವಥಾ ಉಪದೇಶಮಾಡಬೇಡಿರೆಂದು ಸಜ್ಜನರನ್ನು ಪ್ರಾರ್ಥಿಸುತ್ತಾ, ಪರಮ ಭಗವದ್ಭಕ್ತರಾದವರಿಗೆ ಈ ಹರಿನಾಮೋಚ್ಚಾರಣೆ ಸ್ಮರಣೆ ರಹಸ್ಯವನ್ನು ತಿಳುಪುವದೆಂದು ಐತರೇಯ ಪ್ರಮೇಯ ನಿರೂಪಿಸುತ್ತಾರೆ.



ಮೂಲ :

**ಹರಿಕಥಾಮೃತಸಾರವಿದು ಸಂ ।**
**ತರು ಸದಾ ಚಿತ್ತೈಸುವದು ನಿ ।**
**ಷ್ಠುರಿಗಳಿಗೆ ಪಿಶುನರಿಗಯೋಗ್ಯರಿಗಿದನು ಪೇಳದಲೆ ॥**
**ನಿರುತ ಸದ್ಭಕ್ತಿಯಲಿ ಭಗವ ।**
**ಚ್ಚರಿತೆಗಳ ಕೊಂಡಾಡಿ ಹಿಗ್ಗುವ ।**
**ಪರಮ ಭಗವದ್ದಾಸರಿಗೆ ತಿಳಿಸುವುದು ಈ ರಹಸ್ಯ ॥ ೩೨ ॥**

**ಪದ್ಯಾರ್ಥ :** ಹರಿಕಥಾಮೃತಸಾರವಿದು = ಇದು ಕೇವಲ ಬಿಂಬರೂಪಿಯ ಸೃಷ್ಟಿಸ್ಥಿತ್ಯಾದಿ ವ್ಯಾಪಾರಗಳನ್ನು ಮಾಡುವ ಹರಿಲೀಲಾ, ವೇದ ಉಪನಿಷತ್‌ಗಳ ಸಾರವಿರುತ್ತದೆ. ಸಂತರು = ಸಜ್ಜನರು ಜ್ಞಾನಿಗಳು, ಸದಾ ಚಿತ್ತೈಸುವದು = ನಿರಂತರ ಆಲಿಸುವದು (ದೊಡ್ಡವರಲ್ಲಿ ಬಿನ್ನವಿಸಲು ಈಷ ಚಿತ್ತೈಸಿರಿ, ಚಿತ್ತವಧಾರ ಇತ್ಯಾದಿ ಪದಪ್ರಯೋಗ) ನಿಷ್ಠುರಿಗಳಿಗೆ = ಕಠೋರ ಮಾತಾಡುವವರಿಗೆ ಸಮಯಾಸಮಯವರಿಯದೆ ಕೆಟ್ಟ ಮಾತುಗಳಾಡುವವರಿಗೆ, ಪಿಶುನರಿಗೆ = ಚಾಡಿಕೋರರಿಗೆ, ಅಯೋಗ್ಯರಿಗೆ = ಸತ್ವಗುಣವಿಲ್ಲದ ನೀಚರಿಗೆ, ಹರಿಸರ್ವೋತ್ತಮ ಜ್ಞಾನಶೂನ್ಯರಿಗೆ, ಇದನ್ನು ಪೇಳದಲೆ = ಹೇಳಬಾರದು. ಎಂಥವರಿಗೆ ಹೇಳುವದೆಂದರೆ, ನಿರುತ ಸದ್ಭಕ್ತಿಯಲಿ = ನಿರಂತರ ಸದಾಕಾಲ, ಬಹು ಆದರ ಪ್ರೀತಿಯುಳ್ಳವರಾಗಿ ಹರಿಯೇ ಸರ್ವೋತ್ತಮನೆಂಬ ಜ್ಞಾನದಿಂದ, ಭಗವಚ್ಚರಿತೆಗಳ = ಪೂರ್ಣ ಷಡ್ಗುಣ ಐಶ್ವರ್ಯ ಸಂಪನ್ನನಾದ ಭಗವಂತನ ಚರಿತೆ, ಲೀಲಾ ಕಥಾಮಹಿಮೆ, ಕೊಂಡಾಡಿ = ಸ್ತೋತ್ರಮಾಡಿ, ಹಿಗ್ಗುವ ಸಂತೋಷಪಡುವ, ಪರಮ = ಉತ್ತಮರಾದ, ಭಗವದ್ದಾಸರಿಗೆ = ಭಗವಂತನನಿರುತ ಸೇವೆಮಾಡಿ ಸ್ವಾಮಿ ನಾನು ಸದಾದಾಸನು, ನೀನು ಈಶನು ಎಂಬ ಈಶನಿಗೆ ನಾವು ದಾಸಭಾವವುಳ್ಳವರೇ ಭಗವದ್ಭಕ್ತರು, ಅವರೆ ದಾಸರು ಉತ್ತಮರಿಗೆಲ್ಲ ದಾಸರು, ಇಂಥವರಿಗೆ, ಈ ರಹಸ್ಯ = ಇಂಗಿತ ತತ್ವ

ತಿಳಿಸುವದೆಂದು ಸಜ್ಜನರಾದ ಜ್ಞಾನಿಗಳನ್ನು ಪ್ರಾರ್ಥಿಸುತ್ತಾರೆ. ೧೦ನೇ ಸಂಧಿಯಲ್ಲಿಯೂ ಪದ್ಯ ೨೧-೨೨ರಲ್ಲಿ ಹೇಳಿದ ಈ ಐತರೇಯ ರಹಸ್ಯವನ್ನೇ ಸಜ್ಜನರಿಗೆ ಮರೆವು ಪುಟ್ಟಬಾರದೆಂದು ಪುನಃ ಅರುಪಿದ ಜ್ಞಾನಿಗಳು ಕರುಣಿಸಿ ಪುನಃ ವಿವರಿಸಿದ್ದಾರೆ.

**ದ್ರಾಪದೀಶಪತಿ ವಿಠಲರು :** ಹರಿಕಥಾಮೃತ ||

**ಭಾವಸೂಚನ :** ಹರಿಕಥೇತಿ ||

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹರಿ" ಇತಿ || "ಚಿತ್ತೈಸುವದು" – ಕೇಳುವದು. "ಪಿಶುನಃ" "ಹಿಂಸಕಃ" || ೩೨ ||

### ಕನ್ನಡಾರ್ಥ

ಅತಿ ರಹಸ್ಯ ವಿಷಯಭರಿತವಾದ ಈ ಹರಿಕಥಾಮೃತ ಸಾರವನ್ನು ಕಂಡವರಿಗೆ ಉಪದೇಶಿಸದೇ ಅಧಿಕಾರಿಗಳಾದ ಸುಜೀವರಿಗೆ ಮಾತ್ರ ಉಪದೇಶಿಸಬೇಕೆಂದು ಈ ಪದ್ಯದಿಂದ ದಾಸರಾಯರು ಬೋಧಿಸುತ್ತಾರೆ. || ೩೨ ||

ಅವತರಣಿಕಾ : ಸಾಧಕರು ಹರಿ ಇತ್ತುದೆ, ಅದೇ ಪುರುಷಾರ್ಥವೆಂಬ ವೈರಾಗ್ಯ ಭಾಗ್ಯಪೊಂದಿ ಆನಂದದಿಂದ ಭುಂಜಿಸುತ್ತಾ ಹರಿಗೆ ಅರ್ಪಿಸಲು ಭವಾಂಬುಧಿ ಬತ್ತಿಸಿ ಸ್ವರೂಪಾನಂದಾವಿರ್ಭಾವ ಲಕ್ಷಣ ಮುಕ್ತಿಯನ್ನು ಕೊಡುತ್ತಾನೆಂದು ಮಹಾಫಲ ಪ್ರಾಪ್ತಿ ಎಂದು ನಾಮಸ್ಮರಣ ಸಂಧಿಯನ್ನು ಉಪಸಂಹಾರಗೈಯ್ಯುತ್ತಾರೆ.

ಮೂಲ :

**ಸತ್ಯ ಸಂಕಲ್ಪನು ಸದಾ ಏ |**
**ನಿತ್ತದೇ ಪುರುಷಾರ್ಥವೆಂದರಿ |**
**ದತ್ಯಧಿಕ ಸಂತೋಷದಿಂ ನೆನೆವುತ್ತ ಭುಂಜಿಪುದು ||**
**ನಿತ್ಯಸುಖ ಸಂಪೂರ್ಣ ಪರಮ ಸು |**
**ಹೃತ್ತಮ ಜಗನ್ನಾಥವಿಟ್ಠಲ |**
**ಬತ್ತಿಸಿ ಭವಾಂಬುಧಿಯ ಚಿತ್ಸುಖವ್ಯಕ್ತಿ ಕೊಡುತಿಪ್ಪ || ೩೩ ||**

ಅಂತು ಸಂಧಿ ೧೩ಕ್ಕೆ ಪದ ೪೧೨ಕ್ಕೆ ನಾಮಸ್ಮರಣ ಸಂಧಿ ಸಮಾಪ್ತ.
ಮಂಗಳಮಾಪ - ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ||

**ಪದ್ಯಾರ್ಥ :** ಸತ್ಯಸಂಕಲ್ಪ = ಜೀವರ ಅನಾದಿ ಯೋಗ್ಯತೆಯಂತೆ ಅವರವರಿಗೆ ಯಾವ ಫಲಕೊಡುವದೆಂಬುದನ್ನು ಸೂಕ್ಷ್ಮ ಸೃಷ್ಟಿಯಲ್ಲಿಯೇ ನಿಜವಾದ ನಿರ್ಣಯ ದೃಢನಿಶ್ಚಯ, ಸತ್ಯ ಇಚ್ಛಾಮಾಡಿದ್ದಾನೊ ಅದನ್ನು ಎಂದೂ ಬದಲಾಯಿಸುವಂತಿಲ್ಲ. ಇಂತಹ, ಋತ = ಸಂಕಲ್ಪನಾದ ಹರಿಯು, ಸದಾ = ನಿರಂತರ ಯಾವ ಕಾಲದಲ್ಲಿ, ಯಾವ ದೇಶದಲ್ಲಿ, ಏನಿತ್ತದೆ, ಏನು ಶುಭಾಶುಭ ಕರ್ಮ ಲಾಭಾಲಾಭಾ ಜಯಾಪಜಯ, ಸುಖದುಃಖಾದಿಗಳನ್ನು ಏನು ಕೊಡುತ್ತಾನೆ, ಅದೇ ನಮಗೆ ಪುರುಷಾರ್ಥ = ಜೀವನೋಪಾಯದ ಗುರಿ–ಆನಂದಾವಿರ್ಭಾವ ಮುಕ್ತಿ, ಎಂದರಿತು = ಎಂದು ತಿಳಿದು, ಆತ್ಯಧಿಕ ಸಂತೋಷದಿಂದನೆನೆವುತ್ತ = ವಿಶೇಷವಾದ ಹೆಚ್ಚಿನ ಆನಂದದಿಂದ ಭುಂಜಿಸು = ಉಣ್ಣು, ಅನುಭೋಗಿಸುತ್ತಿರು. "ನಿನ್ನ ಚಿತ್ತಕೆ ಬಂದುದೆನ್ನ ಚಿತ್ತಕೆ ಬರಲಿ, ಅನ್ಯಥಾ ಒಂದು ಬಯಸೆ ನಾನು ಶ್ರೀನಿವಾಸ ದಯಾನಿಧೆ" (ಶ್ರೀಗುರು ಶ್ರೀಶ ವಿಠಲರು) ಆನಂದದಿಂದ ಹರಿಕೊಟ್ಟುದೆ ಪುರುಷಾರ್ಥವೆಂದು ಭುಂಜಿಸಿದವರಿಗೆ, ನಿತ್ಯ ಸುಖ ಸಂಪೂರ್ಣನಾದ ಹರಿಯು, ಪರಮ ಸರ್ವೋತ್ತಮನೂ, ಸುಹೃತ್ತಮ = "ಅಪ್ರಾಕೃತಾಂತಃ ಕರಣವತ್ವಾದಪಿತತ್ — ಸ್ನೇಹವತ್ವಾದ್ವಾಸುಹೃತ (ವಿದ್ಯಾಧಿರಾಜೀಯ) ಪರಮ ಸ್ನೇಹವಾನ್ । ಜೀವಾಂತರ್ಯಾಮಿಹರಿ । ಜಗನ್ನಾಥವಿಠ್ಠಲ = ಜಗತ್ತಿಗೆ ಒಡೆಯಸ್ವಾಮಿಯು, ಬತ್ತಿಸಿ ಭವಾಂಬುಧಿ = ಸಂಸಾರ ಸಮುದ್ರವನ್ನು ಬತ್ತಿಸಿ ಒಣಗಿಸಿ, ಲಿಂಗಭಂಗಗೈಸಿ, ಚಿತ್ಸುಖ ವ್ಯಕ್ತಿ ಕೊಡುತಿಪ್ಪ = ಸ್ವರೂಪ ಆನಂದ ಆವಿರ್ಭಾವ ಲಕ್ಷಣ ಮುಕ್ತಿಯನ್ನು ಕೊಡುವನು. ನಿಜ. ದಾಸರು ಪ್ರೇರಿಸಿ ಬರೆದುದು ಪದ್ಯಾರ್ಥ ದಾಸರಂತರ್ಯಾಮಿ ಮಧ್ವೇಶನ ಅಡಿದಾವರೆಗಳಿಗೆ ನಾಮಸ್ಮರಣಸಂಧಿ ಸಮರ್ಪಣ.

**ದ್ರೌಪದೀಶಪತಿ ವಿಠಲರು :** ಸತ್ಯಸಂಕಲ್ಪ ॥ ಸಂಧಿ ಸಮಾಪ್ತ.

ಮಧ್ವೇಶಾರ್ಪಣಮಸ್ತು ॥

**ಭಾವಸೂಚನ :** ಸಂಧಿ ಮುಪಸಂಹರನ್ ಫಲಮಾಹ ॥ ೩೩ ॥ ಇತಿ ಶ್ರೀ ಭಾವಸೂಚನೆ ನಾಮಸ್ಮರಣ ಸಂಧಿಃ ಸಮಾಪ್ತ ॥

ಶ್ರೀಗುರುಮಧ್ವೇಶಾರ್ಪಣಮಸ್ತು ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಉಪಸಂಹರತಿ–"ಸತ್ಯ" ಇತಿ ॥ "ಇತ್ತುದೇ" ಕೊಟ್ಟದ್ದೇ ॥ "ಅರಿದು"

ತಿಳಿದು || ಭುಂಜಿಪುದು–ಭುಂಜಿಸುವದು. || ೩೩ ||

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾ ಹಯವದನಚರಣ ಪರಿಸರಣ ಧುರೀಣಾನುಗ್ರಹಿ ಶ್ರೀನಿವಾಸಾರ್ಯಸೂನು ವಾದಿರಾಜಕೃತಾಯಾಂ ನಾಮಸ್ಮರಣಸಂಧಿಃ ಸಮಾಪ್ತಃ || ೧೩ ||

## ಕನ್ನಡಾರ್ಥ

ಸಂಧಿಯನ್ನು ಉಪಸಂಹರಿಸುತ್ತಾರೆ – " ಸತ್ಯಸಂಕಲ್ಪನು " ಎಂಬ ಪದ್ಯದಿಂದ, ರಸಸಮರ್ಪಣೋಪಾಸನೆಯಿಂದ ಪರಮಾತ್ಮನು ಪ್ರಸನ್ನನಾಗಿ ಸಂಸಾರ ಸಮುದ್ರವನ್ನು ಬತ್ತಿಸಿ ಸ್ವರೂಪಭೂತ ಚಿದಾನಂದವನ್ನು ಅಭಿವ್ಯಕ್ತಗೊಳಿಸುವನು ಎಂಬುದು ಈ ಪದ್ಯದ ಭಾವ. || ೩೩ ||

ಇಲ್ಲಿಗೆ ವ್ಯಾಸದಾಸಸಿದ್ಧಾಂತ ಕೌಮುದಿಯ ನಾಮಸ್ಮರಣ ಸಂಧಿಯ ಕನ್ನಡಾರ್ಥಾನುವಾದವು ಮುಗಿದುದು.

" ಶ್ರೀಮಧ್ವೇಶ ಕೃಷ್ಣಾರ್ಪಿತಮಸ್ತು "

# — ಒ ಪ್ಪೋ ಲೆ —

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೯೭೯ | ೧೨ | ಮೂಲ | ಮಂಜೂಷಾ–ಭಾಮಿನಿ |
| ೯೮೦ | ೨೧ | ವತ್ತಿ | ವಕ್ತಿ |
| ೯೮೧ | ೩ | ಪಾದಭೂರ್ಷ್ವಾದಿತಿ | ಪಾದಭೂಷಾದಿತಿ |
| ೯೮೧ | ೫ | ವತ್ತಿ | ವಕ್ತಿ |
| ೯೮೧ | ೧೦ | ಮಾರ್ಜಾರಾಪ್ಯಭಿದಾಃ | ಮಾರ್ಜಾರಾದ್ಯಭಿದಾಃ |
| ೯೮೨ | ೧೧ | ಕಶ್ವದೇಕ | ಶಶ್ವದೇಕ |
| ೯೮೫ | ೧೩ | ಕರುಣಡಿ | ಕರಣದಿ |
| ೯೮೮ | ೧೦ | ಎಂದು ಶಾಸ್ತ್ರ | ಎಂದು ಶಾಸ್ತ್ರ, |
| ೯೮೯ | ೨೫ | ಕರ್ತ | ಕರ್ತೃ |
| ೯೯೪ | ೧೩ | ಅಣುತತ್ವವು | ಅಣುತ್ವವು |
| ೯೯೯ | ೧೩ | ಅಂಗುಷ್ಠಾ | ಅಂಗುಷ್ಠ |
| ೧೦೦೪ | ೧೬ | ಪ್ರಾದೀಪವರ್ಣ | ಪ್ರದೀಪವರ್ಣ |
| ೧೦೧೩ | ೧೦ | ಓಂ ಘಣಿ | ಓಂ ಘೃಣಿ |
| ೧೦೨೧ | ೨೧ | ಚೈತದೇಹೇ | ಚೈಕದೇಹೇ |
| ೧೦೨೪ | ೧೩ | ಅವಹಿಂಸಿ | ವಹಿಂಸಿ } ಮೂಲ |
| ೧೦೨೪ | ೧೩ | ಗುಣಗಳನು | ಗುಣಗಳನನು } ಪದ್ಯದಿ |
| ೧೦೪೨ | ೨೪ | ತುರಂಗ\|ವದಗಿ | ತುರಂಗ\|ವದನ |
| ೧೦೪೫ | ೨೪ | ಕೊಚಿ | ಕೊಚ್ಚಿ |
| ೧೦೪೭ | ೧೧ | ಅವೋಚಟಾಸ್ವಾಂ | ಅವೋಚತ್ ಸ್ವಾಂ |
| ೧೦೪೮ | ೨೬ | ತ್ವತು | ತ್ವಕು = |
| ೧೦೫೦ | ೨೭ | ಅಗ್ನಿಶಬ್ದ | ಅಸ್ಥಿಶಬ್ದ |
| ೧೦೫೪ | ೭ | ಕಟ | ಕಟ್ಟಿ |
| ೧೦೫೪ | ೨೪ | ಧ್ಯಾಮನ್ | ಧ್ಯಾಯನ್ |
| ೧೦೫೭ | ೭ | ಚಿತ್ರಾಭಿರವತ್ಡಭಿಷ್ಟಿ | ಭಿತ್ರಾಭಿರವತಾದಭೀಷ್ಟಿ |

| | | | |
|---|---|---|---|
| ೧೦೬೨ | ೪ | ಮಾಡರ್ಪಿಸಿ | ಮಾಡೆರ್ಪಿಸಿ |
| ೧೦೬೨ | ೯ | ನಮುನೆಂದು | ನಯುನೆಂದು |
| ೧೦೭೦ | ೧೭ | ಶ್ವೇಪಗತನಾದ | ಶ್ವೇತದ್ವೀಪಗತನಾದ |
| ೧೦೭೦ | ೨೫ | ರಮಾರೂಪೇಷ್ವೇವಂ | ರಮಾರೂಪೇಷ್ವೇವಂ । |
| ೧೦೭೫ | ೨೩ | ಷಡುಣ್ಯೈಶ್ವರ್ಯ | ಷಡ್ಗುಣ್ಯೈಶ್ವರ್ಯ |
| ೧೦೮೦ | ೨೬ | ಉಪಚಯದ್ವಾರಾ | ವ್ಯಂಜಕದ್ವಾರಾ |
| ೧೦೮೮ | ೬ | ಗೋತ್ರಗಳುದ್ಧರಿಸುವವು | ಗೋತ್ರಗಳುದ್ಧರವು |
| ೧೦೮೯ | ೧೧ | ಸಮರ್ಪಣಾಂ ಅಪಿ | ಸಮರ್ಪಣಾಃ ಅಪಿ- |
| ೧೦೯೩ | ೧೫ | ವಿದ್ಯಾಯಾಂರತಾಃ | ವಿದ್ಯಾಯಾಂ ರತಾಃ |
| ೧೦೯೪ | ೨೦ | ಪ್ರಣಾಡಿತಯಾ | ಪ್ರನಾಡಿಕಯಾ- |
| ೧೦೯೪ | ೨೫ | ವದಂತಪೀಡಿತಾಃ | ವದಂತ್ಯಪೀಡಿತಾಃ |
| ೧೦೯೪ | ೨೫ | ನಿರುದತೇ | ನಿರುದಕೇ |
| ೧೧೦೩ | ೩ | ಯದನುಗ್ರಹೇಣಿತ್ಯತ | ಯದನುಗ್ರಹೇಣೇತ್ಯತ |
| ೧೧೦೪ | ೮ | ಶಮಾನಪುರುಷಃ | ಶಯಾನಪುರುಷಃ |
| ೧೧೦೫ | ೧೫ | ತುಧೀಃ | ಕುಧೀಃ |
| ೧೧೧೨ | ೧೬ | ಯದನುಗ್ರಹೇಚ ತ್ಯಕ್ತ್ವಾ | ಯದನುಗ್ರಹೇಣತ್ಯಕ್ತ್ವಾ |
| ೧೧೧೨ | (೧೭ ನಂತರ) | (ಬಿಟ್ಟಿದೆ) | **ವ್ಯಾಸ, ದಾ. ಸಿ. ಕೌ.** |
| ೧೧೧೨ | (೨೦ ನಂತರ) | ( ,, ) | **ಕನ್ನಡಾರ್ಥ** |
| ೧೧೨೨ | ೧೧ | ಜಹ್ವೋಪಸ್ಥಂ | ಜಿಹ್ವೋಪಸ್ಥಂ |
| ೧೧೨೫ | ೯ | ಆದೇಶ | ಆವೇಶ- |
| ೧೧೨೯ | ೩ | ಗ್ಢಬ್ಬಬಲ್ಲುದೆ | ಅಬ್ಬಬಲ್ಲದೆ (ಮೂಲದಿ) |
| ೧೧೩೩ | ೧೭ | ಸ್ವಕ್ಷಸ್ಯ | ಸ್ವಶಿಷ್ಯಸ್ಯ- |
| ೧೧೩೪ | ೨೦ | ಬಲ್ಲುದೆ | ಬಲ್ಲದೆ (ಮೂಲದಿ) |
| ೧೧೩೬ | ೨೫-೨೬ | ಜಿಪ(ಧ)ರ್ತಿತಿ | ಜಿಘ(ಧ)ರ್ತೀತಿ |
| ೧೧೪೪ | ೧೨ | ೨ನೇ ಭಾಗ | ೧ನೇ ಭಾಗ- |
| ೧೧೪೮ (ಪುಟ್‌ನೋಟ) | | | |
| | ೫ | ಆಲೋಸು | ಆಲೋಚಿಸು |

| | | | |
|---|---|---|---|
| ೧೧೫೦ | ೮ | ಆದಕ್ಕಾನಂದ | ಆನಂದಕ್ಕಾನಂದ |
| ೧೧೬೫ | ೧೨ | ಹೀಗೆ | ಹೇಗೆ |
| ೧೧೬೮ | ೧೪ | ಕೋಶಾದಿ | ಕ್ಲೇಶಾದಿ- |
| ೧೧೭೩ | ೨೫ | ಮಿಕ್ಷುಧ್ಯಸೌ | ಮಿಷುಧ್ಯಸೌ |
| ೧೧೭೬ | ೬ | ಪ್ರೋಕ್ತಾಃಕಾವ್ಯೈಸ್ತು | ಪ್ರೋಕ್ತಾಃಹ್ಯಕಾವ್ಯೈಸ್ತು |
| ೧೧೭೬ | ೮ | | ವ್ಯಾ. ದಾ. ಸಿ. ಕೌ. |
| ೧೧೭೮ | ೮ | ರಸ್ವತಂತ್ರೋಃವರ | ರಸ್ವತಂತ್ರೋಽವರ |
| ೧೧೭೮ | ೧೧ | | ವ್ಯಾ. ದಾ. ಸಿ. ಕೌ. |
| ೧೧೮೦ | ೧೩ | "ಭೀಷ್ಮ" ಇ | "ಭೀಷ್ಮ" ಇತಿ |
| ೧೧೮೦ | ೬ | ಹೆಚ್ಚು ಹೆಚ್ಚು | ಹೆಚ್ಚು |
| ೧೧೮೦ | ೧೯ | ಪಂಚಮಹಾತಗಳು | ಪಂಚಮಹಾಭೂತಗಳು |
| ೧೧೮೧ | ೨೩ | ಗೀತಾಪ್ರವೃತ್ತಿ | ಗೀತಾವಿವೃತ್ತಿ |
| ೧೧೮೪ | ೭ | ಪ್ರರ್ಣಾದಿ | ಪರ್ಣಾದಿ |
| ೧೧೮೪ | ೧೦ | ರಸೌದನಂ | ರಸಾದನಂ |
| ೧೧೮೮ | ೧೯ | ಸತ್ತ್ವಾ | ಸತ್ತ್ವ |
| ೧೧೯೧ | ೧೫ | ಭಗವತ್ಕಥಾದಿ ನಾಕಾಲಸಂಧ್ಯಾದಿ | ಭಗವತ್ಕಥಾದಿನಾಽ ಕಾಲಸಂಧ್ಯಾದಿ |
| ೧೧೯೨ | ೨೧ | ಭೋಜನ ಅನುವ | ಭೋಜನವನು |
| ೧೧೯೫ | ೨ | ಮುಚ್ಚ್ಯಂತೋ | ಮುಚ್ಯಂತೋ |
| ೧೧೯೯ | ೯ | ೫ ಭೂತಾ | ೫ ಭೂತ |
| ೧೨೦೧ | ೧೧-೧೨ | ದ್ವಿತೀಯದಲ್ಲಿ | ದ್ವಿತೀಯವಲ್ಲಿ |
| ೧೨೦೨ | ೨೫ | | ವ್ಯಾ. ದಾ. ಸಿ. ಕೌ. |
| ೧೨೦೫ | ೯ | ಮುಖ | ಮುಖ್ಯ |
| ೧೨೦೫ | ೨೪ | ಭಗವತ್ಸ್ಮರಣೆಯಿಂದ | ಭಗವತ್ ವಿಸ್ಮರಣೆಯಿಂದ |
| ೧೨೧೬ | ೩-೪ | "ತತ್ಯತೋತ್ರೇಕ" | "ತತ್ಯತೋತ್ಸೇಕ" |
| ೧೨೧೭ | ೧೧ | ಸುಖಾಧಿತ್ಯ | ಸುಖಾಧಿಕ್ಯ- |
| ೧೨೨೨ | ೧೦ | ಓಃಯತ್ರಾ | ಓಂಯತ್ರಾ |

| | | | |
|---|---|---|---|
| ೧೨೨೬ | ೨೪ | ಯೋಚಿಸಿ | ಯೋಜಿಸಿ- |
| ೧೨೨೬ | ೨೫ | ನಳನ | ನಳಿನ- |
| ೧೨೨೮ | ೨೩ | ಸ್ವತಾಂತ್ಯಾ | ಸ್ವಕಾಂತ್ಯಾ |
| ೧೨೨೯ | ೪ | ಶ್ರವಣಹಿಯತ್ | ಶ್ರವಣಂಹಿಯತ್ । |
| ೧೨೩೮ | ೨೧ | ಜಲಜನಾಭಿ = | ಜಲಜನಾಭಿ- |
| ೧೨೪೭ | ೨೮ | **ಪರಿಪೂರ್ಣೆ** | **ಪರಿಪೂರ್ಣ** (ಮೂಲ) |
| | | ೧೨ನೇ ಸಂಧಿ | |
| ೧೨೫೭ | ೧೭ | ಪ್ರೊಕ್ಕಳಭಾವದಿಂದ | ಪ್ರೊಕ್ಕಳಭಾಗದಿಂದ |
| ೧೨೫೭ | ೪ | ತುತಸಿ | ತುತಿಸಿ- |
| ೧೨೬೬ | ೧೫ | ರೂಪ ಛಂದಸ್ಸು | ರೂಪತ್ರಿಷ್ಟುಪ ಛಂದಸ್ಸು ೪೪ ಅಕ್ಷರ |
| ೧೨೬೬ | ೧೭ | ೪೮ ವರ್ಷ | ೪೮ ವರ್ಷ-ಜಗತಿ ಛಂದಸ್ಸು ೪೮ ಅಕ್ಷರ |
| ೧೨೭೦ | ೧೫ | ಮೂಲ | ಮಂಜೂಷಾ |
| ೧೨೭೩ | ೨೬ | ವಾಙ್ಸಿರಿ | ವಾಙ್ನಿಸಿ |
| ೧೨೭೫ | ೨೫ | ಸಮಿಾ(ಮಾ)ಹಿತಾಃ | ಸಮಾಹಿತಃ |
| ೧೨೭೬ | ೨೬ | **ಚತಸ್ಯಾಷು** | **ಚತುೃಷು** |
| ೧೨೭೯ | ೯ | ವಜ್ರಣಂ | ವಜ್ರಿಣಂ |
| ೧೨೮೫ | ೧೮ | ಮಾನಸಸ್ಮತ್ಯಾದಿ | ಮಾನಸಸ್ಮೃತ್ಯಾದಿ |
| ೧೨೮೭ | ೨೧ | ಪಾಷಾಣ | ವಜ್ರ |
| ೧೨೮೮ | ೩ | **ದೇವರ್ಕಳಿಂ** | **ದೇವಕ್ಕಳಿಂ** (ಮೂಲ) |
| ೧೨೯೧ | ೭ | ವಜ್ರಕಾಆಯರ್ಾ | ವಜ್ರಕಾಯರ್ಾ |
| ೧೨೯೧ | ೨೧ | ಅನ್ನನಾಡೀರಾಹ | ಅನ್ಯನಾಡೀರಾಹ |
| ೧೨೯೧ | ೨೪ | ನಾಡ್ಯೋನಾಸ್ತು | ನಾಡ್ಯೋನ್ಯಾಸ್ತು |
| ೧೨೯೨ | ೫ | ೨ನೇ | ॥ ೨ ॥ ಈ |
| ೧೨೯೩ | ೮ | ಇದು | ಐದು |
| ೧೨೯೬ | ೨೩ | ಮೇರ | ಮೇಲೆ |

| | | | |
|---|---|---|---|
| ೧೨೯೬ | ೨ | ತಂತ್ರ | ತತ್ರ |
| ೧೨೯೭ | ೫ | ಸ್ಥೂಲ ನಿರ್ಮಾಣ | ಸ್ಥೂಲದೇಹ ನಿರ್ಮಾಣ |
| ೧೩೦೪ | ೧೩ | ಕಳೆವರಗಳೊಳಿದ್ದು | ಕಳೆವರಗಳೊಳಗಿದ್ದು |
| ೧೩೦೪ | ೧೫ | ಕರ್ಮಗಗೆ | ಕರ್ಮಗಂ (ಮೂಲ) |
| ೧೩೦೪ | ೧೬ | ಳನುದಿನದಿ | ಗಳನುದಿನದಿ |
| ೧೩೦೭ | ೫ | | ವ್ಯಾ. ದಾ. ಸಿ. ಕೌ. |
| ೧೩೦೮ | ೨೫ | ಹೃತ್ಪದ್ಮಗವಸ್ಯಚ | ಹೃತ್ಪದ್ಮಗಸ್ಯಚ |
| ೧೩೦೮ | ೨೭ | ಆತ್ಮಹೃತ್ಪಗಗೇನೈಕ್ಯಂ | ಆತ್ಮಹೃತ್ಪಗೇನೈಕ್ಯಂ |
| ೧೩೧೯ | ೬ | | ಕನ್ನಡಾರ್ಥ |
| ೧೩೨೪ | ೨೬ | ವ್ಯಾಪ್ತನಂದದಿ | ವ್ಯಾಪ್ಯನಂದದಿ |
| ೧೩೨೯ | ೧೮ | ಅನುಷುರತಾಃ | ಅಸುಷುರತಾಃ |
| ೧೩೩೨ | ೪ | ಜನ್ಮಮೃತಿಗತಾ | ಜನ್ಮಮೃತಿಗಳು |
| ೧೩೩೪ | ೮ | ಲೀನಹುವು | ಲೀನಹವು (ಮೂಲ) |
| ೧೩೩೯ | ೭ | | ವ್ಯಾ. ದಾ. ಸಿ. ಕೌ. |
| ೧೩೪೦ | ೨೦ | ಸಂಜಿತಾನಿ | ಸಂಜಿಕಾನಿ |
| ೧೩೪೦ | ೨೦ | ಸಂಜ್ಞತಾನಿ | ಸಂಜ್ಞಕಾನಿ |
| ೧೩೪೦ | ೨ | ಅತರೋತ್ | ಅಕರೋತ್ |
| ೧೩೪೪ | ೨೫ | ಆಸೋಽಸ್ಯ | ಅಸೋಽಸ್ವ |
| ೧೩೪೫ | ೮ | ಆಯುಷ್ಯಾವೃದ್ಧಿ | ಆಯುಷ್ಯಾಭಿವೃದ್ಧಿ |
| ೧೩೪೭ | ೧೭ | ಸಿತಕಾಮಃ | ಸಿತಕಾಯಃ |
| ೧೩೪೮ | ೨೬ | ಕೊಂಡಿರುವನು. (ಇಲ್ಲಿಂದಾ ಮುಂದಿನ ಸಾಲು ಹೋಗಿದೆ.) | ಉರಿಗಣ್ಣನು, ರುದ್ರನು, ಸಿತಕಾಯ, ಶುಕ್ಲಬಣ್ಣ-ದೇಹವುಳ್ಳವನು, ವಾಸುದೇವನು. |
| ೧೩೫೧ | ೧೯ | ಪ್ರಸ್ತಾನ | ಪ್ರಸ್ತಾವ |
| ೧೩೫೨ | ೩ | ಶುದ್ಧಿ ಊರ್ಣಾಂಬರವ | ಶುದ್ಧ ಊರ್ಣಾಂಬರವ (ಮೂಲ) |

| | | | |
|---|---|---|---|
| ೧೩೫೫ | ಫುಟ ನೋಟ್ ೨ | ಹ್ಯಂದಸೋ | ಹ್ಯಂಥಸೋ |
| ೧೩೫೮ | ೪ | ಅವತರಣಿಕಾ ಬಿಟ್ಟೀಬಿಟ್ಟದೆ. ಸಂಧಿ ೧೨ (ಪದ್ಯ-೪೨)ರ (ನೇ ಸಾಲಿನಿಂದ) | |

**ಅವತರಣಿಕಾ :** ಹಿಂದಿನ ಕೆಲವು ಪದ್ಯಗಳಲ್ಲಿ ಶ್ರೀಹರಿಯು ದೇಶದಲ್ಲಿ ವ್ಯಾಪ್ತನಾಗಿ ಅವಕಾಶಪ್ರದನೆಂದು ವರ್ಣಿಸಿ, ಈಗ್ಗೇ ಆ ದೇಶಗತವಾದ ನಿತ್ಯ ಮಹಕಾಲ ಅಣುಕಾಲಗಳಿಲ್ಲಿದ್ದು, ಕಾಲಪ್ರವೃತ್ತಕ, ಕಾಲ ನಿವೃತ್ತಕ, ಕಾಲೋತ್ಪಾದಕ, ಕಾಲಾತೀತನೆಂದು ಧೇನಿಸಿ, ಉಪಾಸನೆಮಾಡಲು ಕಾಲ ಪರಿಗಣನೆ, ಕಾಲರೂಪಗಳು ಶ್ವಾಸ ಸಂಖ್ಯಾದಿಂದ ನಿರೂಪಿಸುತ್ತಾರೆ.

| | | | |
|---|---|---|---|
| ೧೩೬೭ | ೨೭ | ದ್ವಿಷಟ್ಪದಿಯು | ದ್ವಿಷಟ್ಪರಿಯು |
| ೧೩೭೬ | ೨ | ಸ್ತುರಸ್ತೋಮು | ಸುರಸ್ತೋಮು |
| ೧೩೭೬ | ೧೮ | ಶೀಶಾ | ಶ್ರೀಶಾ |
| ೧೩೭೯ | ೨೧ | ಅಂತ್ಯಜಾ- ಪ್ರಿಯೇಭಕ್ತಾ | ಅಂತ್ಯಜಾ ಪಿಯೇಭಕ್ತಾ |
| ೧೩೮೬ | ೧೫ | ಸಪ್ತನಾಮ | ಸಪ್ತಸಾಮ |
| ೧೩೮೮ | ೨-೩ | ರಾಯಚಂದ್ರ | ರಾಮಚಂದ್ರ |
| ೧೩೯೮ | ೧೩ | ಅಂಬುಜನಾಭಿ | ಅಂಬುಜನಾಭ |
| ೧೩೯೬ | ೧೭ | ತುಷ್ಯತ್ಯನ್ಯಥಾ | ಕುಷ್ಯತ್ಯನ್ಯಥಾ |
| ೧೩೯೮ | ೧೯ | ಪರಿತುತ್ರಪ್ರವಹಗಳಲ್ಲಿ | ಪರಿತು(ತ್ರ)ಪ್ರವಹಗಳಲ್ಲಿ (ಮೂಲದಿ) |
| ೧೩೯೯ | ೨೧ | ಗಾತ್ರರುಡೇಷು | ಗಾತ್ರ ರುದೇಷು |
| ೧೩೯೯ | ೨೪ | ದ್ವಿತೀಯತೆ | ದ್ವಿತೀಯಕೈ |
| ೧೪೦೦ | ೮ | ರಾಮಾಯಣಗಾಧಾಃ | ರಾಮಾಯಣಗಾಥಾಃ |
| ೧೪೦೦ | ೧೦ | ಪ್ರವತ್ತಾರಃ | ಪ್ರವಕ್ತಾರಃ |
| ೧೪೦೦ | ೨೭ | ಧೃತ್ | ಧೃಕ್ |
| ೧೪೦೨ | ೩ | ಪರ್ವಸಿತಃ | ಪರ್ಯವಸಿತಃ |
| ೧೪೦೬ | ೧೭ | ಬ್ರಹ್ಮಕಾಂಡೋತ್ತ | ಬ್ರಹ್ಮಕಾಂಡೋಕ್ತ |
| ೧೪೨೦ | ೨ | ಏತದನಿಶ್ಚಾ(ಚಾ)ಯ್ಯ ವಕ್ತೃತ್ವೇ | ಏತದನಿಶ್ಚಾ(ಚಾ)ಪ್ಯ ದುಃಶಾಸ್ತ್ರವಕ್ತೃತ್ವೇ |

| | | | |
|---|---|---|---|
| ೧೪೨೫ | ೨೦ ನಂತರ | | ನ್ಯಾ. ದಾ. ಸಿ. ಕೌ. |
| ೧೪೨೫ | ೨೬ | ಸತಾಂ ಸಂಗ್ರಃ | ಸತಾಂ ಸಂಗಃ |
| ೧೪೨೫ | ೨೭ | ಕೀಕಟಾಜ್ಯೋತಿ | ಕೀಕಟಾಜ್ಯೋತಿ |
| ೧೪೨೬ | ೧೬ | ಕೀಟಕ | ಕೀಕಟ |
| ೧೪೩೦ | ೧೨ | ೧೪ | ೧೬ |
| ೧೪೩೧ | ೨೨ | ಚತುಭಿಃಸಾಕಂ | ಚತುರ್ಭಿಃಸಾಕಂ |
| ೧೪೩೪ | ೧೮ ನಂತರ | | ನ್ಯಾ. ದಾ. ಸಿ. ಕೌ. |
| ೧೪೩೫ | ೨೪ | ತತ್ಯೇವ | ಇತ್ಯೇವ |
| ೧೪೩೭ | ೪ | ಸಮ್ಯತ್ | ಸಮ್ಯಕ್ |
| ೧೪೩೮ | ೨೭ | ತಾವುಸ್ವತಃ | ತಾನೇ ಸ್ವತಃ |
| ೧೪೪೭ | ೨೬ | ಎಂಬವದ | ಎಂಬ ಮದ |
| ೧೪೪೯ | ೧೪ | ತತ್ವತ್ | ತತ್ತತ್ |
| ೧೪೬೧ | ೧ನೇಸಾಲು ಮೇಲೆ | | ನ್ಯಾ. ದಾ. ಸಿ. ಕೌ. |
| ೧೪೬೧ | ೪ನೇಸಾಲು ನಂತರ | | ಕನ್ನಡಾರ್ಥ |
| ೧೪೬೭ | ೨೭ | ಜೀವೇಂದ್ರಿಯಾ | ಜಿಹ್ವೇಂದ್ರಿಯಾ |
| ೧೪೭೩ | ೭ ನಂತರ | | ನ್ಯಾ. ದಾ. ಸಿ. ಕೌ. |
| | ೯ ನಂತರ | | ಕನ್ನಡಾರ್ಥ |
| ೧೪೭೮ | ೨೫ ನಂತರ | | ನ್ಯಾ. ದಾ. ಸಿ. ಕೌ. |

## ಕ್ಷಮಾಪಣೆ, ಓದುಗರಲ್ಲಿ ವಿನಂತಿ

ಪ್ರೂಫ್‌ರೀಡರು ಒಳ್ಳೇ ನುರಿತವರು ಆದರೂ ಅವರ ವಯೋಧರ್ಮದೃಷ್ಟಿ ದೋಷವೋ ಕೆಲ ಅಕ್ಷರಗಳು ಕ (ತ), ಕ ದೇಶಭೇದ ಲಿಖಿತ ಗೊತ್ತಾಗದೆಯೋ, ಕೆಲ ಸಂಸ್ಕೃತ ಶಬ್ದಗಳ ಅರಿಯದೆಯೋ ಅಥವಾ ನೋಡದೆಯೋ ನೋಡಿ ತಿದ್ದಿದ್ದರೂ ಕಂಪೋಜಿಟರು ತಿದ್ದಿರುವದು ಪ್ರೆಸ್ಸಿನವರು ನೋಡದೆಯೋ ಹೀಗೆ ಅನೇಕ ಕಾರಣಗಳಿಂದ ಬಹು ತಪ್ಪು ಉಳಿದವೆ. ೨-೩ ಕಡೆಗೆ ಸಾಲೇ ಬಿಟ್ಟುಹೋಗಿವೆ. ಓದುಗರು ತಿದ್ದಿಕೊಂಡು ಓದುವದಾಗಿ ವಿನಂತಿ. ಅನಿವಾರ್ಯ ಕಾರಣಗಳಿವು. ಅಲ್ಲದೇ ಮೂಲದಲ್ಲೇ ಕೆಲ ತಪ್ಪು ಬಿದ್ದಿವೆ. ಒಪ್ಪೋಲೆ ನೋಡಿ ತಿದ್ದಿ ಪಠಿಸಲು ವಿನಂತಿ.

—ಹ. ಗೊ.

## ಪೋಷಕರ ಮಹದುಪಕಾರ

### ಹೊಸ ಪೋಷಕರು ಪ್ರಕಟನೆ

( ೬೮ ರಿಂದ ಮುಂದುವರಿದುದು )

ರೂ.

೧೦೦ ಶ್ರೀ ಶ್ರೀ ಪರಮಹಂಸ ಶ್ರೀ ವಿಭುಧೇಶತೀರ್ಥ ಶ್ರೀಪಾದಂಗಳವರು ಅಥಮಾರು ಮಠ, ಉಡುಪಿ, ದ. ಕ.

೧೦೦ ಶ್ರೀ ಶ್ರೀ ಪರಮಹಂಸ, ಶ್ರೀ ಸತ್ಯನಿಧಿತೀರ್ಥ ಶ್ರೀಪಾದಂಗಳವರು, ಶ್ರೀಪಾದರಾಜ ಮಠಾಧೀಶರು, ಮುಳಬಾಗಿಲ.

೧೦೧ ಶ್ರೀ ಪರಮಹಂಸ ನಾರಾಯಣತೀರ್ಥ ಶ್ರೀಪಾದಂಗಳವರು, ಜಯನಗರ, ಮೈಸೂರು.

೧೦೧ ಶ್ರೀ ಡಾ॥ ಕಿಶನರಾವ ಯಾದಗೀರಕರ, ಎಂ.ಬಿ.ಬಿ.ಎಸ್., ಹೆಲ್ತ ಮಲೇರಿಯಾ ಆಫೀಸರ್, ಶಿವಮೊಗ್ಗಾ. (೫ ಕಂತುಗಳಲ್ಲಿ)
ಶ್ರೀ ವಸಂತ ಬಾಳಕೃಷ್ಣ ದೇಶಪಾಂಡೆಯವರು, ಜನರಲ್ ಮರ್ಚಂಟ್, ಅಥಣಿ, ಜಿ. ಬೆಳಗಾಂವ.

೨೦ ಶ್ರೀ ಡಾ॥ ಬಿ. ಎಸ್ ನಾರಾಯಣರಾಯರು, ಬಸವಾಪಟ್ಟಣ. ಪೋಷಕ(೪೯)ರು, ಹೆಚ್ಚಿಗೆ ೨೦ ರೂ. ಸಹಾಯ ನೀಡಿದ್ದಾರೆ.

ಈ ಎಲ್ಲ ಹಣವು ಕೆಳ ಕೊಟ್ಟ ಕೆಲವು ಚಂದಾದಾರ ರೂಪಾಯಿಗಳು ೨ ನೇ ಭಾಗದಲ್ಲಿಯೇ ವೆಚ್ಚವಾಗಿದೆ.

೨೫ ರೂ. ಮುಂಗಡ ಪೂರ್ತಿಮಾಡಿದ **ಚಂದಾದಾರರ ಉಪಕಾರ ಸ್ಮರಣೆ** ರೂ. ಬಂದ ತಾರೀಖ ಕ್ರಮವಾಗಿ.

ನಂ.

೨೧೬ ಶ್ರೀಮತಿ ಜಾನಕಿಬಾಯಿ, ಶ್ರೀ ಟಿ. ಬಿ. ರಾಘವೇಂದ್ರರಾವ, ಅಸಿಸ್ಟೆಂಟ್ ಇಂಜನಿಯರ್, ಎನ್. ೩೮, ಮೈಲಾಪುರ, ಮದ್ರಾಸ್-೪.

೨೦೩ ಶ್ರೀ ಕೆ. ಗೋಪಾಲಕೃಷ್ಣರಾಯರು, ನಂ. ೯, ಈಸ್ಟ ಆಂಜನೇಯಾ ಟೆಂಪಲ ರೋಡ, ಬಸವನಗುಡಿ, ಬೆಂಗಳೂರು.

೨೦೨ ಶ್ರೀ ಆರ್. ಬಿ. ಕುಲಕರ್ಣಿಯವರು, ಸಬ್-ಎಡಿಟರ್, ಸಂಯುಕ್ತ ಕರ್ನಾಟಕ, ಬೆಂಗಳೂರು.

೧೬೮ ಶ್ರೀ ಜಿ. ನಾರಾಯಣಮೂರ್ತಿರಾಯರು, ಅ. ಇಂಜನಿಯರ್, ನಂ. ೨೨೮, ೩ನೇ ಮೇನ್ ರೋಡ, ಚಾಮರಾಜಪೇಟೆ, ಬೆಂಗಳೂರು.

೧೯೭ ಶ್ರೀ ಎಂ. ಆರ್. ಶ್ರೀನಿವಾಸರಾಯರು, ೫೨೮, ತ್ಯಾಗರಾಜನಗರ, ಬಸವನಗುಡಿ, ಬೆಂಗಳೂರು.

೧೯೬ ಶ್ರೀ ಕಂಠೀರಾವ ಜಹಗೀರದಾರ, ಬಿ.ಎ., ಎಲ್‌ಎಲ್.ಬಿ., ಕನ್ನಡ ಟ್ರಾನ್ಸ್‌ಲೇಟರ್, ವಿಧಾನಸೌಧಾ, ಬೆಂಗಳೂರು (ರಾಜಾಜಿನಗರ).

೧೬೬ ಶ್ರೀ ಹೆಚ್. ಎಲ್. ಆನಂದತೀರ್ಥಾಚಾರ್ಯರು, ಇನ್ಸ್‌ಪೆಕ್ಟರ್, ೩|೧೦೦, ಬುಲ್‌ಟೆಂಪಲ್ ರೋಡ, ಬಸವನಗುಡಿ, ಬೆಂಗಳೂರು.

೨೩೧ ಶ್ರೀ ಎಂ. ಎನ್. ಶೇಷಗಿರಿರಾಯರು, ೩೧೩|೧, ೧೦ ನೇ ಕ್ರಾಸ್ ರೋಡ್, ವಿಲಸನ್‌ಗಾರಡನ್, ಬೆಂಗಳೂರು ೨.

೨೩೮ ಶ್ರೀ ಎಂ. ವಿ. ಗೋಪಾಲಯ್ಯಾ, ಜನರಲ್ ಮರ್ಚಂಟ್, ನಂ. ೨೯, ೩ನೇ ಮೇನ್ ರೋಡ್, ಚಾಮರಾಜಪೇಟೆ, ಬೆಂಗಳೂರು.

೨೩೩ ಶ್ರೀ ಕೆ. ಎಲ್. ನಾರಾಯಣಾಚಾರ್ಯರು, ಬಿ.ಎ.,ಬಿ.ಎಲ್., ಜುಡಿಸಿಯಲ್ ಮ್ಯಾಜಿಸ್ಟ್ರೇಟ್, ಹರಪನಹಳ್ಳಿ, ಡಿ. ಬಳ್ಳಾರಿ.

೨೩೭ ಶ್ರೀ ಡಾ|| ಕುಪ್ಪುಸ್ವಾಮಿಗಳು, ಎಲ್.ಎ.ಎಂ.ಎಸ್., ಶ್ರೀ ಪೂರ್ಣಬೋಧ ಕಾಲನಿ, ಅಡಿಯೂಲ ಪೋಸ್ಟ್, ಹಿರಿಯೂರು ತಾಲ್ಲೂಕು.

೧೩೩ ಶ್ರೀ ಶ್ರೀನಿವಾಸ್ ಅಂಡ್ ಬ್ರದರ್ಸ್, ನಕಾಶಿ, ಆದವಾನಿ.

೧೨೪ ಶ್ರೀ ಕೆ. ಎಂ. ಕುಲಕರ್ಣಿ ವಕೀಲರು, ಗದಗ.

೨೨೪ ಶ್ರೀ ಬಿ. ಕೃಷ್ಣಮೂರ್ತಿರಾಯರು, ಎ-೧೧೩, ಪುಟ್ಟಣ್ಣಾರೋಡ್, ಬಸವನಗುಡಿ, ಬೆಂಗಳೂರು.

೧೨೬ ಶ್ರೀ ಎಸ್. ಕೃಷ್ಣಮೂರ್ತಿರಾವ, ಬ್ಯಾಂಕ್ ಕ್ಯಾಷಿಯರ್, ಪೋಸ್ಟ್ ಬಾಕ್ಸ್ ನಂ. ೧೮, ಗುಂಟೂರು.

೧೩೦ ಶ್ರೀ ಬಿ. ಶ್ರೀನಿವಾಸರಾಯರು, ಸೀನಿಯರ್ ರಿಸರ್ಚ್ ಗೌ|| ಅಗ್ರಿಕಲ್ಚರ್ ಫಾರಂ, ರಾಯಚೂರು.

೧೪೦ ಶ್ರೀ ರಾಘವೇಂದ್ರರಾಯರು, ಅರಷಣಗಿ, ವಕೀಲರು, ಹೈಕೋರ್ಟ್, ರಾಯಚೂರು.

೧೯೩ ಶ್ರೀ ಅಶ್ವತ್ಥರಾವ ಕರಣಮ, ಕನಿತಾಳಂ, ಆದವಾನಿ ತಾಲ್ಲೂಕು.

೧೮೬ ಶ್ರೀ ಡಾ॥ ಗುರಾಚಾರ್ಯರು ನರಗುಂದಕರ್, ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರ್, ಕೋಲಾರ.

೧೬೯ ಶ್ರೀ ಸುಬ್ಬಣ್ಣಾಚಾರ್ಯ ಗೆದ್ದನಕೇರಿ, ಮ್ಯಾನೇಜರ್, ಸುದರ್ಶನ ಪ್ರಿಂಟಿಂಗ್ ಪ್ರೆಸ್, ವಿಜಾಪುರ.

೧೭೦ ಶ್ರೀ ಕೃಷ್ಣಾಚಾರ್ಯ – ನಾರಾಯಣಾಚಾರ್ಯರು, ಪುರೋಹಿತ, ಟೀಚರ, ಕಿನ್ನಾಳ, ಕೊಪ್ಪಳ ತಾಲ್ಲೂಕು.

೨೪೩ ಟಿ. ಜಿ. ಕೃಷ್ಣಮೂರ್ತಿಗಳು, ಬಿ.ಎಸ್‌ಸಿ., ೬೩, ೫ನೇ ಕ್ರಾಸ್ ರೋಡ್, ಎನ್. ಆರ್. ಕಾಲೋನಿ, ಬೆಂಗಳೂರು.

೨೨೮ ಶ್ರೀ ಬಿ.ಕೆ. ನರಸಿಂಗರಾಯರು, ಜಹಗೀರದಾರ, ಪೊ॥ ಯಳಂದೂರು, ವೈಯಾ ಕೊಳ್ಳೆಗಾಲ, ಮೈಸೂರು ಸ್ಟೇಟ್.

೧೬೫ ಶ್ರೀ ಕೆ. ಹೆಚ್. ಕುಲಕರ್ಣಿ, C/o ಇಂಡಿಯನ್ ಪಿ. ಪೆ. ಅಂಡ್ ಕೋ. ಲಿ., ಮುಷೀರಾಬಾದ, ಹೈದರಾಬಾದ.

೧೬೭ ಶ್ರೀ ವಿಠೋಬಾಚಾರ್ಯರು, ವಡಕಿ, ಮಲಕಸಮುದ್ರ ಪೋಸ್ಟ್, ತಾ॥ ಯಲಬುರ್ಗಿ, ಜಿ. ರಾಯಚೂರು.

೧೬೮ ಶ್ರೀ ರಾಮಚಂದ್ರರಾಯ ಕುಲಕರ್ಣಿ, ಕುರಕುಂದಿ, ತಾಲ್ಲೂಕು ಮಾನವಿ, ವೈಯಾ ಶಿರಿವಾರ.

೧೮೩ ಶ್ರೀರಂಗರಾಯರು ದೊಡ್ಡಿಹಾಳ, ಮುದ್ದೆಬಿಹಾಳ, ಜಿ. ವಿಜಾಪುರ.

೧೩೧ ಶ್ರೀ ವಿ. ಎಸ್. ಕಟ್ಟಿ, ಶ್ರೀ ವೆಂಕಟೇಶ ರೈಸ್ ಮಿಲ್ಸ್, ಬಮ್ಮನಹಳ್ಳಿ, ತಾಲ್ಲೂಕು ಹಾನಗಲ್.

೧೯೨ ಶ್ರೀ ಕೆ. ರಾಘವೇಂದ್ರರಾವ್, ಪೊ॥ ಮಾಸ್ತರ, ಕನಕವೇಡ್ಯ, ತಾಲ್ಲೂಕು ಆದವಾನಿ.

೨೪೪ ಶ್ರೀ ವೆ॥ ಮು. ಶಾ. ಸ. ರಾಮಾಚಾರ್ಯರು, ಜಹಗೀರದಾರ, ಚಿತ್ತಾಪುರ, ತಾಲ್ಲೂಕು ಲಿಂಗಸೂಗೂರು.

೧೮೧ ಶ್ರೀ ಪಾಂಡುರಂಗರಾವ ಗುರುರಾವ, ಕುಲಕರ್ಣಿ ಬಮ್ಮನಹಾಳ, ತಾಲ್ಲೂಕು ಕುಷ್ಟಿಗಿ.

೧೭೯ ಶ್ರೀ ಕೆ. ಎಸ್. ಕುಷ್ಟಿಗಿ, ಅಸಿಸ್ಟೆಂಟ್ ಅಗ್ರಿಕಲ್ಚರ್, ಶೇಡಬಾಳ, ಪೋಸ್ಟ್ ಕಾಗವಾಡ, ಜಿ. ಬೆಳಗಾಂವ.

೨೪೫ ಶ್ರೀ ಬಿ. ಕಿಶನರಾವಜಿ, ಬಿ.ಎ., ಎಲ್ಎಲ್.ಬಿ., ವಕೀಲ, ಕುಷ್ಟಿಗಿ.

೨೪೯ ಶ್ರೀ ಡಬ್ಲ್ಯು.ಟಿ. ಹನುಮಂತರಾಯರು, ಅಡ್ವೋಕೇಟ್, ಚಿತ್ರದುರ್ಗ.

೨೫೦ ಶ್ರೀ ಎಲ್. ವೆಂಕಟರಾವ ಹಳ್ಳೇರಾವ, ವಕೀಲ, ಲಿಂಗಸೂಗೂರು, ೪೩/ಎ. ಮು. ರಾಜಾಜಿನಗರ, ಬೆಂಗಳೂರು. (೨) ಭಾಗ ಸಾರಸವಿದು. ವೈಕುಂಠವಾಸಿಗಳಾದರು. ಹರಿಚಿತ್ತ.

೨೨೫ ಶ್ರೀ ಹನುಮಂತಾಚಾರ್ಯರು, ಶಿವಾಜಿ ಬಿಲ್ಡಿಂಗ್, ಕುಮಾರ ಪಾರ್ಕ್, ವೆಸ್ಟ್ ಎಕ್ಸ್‌ಟೆನ್‌ಷನ್, ಬೆಂಗಳೂರು-೨೦.

೧೯೯ ಶ್ರೀ ವೆ|| ಶೇಷಾಚಾರ್ಯರು, C/o ಶ್ರೀ ಟಿ. ಕೆ. ವೇಣುಗೋಪಾಲದಾಸರು, ೪ನೇ ಮೇನ ರೋಡ, ಚಾಮರಾಜಪೇಟೆ, ಬೆಂಗಳೂರು.

೨೨೩ ಶ್ರೀ ಡಿ. ಎ. ರಾಮರಾಯರು, ನಂ. ೨೧, ೫ನೇ ಮೇನ ರೋಡ, ಚಾಮರಾಜಪೇಟೆ, ಬೆಂಗಳೂರು.

೨೪೦ ಶ್ರೀ ಎಂ. ತಿರುಮಲರಾವ, ೬೮, ಅಣ್ಣಯ್ಯಪ್ಪ ಬ್ಲಾಕ್, ಶೇಷಾದ್ರಿಪುರಂ, ಬೆಂಗಳೂರು.

೨೨೨ ಶ್ರೀ ಸಿ. ಆರ್. ನಾರಾಯಣರಾಯರು, ಬಿ.ಕಾಂ., ರಿ|| ಶಿರಸ್ತೆದಾರ, ನಂ. ೨೩೦, ಉತ್ತರಾದಿಮಠ ಬೀದಿ, ಮೈಸೂರು.

೨೫೭ ಶ್ರೀ ಪ್ರೊಫೆಸರ್ ಆರ್.ಎಸ್. ಬಾಟನಿ, C/o ಡಿ.ಎ. ರಾಮರಾಯರು, ನಂ. ೨೧, ೫ನೇ ಮೇನ ರೋಡ, ಚಾಮರಾಜಪೇಟೆ, ಬೆಂಗಳೂರು.

೨೩೨ ಶ್ರೀ ಡಾ|| ಬೋಧರಾಯರು, ಎಂ.ಬಿ.ಬಿ.ಎಸ್., ಸಿದ್ಧಾಪುರಕರ, ಮೆಡಿಕಲ್ ಆಫೀಸರ, ಷಹಾಪುರ, ಗುಲ್ಬರ್ಗಾ.

೨೨೯ ಶ್ರೀ ಹೆಚ್. ಗೋಪಾಲಕೃಷ್ಣರಾವ, ಫೋರ್ಟ್, ಹಿಂದುಪುರ.

೨೧೨ ಶ್ರೀ ವೇ|| ಹನುಮಂತಾಚಾರ್ಯರು, ನರಸಿಂಹಾಚಾರ್ಯರು ಜೋಷಿ, ಹುನಗುಂದ, ಜಿ. ವಿಜಾಪುರ.

೨೬೧ ಶ್ರೀ ಸಗರಮ್ ಶ್ರೀನಿವಾಸರಾವ್, ೫/೧೬೨, ಆಂಜನೇಯ ಟೆಂಪಲ್ ಸ್ಟ್ರೀಟ್, ಕಡಪಾ.

೨೬೩ ಶ್ರೀ ವೇ|| ಕುಕ್ಕನೂರು ರಾಘವೇಂದ್ರಾಚಾರ್ಯರು, ಹೆಡ್‌ಮಾಸ್ಟರ್, ಸಿ. ಪಿ. ಸ್ಕೂಲ್, ಗಬ್ಬೂರ, ವೈಯಾ ರಾಯಚೂರು.

೨೭೧ ಶ್ರೀ ಮುಖ್ತಲ ಜಯರಾಮರಾಯರು, ಮುಕ್ತೇದಾರ, ಬಿ.ಎಸ್‌ಸಿ., ಕಾಚಿಗುಡಾ ಸ್ಟೇಷನ್ ರೋಡ್, ಹೈದರಾಬಾದ್ ದಕ್ಷಿಣ (ಆಂಧ್ರಾ).

೨೫೨ ಶ್ರೀ ದಾಮೋದರರಾವ ವೆಂಕಟರಾವ ಗದ್ವಾಲ್, ಬಿ.ಎಸ್‌ಸಿ., ವಿಠ್ಠಲ ಮಾರುತಿ ಗಲ್ಲಿ, ಸುಲ್ತಾನಬಜಾರ, ಹೈದರಾಬಾದ್.

೨೬೨ ಶ್ರೀ ಚಂದ್ರಕಾಂತದಾಸರು, ಡಿ. ಸಿ. ಡಿವಿಜನ್ (ಕ್ಲಾರ್ಕ್), ಶಿಂಧನೂರು.

೨೬೪ ಶ್ರೀ ಪ್ರಾಣೇಶಾಚಾರ ಮಾದಿನೂರು, ಬಿ.ಎಸ್‌ಸಿ., ಶಿಕ್ಷಕ ಹೈಸ್ಕೂಲು ಸೇಡಂ, ಜಿ. ಗುಲ್ಬರ್ಗಾ.

೨೭೨ ಶ್ರೀ ವೆ|| ಕಿನ್ಹಾಳ ಭೀಮಾಚಾರ್ಯರವರು, ಅಡ್ವೋಕೇಟ್, ಥಾನ ಮಲ್ ಬಿಲ್ಡಿಂಗ್, ಸುಲ್ತಾನಬಜಾರ, ಹೈದರಾಬಾದ್ ಎ.ಪಿ.

೨೭೩ ಶ್ರೀ ಸುಬ್ಬರಾಯರು, ಸರಸ್ವತಿಲಾಜ, ಕಾಚಿಗುಡಾ ಸ್ಟೇಶನ ರೋಡ್, ಹೈದರಾಬಾದ್ ಎ.ಪಿ.

೨೭೪ ಶ್ರೀ ಹೆಚ್. ಎಸ್. ರಾಮಮೂರ್ತಿಯವರು, ೯೭೩, ದತ್ತಾತ್ರೇಯ ವಾಡಾ, ಸುಲ್ತಾನ ಬಜಾರ, ಹೈದರಾಬಾದ್ ದಕ್ಷಿಣ.

೨೭೫ ಶ್ರೀ. ಪೈ. ಶ್ರೀನಿವಾಸಶೆಟ್ಟಿ, ಮರ್ಚಂಟ್, ರಾಯಚೂರು. (ಶ್ರೀ ಕೋಲಾರ ನಾರಾಯಣಾಚಾರ್ ಮಾರಿಫತ)

೨೨೦ ಶ್ರೀ ಎಂ. ಎಸ್. ಆಚಾರ್ಯ, ಬಳ್ಳಾರಿ, ಮುಕ್ಕಾಂ (೫-೫-೪೨) ಸೋಮವಾರಪೇಟೆ, ರಾಯಚೂರು.

೨೬೭ ಶ್ರೀ ಎಂ. ಎ. ಶ್ರೀನಿವಾಸರಾವ್, ೩೩೬, ೫ನೇ ಮೇನ ರೋಡ್, ಮಲ್ಲೇಶ್ವರಂ, ಬೆಂಗಳೂರು-೩.

## ಇತರ ಸಹಾಯಕರ ಮಹದುಪಕಾರ

೧. ಶ್ರೀ ಎಂ. ಶ್ರೀಧರರಾವ್, ೧೯, ೫ನೇ ಬೀದಿ, ಚಾಮರಾಜಪೇಟೆ, ಬೆಂಗಳೂರು. ಇವರು ನೈಸರ್ಗಿಕ ಭಗವದ್ಭಕ್ತರು. ಅಪರೋಕ್ಷ ಜ್ಞಾನಿಗಳಾದ ಅಟಾ ಜಿ. ವೆಂಕಟರಾಯರು ಜಯೇಶವಿಠಲರ ದೌಹಿತ್ರರು. ೨ ಜನ ಪೋಷಕರನ್ನೂ, ಈವರೆಗೆ ೧೫-೧೬ ಜನ ಚಂದಾದಾರರನ್ನೂ ಕೂಡಿಸಿಕೊಡುವದಲ್ಲದೇ ಮಂಡಲದ ನಾನಾ ಕೆಲಸಗಳಲ್ಲಿ ಸಹಾಯಮಾಡುತ್ತಿರುವರು. ಮತ್ತು

೨. ಶ್ರೀ ಸಂಧ್ಯಾವಂದನ ನಾರಾಯಣರಾಯರು, ಅಡ್ವೋಕೇಟ್, ಅನಂತಪುರ. ೪-೫ ಜನ ಚಂದಾದಾರರನ್ನೂ ಮತ್ತು ಶ್ರೀ ತಂಜಾವರ ಹನುಮಂತರಾವ ಆದವಾನಿ. ೧-೨ ಚಂದಾದಾರರನ್ನು

೩. ಶ್ರೀ ವೆಂಕಟರಾವ ದಾಮೋದರರಾವ ಗದ್ವಾಲ, ಸುಲ್ತಾನ ಬಜಾರ, ಹೈದರಾಬಾದ್. ೫ ಜನ ಚಂದಾದಾರರನ್ನು ಮಾಡಿರುವರಲ್ಲದೇ ಇನ್ನೂ ಪ್ರಯತ್ನ ನಡೆಸಿರುವರು. ಎಲ್ಲರ ಉಪಕಾರ ಮಂಡಲ ಸ್ಮರಿಸುತ್ತದೆ. ಇದರಂತೆ ಪ್ರತಿಯೊಬ್ಬರೂ ಸಹಾಯ ನೀಡಲು ವಿನಂತಿ.

೪. ಶ್ರೀ ಹೆಚ್. ಎಸ್. ಸುಬ್ಬರಾಯರು, ಎಸ್. ಎಸ್. ಬುಕ್ ಇಂಪಾಯರ್ ಮೌಂಟ್ ಜಾಯ ರೋಡ್, ಬಸವನಗುಡಿ, ೫ ಜನ ಚಂದಾದಾರರನ್ನೂ ಶ್ರೀ ಬಿ. ಎಸ್. ಪಾಂಡುರಂಗರಾವ, ಶ್ರೀಮತಿ ಶಕುಂತಲಾಬಾಯಿ, ಬೆಂಗಳೂರು. ೧-೨ ಜನ ಚಂದಾದಾರರನ್ನು ಒದಗಿಸಿಕೊಟ್ಟವರಲ್ಲಿ ಪ್ರಣಾಮಗಳು.

೬. ಶ್ರೀ ವಿಷ್ಣುಕೃಷ್ಣ ದೇಶಪಾಂಡೆ, ಅಥಣಿ ಜಿ|| ಬೆಳಗಾಂವ ಇವರು. ತಾವು ಚಂದಾದಾರ ಆಗುವದಲ್ಲದೇ ಇಬ್ಬರು ಪೋಷಕರನ್ನಾಗಿ ಒದಗಿಸಿದವರ ಮಹದುಪಕಾರ.

## ಮಂಡಲಕ್ಕೆ ಅವ್ಯಯಜ್ಞಾನ ಧನರೂಪವಾದ ಹೊಸ

ನೂರಾರು ಗ್ರಂಥಗಳು ಜ್ಞಾನಭಂಡಾರ ಪ್ರಾಪ್ತಿ. ಶ್ರೀ ವೈ. ವಾ. ಶ್ರೀ ಎಳೆಮಲಿವಿಠಲಾಚಾರ್ಯರು ಪಂಡಿತವರ್ಯರು, ತತ್ವಜ್ಞರ ಪ್ರಿಯ ಶಿಷ್ಯರಾದ ಶ್ರೀ ವೈ.ವಾಸಿ ಗದ್ವಾಲ ರಾಮರಾಯರು ಒಳ್ಳೇ ಪಂಡಿತರು. ತಹಶೀಲದಾರರಾಗಿದ್ದರೂ ತಮ್ಮ ಆಯುಷ್ಯದಲ್ಲಿ ನೂರಾರು ಗ್ರಂಥಗಳನ್ನು ಸಂಸ್ಕೃತದಿಂದ ಕನ್ನಡದಲ್ಲಿ ಬರೆದಿರುವರು. ಉದಾಹರಣೆ: ಋಗಭಾಷ್ಯಮಂಜರಿ. ವಿಷ್ಣುಸಹಸ್ರನಾಮ ಶ್ರುತಿಗಳ ಟೀಕಾ, ಭಾರತ ಸಂಪೂರ್ಣಸಾರ ಸಂಗ್ರಹ, ಭಾಗವತ ಭಾರತ ತಾತ್ಪರ್ಯ ನಿರ್ಣಯ ಸಾರ ಸಂಗ್ರಹ, ದಶೋಪನಿಷಿತ ಕನ್ನಡಾರ್ಥ. ಅನೇಕ ಗ್ರಂಥಗಳು ಅವರ ಸತ್ಪುತ್ರರಾದ ಶ್ರೀ ದಾಮೋದರರಾವ ಗದ್ವಾಲ, ಹೈದರಾಬಾದ, ಗ್ರಂಥ ಪ್ರಚಾರಮಾಡಲು ಮಂಡಲಕ್ಕೆ ಒಪ್ಪಿಸಿದವರಲ್ಲಿ ಮಂಡಲವು ಉಪಕಾರ ಸ್ಮರಿಸುತ್ತದೆ.

—ಸಂಚಾಲಕ.

**ಸೂಚನೆ :—** ಮಂಡಲದ ಆಜ್ಞೆಯಂತೆ ಪೂರ್ತಿ **೨೫ ರೂ.**

೧. ಚಂದಾ ಮುಂಗಡ ಬಂದವರ ಹೆಸರು ಮಾತ್ರ ಪ್ರಕಟಿಸಿದೆ. ಇದರಲ್ಲಿಯೂ ಒಮ್ಮೇಲೆ ೨೫ ರೂ. ಕಳುಹಿದವರು ೧೦-೧೫ ಜನ ಉಳಿದವರು. ೬-೩ ಕಂತುಗಳಲ್ಲಿ ಕಳುಹಿದ್ದಾರೆ. ಕೆಲಸದಲ್ಲಿ ತೊಂದರೆ.

೨. ಈವರೆಗೆ ಬಹು ಶ್ರಮದಿಂದ ೨೭೫ ಜನ ಚಂದಾದಾರರು.

| | | | | |
|---|---|---|---|---|
| ಇದರಲ್ಲಿ ೫ ರೂ. | ಬಾಕಿ | ಇದ್ದವರು | ೩೮ ಜನ | ೧೯೦ ರೂ. |
| ೧೦ ರೂ. | ,, | ,, | ೧೪ ಜನ | ೧೪೦ ರೂ. |
| ೧೨॥ ರೂ. | ,, | ,, | ೮ ಜನ | ೧೦೦ ರೂ. |
| ೧೩ ರೂ. | ,, | ,, | ೫ ಜನ | ೬೫ ರೂ. |
| ೧೫ ರೂ. | ,, | ,, | ೩೦ ಜನ | ೪೫೦ ರೂ. |
| ೨೦ ರೂ. | ,, | ,, | ೪ ಜನ | ೮೦ ರೂ. |
| ೨೫ ರೂ. | ಪೂರ್ತಿ ಬಾಕಿ | ಇದ್ದವರು | ೮ ಜನ | ೨೦೦ ರೂ. |
| | | | | ೧೨೨೫ |
| ಕಮಿಶನ ಏಜಂಟರಿಂದ ಬರುವದು | | | | ೫೬೫ |
| | | | | ೧೭೯೦ |
| ಪೋಷಕರದು ಚಿಲ್ಲರವಾಗಿ | | | | ೧೭೦ |

ಇನ್ನು ಕೆಲವು ಈ ವರ್ಷದ ಬಾಕಿ ನಿಂತದೆ. ೧೯೬೦ ರೂ. ಬಾಕಿ.

ಈವರೆಗೆ ೩ ಭಾಗಕ್ಕೆ ೧೧ ಸಹಸ್ರ ಮೇಲೆ ಖರ್ಚಾಗಿದೆ. ಪ್ರೆಸ್ಸಿನ ಬಿಲ್ ಸಮಾನ ಟಪಾಲಖರ್ಚು-ತಿರುಗಾಡುವದು, ಇತರ ಖರ್ಚು ಸೇರು ಬರುತ್ತದೆ. ಹೀಗಾಗಿ ಈಗ ಸುಮಾರು ೧೭೦೦ ರೂ. ಬಾಕಿ ಕೊಡುವದಾಗಿ, ಬ್ಯಾಂಕಿನದು ಸಾವುಕಾರರದು ತ್ರಾಸ ಇದೆ. ಬಾಕಿ ಇದ್ದ ಜನರಿಗೆ ೪-೫ ಸಲ ಪತ್ರ ಬರೆದರೂ ರೂ. ಬಂದಿಲ್ಲ ವಿ. ಪಿ. ಪಿ. ಕಳಿಸಿದರೆ ಕೆಲ ಮಹನೀಯರು ಪರತಮಾಡಿದ್ದಾರೆ. ಇದರಲ್ಲಿ ನೂರಾರು ರೂ. ಹಾನಿ. ಕೊನೆಯ ಭಾಗಕ್ಕೆ ಸರಿಯಾದ ಲೆಕ್ಕ ಆಡಿಟ ಮಾಡಿಸಿ ಕೊಡುತ್ತದೆ. ಬಾಕಿ ಇದ್ದವರು ಬೇಗ ಕಳುಹಿಸಲು ವಿನಂತಿ.

# ವಿನಂತಿ

೧. ಕಂಪೋಜಿಟರ್ ಅಭಾವ, ಪ್ರೆಸ್ಸಿನ ನಾನಾ ತೊಂದರೆ, ಚಂದಾದಾರರು ವೇಳೆಗೆ ಸರಿಯಾಗಿ ಚಂದಾ ಕಳಿಸದಿರುವದು ಅನೇಕ ಕಾರಣಗಳಿಂದ ಶ್ರಾವಣಕ್ಕೆ ಹೊರಡುವದು ಈ ಮೂರನೇ ಭಾಗ ದಾಸರ ದಯೆಯಿಂದ ೩ ತಿಂಗಳ ಅವಧಿಯಿಂದ ಹೊರಟಿದೆ. ಅನಿವಾರ್ಯ ತಡವಾದುದಕ್ಕೆ ಕ್ಷಮಿಸಿರೆಂದು ಚಂದಾದಾರರಲ್ಲಿ ಮೊದಲನೆ ಪ್ರಾರ್ಥನೆ. ಬಾಕಿ ಇದ್ದ ಚಂದಾದಾರರು ಬೇಗ ರೂ. ಕಳಿಸುವದೆಂದು ವಿನಂತಿ.

೨. ಪ್ರೆಸ್ ಕಾಪಿ ೪-೫ನೇ ಭಾಗವು ತಯಾರಿದೆ. ಚಂದಾದಾರರು ಬಹು ಕಡಿಮೆ. ಆದರೂ ೪ನೇ ಭಾಗ ೧೮೮೩ ವೈಶಾಖ ಶು॥ಗೆ. ೫ನೇ ಭಾಗ ಭಾದ್ರಪದ ಶು॥ ೧೦ಕ್ಕೆ ಹೊರಡಿಸುವ ಸಂಪೂರ್ಣ ವಿಚಾರವಿದೆ, ಆದರೆ ದೊಡ್ಡ ಕೆಲಸವಿದೆ. ೧-೨ ತಿಂಗಳು ತಡವಾದರೆ ಕ್ಷಮಿಸಿರಿ.

(ಅ) ಚಂದಾದಾರರು ಬಾಕಿ ರೂಪಾಯಿ ಬೇಗ ಕಳಿಸಬೇಕು.

(ಬ) ಪ್ರತಿಯೊಬ್ಬ ಚಂದಾದಾರರು ಅಭಿಮಾನವಿಟ್ಟು ಮಹತ್ಕಾರ್ಯದಲ್ಲಿ ಸಹಾಯ ನೀಡಿ ೫-೫ ಚಂದಾದಾರರನ್ನು ಶೇಖರಿಸಿಕೊಡಲು ವಿನಂತಿ.

(ಕ) ಪ್ರೆಸ್ಸಿನವರು ಸರಿಯಾಗಿ ವೇಳೆ ಮೀರದೇ ಅನುಕೂಲ ಮಾಡುವದಾಗಿ ಪ್ರಾರ್ಥನೆ.

೩. ೫ ಭಾಗಕ್ಕೆ ಟಪಾಲ ವೆಚ್ಚ ಸೇರಿ ೨೫ ರೂ. ಮುಂಗಡ ಚಂದಾ ಬೇಗ ಕಳಿಸಿ ಚಂದಾದಾರರಾಗಿರಿ. (೩) ಭಾಗ ಆಗಿವೆ ೧೫ ರೂ. ಮುಂಗಡ ಕೊಟ್ಟು ಶೇಖರಿಸಿರಿ. ಮುಂದಿನ ೪-೫ ಭಾಗಕ್ಕೆ ೫ ರೂ. ಡಿಪಾಜಿಟ್ ಕಳಿಸಿದರೆ ಮುಂದೆ ೪-೫ ಭಾಗ ಟಪಾಲ ವೆಚ್ಚ ಕೂಡಿ ೬ ರೂ. ಗಳಿಗೆ ವಿ.ಪಿ.ಪಿ. ಕಳಿಸಿ, ೫ ರೂ. ಡಿಪಾಜಿಟ್ ೫ನೇ ಭಾಗಕ್ಕೆ ವಜಾ ಕೊಡುತ್ತದೆ. ಟಪಾಲು ನಿಮ್ಮದು ಬೇಗ ಚಂದಾದಾರರಾಗಿರಿ, ತ್ವರೆ ಮಾಡಿರಿ.

ಹನುಮಂತರಾವ ಗೊರಬಾಳ,
ಸಂಚಾಲಕ: ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ,
P.O. ಲಿಂಗಸೂಗೂರು, ಜಿ॥ ರಾಯಚೂರು.